॥ ಶ್ರೀರಸ್ತು ॥





KARNATAKA

# JAIMINI BHARATA

ಕರ್ಣಾಟಕ

# ಜೈಮಿನಿ ಭಾರತವು



ವೇ॥ ಭಾರತಿ ಸಂಪಂಗಿರಾಮಯ್ಯನವರಿಂದ
ಪರಿಶೋಧಿಸಲ್ಪಟ್ಟು

---

ಬೆಂಗಳೂರು ಸಿಟಿ ಚಿಕ್ಕಪೇಟೆ ಬುಕ್‌ಡಿಪೋ
ಟಿ. ಯನ್. ಕೃಷ್ಣಯ್ಯಶೆಟ್ಟಿಯವರ ಸ್ವಕೀಯ
ಶ್ರೀ ವೆಂಕಟೇಶ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿತು

ಪ್ರಥಮ ಮುದ್ರಣ ೨,೦೦೦ ಪ್ರತಿಗಳು

ಕ್ರಯ ೧-೪-೦]　　1930　　[*Price 1-4-0*




# ಪ್ರಸ್ತಾವನೆ.

ಶ್ರೀಮತ್ಕರ್ಣಾಟ ಭಾಷೆಯಲ್ಲಿ ಮಹಾ ಕಾವ್ಯಗಳು ಅಪರಿಮಿತವಾಗಿ ಇವೆ. ಅವುಗಳಲ್ಲಿ ಜೈಮಿನಿ ಭಾರತವು ಕನ್ನಡಿಗರಿರುವ ಎಲ್ಲಾ ಪ್ರಾಂತ್ಯಗಳಲ್ಲಿಯು ಪ್ರತಿಯೊಬ್ಬ ಕನ್ನಡಿಗನ ಆದರ ಸತ್ಕಾರಗಳಿಗೆ ಗುರಿಯಾಗಿ ವಿಶೇಷ ಪ್ರಾಚುರ್ಯದಲ್ಲಿದೆ. ಕನ್ನಡಿಗರಲ್ಲಿ ಈ ಗ್ರಂಥ ಪರಿಚಯವಿಲ್ಲದವರೇ ವಿರಳವೆನಬಹುದು.

ಮೈಸೂರು ಸೀಮೆಯ ಬಾಣಾವಾರದ ಸಮಿಾಪದಲ್ಲಿರುವ ದೇವನೂರು ನಿವಾಸಿ ಲಕ್ಷ್ಮೀಪತಿ ನಾಮಕ ಮಹಾ ಕವಿಯು ತನ್ನ ಇಷ್ಟದೈವವಾದ ಲಕ್ಷ್ಮೀಕಾಂತ ದೇವನ ಅಂಕಿತದ ಈ ಗ್ರಂಥವನ್ನು ವಾರ್ಧಿಕ ಷಟ್ಪದಿಯಲ್ಲಿ ರಚಿಸಿ ಕವಿಚೂತವನ ಚೈತ್ರನೆನುವ ಖ್ಯಾತಿಯನ್ನು ಪಡೆದನು. ಈ ಅರ್ಥದಲ್ಲಿ ಗ್ರಂಥ ಪ್ರಾಶಸ್ತ್ಯ ಪೌಢಿಮೆಗಳನ್ನು ಕುರಿತು ಬೇರೆ ವಿವರಿಸಬೇಕಾದುದಿಲ್ಲ

ಮುದ್ರಣ ಕಲೆಯು ಹೊರಬಿದ್ದ ಈಚೆಗೆ ಈ ಪೌಢಕಾವ್ಯವು ಕಾರಣಾಂತರಗಳಿಂದ ದೋಷ ಭೂಯಿಷ್ಠವೆನಿಸಿ ಕ್ರಮೇಣ ಮೂಲ ಗ್ರಂಥವು ರೂಹುಗೆಟ್ಟು ಖ್ಯಾತನಾಮನಾದ ಮಹಾಕವಿಗೆ ಕೂಡ ಒಂದು ಬಗೆಯ ಕಳಂಕವನ್ನು ತಂದೊಡ್ಡುವ ಸ್ಥಿತಿಗೆ ಬಂದಿತು. ಕರ್ಣಾಟಭಾಷಾ ಭೂಷಣಪ್ರಾಯವಾದ ಈ ಮಹಾ ಕಾವ್ಯದ ಈ ತೆರನ ಶೋಚನೀಯಸ್ಥಿತಿಗೆ ಮರುಕಗೊಂಡು ಸಾಕಲ್ಯವಾಗಿ ತಿದ್ದಿಸಿ ಶುದ್ಧ ಪ್ರತಿಯನ್ನು ಪ್ರಕಟಿಸಬೇಕೆನುವ ಸಂಕಲ್ಪದಿಂದ ಶ್ರೀಯುತ **ಟಿ. ಯಸ್. ಕೃಷ್ಣಯ್ಯಶೆಟ್ಟಿ,** ಬುಕ್‌ಡಿಪೊ, ಬೆಂಗಳೂರು ಸಿಟಿ ಇವರು ಅನೇಕ ಪುರಾತನ ಪ್ರತಿಗಳನ್ನು ಸಂಪಾದಿಸಿ ಕೊಟ್ಟು ನನ್ನನ್ನು ಈ ಕಾರ್ಯದಲ್ಲಿ ಭಾಗಿಯಾಗಲು ಪ್ರೇರೇಪಿಸಿದರು.

ಕೈ ಬರಹ ಮತ್ತು ಅಚ್ಚಾದ ಆ ಪ್ರತಿಗಳ ಆಧಾರದ ಮೇಲೆ ಕವಿಯ ಆಶಯಕ್ಕೆ ಭಂಗಬಾರದಂತೆ ಯಥಾಮತಿ ಸಾದ್ಯಂತವಾಗಿ ಅಕ್ಷರಶಃ ಪರಿಶೋಧಿಸಿರುವೆನು. ಸಾಮಾನ್ಯರಿಗೂ ಓದುವ ಧಾಟಿಯು ಸಹಜವಾಗಿ ಉಂಟಾಗಬೇಕೆನುವ ಸಂಕಲ್ಪದಿಂದ ಪ್ರತಿ ಪದ್ಯದಲ್ಲಿಯು ಪದವಿಭಾಗಮಾಡಿ ಅಚ್ಚಿಗೆ ಅಣಿಮಾಡಿ ಇದೆ. ಪಾಠಕರಿಗೆ ಇದರಿಂದ ಪ್ರಯೋಜನವಾದರೆ ಗ್ರಂಥಾದ್ಯಂತವೂ ಪರಿಶೋಧಿಸಿದ ಶ್ರಮವು ಸಾರ್ಥಕವೆಂದು ಯೆಣಿಸುವ,

ಸಜ್ಜನ ವಿಧೇಯ,

**ಭಾರತಿ ಸಂಪಂಗಿರಾಮು,**

ಸಂಪಾದಕ ಸವಿನುಡಿ ಕೋಟೆ, ಬೆಂಗಳೂರು ಸಿಟಿ.

# ಜೈಮಿನಿ ಭಾರತದ ವಿಷಯಾನುಕ್ರಮಣಿಕೆ.

ಸಂಧಿ. ಪುಟಸಂಖ್ಯೆ.

ಜೈಮಿನಿ ಭಾರತದ ವಿಷಯಾನುಕ್ರಮಣಿಕೆಯು ಸಂಪೂರ್ಣಂ.





ಶ್ರೀ

|| ಶ್ರೀ ಕೃಷ್ಣ ಜಯತು ||

# ಜೈಮಿನಿ ಭಾರತವು.

## ಮೊದಲನೆಯ ಸಂಧಿ.

### ಪೀಠಿಕೆ.

ಶ್ರೀವಧುವಿ ನಂಬಕ ಚಕೋರಕಂ ಪೊರೆಯೆ ಭ |
ಕ್ತಾವಳಿಯ ಹೃತ್ಕುಮುದ ಕೋರಕಂ ಬಿರಿಯೆ ಜಗ |
ತೀವಲಯ ದಮಲ ಸೌಭಾಗ್ಯರತ್ನಾಕರಂ ಪೆರ್ಚಿನಿಂ ಮೇರೆವರಿಯೆ ||
ಆವಗಂ ಸರಸ ಕರುಣಾಮೃತದ ಕಲೆಗಳಿಂ |
ತೀವಿದೆಳೆನಗೆಯ ಬೆಳದಿಂಗಳಂ ಪಸರಿಸುವ |
ದೇವಪುರನಿಲಯ ಲಕ್ಷ್ಮೀರಮಣ ನಾಸ್ಯ ಚಂದ್ರಾನಂದ ಮೆಮಗೀಯಲಿ || ||೧||
ಪಾವ ನತುಲಾಭರಣಮಂ ಮಾಡಿಕೊಂಡೆಸೆವ |
ಪಾವನತರ ಸ್ವರೂಪಂ ನಾರದಾದಿ ಮುನಿ |
ಪಾವನತ ಪಾದಪಂಕೇರುಹದ್ವಂದ್ವ ನಿಂದುಕಲಾವತಂಸ ಮುನೆಯು ಸಂ ||
ಭಾವನೆಯ ನೊಡಗೂಡಿಸುವ ಸಕಲಸುರರ ಸಂ |
ಭಾವನೆಯ ಕೈಗೊಂಬ ಲೋಕನಿಸ್ತರಣ ಪ್ರ |
ಭಾವ ನಯನತ್ರಯಂ ದೇವಗಂಗಾಧರಂ ಪೊರೆಗೆ ನಿಚ್ಚಂ ನಮ್ಮನು || ||೨||
ಪ್ರಸ್ತುತದೊ ಳೊಗೆವ ಮುಂಬೆಳ ಗಮಲ ದಂತದ ಗ |
ಭಸ್ತಿ ನವಪೂರ್ವ ಸಂಧ್ಯಾರುಣಂ ಭಾಳ ನಿ |
ನ್ಯಸ್ತ ಸಿಂದೂರ ಮಂಕುರಿಪ ಪೊಂಬಿಸಿಲೊಡನೆ ಮೂಡು ವೆಳೆನೇಸ ರೆಸೆವ ||
ಮಸ್ತಕದ ಮಣಿಮುಕುಟ ಮಾಗ ಲುದಯಾಚಲದ |
ನಿಸ್ತಾರದಂತೆ ಭದ್ರಾಕೃತಿಯೊ ಳೊಪ್ಪುವ ಸ |
ಮಸ್ತ ಸಿದ್ಧಿಪ್ರದಾಯಕ ವಿನಾಯಕ ಮಾಳ್ಪುದೆಮಗೆ ನಿರ್ವಿಘ್ನತೆಯನು || ||೩||
ಭೂ ವ್ಯೋಮ ಪಾತಾಳ ಲೋಕಂಗಳಲ್ಲಿ ಸಂ |
ಭಾವ್ಯರಂ ದೆನಿಸಿಕೊಂ ಬಖಿಳ ದೇವರ್ಕಳಿಂ |
ಸೇವ್ಯನಾ ದಜನ ಪಟ್ಟದ ರಾಣಿ ವರದೆ ಕಲ್ಯಾಣಿ ಫಣಿವೇಣಿ ವಾಣಿ ||
ಕಾವ್ಯಮಿದು ಭುವನ ದೊಳ್ ಸಕಲ ಜನರಿಂದೆ ಸು |
ಶ್ರಾವ್ಯ ಮಪ್ಪಂ ತೆನ್ನ ವದನಾಬ್ಜದಲ್ಲಿ ನೀ |
ನೇ ವ್ಯಾಪಿಸಿ ರ್ದಮಲ ಸುಮತಿಯಂ ತಾಯೆನಗೆ ತಾಯೆ ನಗೆಗೂಡಿ ನೋಡಿ || ||೪||

ಶಾರದೆ ಪರಾರ್ಥಮಂ ಪರಯುತಿಗೆ ಭಂಗಮಂ |
ತಾರದೆ ಸಿಜಾಸ್ಸ್ರಯ ಕ್ರಿಯೆಗಳ್ಗೆ ದೂಷಣಂ |
ಬಾರದೆ ಸಿಶೇಷಗುಣ ಗಣ ಕಲಾ ಗೌರವಂ ತೀರದೆ ದುರುಕ್ತಿಗಳ್ಗೆ |
ಸೇರದೆ ಸುಮಾರ್ಗಮೊಳ್ನಡೆವ ಸತ್ಪುರುಷನ ಗ |
ಭೀರ ಪೆಸೆಯಂಪೋಲ್ಪ ಕಾವ್ಯಪ್ರಬಂಧಮಂ |
ಶಾರದೆಯ ಕರುಣದಿಂ ಪೇಳ್ವ ನಾಂ ದೋಷಮಂ ತೊರೆ ದೆಲ್ಲರುಂ ಕೇಳ್ವುದು ॥ ೫ ॥
ಛಂದಸ್ಸು ಲಕ್ಷಣ ಮಲಂಕಾರ ಭಾವರಸ |
ಸೊಂದಿ ಕಲಿಸೆತ್ತ ಸತ್ಕೃತಿ ಚಮತ್ಕೃತಿ ಯುಕ್ತಿ |
ಯೊಂದು ಮಿಲ್ಲದ ಕಾವ್ಯ ಮಶ್ರಾವ್ಯ ಮಕ್ಕೆಂದು ಜರೆದು ಕಪಿತೆಯನು ಬರಿದೆ |
ಮಂದುಗ ಕ್ಕೊಳಗಾಗಿ ಪೇಳ್ದೆ ನೆಂದೆನ್ನ ನಗು |
ವಂದಮಂ ಮಾಡದೆ ನಗೊಲಿದಿತ್ತ ನಮಲ ಮತಿ |
ಯಂ ದೇವಪುರದ ಲಕ್ಷ್ಮೀರಮಣ ನೆಂದರಿದು ಕೇಳ್ವುದೆಲ್ಲಾ ಸುಜನರು ॥ ೬ ॥
ಕೆನೆ ಪಾಲ ಗಡೆದು ಘನಸೀತಮಂ ತೆಗೆದು ಬಾ |
ಯ್ಗಿನಿದಾಗಿ ಸವಿಯ ನದರೊಳಗೆ ಪುಳಿವಿಡಿದು ರಸ |
ವನೆ ಕೆಡಿಸಿದೊಡೆ ಕರೆದ ಸುರಭಿ ಗಪ್ಪುದೆ ಕೊರತೆ ಕಾವ್ಯಮಂ ಕೇಳ್ದು ಮಥಿಸಿ |
ಜನಿಸಿದ ಪದಾರ್ಥಮಂ ತಿಳಿದು ನೋಡದೆ ಪಿಸೂ |
ತನ ಕವಿತೆ ಯೆಂದು ಕುಂದಿಟ್ಟು ಜರೆವೊಡೆ ಪೇಳ್ದ |
ವ ನೊಳಾದ ದೂಷಣೆಯುಂ ಚಾಣರಿದ ನರಿದು ಮತ್ಸರವ ನುಳಿ ದಾಲಿಸುವುದು ॥ ೭ ॥
ವಾಣಿರಂ ತಲೆದೂಗಿಸದೆ ನುಡಿದೊಡಾ ಪದ |
ಕ್ಕ್ಯಾಣೆಯಂ ಬಹುದೆಂದು ಸರಸೋಕ್ತಿಯಿಂದ ಗೀ |
ರ್ವಾಣಪುರ ನಿಲಯ ಲಕ್ಷ್ಮೀವರಂ ತಾನೆ ಸಂಗೀತ ಸುಕಲಾ ನಿಪುಣನು ||
ವೀಣೆಯಿಂ ಗಾನಮಂ ನುಡಿಸು ವಂದದೊಳೆನ್ನ |
ವಾಣಿಯಿಂ ಕವಿತೆಯಂ ಪೇಳಿಸಿದ ನೆಂ ದರಿದು |
ಕೇಣಮಂ ತೊರೆದು ಪುರುಡಿಸುವರಂ ಜರಿದು ಕಿವಿದೆರೆದು ಕೇಳ್ವುದು ಸುಜನರು ॥ ೮ ॥
ದುಷ್ಟಾಬ್ಧಿ ಘೋರತರ ವಿಷವದನ ದಿಂದೆ ಸಂ |
ದಷ್ಟವಾಗಿರುತಿರ್ಪೊಡಂ ದೋಷ ನಿರ್ದೋಷಡಂ |
ಸ್ಪಷ್ಟ ಕಲೆ ಯಾದೊಡಂ ಚಂದ್ರನಂ ತೆನ್ನ ಕಾವ್ಯದ ರಸಂ ಸುಮನಸರ್ಗೆ |
ಇಷ್ಟವಾಗದೆ ಮಾಣದಿ ನ್ನಾವ ನಾದೊಡಂ |
ಕಷ್ಟಮಂ ಬಗೆವವಂ ಚೋರಂಗೆ ಸಿರಯಿಗಂ |
ದೃಷ್ಟಾಂತವಾಗಿ ಸಲ್ವಂ ಧರಾವಲಯದೊಳ್ ಸಂದೇಹವೇ ನಿಪುಣರು ॥ ೯ ॥
ಸೊಗ ಪಾವ ಲೀಲೆಯಿಂ ಪೆಸವು ದಾ ಭಾವಮಂ |
ಮುಗುಳೆ ತೋರುವ ದನ್ಯ ಪ್ರಕಾರದಿಂ |
ಸೊಗಯಿಸುವ ರನ್ನಗನ್ನಡಿ ಧರೆಯೊಳಾರಾಜಿಸುವ ಕನ್ನಡದ ನುಡಿಗಳ |
ಬಗೆಯರಿವ ರಾವ ಲಕ್ಷಣವಿಂದೆ ಮುನ್ನ ಕ |
ವ್ವಿಗಳ ನುಸುರಿದ ರದೇ ಲಕ್ಷ್ಯಮಲ್ಲದೆ ಪೆರ ತೆ |
ನಗೆ ಸಲ್ಲದದರಿಂದ ಪೂರ್ವ ಸತ್ಕವಿಗಳ್ಗೆ ನಮಿಸಿ ನಾಂ ಕೃತಿ ನೇಳ್ವೆನು ॥ ೧೦ ॥

ವಿದ್ವತ್ಸಭಾವಲಯ ಮರಿಯೆ ವಿರಚಿಸಿದಂ ಭ |
ರದ್ವಾಜ ಗೋತ್ರಭವ ನಣ್ಣಮಾಂಕನ ಸುತಂ |
ಸದ್ವಿನುತ ಕರ್ನಾಟ ಕವಿಚೂತ ವನ ಚೈತ್ರ ಲಕ್ಷ್ಮೀಶ ನೆಂಬೋರ್ವನು ||
ಹೃದ್ವನಜದೊಳ್ದೇವಪುರದ ಲಕ್ಷ್ಮೀಶನ ಪ |
ದದ್ವಯವ ನಾವಗಂ ಧ್ಯಾನಿಸುವ ರಡಿಗಳಂ |
ಸದ್ವಿನಯದಿಂ ಭಜಿಸ ಬಲ್ಲಂದ ವಿಮಲ ಜೈಮಿನಿ ಭಾರತದ ಕಥೆಯನು || ||೧೧||

ವರ ವರ್ಣದಿಂದೆ ಶೋಭಿತ ಮಾಗಿ ರೂಪ ವಿ |
ಸ್ತರದಿಂದೆ ಚೆಲ್ವಾಗಿ ಮಧುರತರ ನವರಸೋ |
ದರ ಭರಿತದಿಂದೆ ವಿಲಸಿತ ಮಾಗಿ ಸುಮನೋನುರಾಗದಿಂ ಪ್ರಚುರವಾಗಿ ||
ಸಿರುತ ಮಂಜುಳ ಶಬ್ದದಿಂದೆ ಕಿವಿಗಿಂಪಾಗಿ |
ಚರಿಸುವ ಸುಲಲಿತ ಷಟ್ಪದಿಗಳಿಡೆ ಬಿಡದೆ ಝೇಂ |
ಕರಿಸ ದಿರ್ಪವೆ ಬಂದು ನೆರೆದ ವಿದ್ವತ್ಸಭಾ ನೀರೇರುಹಾಕರದೊಳು || ||೧೨||

ಪೀಠಿಕಾ ಸಂಧಿ ಸಂಪೂರ್ಣಂ ಮಂಗಳಮಸ್ತು.

# ಎರಡನೆಯ ಸಂಧಿ.

ಸೂಚನೆ|| ರಾಜೇಂದ್ರ ಧರ್ಮತನಯಂ ಬಾದರಾಯಣನ |
ವಾಜಿಮೇಧಾಧ್ವರವಿಧಾನಮಂ ಕೇಳ್ದು ಪಂ |
ಕೇಜಪತ್ರೇಕ್ಷಣನ ಮತವಿಡಿದು ಕಳುಹಿದಂ ಕುಮರಗೆ ವೃಕೋದರನನು ||

ವನರುಹ ಭವಾಂಡದೊಳ ಗೈವತ್ತುಕೋಟಿ ಯೋ |
ಜನದ ವಿಸ್ತೀರ್ಣವಿಳೆಯಂ ಸಪ್ತಶರನಿಧಿಗ |
ಳನುವೇಷ್ಟಿಸಿರ ಲದರ ಮಧ್ಯದೊಳ್ವಿನುತ ಜಂಬೂದ್ವೀಪ ಮುದರ ನಡುವೆ ||
ಅನವರತ ಸುರತ ಗೋಷ್ಠಿಗೆ ನೆರೆದ ನಿರ್ಜರಾಂ |
ಗನೆಯ ರಂಗಭುವಿಯ ಹಬ್ಬುಗೆಯೊ ಕಾರಮಿಂ |
ಚಿನ ಮಹಾರಾಶಿಯೊ ಪೇಳಿನ ಲ್ಮೆರೆವ ಕನಕಾಚಲಂ ಕಣ್ಸೆಸೆವುದು || ||೧||

ಆ ಕನಕ ಗಿರಿಯ ತೆಂಕಣ ದೆಸೆಯೊಳಿರ್ಪುದು ಸು |
ಧಾಕರಕುಲದ ನೃಪರ ಸಾಮ್ರಾಜ್ಯ ಪಟ್ಟಾಭಿ |
ಷೇಕ ವಿಸ್ತರದಿಂ ಜಸಂಬಡೆದ ಹಸ್ತಿನಾಪುರ ಮಲ್ಲಿ ಗರಸೆನಿಸುವ ||
ಭೂಕಾಂತ ಜನಮೇಜಯಂ ಮಹಾಭಾರತ ಕ |
ಥಾಕೌತುಕ ದೊಳಾಶ್ವಮೇಧಿಕವ ನೊಲವಿನಿಂ |
ಪೇಕ್ಷಮಾನಸನಾಗಿ ಜೈಮಿನಿ ಮುನೀಂದ್ರನಂ ಬೆಸಗೊಂಡನೀ ತೆರದೊಳು || ||೨||

ಪಿಂತೆ ಕೌರವಜಯಂ ತಮಗೆ ಕೈಸಾರ್ದ ಸಮ |
ನಂತರ ದೊಳಾದ ಸಾಮ್ರಾಜ್ಯದೊಳ್ಪಾಂಡವ ರ |
ದೆಂತಿಳೆಯನೋವಿದ ರದೇಗೈಯ್ದ ರೆಂದು ಜನಮೇಜಯಮಹೀಪಾಲನು ||
ಸಂತಸಂದಳೆದು ಜೈಮಿನಿ ಮುನಿಪನಂ ಕೇಳ್ದ |
ಡಿಂತವಂ ಪೇಳ್ದನಾ ಭೂಪಂಗೆ ಸಕಲಜನ |
ಸಂತತಿಗೆ ಕರ್ಣಾವತಂಸನೆನಿಸೆ ಮಧುರತರ ಭಾರತದ ಸತ್ಕಥೆಯನು || ||೩||

ಕೇಳಿಲೆ ನೃಪಾಲ ಪಾಂಡವರ ಕಥೆಯಿದು ಪುಣ್ಯ |
ವೇಳಿಗೆಯುಲಾ ಸುಯೋಧನ ಮೇದಿನೀಶನಂ |
ಕಾಳಗದೊ ಳುರೆ ಗೆಲ್ದು ಬಳಿಕ ವರ ಹಸ್ತಿನಾಪುರದ ನಿಜಸಾಮ್ರಾಜ್ಯದ ||
ಬಾಳಿಕೆಯ ನನುಜರಿಂ ದೊಡಗೂಡಿ ಧರ್ಮಜಂ |
ತಾಳಿದಂ ಭರತ ನಳ ನಹುಷಾದಿ ರಾಯರಂ |
ಪೇಳುವೊ ಡವರ್ಗಿನಿತು ಗುಣವಿಲ್ಲ ಮೆಂದು ಭೂಮಂಡಲಂ ಕೊಂಡಾಡಲು || ||೪||
ಬಳಿಕ ನೃಪವರ ಯುಧಿಷ್ಠಿರನಾಳ್ವ ದೇಶದೊ |
ಳ್ಕಳವು ಕೊಲೆ ಪಾದರಂ ಪುಸಿ ಸುಸುಳು ವೈರ ಮ |
ಟ್ಟುಳಿ ತೋಹು ಬೆದರು ಬೆಜ್ಜರ ಕಷ್ಟ ನಿಷ್ಠುರಂ ಗಜರು ಗಾವಳಿ ವಿವಾದ ||
ಮುಳಿಸು ಪೊಲೆಗಲಸು ಮೊರೆ ಸೆರೆ ಕೃತಕ ಕಾರ್ಪಣ್ಯ |
ಮುಳಿವು ಪಳಿ ವನ್ಯಾಯ ಮುರೆ ಮೋಸವಾಸಿ ತ |
ಲ್ಲಳ ತಳಿ ನಿಯೋಗಮುಲಿಸಿಕೆ ಕರ್ಕಶಂಗಳಿವು ಮೊಳೆದೋರ ವೇ ಪೇಳ್ವೆನು || ||೫||
ನೀತಿ ಚತುರತೆ ಕೀರ್ತಿ ಕಲ್ಯಾಣ ಭೋಗ ಸಂ |
ಪ್ರೀತಿ ಪರಹಿತ ವಿನಯ ಶುಭ ವಿಭವ ವಿಜಯ ವಿ |
ಖ್ಯಾತಿ ಕಳೆ ಸೌಭಾಗ್ಯ ಮಾರೋಗ್ಯ ಸೌಖ್ಯ ಮುನ್ನತಸತ್ಯ ನಿತ್ಯಭಕ್ತಿ ||
ಜಾತಿಧರ್ಮಾಚಾರನಿಷ್ಠೆ ಧರ್ಮಜ್ಞತೆ ವಿ |
ಭೂತಿ ಶಮ ದಮ ದಾನ ದಾಕ್ಷಿಣ್ಯ ಮೆಂಬಿವು ಮ |
ಹಾತಿಶಯ ಮೆನೆ ಪೇರ್ಚಿತಾ ಯುಧಿಷ್ಠಿರ ನರೇಶ್ವರ ನಾಳ್ವ ಭೂತಳದೊಳು || ||೬||
ಕುಟಿಲ ಚಂಚಲ ಕಠಿನ ಕೃಶ ಮಾಂದ್ಯ ಮೆಂಬಿ ವು |
ತ್ಕಟ ಯೌವನ ಶ್ರೀ ವಿಲಾಸಿನಿಯರ ಕಾಳಿ |
ಚಟುಲ ಸುಕಟಾಕ್ಷ ವಕ್ಷೋಜಾತ ಮಧ್ಯ ಗತಿಗಳ ವಿಲಾಸದೊಳಲ್ಲದೆ ||
ಘಟಿಸದು ಮದಾವಸ್ಥೆ ನಿಗಳ ಬಂಧನದ ಸಂ |
ಕಟ ಹರಿದ್ವೇಷ ಮತಿಹೀನತೆಗಳೆಂಬಿ ವಿಭ |
ಘಟಿಯೊ ಳಲ್ಲದೆ ಸಲ್ಲದೆಲ್ಲಿಯುಂ ಧರ್ಮತನಯಂ ಪಾಲಿಸುವ ನೆಲದೊಳು || ||೭||
ಗಾರುಡದೊ ಳಹಿತತ್ವ ಮಾರಣ್ಯದೊ ಳ್ದಾನ |
ವಾರಣಂ ಚಾರುಪ್ರವಾಳ ಮಣಿರುಚಿಯೊ ಳ್ಸ |
ವಾರುಣಂ ಸರಸಿಯೊಳ್ಕಲಹಂಸಮಯ ಮುತ್ಪಲಾಕ್ಷಿಯರ ಕಂಧರದೊಳು ||
ಹಾರವಲಯಂ ಭೂರುಹದೊಳನೇಕಾಗ್ರತೆ ನ |
ವಾರಾಮದೊ ಳ್ಮಹಾಶೋಕಂ ವಸಂತದೊ |
ಳ್ಮಾರಪಿತ ಮುಂಟಲ್ಲದಿಲ್ಲಮಿವು ಮತ್ತೆಲ್ಲಿಯುಂ ಧರ್ಮಜನ ನೆಲದೊಳು || ||೮||
ಕೊಡೆಯೆಂಬ ರಾತಪತ್ರವ ನುದರದೇಶಮಂ |
ಪೊಡೆಯೆಂಬ ರೊಲಿದು ಮಂಥನವ ನೆಸಗೆಂಬುದಂ |
ಕಡೆಯೆಂಬ ರಾರಡಿಯ ನಳಿಯೆಂಬ ರುದಕಪ್ರವಾಹಮಂ ತೊರೆಯೆಂಬರು ||
ಮುಡಿಯೆಂಬ ರಂಬರದ ಧೌತಮಂ ಕಬರಿಯಂ |
ಮುಡಿಯೆಂಬ ರಡೆವಿಡದೆ ಮುಸುಕಿರ್ದ ಮೇಘಮಂ |
ಜಡಿಯೆಂಬ ರುರುತಿಳಿಯ ನರೆಯೆಂಬ ರಲ್ಲದಿನ ನುಡಿಯ ರವ ನಾಳ್ವೆಳೆಯೊಳು ||೯||

ಎಲ್ಲರುಂ ಭೋಗಿಗ ಳ್ಪಾತಾಳ ಗತರೆನಿಸ |
ರೆಲ್ಲರುಂ ವಿದ್ಯಾಧರ ರ್ನಭೋಜನರೆನಿಸ |
ರೆಲ್ಲರುಂ ದಾಕ್ಷಿಣ್ಯವರ್ತಿಗಳ್ತಿಳಿಯೆ ಲಂಕಾನಿವಾಸಿಗಳೆನಿಸರು ||
ಎಲ್ಲರುಂ ಸುಮನೋ ರತರ್ಮಧುವ್ರತ ರೆನಿಸ |
ರೆಲ್ಲರುಂ ಗುಣಯುತರ್ಕಶಿನರೆನಿಸ ರ್ಮನುಜ |
ರೆಲ್ಲರುಂ ಕಾಂತಾ ರಮಿತ ಭೋಗ ಸಂಪದ ರ್ಪುರಜನ ರಲ್ಲವ ನಿಳೆ ಯೊಳು || ||೧೦||
ವಸುಗಳಿಂ ದುಪಭೋಗ್ಯ ಮಾಗದೊಡೆ ಸೌರಭ್ಯ |
ರಸದಿಂದ ಮಾರೋಗ್ಯ ಮೆನಿಸ ದೊಡೆ ಸಂತತಂ |
ವಿಶದ ಸುಮನೋ ಯೋಗ್ಯ ಮಲ್ಲ ದೊಡೆ ಹರಿವೃಭವ ಶ್ಲಾಘ್ಯ ಮಲ್ಲದಿರಲು ||
ಲಸ ದಪ್ಸರೋದ್ಯಾನ ಸೌಭಾಗ್ಯ ಮೊಂದಿರ ದೊ |
ಡೆಸೆವ ರಾಜೇಂದ್ರಂಗೆ ಸೊಗಸು ವೀಡಾಗಿ ರಂ |
ಜಿಸ ದೊಡೀ ಹಸ್ತಿನಾವತಿಯು ನಮರಾವತಿಗೆ ಸರಿಯೆಂಬರೀ ಪ್ರೌಢರು || ||೧೧||
ನಾಗೇಂದ್ರನಂ ಬಿಡದೆ ತಲೆವಾಗಿಸಿ ತ್ರಿಪುರ |
ನಾಗೇಂದ್ರನಂ ಬುದ್ಧಿ ದೊರೆಸಿತ್ತು ಪುರಮರ್ದ |
ನಾಗೇಂದ್ರನಂ ಸಿಂದುಬೆಳಗಾಗಿಸಿ ತ್ರಿಮಲ ಧರ್ಮಜನ ಕೀರ್ತಿ ಬಳಿಕ ||
ನಾಗೇಂದ್ರಶಯ ನಾಲಯವ ಜಡಧಿ ಯೆನಿಸಿ ಸುತ |
ನಾಗೇಂದ್ರ ವರದಾಯುಧವ ಪೊಳ್ಳುಗಳೆದು ಮಥ |
ನಾಗೇಂದ್ರಧರನ ಜಾತೆಯು ನಿಲವುಗೆಡಿಸಿ ನೆರೆ ರಾಜಿಸಿತು ಮೂಜಗದೊಳು || ||೧೨||
ಹರಿಯಂತೆ ಬಲಯುತಂ ಶಿವನಂತೆ ರಾಜಶೇ |
ಖರ ನಬ್ಜಭವನಂತೆ ಚತುರಾಸನಂ ಸರಿ |
ದ್ವರನಂತೆ ರತ್ನಾಕರಂ ದಿವಾಕರನಂತೆ ನಿರ್ದೋಷ ನಿಂದ್ರನಂತೆ ||
ಪರಿಚಿತ ಸುರಭಿ ರಮ್ಯ ನಮೃತಾರ್ಚಿಯಂತೆ ವಿ |
ಸ್ತರಿತ ಕುವಲಯನೆಂದು ಧರ್ಮಜನ ಧರೆ ಪೊಗಳು |
ತಿರೆ ಬಳಿಕ ಹಸ್ತಿನಾವತಿಗೆ ವೇದವ್ಯಾಸಮುನಿ ಯೊಂದಿನಂ ಬಂದನು || ||೧೩||
ಬರಲಾ ನೃಪಾಲಕಂ ಸೋದರ ರ್ವೆರೆಸಿ ಮುನಿ |
ವರನ ಪದಕೆರಗಿದೊಡೆ ಮಣಿದೆತ್ತಿ ಬೋಳೈಸಿ |
ಪರಸಿ ಮಂತ್ರಾಕ್ಷತೆಯ ನಿತ್ತು ಸತ್ಕಾರಮಂಕೊಂಡು ಕುಳ್ಳಿರ್ದ ಬಳಿಕ ||
ಅರಸ ನನುತಾಪದಿಂ ದಲೆವಾಗಿ ಮಾತಾಡ |
ದಿರುತಿರ್ದ ನನಿಲ ಸಂಚಾರ ಮೊಂ ದಿನಿತಿಲ್ಲ |
ದಿರಿವ ಕಡುನೇಸಗೆಯ ಬಿಸಿಲಿಂದ ಬಸವಳಿದ ಕೋಮಲ ರಸಾಲದಂತೆ || ||೧೪||
ಕಂಡನರಸನ ಭಾವಮಂ ಬಳಿಕ ನಗುತ ಜೆಸ |
ಗೊಂಡ ನಿಂತೆಂದಾಮುನೀಂದ್ರ ನೆಲೆ ನೃಪತಿ ಭೂ |
ಮಂಡಲದ ಸಕಲಸಾಮ್ರಾಜ್ಯಮಂ ಪಾಲಿಸುವ ನಿನ್ನ ಸಂತಸ ದೇಳ್ಗೆಗೆ ||
ಖಂಡನಂ ಮಾಳ್ಪುದಾನಸ ದಿರವು ಸಾಕು ಮನ |
ದಂಡಲೆಯ ನೊರೆ ಯೆನಲ್ಜೀಯ ಸಂತಾಪದಿಂ |
ಜೆಂಡಾದುದೆನ್ನೊಡ ಲ್ವೈರಿಸ ಲರಿಯೆ ನೆಂದೊಡಾ ತಪೋನಿಧಿ ನುಡಿದನು || ||೧೫||

ಕೆತ್ತ್ರ ಬಲ್ಲಿತ್ತುಲೆಗೆ ತರಣಿ ಮುಂಗಾಣದಿರೆ |
ಸ್ರೋತ್ರುವೆಳಗಂ ಭೇರಿತೋರ್ಸ್ವರಾ ರ್ಭಿಡದೆ ಘ |
ರ್ಸ್ರೋತ್ರರಕೆ ಮಾರುತಂ ಬೆಸುರ್‍ಪೊಡಾರ್ಬ್ಬೀಸುವ ರ್‍ಛಳಿ ಕಾಲವಟ್ಟದಿಂದೆ ||
ಕೃತ್ರಿಮದ ವಿಷದ ಸೋಂಕಿಗೆ ಗರುಡ ನಳವಳಿಯೆ |
ಪುತ್ತ್ರೆ ರಕ್ಷೆಗೆ ಮಂತ್ರಿಸುವರಾರು ಭೂಪ ನೀ |
ನೊತ್ತು ವನುತಾಪ ಕಡೆ ಗೊಟ್ಟೊ ಡಾರ್ಬ್ಬಿಡಿಸುವ ರ್‍ಪೇಳೆಂದ ನಾ ಮುನಿಪನು ||೧೬||
ಎನಲಾ ಮುನೀಂದ್ರನಂ ನೋಡಿ ಬಿಸುಸುಯ್ದುತೊ |
ಯ್ಯನೆ ಮಹೀಪಾಲ ನಿಂತೆಂದ ನೆಂ ತೆನ್ನಮನ |
ದನುತಾಪಮಂ ಬಿಡುವೆ ನಕಟ ಶಿಶುತನದಿಂದೆ ಸಲಹಿದ ಪಿತಾಮಹಂಗೆ ||
ನೆನೆದೆ ವನುಚಿತವ ನವಗ್ರಜ ನೆಂದರಿಯದೆ ಕ |
ರ್ಣನ ನಿರಿದೆ ವಾಚಾರ್ಯ ವಧೆ ಗೆಳಸಿದೆವು ಸುಯೋ |
ಧನ ಶಲ್ಯ ಮುಖ್ಯ ಬಾಂಧವರ ನೀಡಾಡಿದೆವು ಬದುಕ ಲೇಕಿ ನ್ನಿಳೆ ಯೊಳು ||೧೭||
ಶಿಷ್ಯರಿಂ ದಭಿವರ್ಧಿಸದ ಗುರುವಿನಂತೆ ವೈ |
ದುಷ್ಯದಿಂ ಪೂಜ್ಯನಾಗದ ವಿಪ್ರನಂತೆ ಸುಹ |
ವಿಷ್ಯದಿಂ ಸೇವ್ಯನಾಗದ ವಹ್ನಿಯಂತೆ ಸಲಿಲಾಶ್ರಯವ ನಾಶ್ರೈಸದ ||
ಕೃಷ್ಯದಂ ತಖಿಳ ಬಾಂಧವ ರೊಡನೆ ಬದುಕದ ಮ |
ನುಷ್ಯ ಸಂಸಾರದಿಂ ದೇ ನದರಿನಿಂ ನಿಜಾ |
ಯುಷ್ಯ ಮುಳ್ಳ ನ್ನ ವರಿಯಂತ ವನವಾಸಮಂ ಮಾಡುವುದೆ ಲೇಸೆಂದನು || ||೧೮||
ಕಾಯ ಮುಪಭೋಗ ಸಿರಿಯಂ ಬಯಸಿ ಸುಗತಿಯಂ |
ಕಾಯ ದುರುತರ ವೈರದಿಂ ದಖಿಳ ಬಾಂಧವ ನಿ |
ಕಾಯ ದುಪಹತಿಯ ನೆಸಗಿದ ಪಾತಕದ್ರುಮಂ ವಿಷಮಾಗಿ ತನಗೆ ಮುಂದೆ ||
ಕಾಯ ದಳಿಯದು ಮಹಿಯನಿ ನ್ನಾಳ್ದಡಂ ಜಸಂ |
ಕಾಯಮುರೆ ಮಾಣ ದದರಿಂ ದರಸು ತನವೆ ಸಾ |
ಕಾ ಯದುಕುಲೇಂದ್ರನಂ ಭಜಿಸುವೆಂ ಚಿತ್ತಶುದ್ಧಿಯೊ ಳರಣ್ಯ ದೊ ಳೆಂದನು ||೧೯||
ಆಗ ಳರಸನ ಮಾತಿನಾ ಸರಂ ಕೇಳ್ದು ತಲೆ |
ದೂಗಿ ಮುನಿಪುಂಗವಂ ನುಡಿದ ನೆಲೆ ಭೂಪ ನಿಗ |
ಮಾಗಮ ಪುರಾಣ ಶಾಸ್ತ್ರಂಗಳ ವಿಚಾರಮಂ ನೀನರಿಯದ ಪ್ರೌಢನೆ ||
ಈಗ ಲನುತಾಪ ಮೇತಕೆ ನಿಖಿಳ ಸಾಮ್ರಾಜ್ಯ |
ಮಾಗ ಲಿಳೆಯಂ ಧರ್ಮದಿಂ ಪಾಲಿಸದೆ ಬನಕೆ |
ಪೋಗ ಲಾವುದು ಸಿದ್ಧಿ ನಿನ ಗಪ್ಪುದುಸುರೆನೆ ಧರಾನಾಥ ನಿಂತೆಂದನು || ||೨೦||
ಜೀಯ ಚಿತ್ತೈಸಾದೊಡಿ ನ್ನಖಿಳ ಸಾಮ್ರಾಜ್ಯ |
ಮಾಯಿತೆಂ ಬುತ್ಸವಂ ತನಗಿಲ್ಲ ಕರ್ಣಗಾಂ |
ಗೇಯ ಗುರು ಶಲ್ಯ ಕೌರವರ ನುಳಿದೀ ಸಕಲ ಮೇದಿನೀ ಮಂಡಲವನು ||
ವಾಯುಜ ನೊಳಿರಿಸಿ ನಾಂ ಗೋತ್ರವಧೆ ಗೆಯ್ದುದೀ |
ಕಾಯಮಂ ವನವಾಸ ಕ್ಕೈದಿಸುವೆ ನೆನೆ ಬಾದ |
ರಾಯಣಂ ಗಹಗಹಿಸಿ ನಸು ನಗುತೆ ನುಡಿಯರಸ ಮತ್ತೆ ನುಡಿ ಯೆನುತಿರ್ದನು ||೨೧||

ಕ್ಷಾತ್ರ ಧರ್ಮವ ನೀಕ್ಷಿಸ ಲ್ಕಿನಗೆ ಪಾತಕಂ |
ಗೋತ್ರವಧೆ ಯಿಂದ ಬಪ್ಪುದೆ ಮಹಾದೇವ ನೀಂ |
ಧಾತ್ರಿಯಂ ಪಾಲಿಸದಿರಲ್ಕೆ ನಿರ್ದೋಷಿಯೇ ನಾವರಿಯೆವೀಗ ನಿನ್ನ ||
ಗಾತ್ರಮಂ ವನವಾಸ ಕೈದಿಸುವ ಮತ ಮಾವ |
ಸೂತ್ರದೊ ಳ್ಕಾಣಿಸಿತೊ ಲೇಸು ಲೇಸಾರಣ್ಯ |
ಯಾತ್ರೆಯಂ ಮಾಡು ನೀಂ ಮಾರುತಿಗೆ ಪಟ್ಟಮಂ ಕಟ್ಟುವೆವು ನಾವೆಂದನು ||೨೨||

ಧರ್ಮಸುತ ಮರುಳೆ ನೀ ನಿಂ ತಾಡುತಿರ್ದೊಡೆ ಬು |
ಧರ್ಮಚ್ಯುವರೆ ನಾಕವಂತಿರಲಿ ಸೋಮಕುಲ |
ಜ ರ್ಮಹಾಕ್ರತುಗಳಂ ಮಾಡಿದಲ್ಲದೆ ಸಲ್ಲರದರಿಂದ ನಿನ ಗಿಳೆಯೊಳು ||
ನಿರ್ಮಲ ಸುಕೀರ್ತಿ ಯಪ್ಪಂತೆ ಯಜ್ಞಾದಿ ಸ |
ತ್ಕರ್ಮಂಗಳಂ ನೆಗಳ್ಚಿ ಗೋತ್ರವಧೆ ಗಳಿಂ |
ನಿರ್ಮಿಸಿ ದಘಂ ಪೋಗಿ ಶುಚಿಯಾಗಿ ಬಾಳ್ವುದೆ ಯೆನ ಲ್ಭೂಪ ನಿಂ ತೆಂದನು ||೨೩||

ಆದೊಡೆ ತಪಾನುಗ್ರಹ ಪ್ರಭಾವದೊಳಿನ್ನು |
ಮೇದಿನಿಯ ನಾನೆ ಪಾಲಿಸುವೆ ನೀಂ ಗೋತ್ರಹ |
ತ್ಯಾ ದೋಷ ಮೀತರಿಂ ಪೋಪುದಾ ತೆರನಂ ತಿಳುಪಿ ರಾಜಕುಲದ ನೃಪರ ||
ಸಾಧು ಚಾರಿತ್ರ ಮೆನ್ನಿಂದ ಸೊಗಡಾಗ ದಂ |
ತಾದರಿಸಿ ನೀವೆ ಕಾರುಣ್ಯದಿಂ ಮಾಳ್ಪುದು ಶು |
ಭೋದಯವ ನನಗೆಂದು ಕೈ ಮುಗಿಯೆ ಧರ್ಮಜಂ ಗಾ ಮುನಿಪ ನಿಂ ತೆಂದನು ||೨೪||

ಎಣಿಕೆ ಬೇಡೆಲೆ ಮಗನೆ ರಾಘವಂ ಪಿಂತೆ ರಾ |
ವಣನಂ ವಧಿಸಿ ವಾಜಿಮೇಧ ದೊಳ್ಪಾರ್ವರಂ |
ಮಣಿಸಿದಂ ನೀನು ಮಂತಾ ಮಹಾಧ್ವರವ ನೆಸಗ ಲ್ಕಿನಗೆ ಮೂಜಗದೊಳು ||
ಯೆಣೆಯಿ ಲ್ಲೆನ ಲ್ಕಿಂತು ಮಾಳ್ಪೆ ನಾ ನಾವ ಲ |
ಕ್ಷಣದ ಹಯಮುವಕೆ ಋತ್ವಿಜ ರೆನಿಬ ರೆನಿಸು ದ |
ಕ್ಷಿಣೆಗ ಳವ ರಂದವಂ ಬೆಸ ವೇಳ್ವು ದೆನ ಗೆನ ಲ್ಮುನಿನಾಥ ನಿಂತೆಂದನು || ||೨೫||

ಸ್ವಚ್ಛತರ ಧವಳಾಂಗ ದತಿ ಮನೋಹರ ಪೀತ |
ಪುಚ್ಛದ ಸುಗಮನ ದೊಂದೇ ಕಿವಿಯೊ ಳೆಸೆವನೀ |
ಲ ಭ್ಯನಿಜ ಕೋಮಲ ತುರಂಗಮಂ ಸಾಧಿಸಿ ಮಹಾ ಕ್ರತುವ ನಾಚರಿಪೊಡೆ ||
ಇಚ್ಛೆಗೈ ದುರೆ ಸಕಲ ಮೇದಿನೀ ತಳವ ನೇ |
ಕಚ್ಛತ್ರದಿಂ ಪಾಲಿಸುವ ನರೇಶ್ವರನವಂ |
ಗಚ್ಛಿದ್ರವಾಗಿ ನಡೆವುದು ಭೂಪಕುಲದೀಪ ಕೇಳದರ ಮಾಳ್ಕೆಗಳನು || ||೨೬||

ಸತ್ಯ ಶೌಚಾಚಾರ ಕುಲ ವೇದಶಾಸ್ತ್ರಪಾಂ |
ಡಿತ್ಯದ ಸುವಿಪ್ರ ರಿಪ್ಪತ್ತು ಸಾವಿರಕೆ ನೈ |
ಪತ್ಯ ವಸ್ತ್ರಾದಿ ಪೂಜೆಗಳಿಂದ ಸತ್ಕರಿಸಿ ಬೇರೆಬೇ ರವರವರ್ಗೆ ||
ಪ್ರತ್ಯೇಕ ಮೊಂದೊಂದು ಬಳ್ಳ ಮುಕ್ತಾಫಲವ |
ನತ್ಯಧಿಕ ಹಯ ಗಜ ರಥಂಗ ಳೊಂದೊಂದ ನಾ |
ಚಿತ್ಯ ಸಾಲಂಕಾರ ಗೋ ಸಹಸ್ರವ ನೊಂದು ಭಾರ ಪೊನ್ನಂ ಕೊಡುವುದು ||೨೭||

ಸನ್ನುತ ಕುಲಾಚಾರ ಗುಣ ವೇದ ಶಾಸ್ತ್ರ ಸಂ |
ಪನ್ನ ಭೂಸುರ ರಿನಿಬ ರೀ ತೆರದ ಸೌಖ್ಯತರ |
ಮನ್ನಣೆಗಳಂ ಪಡೆದು ಸಭೆಯಾಗಿ ಕುಳ್ಳಿ ರ್ದನುಜ್ಞೆಯಂ ಕೊಟ್ಟ ಬಳಿಕ ||
ಇನ್ನುಮೇದಿನಿಯೊ ಳಾರಾದೊಡಂ ನಿಡುಕು ಳ್ಳೊ |
ಡುನ್ನತ ಪರಾಕ್ರಮಿ ತಡೆಯಲಿ ವಾಜಿಯ ನೆಂದು |
ತನ್ನ ಬಿರುದಂ ಬರೆದು ಪೊಂಬಟ್ಟವಮಂ ಕಟ್ಟಿ ಬಿಡುವು ದಾ ಹಯದ ಫಣೆಗೆ ||೨೮||
ಆ ಕುದುರೆ ಬಿ ಟ್ಟೊಂದುವರ್ಷ ಪರ್ಯಂತ ತಾ |
ನೇ ಕಂಡಕಡೆಗೆ ತೆರಳ ಲ್ಕದರ ಸಂಗಡಂ |
ಭೂಕಾಂತ ಸೂನುಗ ಳ್ಪಲಬ ರಡಿಗಡಿಗೆ ಮಣಿ ಕನಕ ರಾಶಿಗಳ ಸುರಿದು ||
ಲೋಕಮಂ ದಣಿಸು ತ್ತೈ ತರ ಲಖಿಳ ದೆಸೆ ಯೊ ಳದ |
ನಾಕೆವಾಳ ರ್ತಡೆಯೆ ಬಿಡಿಸ ಬೇ ಕನಿಬರಿಂ |
ಸೂಕದೊಡೆ ಕರ್ತೃ ತಾ ನಾದೊಡಂ ಪೋಗಿ ನಡೆಸುವುದು ಬಳಿಕಾ ಹಯವನು ||೨೯||
ಇಂ ತಾ ಹಯಂ ತಾನೆ ಮೇದಿನಿಯೊ ಳೊಂದು ವರು |
ಷಂ ತಿರುಗಿ ತ ನ್ನಿಳೆಗೆ ಬಂದು ನಿಲು ವಲ್ಲಿ ಪರಿ |
ಯಂತ ಮಸಿ ಪತ್ರ ಮೆಂ ಬುರುತರ ವ್ರತವ ನಾಚರಿಸು ತಿರ್ದ್ದ ಮುಖವನು ||
ಮುಂತೆ ವೇದೋಕ್ತದಿಂ ಮಾಳ್ಪ ದಿದ ರಂದ ಮಿದು |
ಕುಂತೀಕುಮಾರ ನೀ ನಾರ್ಪೊ ಡುಜ್ಜುಗಿ ಸೆನ |
ಲ್ಚಿಂತಿಸುತೆ ನುಡಿದ ನೊಯ್ಯನೆ ಧರಿತ್ರೀ ತಳಾಧಿಪ ನಾ ತಪೋಧನ ನೊಳು ||೩೦||
ದ್ರವ್ಯಮೆನಗಿಲ್ಲ ಮೇದಿನಿ ಯೊ ಳರಸುವೊಡೆ ಕೌ |
ರವ್ಯರಿಂ ದಿಳೆ ನೊಂದು ದಿನಿತು ಲಕ್ಷಣ ಮುಳ್ಳ |
ದಿವ್ಯ ಹಯಮಿಲ್ಲ ಸೋದರ ರಾಹವ ದೊ ಳಲಸಿದ ರ್ಸಹಾಯಂ ಗಳಿಲ್ಲ ||
ಸವ್ಯಸಾಚಿಯು ಮಿತ್ರ ನಿಲ್ಲಿಲ್ಲ ತನ ಗಧ್ವ |
ವ್ಯಸನ ಮೆಂ ತೊಡರ್ದ್ದುದು ಪೇಳಿ ಯೆನಲು ವೇ |
ದವ್ಯಾಸಮುನಿವರಂ ಕರುಣದಿಂ ದಾ ಯುಧಿಷ್ಠಿರ ನೃಪನೊ ಳಿಂ ತೆಂದನು || ||೩೧||
ರಾಯ ನೀ ನಿದಕೆ ಚಿಂತಿಸ ಬೇಡ ಧನಮಂ ಸ |
ಹಾಯಮಂ ತುರಗಮಂ ತೋರುವೆಂ ಮರುತ ನೆಂ |
ಬಾ ಯುಗದ ನೃಪ ನಶ್ವಮೇಧಮಂ ಮಾಡಿ ಬಹು ಕನಕಮಂ ಭೂಸುರರ್ಗೆ ||
ಈಯ ಲವ ರೊಯ್ಯ್ಯ ತೆಡೆ ಯೊಳ ಗಲಸಿ ಬಿಟ್ಟ ರ |
ಪ್ರೀಯದಿಂ ದಾ ವಸ್ತುವದೆ ಹಿಮಾಲಯ ಮೊ ಳದ |
ಕಾಯಸಂ ಪಿರಿದಿಲ್ಲ ತಂದು ನೀ ನುಪಯೋಗಿ ಸೆನ ಲರಸ ನಿಂ ತೆಂದನು || ||೩೨||
ಆಕಟ ಜಡಮತಿಗೆ ಮರು ಳುಮ್ಮತವ ನಿಕ್ಕಿದೊಡೆ |
ಸುಕರಮಪ್ಪುದೆ ಜೇಯ ಗೋತ್ರ ಸಂಹರಣ ಪಾ |
ತಕವ ನೊರಸುವ ಮಖವ ನಾ ವಿಪ್ರರೊಡವೆಯಿಂ ಮಾಡಲೆನ ಗಿಹಪರದೊಳು ||
ಪ್ರಕಟ ಮೆನಿಪ್ಪುವೆ ಕೀರ್ತಿ ಸದ್ಗ ತಿಗ ಳೆನೆ ಮಗನೆ |
ಸಕಲ ಭೂಮಂಡಲಂ ದ್ವಿಜರದಲ್ಲವೆ ರಾಜ |
ನಿಕರಮಂ ತರಿದೀಯನೇ ಪರಶುರಾಮ ನೀ ಧರೆಯ ನವನೀ ಸುರರ್ಗೆ || ||೩೩||

ತಪ್ರತಿ ಪರಾಕ್ರಮಿ ವೃಕೋದರಂ ಮಾಡಿದ ಘ।
ನ ಪ್ರತಿಜ್ಞೆಯ ನಿಸಜ ತನಯ ನಾಡಿದ ಗಭೀ।
ರಪ್ರತಾಪನ ನಾಗಲಾ ಘಟೋತ್ಕಚನ ಸುತ ಮೇಘನಾದಂ ಕೇಳಿದು ॥
ಕ್ಷಿಪ್ರದಿಂ ದೆದ್ದು ಬಂದವನಿಪಾಲಕನ ಚರ।
ಣಪ್ರದೇಶಕೆ ತನ್ನ ಹೊಳೆಯೊಳೆವ ಲಲಿತ ರ।
ತ್ನಪ್ರಭಾ ಶೋಭಿತ ಕಿರೀಟಿಸಿಂ ಚಾಚು ತೊಯ್ಯನೆ ಬಿನ್ನಪಂ ಗೆಯ್ದನು॥ ॥೪೧॥
ಭದ್ರಾವತಿಗೆ ನಡೆದು ಯೌವನಾಶ್ವನ ಬಲ ಸ।
ಮುದ್ರಮಂ ಕಲಕ ದಿಹನೇ ಕೆರಳ್ದೊಡೆ ಕಾಲ।
ರುದ್ರನಲ್ಲಾ ವೃಕೋದರ ನೀ ವೃಷಧ್ವಜನೊ ಳಿದಿರಾಂಪೊ ಡಾಹವದೊಳು ॥
ಅದ್ರಿಮಥನಂ ಗಿರಿಮ ನಾ ಕದಂತಿರಲಿ ನೈ।
ರಿದ್ಯಮಂಗಳನೆ ಖಂಡಿಸುವೆ ನೆಂ ಬಾಳುತನ।
ಮದ್ರೇಕ ಮೆನಗಿಲ್ಲ ನಿನ್ನವ ಗರ್ಶ್ವಮಂ ಪಿಡಿ ದೊಪ್ಪಿಸುವೆ ನೆಂದನು ॥ ॥೪೨॥
ಕರ್ಣತನು ಸಂಭವಂ ಬಂದೊಡೇ ನೀ ಮೇಘ।
ವರ್ಣ ನೈ ತಂ ದೊಡೇ ನಾಂ ಪೋದೊಡೇ ನಿಂದು ಸು।
ಪರ್ಣವಾಹನ ಬಲ್ಪಂಟಾದೊ ಡಪ್ಪ ದಿನ ರಿಪ್ಪರಂ ಕೂಡಿಕೊಂಡು ॥
ಅರ್ಣವೋಪಮ ಯೌವನಾಶ್ವ ಚತುರಂಗಮಂ।
ನಿರ್ಣಾಮ ನೆನಿಸಿ ವಾಜಿಗ್ರಹಣ ಕಾರ್ಯಮಂ।
ನಿರ್ಣಯಿಸಿ ಕೊಡುವೆ ನಿತ್ತಪು ದೆಮಗೆ ವೀಳೆಯವ ನೆಂ ದನಿಲಜಂ ನುಡಿದನು ॥೪೩॥
ಇಂದುಕುಲತಿಲಕ ಜನಮೇಜಯ ನರೇಂದ್ರ ಕೇ।
ಳೆಂ ದವ ರಧ್ವರಂ ತುರಗಮಂ ಕೊಂಡು ಬಹೆ।
ನೆಂದು ಬಿಸನಂ ಬೇಡಿ ನಿಂದಿರ ಲ್ಬಾದರಾಯಣನ ಮೊಗಮಂ ನೋಡುತೆ ॥
ಇಂ ದಿವರ ನಾಂ ಕಳುಪ ಲಸುರ ನೈರಿಗೆ ಬೇಸ।
ರೊಂ ದಿನಿಸು ತೋರದಿರ್ಪುದೆ ಬೇಯ ತನಗಿದಕೆ।
ಮುಂದುಗಾಣಿಸದು ಕರುಣಿಪುದೆನೆ ಯುಧಿಷ್ಠಿರಂಗಾ ತಪೋನಿಧಿ ನುಡಿದನು ॥೪೪॥
ಭೂಪ ಕೇಳ್ವೆಂ ಮರುಳೆ ಹರಿ ನಿನ್ನೆಡೆಯೊಳಲಸ।
ಲಾಪನೇ ಬಿಸನ ಬೇಡುವ ವೃಕೋದರ ನಪ್ರ।
ತಾಪನೇ ವೃಷಕೇತು ಮೇಘವರ್ಣಕರ ನೊಡಗೊಂಡು ಕುದುರೆಗೆ ನಡೆಯಲಿ ॥
ಈ ಪವನ ತನಯನಂ ಕಳುಹೆಂದು ನಟಿದೊಳಾ।
ತಾಪಸೋತ್ತಮ ನೊಡಂಬಡಿಸಿ ನುಡಿ ದಾಜ್ಞಾನು।
ರೂಪದಿಂ ವರಸ ನಿತ್ತಂ ಭೀಮ ನ್ಯೈಡಿಂಬಿ ಕರ್ಣಜ ರ್ಗನುಮತಿಯನು । ॥೪೫॥
ಬಳಿಕ ನೃಪನಂ ಪರಸಿ ಬೀಳ್ಕೊಂಡು ಮುನಿವರಂ।
ತಳರ್ದ ನಾಶ್ರಮ ಕಕ್ಕೆ ಲಂಜುತ ಯುಧಿಷ್ಠಿರಂ।
ನಕೆನಾಕ್ಷ ನಿಲ್ಲದ ಧ್ವರ ಕುಪಕ್ರಮಿಸೆ ನಡೆಯದು ಕಿರೀಟಿಯ ನಿಂಗಳ ॥
ಕಳುಹಿ ಕರೆಸುವೆ ನೆಂ ದೆಣಿಕೆಯೊ ಳಿರ ಲಿನ್ನೆಗಂ।
ತೊಳಲು ತರಸುವ ಬಕ್ಕ ಕಾಲ್ದೊ ಡರಿದಂ ತರಸು।
ಗಳ ಶಿರೋಮಣಿಗೆ ಸಂಭ್ರಮದೊ ಳೈತಂದು ಬಿನ್ನೈಸಿದಂ ಚರನೊರ್ವನು ॥೪೬॥

ಅವಧಾನ ಜೀಯ ನವಿಪ್ರ ಪೊಳಲ್ವೊರಗೆ ಯಾ |
ದವರಿರೆಯ ನಿದೆ ಬಂದ ನೆನೆ ಘೇಲಿ ನೆಮ್ದು ನಿಂ |
ದವನ ನುಡಿ ಗುಚಿತಮಂ ಕೊಡುತ ಭಕ್ತಾವಳಿಯ ಬಗೆಯ ನೊಡರಿಸು ವಡೆ ರೊಳು ||
ತವಕ ದೆನಿತೋ ಮುರಾರಿಗೆ ಮಹಾದೇವ ತ್ರಿ |
ಭುವನ ದೊಳ್ ಕ್ತಾನೇ ಕೃತಾರ್ಥನಲ್ಲಾ ಕೌತು |
ಕದ ನಿಂದು ಕಂಡೆ ನೆನು ತರಸ ನರಮನೆಯಿಂದೆ ಪೊರಮಟ್ಟು ನಡೆತಂದನು ||೪೬||

ಮಿತ್ರೋದಯಾ ತ್ಸರದೊಳ್ ಕೃತಂದು ಹಯಮೇಧ |
ಸತ್ರಸಾಧನಕೆ ವೇದವ್ಯಾಸಮುನಿ ಧರ್ಮ |
ಪುತ್ರನಂ ಬೋಧಿಸಿ ಮರಳ್ದನಾ ರಾತ್ರಿಯೊಳ್ ಬಂದ ನೊಲಿ ದಿಭ ನಗರಿಗೆ ||
ಪತ್ರೀಂದ್ರ ವಾಹನಂ ಬಳಿಕ್ಕೈದೆ ಪಾಂಡವ ಧ
ರಿತ್ರೀ ರಮಣ ರಿದಿಗೊರ್ಂಡ ರುಗ್ಗಡಣೆಯ ವಿ |
ಚಿತ್ರ ಪಾಠಕರ ವಾದ್ಯಧ್ವನಿಯ ಸಾಲ ಕೈದೀವಿಗೆಯ ಸಂಭ್ರಮದೊಳು || ||೪೭||

ನಿರುಪಮ ಮಣಿಮಕುಟ ದೋರಣಿಸಿ ದಳಕಾವಳಿಯ |
ನೆರೆನೊಸಲ ಕಸ್ತೂರಿಯ ಸುಲಲಿತ ಭ್ರೂಲತೆಯ |
ತುರುಗೆವಯ ನಿಟ್ಟಿಸಲು ಗಂಗಳ ಸುನಾಸಿಕದ ಪೊಳೆವಲ್ಲ ನಸು ದೋರುವ |
ಕಿರುನಗೆಯ ಕದಪುಗಳ ಕುಂಡಲದ ಚೆಲ್ವಿನಿಂ
ಮೆರೆವ ಸದ್ವದನನಂ ಮೋಹನದ ಸದನನಂ |
ನೆರೆಸೊಬಗು ಮದನನಂ ಪಡೆದ ನಿಜರೂಪನಂ ಕಂಡ ನವನೀಪಾಲನು || ||೪೮||

ಭೂ ರಮಣಕೇಳ್ಮರಳ್ದಂಸಿ ನರಲೀಲಾವ |
ತಾರನಂ ತಾಳ್ದ ಪೊಂದೇರ ನಿಳಿ ದೈ ತಂದು |
ಚಾರುಹಾಸ ದೊಳಾ ಯುಧಿಷ್ಠಿರನ ಕಾಲ್ಗೆರಗ ಲಾ ನೃಪಂ ಕೂಡೆತೊಲಗಿ ||
ವಾರಿಜಾಂಬಕನ ಪದಪಲ್ಲಕೆ ಮಣಿಯುತಿರೆ |
ಲಾ ರಾಯನಂ ತೆಗೆದು ತಕ್ಕೈಸ ಲರಸ ನಸು |
ವಾರಿಯಂ ಪ್ರೇಮದಿಂ ಬಿಗಿಯಪ್ಪಿದಂ ಮತ್ತೆ ಮುನಿಜನಂ ಬೆರಗಾಗಲು || ||೪೯||

ಮುರಹರಂ ಬಳಿಕ ವಂದಿಸುವ ಭೀಮಾದಿ ಭೂ |
ವರ ಸಹೋದರರ ನಾಲಿಂಗಿಸುತ ಹರ್ಷದಿಂ |
ದರಮನೆಗೆ ನಡೆದು ಬರೆ ಪಾಂಚಾಲಿ ಸರಸಿರುಹನಯನ ಫಣಿರಾಜಶಯನ ||
ಶರಣಜನ ದುರಿತಾಪಹರಣ ದೈತ್ಯೇಯ ಸಂ |
ಹರಣ ಗೋವರ್ಧನೋದ್ಧರಣ ಪೀತಾಂಬರಾ |
ಭರಣ ಸತ್ಕಾಂಸ್ಯ ಭಾಭರಣ ಸಲಹೆಂದು ಹರಿಚರಣಕೆರಗಿದಳು ಬಂದು || ||೫೦||

ದ್ರುಪದ ತನುಜಾತೆಯಂ ಪಿಡಿದೆತ್ತಿ ಕರುಣದಿಂ |
ಮಾಹರಿಸಿ ಮನೆಗೆ ಬೀಳ್ಕೊಟ್ಟು ಸಂದಣಿಸಿ ನೆರೆ |
ದಸರಿಸುತ ಪೌರಜನ ಪರಿಜನದೊಳವರವರ ತಾರತಮ್ಯಗಳ ನರಿತು |
ಕೃಪೆಯಿಂದೆ ಕಳುಹಿ ದೇಹವದೊಡನೆ ಬಳಿಕಸುರ |
ರಿಪು ನೃಪಗೆ ಕೈಗೊಟ್ಟು ನಡೆಯ ಲಾಸ್ಥಾನಮಂ |
ಟಿಸಕೆ ಬಂದಲ್ಲಿ ಕುಳ್ಳಿರ್ದ ಸುತ್ನವನಾದ ವಂದಿ ನಿರುಳೋಲಗದೊಳು || ||೫೧||

ನಳಿನೋದರನ ವಚನಮಂ ಕೇಳ್ದು ಸಂತಸಂ |
ಬಳೆದು ನೃಪನಧ್ವರದ ಕಾರ್ಯಮಂ ನಾಡೆ ನೆಱೆ |
ಗೊಳಿಸಿ ಪವನಜ ವೃಷಧ್ವಜ ಮೇಘನಾದರಂ ಕುದುರೆ ತಹುದೆಂದು ಬೆಸಸಿ ||
ಬಳಿಕೋಲಗವನಂದು ಬೀಳ್ಕೊಟ್ಟು ಹರಿಸಹಿತ |
ನಿಳಯದೊಳ್ ಷಡ್ರಸಾದಿಗಳನಾರೋಗಿಸಿ ವಿ |
ಮಳ ಹಂಸತೂಲದೊಳ್ಪವಡಿಸಿದ ನನ್ನೆಗಂ ಶೋರಿ ತಿನಸೂತನೇಳ್ಗೆ || ||೬೪||

ಮೂಡ ದೆಸೆಯೊಳ್ಕೆಂಪು ದೊರೆಯೆ ತಾರಗೆ ಪರೆಯೆ |
ಕೂಡೆ ತಂಗಾಳಿ ಪುಂಬರಿಯೆ ಕಮಲಂ ಬಿರಿಯೆ |
ಪಾಡುವೆಳೆ ದುಂಬಿಗಳ್ಮೊರೆಯೆ ಚಕ್ರಂ ನೆರೆಯೆ ನೈದಿಲೆಯ ಸೊಂಪು ಮುರಿಯೆ ||
ಬೀಡುಗೊಂಡಿರ್ದ ಕತ್ತಲೆಯ ಪಾಳೆಯವೆತ್ತ |
ಲೋಡಿದುದೊ ನೋಡಿಪೆನೆಂದು ಪೂರ್ವಾಚಲದ |
ಕೋಡುಗಲ್ಲಂ ಪತ್ತುವವೊಲಿರ್ದನಾ ಪ್ರಭೆಯೊಳವ್ಯಕ್ತನಾದಿತ್ಯನು || ||೬೫||

ಇಂದು ವೇದವ್ಯಾಸ ಮುನಿವರಂ ಕೃಪೆಯೊಳೈ |
ತಂದು ಸನ್ನುತ ವಾಜಿಮೇಧಮಂ ಮಾಡು ನೀ |
ನೆಂದು ನಿಯಮಿಸಲೀತಕೊಡನೆ ಗರುಡಧ್ವಜಂ ತಾನೆ ಕಾರುಣ್ಯದಿಂದೆ ||
ಬಂದು ವೈದೋರಲೀಕಿದು ತನ್ನ ಭಾಗ್ಯವಧು |
ಪೊಂದುಗೂಡುವ ಕಾಲಮೆಂಬ ಹರ್ಷದೊಳರಸ |
ನಂದು ನಿದ್ರಾಲಲನೆಯಂ ಬಿಸುಟನುಪ್ಪವಡಿಸಿದ ನೋಲಗಂಗೊಟ್ಟನು || ||೬೬||

ಆ ವೇಳೆಯೊಳ್ಪವನಜಂ ಬಂದು ಭೂಪ ನಡಿ |
ದಾವರೆಯೊಳೆರಗಿ ಪಯಣಕೆ ಬೆಸಂ ಬಡೆದರಸು |
ಗಾವಲಂ ಫಲುಗುಣನೊಳಿರಿಸಿ ಹೈಡಿಂಬಿಯಂ ಬರಿಸಿ ಕರ್ಣಜನ ಕರೆಸಿ ||
ಆವೀರರಿರ್ವರಂ ಬೆರೆಸಿ ರಥಮಂ ತರಿಸಿ |
ದೇವಪುರ ಲಕ್ಷ್ಮೀಶ ನಂಘ್ರಿ ಗುಪಚರಿಸಿ ಬಿರು |
ದಾವಳಿಯ ಪಾಠಕರ ಗಡಣದಿಂ ಪೊರಮಟ್ಟ ನಾ ಹಸ್ತಿನಾವತಿಯನು || ||೬೭||

ಸಂಧಿ ೨ ಕ್ಕೆ ಪದ್ಯ ೬೭ ಕ್ಕೆ ಮಂಗಳಮಸ್ತು.

## ಮೂರನೆಯ ಸಂಧಿ.

ಸೂಚನೆ|| ಹಸ್ತಿನಾವತಿಯಿಂ ತಳರ್ದು ಭದ್ರಾವತಿಯ |
ವಿಸ್ತಾರಮಂ ಸಮೀಪದ ಗಿರಿಯ |
ಪುಸ್ತಕದೊಳಿರ್ದಖಿಲ ಸಂಭವಂ ಕರ್ಣ ತನಯಂಗೆ ಸಂಪ್ರೀತಿಯಿಂದೆ ||

ಭೂವಧೂರಮಣ ಕೇಳ್ ಮುಂದೆ ನಡೆಸುವ ಕ |
ಥಾವಿಸ್ತರವ ನಿನ್ನ ಪಯಣ ಗತಿಯಿಂದೆ ಭ |
ದ್ರಾವತೀ ದೇಶಮಂ ಪೊಕ್ಕರನಿಲಜ ವೃಷಧ್ವಜ ಘಟೋತ್ಕಚ ತನುಜರು ||
ಆವಗಂ ನಿರ್ಮಲ ಶ್ರೀಕರಗ್ರಾಹಿ ಮ |
ತ್ತಾವಗಂ ಪ್ರಣುತ ವನಮಾಲಾ ಸುಶೋಭಿ ತಾ |
ನಾವಗಂ ಮನಸ್ಥೋದ್ಭವಕಾರಿ ಹರಿಪೋಲಾನೆಂಬ ಪೆಂಪಿಂ ದೆಸೆದುದು || ||೧||

ಎಲ್ಲಿಯುಂ ಪರಿಪಕ್ವಪೊರ್ದಿರೆ ಯಿಂದೆ ಕರೆಯಿಂದೆ |
ಯೆಲ್ಲಿಯುಂ ಕುಸುಮ ದಾಗರದಿಂದೆ ಸರದಿಂದೆ |
ಯೆಲ್ಲಿಯುಂ ರತ್ನಮಯ ವಿಳಯಿಂದೆ ಜೆಳಯಿಂದೆ ಮಣಿಕೃತಕ ಶೈಲದಿಂದೆ |
ಎಲ್ಲಿಯುಂ ಸುಳಿವ ಗೋವ್ರಜದಿಂದೆ ಗಜದಿಂದೆ |
ಯೆಲ್ಲಿಯುಂ ಕಸ್ತೂರಿಯ ಮೃಗದಿಂದೆ ಖಗದಿಂದೆ |
ಯೆಲ್ಲಿಯುಂ ವಿರಚಿತ ಧನದಿಂದೆ ಜನದಿಂದೆ ಯಾ ನಾಡ ಸಿರಿ ಮೆರೆವುದು || ||೨||
ಅಂಜಿಸಂ ಪಾಪದ ಕೊಳಂ ಕೊಳಗಳೊಳು ಸಲೆ ಸ |
ಳಂಚಿ ಸುಳಿಯುವ ಗಾಳಿ ಗಾಳಿಗಳ ಬಳಿ ಪಿಡಿದು |
ಸಂಚರಿಸ ವೆಳೆದುಂಬಿ ದುಂಬಿಗಳ ಬಿಡಯ ಕಿಂ ಪೆನಿಸ ವಚ್ಚಳ ರಲಗರ್ಳ ||
ಗೊಂಚ ಲೆರಗಿಸದ ಲತೆ ಲತೆಗಳ ಳಪರಪ ತಕ್ಕೆ |
ಸಂ ಚಿಗುರ ವಿಮಾತ್ರವ್ರ ಮಾವುಗಳ ಜೆಂ ಪಳಿ |
ಸುಂಚವ ಬನಂ ಬನಗಳಿಂ ಬಳಸ ಮೂರೂರ್ಗ ಳಿಲ್ಲ ದೆಡೆಯಿಲ್ಲಳಯೊಳು || ||೩||
ಪೆಳಿಯುವ ಪ್ರೊಲಂಗಳಂ ಪೆಸ್ಸಾವಟಿಗ ಳಲಿ |
ವರ್ಳಯುವ ಕೊಳಂಗಳಂ ಮಣಿಶಿಲಾ ಮೋಚಿಯಿಂ |
ಪ್ರೊಳಿಯುವ ಚಲಂಗಳಂ ತರುಣಾರುಣ ಪ್ರಭಾಲಕ್ಷ್ಮಿಯುಂ ನಗುವಂತಿರೆ ||
ತಳಿಯುವ ಬನಂಗಳಂ ಕಿಬಿಯೊ ಳಿಡಿ ವಾಸರಂ |
ಕಳಿಯುವ ಸೊನಂಗಳಂ ಮನ ಕನವರತ ಸುಖಂ |
ನೊಳಿಯುವ ಜನಂಗಳಂ ಮುಳಿ ದರಸಲಾಂ ಕಾಣೆ ನಾ ಮಹೀಮಂಡಲದೊಳು || ||೪||
ಉರ್ವರೆಯ ಶಾಲಿಗಳ ಪಾಲ್ತೆನೆಗೆ ನಭದಿಂ ಮು |
ಸುರ್ವ ಗಿಳಿವಿಂಡುಗಳ ಸುಲಿಯಿಂದೆ ಪಾಮರಿಯ |
ರಿರ್ವಿಸಿಮೊ ಡಿರದೆ ಬಾಂದಳಕೆ ಮಗು ಳೀಕ್ಷುವೋ ಲ್ಕಲಮಂಗಳಿಕ್ಷುಲ ದೊಳು ||
ಕೊರ್ವಿ ನಳನಳಿಸಿ ನಿ ಳು ರಿ ಪೆಳಪ ರಸದಾಳಿ |
ಗರ್ವಗಳ ಸೋಗೆಗಳ ಪಸುರು ಪೊಗ ರಾಗಪಕೆ |
ಪರ್ವುತಿಹ ದಾ ನಾಡೊ ಳೆಲ್ಲಿಯುಂ ದಾರಿಗರ ಕಣ್ಗೆ ಕೌತುಕಮಾಗಲು || ||೫||
ತಂ ಬೆಲರ ಸೊಗಸಿಂಗೆ ತಲೆ ದೂಗುವಂತೆ ತಳ |
ದಂಬುಜದ ಪರಿಮಳಕೆ ಶಿರದ ನೊಲೆವಂತೆ ಮರ |
ದುಂಬಿಗಳ ಗಾನಕ್ಕೆ ಕೊರಲ ನೊಲೆ ದಾಡುವಂ ತೊರ್ಯ್ಯಾಯ್ಯ ನೊಲೆದಾಡುವ |
ಪೊಂ ಬಣ್ಣ ಮಸೆವ ಕಳಮ ಶ್ರೀಯ ಪರಿಚರ್ಯೆ |
ಯುಂ ಬಿಡದೆ ಮಾಳ್ಪ ಕೆಳದಿಯ ರೆನಲ್ಕೀರ ನಿಕು |
ರುಂಬಮಂ ಸೋವಲೆಂ ದಲ್ಲಿರ್ದ ಪಾಮರಿಯ ರಳ್ಕುಗರ ನಡೆಗೆಡಿಸರು || ||೬||
ಪಾ ಲ್ತೆನೆಮೊಳಂಡಿಸಿದ ಗಿಳಿವಿಂಡ ನಬಲೆಯ |
ಕಾರ್ಲ್ಗೆಗೆಯುಲಾದರ್ ಕೈಪರೆ ಗುಟ್ಟುವಂಡಲೆಗೆ |
ತೇಲ್ದು ಮೇಲುದು ಜಾರೆತೊರ್ಪರ್ ಪೊಂಗೊಡ ನೊಳೆಯ ನಂಬುಜದ ಮುಕುಳಮೆಂದು ||
ಸೋಲ್ದೆರಗಿ ತಿರುತಿರುಗಿ ಬರುತಿರ್ಪ ತುಂಬಿಗಳ |
ಪಾಲ್ವಿಜ ಗಿರಿಯ ಬಳಸುವ ತಮೋರಾಜಿಯಂ |
ಪೋಲ್ತು ಸಲೆ ಕಂಗೊಳಿಸುತಿರ್ಪ್ಪ ದಾ ಭೂತಳದೊಳ್ ನೆಂಜಿ ನಚ್ಚರಿಯನು ||೭||

ಆ ಗಿರಿಯ ಮಸ್ತಕವ ನಡರ್ದುದರ ಪೂರ್ವ।
ಭಾಗದೊಳ್ಮೆರೆವ ಭದ್ರಾವತಿಯ ಸಿರಿಗೆ ತಲೆ।
ದೂಗುತೆ ವೃಕೋದರಂ ನುಡಿದ ನೆಲೆ ವೃಷಕೇತು ನೋಡಿದಂ ಕೌತುಕವನು ॥
ಈಗಳೀ ನಗರಂ ಮಹೀಲಲನೆ ಗಾಸ್ಯಾಬ್ಜ।
ಮಾಗಿರ್ಪುದೆತ್ತಲುಂ ಗಗನ ದೆಡೆ ಗೆಳ್ವ ಬಹು।
ಯಾಗ ಧೂಮಂಗಳೆಂ ಬಾಲೋಲ ನೀಲಾಳಕಾವಳಿಯ ಚೆಲ್ವಿಸಿಂದೆ ॥ ॥೧೪॥

ಎನಿಸು ಜನಮಿರ್ದೊಡಂ ತ್ರಿದಶಜನ ಕಾವಾಸ।
ಮೆನಿಪು ದಮರಾವತೀ ಪತ್ತನಂ ಮೂಜಗದೊ।
ಳೆನಿಸು ಜಸವಡೆದೊಡಂ ಗುಹ್ಯಕಾಸ್ಪದ ಮೆನಿಪು ದಳಕಾಪುರಂ ತಿಳಿವೊಡೆ ॥
ಎನಿಸು ಜನಮಿರ ಲೆನಿಸು ಜಸವಡೆಯ ಲದರಿಂದೆ।
ತನಗಿನಿಸು ಕುಂದಿಲ್ಲ ಮೆಂಬ ಪೆಂಪಿಂದೆ ಪುರ।
ವನಿತೆ ಗಹಗಹಿಸಿ ನಗುವಂತೆಸೆವ ಸೌಧಂಗಳ ಮರೀಚಿ ನೋಡೆಂದನು ॥ ॥೧೫॥

ಶ್ವೇತಾದ್ರಿ ಶಿಖರದೊಳ್ಕಂಗೊಳಿಸು ಪ್ರಜ್ವಲ।
ಜ್ಯೋತಿ ರ್ಲತೆಯೊ ಮೇಘ್ಸಲ್ಲಲಿತ ಶುಭ್ರಜೀ।
ಮೂತ ದೊಡ್ಡಿನ ಮೇಲೆ ಪೊಳೆವ ಸೌದಾಮಿನಿಯೊ ಶಿವನ ಮಸ್ತಕದೊಳೆಸೆವ ॥
ಶೀತಾಂಶು ರೇಖೆಯೋ ಬಗೆವೊಡೀ ನಗರದ ವಿ।
ಸೂತನ ಪ್ರಾಸಾದ ದಗ್ರದೊಳ್ಪೊಳೆವಂಬು।
ಜಾತ ನಯನೆಯರ ತನುವಲ್ಲರಿಯ ಕಾಂತಿಯೋ ಕರ್ಣಸುತ ನೋಡೆಂದನು ॥೧೬॥

ನಳನಳಿಪ ತರುಣತೆಯ ಸೊಂಪುನೆ ತ್ತರುಣತೆಯ।
ತಳಿರಿಡಿದ ತೋರಣದ ಚೆಲ್ವನಾಂ ತೋರಣದ।
ತೊಳಪ ಕಳಸದ ಗುಡಿಯ ಸಾಲ್ದೊಳೆವ ಕನ್ನಡಿಯ ಸೆಳೆಯ ಚಮರಿಯ ॥
ಚಲಿತ ಲೀಲಾಸ್ಯದ ಪತಾಕೆಗಳ ಲಾಸ್ಯದ ಪ।
ವಳದ ಮುತ್ತುಗಳ ಗೊಂಚಲ್ಗಳೊತ್ತುಗಳ ಗೊಂ।
ಪಳದ ಬಗೆ ಕಂಗಳಿಂಬಿಗೆ ಕೌತುಕಂಗಳಿಂ ಬೀದಿಗಳೊಳೆಸೆದಿರ್ಪುವು ॥ ॥೧೭॥

ಒತ್ತರಿಸಿ ದುನ್ನತ ಪ್ರಾಸಾದ ದಬಲೆಯರ।
ಪೃತ್ತ ವದನೇಂದು ಮಂದಸ್ಮೇರಚಂದ್ರಿಕೆ ಯೊ।
ಳುತ್ತುಂಗ ದೇವಾಲಯದ ಗೋಪುರದ ಮಾಣಿಕದ ಕಲಶ ದೆಳೆ ಬಿಸಿಲೊಳು ॥
ಕತ್ತಲೆ ಪರೆವುದಲ್ಲದಿ ನಗರದೊಳಿರದೆ ॥
ಮತ್ತೆ ಸೋಮಾದಿತ್ಯ ಕಿರಣಂಗಳ್ಪುದಿಪ್ಪೊಡೆ।
ಸುತ್ತಲುಂ ಮುಗಿಲುಂ ಮುಟ್ಟುವ ಕೋಟೆಗಳವಳಿಯ ನೆಲೆಗ ನೋಡುಚ್ಚಳಿಯಿಸು ೧೮

ಕುಸಿದು ಪಾತಾಳದೊಳಗಿರ್ದ ಪಲಕಾಲಮಂ।
ದ್ವಿಸಹಸ್ರ ನಯನಂಗಳಿಂದೆ ನೋಡಿದೊಡೆ ಕಾ।
ಣಿಸಿ ಕೊಳ್ಳದೀ ಪುರ ದಗಳ ಘಾತಮಿದ ನಜಂ ಬಲ್ಲನೋ ಕೇಳ್ದನೆಂದು ॥
ಬಿಸಜಸಂಭವನ ಪೊರೆಗೆಂ ದಿಳೆಯ ನುಗಿ ದುಚ್ಚ।
ಳಿಸಿ ಜೆಳೆದ ಫಣಿಪತಿಯ ಮಣಿಪಡೆಯ ಸಾಲಿವೆನ।
ಲಿಸೆವು ವಾಗಸ ದೊಳೀ ಪೊಳಲ ಕೋಟೆಯ ರನ್ನದೆನೆಗಳೆಲ್ಲಾ ದೆಸೆಯೊಳು ॥೧೯॥

ಕಡುಗಂಪೆಸೆವ ತಳಿರ ತನಿಗೆಂಡವಮಂ ಕಲಕಿ |
ನಡೆದು ನೊನೆಮುಗುಳ ಶಸ್ತ್ರಂಗಳಂ ಪಾಯ್ದು ಮಾ |
ಮಿಡಿಯ ಜೊಂಪದ ವಜ್ರಮುಷ್ಟಿಯಂ ಒಡಿದು ಲತೆಗಳ ಕೊನೆ ಜಾಟಿಯಿಂದೆ ||
ಬಡಿದು ಕೋಗಿಲೆಯ ನಿಡುಸರದ ಬೊಬ್ಬೆಯೊಳಾರ್ದು |
ಬಿಡದೆ ವನದೇವಿ ಯೋಲಗದೊಳುತ್ಸವದಿಂದ |
ಮುಡಿಗಡಿಗೆ ತೂಣಗೊಂಡವನಂ ತೆಸೆವ ಮಂದಮಾರುತನ ನೋಡೆಂದನು || ||೩೨||
ಬಕುಳ ಮಂದಾರ ಪಾದರಿ ಕರ್ಣಿಕಾರ ಚಂ |
ಪಕ ಕೋವಿದಾರ ಪ್ರಿಯಂಗು ಕರವೀರ ಕುರ |
ವಕ ತಿಲಕ ಸುರಗಿ ನಂದ್ಯಾವರ್ತ ನೇರು ಸೇವಂತಿಗೆ ಶಿರೀಷಮೆಂಬ ||
ಸಕಲ ತರುನಿಚಯಂಗಳಂಗಜನ ವಿವಿಧ ಸಾ |
ಯಕದ ಮೂಡಿಗೆಗಳಂ ತೆಸೆವ ನವ ಕುಸುಮ ಸ್ತ |
ಬಕದಿಂದ ನೊಪ್ಪುತಿವೆ ಕುಂದಮಾಲತಿ ಮಲ್ಲಿಕಾದಿ ಪೂವಲ್ಲಿಗೂಡಿ || ||೩೩||
ಸಾಲಸಾಲಂಗಳಿಂ ಬಕುಳ ಕುಳದಿಂದೆ ಹಿಂ |
ತಾಲ ತಾಲಂಗಳಿಂ ಮಾದಲ ದಲಗರ್ಳಿಂ ತ |
ಮಾಲ ಮಾಲತಿಗಳಿಂ ಸಂರಂಭದಿಂ ಮಂದ ಮಂದಾರದಿಂದೆ ||
ಜಾಲ ಜಾಲಂಗಳಿಂ ಸುರಹೊನ್ನೆ ಹೊನ್ನೆ ಬಗೆ |
ಪಾಲ ಪಾಲಾಶತರುಣಾಮ್ರಚಯದಿಂದ
ಲಾಲಿತ ನವಾಶೋಕದಿಂದುದ್ಯ ದುದ್ಯಾನಮೇಂ ಚೆಲ್ವೆನಿಪುದೊ || ||೩೪||
ಬಗೆವೊಡಿವು ಮುನ್ನ ಮಾಡಿರ್ದ ದೈವದ್ರೋಹ |
ವಘದಿಂದೆ ಬನದ ಪೊರವಳಯದೊಳ್ಬಹು ಕಂಟ |
ಕಿಗಳಾಗಿ ಬಂದು ಸಂಭವಿಸಿರಲ್ಮತ್ತೆ ಹೊಂ ಗೇದಗೆಗಳವರೊಳಾಡಿ ||
ಮಿಗೆ ಮಲಿನವಾಯ್ತು ಸರ್ವಾಂಗಮುಂ ಭ್ರಮರಾವ |
ಳಿಗೆ ತಮಗದರ ಸಂಗಮೇಕೆಂದು ಪೂತ ಸಂ |
ಪಗೆಗಳರೆ ಶುಚಿಗಳಂ ತೆಸೆಯುತಿವೆ ನೋಡು ನಂದನ ಪುರದ ನಂದನದೊಳು ||೩೫||
ಮುಡಿವಾಳ ಲಾಮಂಚಗಳ ಬೇರ್ಗಳಿಂ ಬೇರ್ಗ |
ಳಿಡಿ ದಗರು ಚಂದನಂಗಳ ಕೊಂಬಿನಿಂ ಕೊಂಬು |
ತೊಡರಿದ ಚೆಟ್ಟಿಸಳು ಮಲ್ಲಿಗೆ ಜಾಜಿಗಳ ಪೂಗಳಿಂ ಪೂಗಳೊಂದುಗೂಡಿ ||
ಕಡು ಗಂಪು ವಡೆದು ವಾಮೂಲಾಗ್ರಮುಂ ಬನದ |
ನಡುವೆ ಪುಟ್ಟಿದ ಕಾಳ್ಮರಂ ಗಳೆಲ್ಲಂ ನೋಂಕಿ |
ದೊಡೆ ತಂಬೆಲರ್ಗೆ ಪರಿಮಳವ ನೀಯದ ಕುಜಂ ನಂದನದೊಳೊಂದಿಲ್ಲೆನೆ ||೩೬||
ಈವನದ ನಡುನಡುವೆ ತೊಳತೊಳಗು ತಿರುತಿಹ ಸ |
ರೋವರ ವರದೊಳೆ ದಳೆದಳೆದು ಬೆಳೆಬೆಳೆದ ರಾ |
ಜೀವ ದಲ ದಲದ ತುಳಿ ತುಳಿದಿಡಿ ದಿಡಿದ ಬಂಡ ನೊಡನೊಡೆ ನವಿಮನವಿಮ ||
ಆವಗ ವಗಲದೆ ಯುಗಯುಗವಾಗಿ ನೆರೆನೆರೆದು |
ಕಾವ ನೊಗ ನೊಗಸಿನಲಿ ನಲಿದು ಮೊರೆಮೊರೆವ ಭೃಂ |
ಗಾವಳಿಯ ಗಾವಳಿಯ ಕಳಕಳಂ ಗಳ ನೋಡು ನೋಡು ರವಿತನಯ ತನಯ ||೩೭||

ಸಗ್ಗದಾಣ್ಮನ ವಜ್ರಹತಿಯಿಂದೆ ಸಾಗರಕೆ।
ಮುಗ್ಗುವ ಕುಲಾದ್ರಿಗಳ ಮರಿಗಳ ಸಮೂಹದ ಮೆನ।
ಲೊಗ್ಗಿನಿಂ ಪೆರ್ಗಡಲ ನೀರ್ಮೊಗೆಯ ಲಿಕಿದ ಕಾರ್ಮುಗಿಲ ಬಳಗಂಗಳೆನಲು॥
ದಿಗ್ಗಜಮನೇಕಂಗಳಾಡುವೆನೆ ಕರಿಘಟೆಯು।
ಮೊಗ್ಗರಂ ವರ ಸರೋವರ ಸಲಿಲ ಪಾನ ಕೇಳಿ।
ನೆಗ್ಗಿದಲ್ಲದೆ ಮಾಣದೆಂಬಿನಂ ಪೊಳಲ ಪೊರಮಟ್ಟು ಬಂದವು ದೆಂವಸು॥ ॥೩೮॥
ಖಳರ ಪುರುಷಾರ್ಥಮಂ ಕಾಮಿಸುವ ಯಾಚಕಾ।
ವಳಿಯಂತೆ ಪೊಳಲಿಂದೆ ಪೊರಮಟ್ಟು ಸರಸಿಯೊ।
ಳ್ಮುಳುಗುತಿ ರ್ಪಾನೆಗಳ ದಾನಾಭಿಲಾಷೆಯಿಂ ಬಿಟ್ಟಳಿಕುಲಂ ತೊಲಗಲು॥
ಕಳಕಳಿಸಿ ನಗುವ ಸಜ್ಜನರ ಪ್ರೋಲ್ಲಸದ ಪರಿ।
ಮಳದ ಮಕರಂದಮಂ ಭ್ರಮರಾವಳಿಗೆ ನಾಜ।
ದೊಲಿದಿತ್ತು ಮೆರೆವ ಜಿಕಾವಳಿಯ ಬಿಜ್ಜಲಗರ್ಳ ಪೆರ್ಚ ನೋಡೆಂದನು॥ ॥೩೯॥
ಕಾ ಗಾಲ ವಧ್ರುವಾಲೆಗ ಳಮರ ಸರಣಿಯೊ।
ಳ್ಮಾರ್ಗೊಡು ತೆತ್ತಲುಂ ನಿಬಿಡ ಮಸ್ಪಂದದಿಂ।
ನೀರ್ಗುಡಿಯೆ ಪೊಳಲ ಪೆರ್ಬಾಗಿಲ್ಗಳಿಂದೆ ಪೊರಮಡುವ ವರ ಸರಸಿಯಿಂದೆ।
ಊರ್ಗೆ ಮರಳುವ ತೇಜಿಗಳ ಸಾಲ್ಗಳಾ ಮಧ್ಯ।
ಮಾರ್ಗದೊಳ್ತನೆ ತೀವಿ ಸಂದಣಿಸುತಿವೆ ನೃಪರೊ।
ಳಾರ್ಗೆವನ ಸೌಭಾಗ್ಯಮುಂ ಟಮನು ಪೊಗಳ್ವೆನೆಂ ತಣುಗ ನೋಡಚ್ಚರಿಯನು॥ ॥೪೦॥
ಬೇರೆ ಬೇರಿನಿತೆಲ್ಲಮಂ ಕರ್ಣತನಯಂಗೆ।
ತೋರುತಿರ್ದಂ ಭೀಮ ನನ್ನೆಗಂ ಬಿಸಿಯ ಬಿಸಿ।
ಲೇರಿದುದು ಭದ್ರಾವತಿಯೊಳುಳ್ಳ ತೇಜಿಗಳ ಚಪಲತೆಯ ಸೌರಂಭದೆ॥
ನಾರಿದ ಜವಂಗಳಂ ಕಂಡು ಕಾಲ್ಗೆಟ್ಟಳಿಯು।
ಲಾರದೊಯ್ಯನೆ ನಡೆವ ತೇಗುರ್ದುರೆಯುಂ ಕಂಡು।
ನೂರೆಲೆಗೆಯ ನುಗ್ರಕೋಪದಿಂ ದುರಿಯ ನುಗುಳದೆ ಮಾಣ ನೆಂಬಂತಿರೆ॥ ॥೪೧॥
ಭಾನು ಮಧ್ಯಾಹ್ನಗತನಾದ ನೀ ಕುಮರೆಗಳೊ।
ಳಾ ಸುತ್ತಮಾಶ್ವಮಂ ಕಂಡುದಿಲ್ಲದರಿಂದ।
ಮೇನದಂ ಪೊರಮಡಿಸರೊ ಪೊಳಲೊಳಿಲ್ಲವೊ ಕಣ್ಗೆ ಗೋಚರವಾಗದೊ॥
ಈನಿದಾನವನರಸುವೊಡೆಂತು ಟಿಮ ಗೆಲೆ ಕರ್ಣ।
ಸೂನು ಪೇಳೆಂದು ಚಿಂತಾವಿಷ್ಟನಾಗಿ ಪವ।
ಮಾನಜಂ ಚಿತ್ತದೊಳ್ದೇವಪುರಲಕ್ಷ್ಮೀಶಸಂಪ್ರಿಯಂ ಧ್ಯಾನಿಸಿದನು॥ ॥೪೨॥

ಸಂಧಿ ಮೂರಕ್ಕೆ ಪದ್ಯಗಳು ೧೨೧ ಕ್ಕೆ ಮಂಗಳಮಸ್ತು.

ಅಸಿತರೊಳನೇಕ ಸೇನೆಗಳ ಸನ್ನಾಹದಿಂ |
ಘನನಾದ್ಯ ರಥಪದಿಂ ಸೂತರ ಪೊಗಳ್ಕೆಯಿಂ |
ವಸುಕರಿಸಿ ವಸುಳ ವಸ್ತ್ರಾಭರಣ ಗಂಧಮಾಲ್ಯಾದಿಗಳ ಪೂಜೆಯಿಂದೆ |
ಸಿಸು ಶಾತಪತ್ರ ಚಮರಂಗಳಿಂ ಪೆಡಮಿಲಿ ಮೊ |
ಳನುವಾಗಿ ವಾಘೆಯಂ ಪಿಡಿದು ನಡೆತಪ್ಪ ನೃಪ |
ತನುಜರಿಂ ವಾಹಯಂ ಸಿಂಗರ್ ಪೊರಮಟ್ಟು ಸಂಭ್ರಮದೊಳೈತರುತಿರ್ದುದು ||೬||

ವಿಧುಬಿಂಬ ಮುದಯಮಂ ಕಂಡೊತ್ತರಿಸಿ ಪಯೋ |
ನಿಧಿ ಮೇರೆ ವರಿ ಮುಕ್ಕುವಂತೆ ನಿರ್ಮಲವಾದ |
ಸುಧೆ ಯೋಳ್ಗಿಯಂ ಕಂಡು ಪುಳಕಂ ನೆಗಳ್ದು ಜಂಭಾರಿ ಸಂಭ್ರಮಿಸುವಂತೆ |
ಅಧಿಕಬಲ ಯೌವನಾಶ್ವ ವಸಿಪ ನೈಶ್ವರ್ಯ |
ವಧುವಿನ ಕಟಾಕ್ಷವಂ ತೊಪ್ಪುವ ತುರಂಗಮಂ |
ಕುಧರೋಪಮಾನ ಪವಮಾನಜಂ ಕಂಡು ನೆರೆ ಸುಮಾನಸಮಂ ತಾಳ್ದನು | ||೭||

ಚತುರ ಪದಗತಿಯು ಸರಸಧ್ವನಿಯು ವರ್ಣಶೋ |
ಭಿತ ದಲಂಕಾರದ ಸುಲಕ್ಷಣದ ಲಾಲಿತ |
ಶ್ರುತಿರಂಜನದ ವಿಶೇಷಾರ್ಥಸಂಚಿತದ ವಿಸ್ತಾರದಿಂ ಪೊಸತೆನಿಸುವ ||
ನುತ ಸತ್ಕವಿ ಪ್ರೌಢತರ ಸುಪ್ರಬಂಧ ದಂ |
ತತಿ ಮನೋಹರವೆನಿಸಿದ ವಾಜಿಯಂ ಕಂಡು ಹ |
ರ್ಷಿತನಾಗಿ ನೋಡುತಿರ್ದಂ ಕಲಾವಿದನಪ್ಪ ಮಾರುತಿ ಮಹೋತ್ಸವದೊಳು ||೮||

ಮೂಜಗದೊಳೀ ತುರಂಗಮವೆ ಪೊಸತೆಂದು ವರ |
ವಾಜಿಯಂ ನಿಟ್ಟಿಸುವ ಭೀಮಸೇನನ ಪದ ಸ |
ರೋಜ ಯುಗಳಕ್ಕೆರಗಿ ಮೇಘನಾದಂ ನೀವು ನೋಳ್ಪುದೆ ಸ್ಕಘಟನೀಗ ||
ವಾಜಿಯಂ ತಹೆನೆನುತ್ತಲ್ಲಿಂ ತಳರ್ದ ಮಾ |
ಯಾಜಾಲಮಂ ಬೀಸಿದಂ ನಭೋಮಂಡಲ |
ಕ್ಕಾಜನಪ ನಶ್ವರಕ್ಷೆಯ ಬಲಂ ಕಂಗೆಡಲ್ ಭೂಪ ಕೇಳದ್ಭುತವನು || ||೯||

ತುರುಗಿ ತಿ ತ್ತಿತ್ತಲುಂ ಪ್ರಳಯಕಾಲದ ಮೇಘ |
ಮೊರಗುತಿವೆ ಬರಿಯ ಬರಸಿಡಿಲ್ಗಳಿತ್ತಿತ್ತಲುಂ |
ಕರೆಯುತಿವೆ ಬಿರುಗಾಳಿ ದೂಳ ನೆತ್ತಿತ್ತಲುಂ ಕತ್ತಲೆಗಳಿಟ್ಟಣಿಸಿವೆ ||
ತೆರೆಯಬಾರದು ಕಣ್ಣ ಮರೆದು ಕಸ್ಟರಿಯೆ ದಿ |
ಕ್ಕರಿಯಬಾರದು ಮಹಾದ್ಭುತಮೆತ್ತಣದೊ ಜಗ |
ಪೆರೆಯನೇ ಬಲ್ಲನೆನುತಿರ್ದ ದಾ ಸೈನಿಕಂ ಹೈಡಿಂಬಿ ಕೃತಮಾಯೆಗೆ || ||೧೦||

ಗಗನದೊಳ್ಸುಳಿಯು ತನಿಮಿಷ ನೊರ್ವ ನಿವನ ಮಾ |
ಯೆಗೆ ಭಯಂಗೊಂಡು ಕಡುವೇಗದಿಂ ಪೋಗಿ ವ |
ಜ್ರಿಗೆ ದೂರಲಾತಂ ಚರರ ಕಳುಪಿ ಕೇಳಿಸಿದೊಡೀತನಾಂ ಭೀಮಸುತನ ||
ಮಗನಧ್ವರಕೆ ಹಯವನೊಯ್ದಪೆ ನೆನಲ್ಕವಂ |
ಮಗುಳದಂ ಪೋಗಿ ಸುರಪತಿಗೆ ಬಿನ್ನೈಸೆ ನಸು |
ನಗುತವಂ ದೇವರ್ಕಳೊಡಗೂಡಿ ಬಂದನಲ್ಲಿಗೆ ಸಮರಮಂ ನೋಡಲು || ||೧೧||

ಇತ್ತಲೀ ಕುದುರೆ ಗಾಹಿನ ಭಟರ ಕಣ್ಗೆ ಬ |
ಲ್ಗತ್ತಲೆಗಳಂ ಪೊಳ್ಗಳಂ ಕವಿಸಿ ಭೀತಿಯಂ |
ಬಿತ್ತಿ ನೆಲಕಿಳಿದು ಪಡಿವಾಘೆಯುಂ ಪಿಡಿ ದರಸು ಮಕ್ಕಳಂ ಬೀಳಿಹೊಯ್ದು ||
ತತ್ತುರಗಮುಂ ಕೊಂಡು ಜಿಗಿದ ನಾಗಸಕೆ ಸರ |
ಪತ್ತಣಿಂ ಪಂಚೆ ಜೆಳ್ದಾವರೆಯು ನಳ್ತಿಯಿಂ |
ಕಿತ್ತು ನಭಕೇಳ್ವಂತೆ ಮೇಘನಾದಂ ಭೀಮ ಕರ್ಣಜ ಜೆರಗಾಗಲು || ||೧೨||

ರಾಹು ತುಡಿಕಿದ ಚಂದ್ರಮಂಡಲವೊ ಗರುಡನು |
ತ್ಸಾಹದಿಂ ದೆತ್ತಿಕೊಂಡೊಯ್ವಮೃತಕಲಶವೊ ಬ |
ಲಾಹಕಂ ತಾಳ್ದ ಬೆಳ್ಮಿಂಚಿ ನೊಬ್ಬುಳಿಯೊ ಪೊಸತೆನೆ ಘಟೋತ್ಕಚತನಯನು ||
ಬಾಹುಬಲದಿಂ ಪಿಡಿದ ಕಕ್ಷದೊ ಳಿರುಂಕಿದ ಮ |
ಹಾಹಯಂ ಗಗನಮಾರ್ಗದೊಳೈದುತಿರೆ ಕುದುರೆ |
ಗಾಹಿನ ಚತುರ್ಬಲಂ ಕಂಡು ಬೊಬ್ಬಿರಿದಾರ್ದು ಕಾಳಗಕೆ ಮುಂಕೊಂಡುದು ||೧೩||

ಜೋಡಾಗಿ ಪೊಡಮೊಡೆ ಸಾಲ ದೇಳೀಹಯಂ |
ಜೋಡಿಸುವೆ ನೀ ತುರಗವಂ ತನ್ನ ತೇರ್ಗೆಂದು |
ಗಾಡದಿಂ ಬಾಂಗೆತ್ತಿಕೊಂಡೊಯ್ವುದಿರ ನಬ್ಜಸಖನೆಂಬ ಶಂಕೆಯಿಂದೆ ||
ರೂಡಿಸಿದ ಮಂದೇಹಸೇನೆ ಬಂದೆಡ್ದೆಸೆಗೆ |
ಮಾಡಿದುದೊ ಮುತ್ತಿಗೆಯ ನೆನೆ ಮೇಘನಾದನ ವಿ |
ಭಾಡಿಸಿ ಚತುರ್ಬಲಂ ಕವಿಯೆ ಲೆಕ್ಕಿಸದನಂ ಸೈವರಿದ ನಾಗಸದೊಳು || ||೧೪||

ಬಳಿಕಾಬಲಂ ಕಂಡು ದಭ್ರಮಾರ್ಗದೊಳೆ ಮುಂ |
ವಳಿಯುತಿಹ ಮೇಘ ನಾದನ ನೆಲವೊ ಬಂದಾಯಿ |
ಗಳನೆಸಗಿ ಮೋಸದೊಳ್ತುರಗಮುಂ ಕೊಂಡು ಬಾಂದಳ ಕಡರ್ದೊಡೆ ನಿನ್ನನು ||
ಉಳುಹುವರೆ ಯೌವನಾಶ್ವನ ಸುಭಟ ರಕಟ ನಿ |
ನ್ನಳವ ನರಿಯದೆ ಬಂದು ಕೆಣಕಿದೆ ಯೆಲಾ ಜೀವ |
ದುಳಿವ ನಾಸ್ಯೆದು ಕೊ ಳ್ಳೆನುತಾತನಂ ಮುತ್ತಿಕೊಂಡು ಕವಿದೆಸುತಿರ್ದುದು || ||೧೫||

ಪಿಂತಿರುಗಿ ನೋಡಿದಂ ಕಂಡೆನಲ್ಲವೆ ಜೀವ |
ಮಂ ತೆಗೆದುಕೊಂಡೊಯ್ವ ಕಾಲಸಂ ಪೆಣನಟ್ಟು |
ವಂತಾಯ್ತಲಾ ನಿಮ್ಮ ಸಾಹಸಮುಂ ಜಾಗುಜಾಗೆನುತೆ ಹೈಡಿಂಬಿ ನಗುತೆ ||
ಸಂತತಂ ಕರೆವಕಲ್ಮಳೆಗಳಂ ಸೃಜಿಸಿ ಬಲ |
ಮಂ ತನೆ ಪೊರಳ್ಚಿ ಮುಂದಳೆಯುಲಾ ಪೃಥ್ವಿಲೂ |
ರಂ ತಾಗೆ ಪೊರಮಟ್ಟುದಾನೃಪನ ಸೈನ್ಯಮಕ್ಷೋಹಿಣಿಯ ಗಣನೆಯಿಂದೆ || ||೧೬||

ತನ್ನೊಳಿರ್ದಮಲ ಹಯರತ್ನಮಂ ಕೊಂಡು ಕಳ |
ನಿನ್ನಿಭಸ್ಥಳ ಕೊಂಡು ನೆಂಬ ಕಡುಗೋಪದಿಂ |
ಪಿನ್ನ ಬಿಡದೆದು ನಡೆದುದೊ ಗಗನಕೀ ಧರಣಿಯೆನೆ ಘಟೋತ್ಕಚತನುಜನು ||
ಮುನ್ನ ಮಾಡಿದ ರಜದ ಮಾಡಿಗಿದು ಪಿಸಿ ಸಡಿ |
ಮನ್ನೆಗಳ್ಳಿದರೊ ವೈರಿಗಳೆನೆ ರಣೋತ್ಸಾಹ |
ದಿನ್ನಡೆವ ಚಾತುರಂಗದ ಪದಹತಕ್ಷೋಳ್ಪ ದೂಳ್ಮುಸಗಿತಂಬರದೊಳು || ||೧೭||

ಪಟಹ ನಿಸ್ಸಾಣ ತಮ್ಮಟ ಭೇರಿಗಳ ಸಮು ।
ತ್ಕಟನಾದ ಮುಗ್ರಗಜ ಘಟೆಯ ಘಂಟಾರವಂ ।
ಚಟುಲವಾಜಿಗಳ ಖುರಪುಟದ ರಭಸಂ ಹರಿಸುತಿಹ ರಥಚಕ್ರಧ್ವನಿ ॥
ಲಟಕಟಿಪ ಸಮರ ಲಂಪಟರ ಭುಜಗಳಹೊ ಯ್ಲ ।
ಪಟುರ ಚಾಪಸ್ವನಂ ಪಟುಭಟರ ಬೊಬ್ಬೆ ಯಾ ।
ರ್ಭಟೆಗಳೊಂದಾಗಿ ಸಂಘಟಿಸಿ ತೀ ಬ್ರಹ್ಮಾಂಡ ಘಟಮುಂದೊಡೆಯದಿರದೆನೆ ॥೧೮॥

ಎತ್ತಿಬಹ ಸತ್ತಿಗೆಯ ನೊತ್ತಂಗಳಿತ್ತಲುಂ ।
ಕತ್ತಲಿಸೆ ಪೊತ್ತಮುಸನಿತ್ತ ಬಲ್ಗತ್ತಿಗಳ್ ।
ಕಿತ್ತುಭಟರೆತ್ತಿ ಜಡಿಯುತ್ತಿರಲ್ಕತ್ತಬೆಳಗಿತ್ತುವವು ಮತ್ತೆ ಬಲಕೆ ॥
ಸುತ್ತಲುಂ ಕೆತ್ತವೋಲ್ ಮತ್ತಗಜ ನೊತ್ತರಿಸಿ ।
ಮುತ್ತಿ ನಡೆಯು ತ್ತಿರ್ದರ ನೊತ್ತಿ ನಿಲಿಸುತ್ತಿರಲು ।
ಪತ್ತು ಜವನೋತ್ಥಿತ ಮರುತ್ತತಿಯೊಳುತ್ತಮ ಹಿಮೋತ್ತರಂ ಬಿತ್ತರಿಸಿತು ॥೧೯॥

ತಡೆಯೊಳ್ ಪರಬಲ ಮೇಘಂಗಳಂ ಪ್ರಳಯ ಮೊ ।
ಳ್ಗುಡಲು ಘುಡುಘುಡಿಸುತ್ತೆ ನಡೆವಂದದಿಂದೆ ಬೊ ।
ಬ್ಬಿಡುತ ತನಗೆಣೆಯಿಲ್ಲ ಪೈತರುತಿರ್ಪ ಯೌವನಾಶ್ವನ ಸೈನ್ಯಮಂ ನೋಡುತೆ ।
ಎಡಗಯ್ಯ ತುರಗಮುಂ ಬಲಿ ಪಸವಡಿಸಿ ತನ್ನ ।
ಕಡುಗಮುಂ ಜಡಿ ದಸಿಬರೆಲ್ಲರಂ ಚಿತ್ತದೊ ।
ಳ್ಗಡಣಿಸವೆ ಕಲಿ ಘಟೋತ್ಕಚಸುತಂ ನಸುನಗುತೆ ಗಗನದೊಳ್ಬರುತಿರ್ದನು ॥೨೦॥

ಡಿಳ್ಳವಾದುದೆ ಯೌವನಾಶ್ವಭೂಪತಿಯ ಬಲ ।
ಮೊಳ್ಳಿಗರ ನೂಕುಸೂ ಕಾವಡಿಯೊ ಕಾಕುಮರೆ ।
ಗಳ್ಳನಂ ತೋರುತೋರುತ ನಡೆತಂದು ಹೈಡಿಂಬಿಯುಂ ಮುತ್ತಿಕೊಂಡು ॥
ಒಳ್ಳಿತೋ ಪಿರಿದ ಹಯದೊರೆ ಜೀವದೊಳಾಸೆ ।
ಯುಳ್ಳೊಡೆ ಕುದುರೆಯಂ ಬಿಟ್ಟು ಸಾಗಲ್ಕೊಡೆ ।
ಕೊಳ್ಳಿ ಮಹಾಸ್ತ್ರಪ್ರತತಿಯ ನೆಂದಂಬರದ ನಂಬಿನಿಂ ತುಂಬಿಸಿದರು ॥೨೧॥

ನಿಮ್ಮರಾಯನ ಪೊರೆಯ ಪರಿವಾರದೊಳ್ಗಿನೆ ।
ದಿಮ್ಮಿದರೊ ಮತ್ತೆ ಕೆಲ ರೊಳರೊ ಕಳವಲ್ಲ ಹಯ ।
ಮಮ್ಮೊಗದ ಮುಂದೆ ಕೊಂಡೊಯ್ವ ನಾಪ್ಪೊಡೆ ಶಕ್ತಿಯಿಂ ಬಿಡಿಸಿಕೊಳ್ಳ ಬಂದೆ ॥
ಉಮ್ಮಳಿಸದೇಂ ನಿಂತತಿಸಾಹಸಿಗಳಾದೊ ।
ಡೊಮ್ಮೆ ಹಮ್ಮೈಸದಿರಿ ಸಾಕೆಂದು ಮೇಘನಾ ।
ದ ಮ್ಮಹಾನಾರಾಚನಿಚಯಂಗಳಂ ಸೃಜಿಸಿದಂ ಮೂಜಗಂ ತಲ್ಲಣಿಸಲು ॥ ॥೨೨॥

ಪೊಡೆವ ಸಿಡಿಲ್ಗರೆವ ಮಳೆ ಜಡಿವ ಕಲ್ಗುಂಡು ಮೂ ।
ಗಡುವ ಬಿರುಗಾಳಿ ಕಂಗೆಡಿಪ ಕತ್ತಲೆ ಸೋಲೆ ।
ಕೆಡೆವ ಗಿರಿತರುಗಳುರೆ ಕಡಿವ ವಿವಿಧಾಯುಧಂ ಸಡುವ ಶಸ್ತ್ರಾಸ್ತ್ರಂಗಳು ॥
ಪಿಡಿವ ಪುಲಿಕರಡಿ ಬಾಯ್ವಿಡುವ ಭೂತಂಗಳಸು ।
ಗುಡಿವ ಹಾವುಗಳಟ್ಟಿ ಸುಡುವ ಕಾಳ್ಕಿಚ್ಚುಳಿಯ ।
ಗುಡ ವನನಮಾಯೆಯುಂ ತಡೆವರಿಬ್ಬಲಂ ಪುಡಿವಡೆದು ದೇ ನೆಳ್ಳಿನು ॥ ॥೨೩॥

ಮಾಯೆಯಿಂ ಪಡೆಯೆಲ್ಲಮಂ ಕೊಂದು ಹಯಮಂ ವಿ|
ಪಾಯಸ ಪಥದೊಳೊಯ್ವ ಹೈಡಿಂಬಿಯಂ ಕಂಡ|
ಜೇಯ ರಂಬರದ ವಿವರಂಗಳಂ ಪುಗು ವೆಂಟುಸಾವಿರ ಮಹಾರಥರನು ||
ಆ ಯೌವನಾಶ್ವ ನೃಪ ನಟ್ಟಿದೊಡೆ ನಭದೊ ಳಸ|
ಪಾಯಶೂರನ ಮಾರ್ಗಮಂ ಕಟ್ಟಿ ನಿಲ್ಲು ಖಳ|
ಸಾಯದಿ ಬಿಡು ಬಿಡು ತುರಂಗಮವ ನೆನುತೆ ಸೈಗರೆದ ರಂಬಿನ ಮಳೆಯನು ||೨೪||
ವೀರರಹುದೊ ಜಗಕೆ ನೀವಲಾ ಸ್ವಾಮಿಹಿತ|
ಕಾರಿಗಳ್ತೊಲೆಯಾಸೆಯಿಲ್ಲೆನುತೆ ಹೈಡಿಂಬಿ|
ತೋರಗದೆಯಿಂ ದವರ ತೇರ್ಗಳಂ ಚಾಪಬಾಣಂಗಳಂ ಕುದುರೆಗಳನು ||
ಸಾರಥಿಗಳಂ ಧ್ವಜಪತಾಕೆಗಳ ನಪ್ಪಳಿಸಿ|
ವಾರುವಂ ಬೆರಸಿ ಕಡುವೇಗದಿಂ ದೈತಂದು|
ಮಾರುತಸುತನ ಮುಂದೆ ನಿಲುತಿರ್ದ ನನ್ನೆಗಂ ಮತ್ತೆ ಪಡಿಬಲವೊದವಿತು || ||೨೫||
ಹರಿಗಳಿಂ ನಾಗಂಗಳಿಂ ಸ್ಯಂದನಂಗಳಿಂ|
ಶರಜಾಲ ಕದಳಿವಳ ಪುಂಡರೀಕಂಗಳಿಂ|
ಸುರಗಿ ಖಡ್ಗಂಗಳಿಂ ನಡೆವ ಕಾಂತಾರದಂತೆಸೆವ ಚತುರಂಗದೊಡನೆ ||
ಭರದಿಂ ಸುವೇಗನೆಂಬಾಯೌವನಾಶ್ವಭೂ|
ವರನ ತನುಜಾತ ಸಾಹವಕೆ ನಿರ್ಭೀತ ನು|
ಬ್ಬರದ ಬಿಲ್ಬಿರುವಿ ನಬ್ಬರದ ಕೋಳಾಹಳಕೆ ಧರೆ ಬಿರಿಯೆ ನಡೆತಂದನು || ||೨೬||
ಅಂಬರದೊಳಡ್ಡೈಸಿದೊಡೆ ನಮ್ಮರಥಿಕರ್ಕ|
ಳಂ ಬಗೆಯ ದಹಿತಂ ಹಯಂ ಬೆರಸಿ ಸೈವರಿದ|
ನೆಂಬುದಂ ಕೇಳ್ದಾಗ ಳಾ ಯೌನಾಶ್ವಭೂಪಂ ತಾನೆ ಕೋಪದಿಂದೆ ||
ತುಂಬಿವರಿ ಸಂಪಗೆಯಲರ ಪರಿಮಳದ ಸೂರೆ|
ಗಂ ಬಯಸಿ ಬಂದುದಿದು ಮಿಗೆ ಪೊಸತೆನುತೆ ಹರಿಸಿ|
ದಂ ಬೇಗದಿಂ ಮಣಿವರೂಥಮಂ ಕೆಲಬಲದ ಮನ್ನೆಯರ ಗಡಣದಿಂದೆ || ||೨೭||
ಇದು ಭಗೀರಥ ರಥವ ಬೆಂಕೊಂಡು ಪರಿವ ಸುರ|
ನದಿಯ ಪ್ರವಾಹಮೆನಲಾ ನೃಪನ ವರವರೂ|
ಥದ ಪಿಂತೆ ಬಹುವಾದ್ಯರಭಸದಿಂ ದೆಡೆವರಿಯ ದೈತಪ್ಪ ಚತುರಂಗದ ||
ಪದಹತಿಗೆ ಧರೆ ನಡಗುತಿರೆ ಜಹ್ನು ಮುನಿಪ ನಂ|
ತದರ ಸಂಭ್ರಮಕೆ ಸ್ಮರಿಸ ದಂತರಂಗ ದೊ|
ಳ್ಬೆದರಿಯುತಿರ್ದನಂ ಕರ್ಣಸುತ ನವನ ಭಾವಮಂ ಪವನಜಾತಂ ಕಂಡನು || ||೨೮||
ಕಟ್ಟಿ ತರುಮೂಲ ಕಶ್ವಮ ನದರ ಕಾವಲ್ಗೆ|
ಬಿಟ್ಟು ಹೈಡಿಂಬಿಯಂ ಜೈಜಟ್ಟಿ ತಮ್ಮ ನುರೆ|
ಯಟ್ಟಿ ಬಹ ಯೌವನಾಶ್ವನ ಪಡೆಗೆ ಕಾರ್ಣಿಯಂ ಕಳುಹಿ ಕಾಲಾಗ್ನಿಯಂತೆ|
ಇಟ್ಟಣಿಸಿ ತೈದುವ ಸುವೇಗನ ಬಲೌಘ ಕಿದಿ|
ರಿಟ್ಟು ನಿಂದಂ ಭೀಮನುತ್ಸಾಹದಿಂದೆ ಪೆ|
ರ್ಚಿಟ್ಟೊತ್ತಿ ನೂಕುವ ಮಹಾಸಾಗರಾಘಾತಮಂ ತಡೆವೊಲೆಯನಿಪ್ಪಂತಿರೆ || ||೨೯||

ಕೇಳ್ಮಹೀಪಾಲಕ ಸುವೇಗನ ಭಟರ್ಚೂಣಿ |
ಯೊಳ್ಮುತ್ತಿಕೊಂಡರ್ವೃಕೋದರನ ಸುತ್ತ ಕೆಂ |
ದೂಳ್ಮುಸುಕೆ ದಿಣ್ದೆಸೆಗಳಂ ನೃಪರ ಮಣಿಭೂಷಣದ ಕಾಂತಿ ಝಗಝಗಿಸಲು ||
ತೋಳ್ಮಡುಕಿನಿಂ ದಾರ್ದು ಝಳಪಿಸುವ ಭಟರ ಕರ |
ವಾಳ್ಮಿಂಚೆ ಛತ್ರಚಮರಂಗಳ ಬಿಡಾಯಿ ಮಿಗೆ |
ಸೂಳ್ಮೆರೆಯೆ ನಿಸ್ಸಾಳಕೋಟಿ ಕಲಿಯೌವನಾಶ್ವಕ್ಷಿತಿಪ ನೈತಂದನು || ||೩೦||

ಒತ್ತಿ ಬಹಯೌವನಾಶ್ವನ ಪಡೆಯ ಚೂಣಿಯಂ |
ಕಿತ್ತು ಸಿಂದಂ ಕರ್ಣಸುತನವಂ ಕಂಡು ಕವಿ |
ದತ್ತವನಮೇಳ್ತೆ ಕರಿ ತುರಗ ರಥ ಪಾಯದಳ ನೊಂದಾಗಿ ಸಂದಣಿಯೊಳು ||
ಪತ್ತಿಸಿದ ಚಾಪಮಂ ಜೇಗೈದು ಹೂಡಿ ಮಸೆ |
ನೆತ್ತ ಕೂರಂಬುಗಳ ಸಾರ್ದಿಸ ಲ್ಪೇನೆ ಮುರಿ |
ದತ್ತ ವನ ಬಾಣಘಾತಿಗೆ ಹಯದ ಚೋರನೇಂ ವೀರನೋ ಜಗದೊಳೆನುತೆ || ||೩೧||

ಎಲ್ಲಿ ಹಯಚೋರನಂ ತೋರವನ ನೆತ್ತರಂ |
ಚೆಲ್ಲುವೆಂ ಭೂತಗಣಕೆನುತೆ ಖತಿಯಿಂದೆ ನಿಂ |
ದಲ್ಲಿ ನಿಲ್ಲದೆ ಬರ್ಪ ಯೌವನಾಶ್ವನ ರಥಕೆ ಮಾರಾಂತು ಕರ್ಣಸೂನು ||
ಬಿಲ್ಲೊಳಂಬಂ ಪೂಡಲಾರು ನೀನೆಲವೊ ನ |
ಮ್ಮಲ್ಲಿ ಸೆಣಸಿದೆ ನೋಡಿದೊಡೆ ಬಾಲಕಂ ನಿನ್ನೊ |
ಳೊಲ್ಲೆ ಸಾಹವಕೆಮ್ಮ ಕುದುರೆಯಂ ಬಿಟ್ಟು ಪೋಗೆಂದೊಡವನಿಂತೆಂದನು || ||೩೨||

ಆರಾದೊಡೇನಶ್ವಮಂ ಬಿಡುವನಲ್ಲ ಮದ |
ವಾರಣಂ ಪಿರಿದಾದೊಡೇಳಸಿಂಗಮಂಜಿ ಕೆಲ |
ಸಾರುವುದೆ ನಿನ್ನ ತನುವಿನ ತೋರದಾಯತಕೆ ಕಲಿಗಳಿದೆ ಕಾತರಿಪುದೆ ||
ವೀರನಾದೊಡೆ ಕೈದುಮುಟ್ಟಿಗಳ ಘೋರ ಪ್ರ |
ಹಾರಮಂ ತೋರಿಸೀ ಸ್ಥೂಲಸೂಕ್ಷ್ಮಂಗಳ ವಿ |
ಚಾರಮೇಕೆನುತೆ ವೃಷಕೇತು ತೆಗೆದೆಚ್ಚ ನಾ ನೃಪನ ಕಾಯಂ ನೋಯಲು || ||೩೩||

ಲೋಕದೊಳ್ತನ್ನೊಳ್ಪೊಣರ್ವ ಭಟರಿಲ್ಲ ನೀ |
ನೇ ಕಲಿ ಕಣಾ ಪಸುಳೆಯೆಂದು ಸೈರಿಸಿದೆ ನಿನ |
ಗಾಕೆವಾಳಿಕೆಯ ಧೀರತ್ವಮುಂಟಾದೊಡದು ಬಳಿಕೆಮ್ಮ ಪ್ರೌಢ್ಯಮೆನುತೆ ||
ಆಕರ್ಣಪೂರದಿಂ ತೆಗೆದೆಚ್ಚನಾಭೂಪ |
ನೀಕರ್ಣಸಂಭವಂ ಕಡಿದ ನೆಡೆಯೊಳ್ಸರಳ |
ನೇಕಾರ್ಣವಂ ಮೇರೆದಪ್ಪಿತೆನೆ ಮುಸುಕಿದಂ ಕಣೆಯಿಂದವನ ರಥವನು || ||೩೪||

ಮಾರ್ಗದೊಳ್ಮಾರ್ಗಣಂಗಳ ನರಿದು ಕರ್ಣಜಂ |
ಕೂರ್ಗಣೆಯ ಕಾರ್ಗಾಲಮಂ ಸೃಜಿಸಲಾ ನೃಪನ |
ತೇರ್ಗೆರಗಿ ಕೂರ್ಗೊಂಡು ಮುತ್ತಿತು ಶರೌಘ ಮದ ನೇನೆಂಬೆ ನಾಕ್ಷಣದೊಳು ||
ಪರ್ಗಳಿಂದೊರ್ಗುಡಿಸಿ ಸಾರಥಿ ಬಿಳಲ್ಕೆ ಕೆ |
ಸ್ನೇರ್ಗಾರಿ ದೀರ್ಘಶಯನಂ ಗೆಯ್ಯೆ ಕುದುರೆಗ |
ಳ್ಸೇರ್ಗೋಲ ಪೋರ್ಗಳಾ ನೃಪನಂಗದೊಳ್ಕಾಣಿಸಿದುವು ಜಾಳಂದ್ರದಂತೆ ||೩೫||

ಒಡಲೊಳಿಡಿ ದಸ್ತ್ರಮಂ ಕಿತ್ತೊಡನೆ ಚಿತ್ತದೊ |
ಳ್ಕಿಡಿಯಿಡುವ ಕಡುಗೋಪದುರಿ ನ್ಯಯ್ಯೊಳಿರದೆ ಪೊರ |
ಮಡುವುದೋ ಕಣ್ಗಳಿಂದೆನೆ ಕೆಂಪಡರ್ದಾಲಿಗಳ್ಭಯಂಕರವಾಗಲು ||
ತುಡುಕಿ ಪಾವಕ ಮಹಾಬಾಣಮಂ ತಿರುವಿ ನೊ |
ಳ್ತುಡಿಸಿ ಕಿಪಿವರಿಗೆ ತೆಗಪೆಚ್ಚೊಡವನಂದು ಕೈ |
ಗೆಡಪೆ ಕರ್ಣಾತ್ಮಜಂ ವಾರುಣಾಸ್ತ್ರಪ್ರಯೋಗದೊಳದಂ ತಂಪಿಸಿದನು || ||೩೬||

ಹವ್ಯವಾಹಾಸ್ತ್ರಮಂ ವರುಣಾಸ್ತ್ರದಿಂ ಗೆಲ್ದು |
ನವ್ಯಮೇಘಾಸ್ತ್ರಮಂ ಕರ್ಣಜಂ ಪೂಡೆ ವಾ |
ಯವ್ಯಾಸ್ತ್ರದಿಂದೆ ಬರಿಕೈದವಂ ತಿಮಿರಾಸ್ತ್ರಮಂ ಜೋಡಿಸಲ್ಕಿಂತನು ||
ರವ್ಯಸ್ತ್ರದಿಂ ಜೈಸಿ ಶೈಲಾಸ್ತ್ರಮಂ ತುಡಲ್ |
ದಿವ್ಯಕುಶಾಸ್ತ್ರದಿಂ ಮುರಿದಾನೃಪಾಲನು |
ಗ್ರವ್ಯಾಳದಸ್ತ್ರಮಂ ತೆಗೆಯಲ್ಕೆ ಗರುಡಾಸ್ತ್ರದಿಂದಿವಂ ಖಂಡಿಸಿದನು || ||೩೭||

ಪೂತುರೇ ತರುಣ ಮಂತ್ರಾಸ್ತ್ರಪ್ರತೀಕಾರ |
ಚಾತುರ್ಯಮುಂಟಲಾ ನಿನ್ನೊಳಿದು ಲೇಸು ಗೆ |
ಲ್ವಾತುರಮದೇಕೆ ನಿನಗೆನುತವಂ ಕೈದೋರಿಸಲ್ಕಾಗಳಾಗಸದೊಳು ||
ಸೇತುವಂ ಕಟ್ಟಿದವೊಲಿಟ್ಟಣಿಸಲಾಗ ವೃಷ |
ಕೇತು ತರಿದೊಟ್ಟುತಿರ ಲವರಿರ್ದ ಕಿಡೆಯೊಳ |
ಡ್ಡಾತು ನಿಂದುದು ಬೆಳೆದು ಚಿನಕಡಿದ ಶರಗಿರಿ ಯುದೇನೆಂಬೆ ನದ್ಭುತವನು || ||೩೮||

ಅವರಿರ್ದ ರೆಸುಗೆಯೊಳ್ಮಂಡಲಾಕೃತಿಯೊಳೊ |
ಪ್ಪುವ ಕಾರ್ಮುಕಂಗ ಳುದಯಾಸ್ತಮಯಮಪ್ಪ ಶಶಿ |
ರವಿಬಿಂಬದಾಯತದೊಲಿರೆ ನಡುವ ಣಂಬುಗ ಳ್ತಸ್ಮ್ರೀಟಿ ಗಳಂತಿರೆ ||
ಅವಯವದ ಗಾಯದೊ ಳುಗುವ ರಕ್ತಧಾರೆ ಗ |
ಳ್ತವೆ ಸಂಜೆಗೆಂಪಿಡಿದ ತೆರದಿಂದೆ ಕಂಗೊಳಿಸೆ |
ಭುವನದೊಳ್ಪೊಸತಾಯ್ತು ಸಂಗರಂ ಸಂಧ್ಯಾಗಮವನಂದು ಸೂಚಿಸಂತೆ || ||೩೯||

ಎಚ್ಚುಕೈಗೆಡನಾ ನೃಪಾಲ ನಾ ಕಣೆಗಳಂ |
ಕೊಚ್ಚಿ ಜೇಸರ ನೀ ವೃಷಧ್ವಜಂ ಬಳಿ ಕದಕೆ |
ಮೆಚ್ಚಿ ಕೇಳ್ದಂ ಯೌವನಾಶ್ವನೆಲೆಬಾಲ ನೀಂ ಪಸುಳೆಯಾಗಿರ್ದೊಡೇನು ||
ಕೆಚ್ಚೆದೆಯ ಭಟನಪ್ಪೆ ನಿನ್ನ ಪಡೆದವನಾವ |
ನೆಚ್ಚರಿಸು ನಿಮ್ಮ ಮುತ್ತಯ್ಯನಾರೆನುತೆ ತೆಗೆ |
ದೆಚ್ಚೊಡಾತನ ಕೋಲ್ಗಳಂ ಕಡಿದು ನಸುನಗುತೆ ಕರ್ಣಸುತನಿಂತೆಂದನು || ||೪೦||

ಪುಯ್ಯಲೊಳ್ಬಂದೆಳವ್ರ ದೋರುತಿರ್ಪಾಗ ನಿ |
ಮ್ಮಯ್ಯಮುತ್ತಯ್ಯನಾರೆಂದು ತನ್ನಂ ಕೇಳ್ವೆ |
ಕಯ್ಯರಿದು ಕಾಣಬೇಡವೆ ಕರ್ಣ ಕಮಲಹಿತಕರ ರವರ ನುಸಿರಬಹುದೆ ||
ಪುಯ್ಯಲೆಳಸಿದ ವಿರೋಧಿಯು ಕಿವಿಗೆ ಹಿರಹಿತಂ |
ಗೆಯ್ಯಬೇಕಲ್ಲ ವೆಲೆ ಮರುಳೆ ಕೋವಿದ ನಾದೊ |
ಡೊಯ್ಯನೆ ಪರೋಕ್ಷದೊ ಳ್ತಿಳಿದುಕೊ ಳ್ಳೆನುತೆ ವೃಷಕೇತು ತೆಗೆದೆಚ್ಚನು ||೪೧||

ಲಪ್ರತಿಮನಪ್ಪ ಬಾಲಕ ಲೇಸುಲೇಸು ಬಾ |
ಣ ಪ್ರಯೋಗಂಗಳೆನುತೊಂದುಕಣೆಪೂಡಿ ಕ |
ರ್ಣಪ್ರದೇಶಕೆ ತಿಗೆದವಂ ಬಿಡಲ್ಕದ ನುರವ ನುಗಿಯೆ ಮೈಮರೆದು ಕೂಡೆ ||
ಸಪ್ರಾಣಿಸುತೆ ಕೆರಳ್ದಸ್ತ್ರ ನೋಡೀಸಾಯು |
ಕಪ್ರಭಾವವ ನೆನುತೆ ದೆಸೆದೆಸೆಗುಗುಳ್ದ ಕನ |
ಕ ಪ್ರಭೆಯೊ ಳೆಸೆವ ಸರಳಂ ತೊಟ್ಟು ಕೆನ್ನೆ ಗೆಳೆದಾ ದೇಜ್ಞನಾ ನೃಪನನು || ||೪೨||
ಏನೆಂಬೆ ನರನ ಕರ್ಣಜನ ಬಾಣದ ಘಾತ |
ಕಾನರೇಂದ್ರಂ ಕರದ ಚಾಪಮಂ ಬಿಟ್ಟು ಮೂ |
ರ್ಛಾನುಗತ ನಾಗ ಬಾತನ ಬಲಂ ಮುಂಕೊಂಡು ಬಂದಿವನನಮೇಲೆ ಕವಿಯೆ ||
ಆನೆಯಂ ಪೊಯ್ದ ಳೆದ ಸಿಂಗಮಂ ಮುತ್ತುವ ಮೃ |
ಗಾನೀಕಮಂ ಕಂಡೆಸಿಂದೆನುತೆ ತುಡುಕಿದನ |
ನೂನ ಶರಜಾಲಮಂ ಕರಿ ತುರಗ ರಥ ಪದಾತಿಗಳ ಸಂದಣಿ ದಣಿಯಲು || ||೪೩||
ತರಿತರಿದು ಕತ್ತರಿಸಿ ಚುಚ್ಚಿ ನಟ್ಟುಚ್ಚಳಿಸಿ |
ಕೊರೆ ದರೆದು ಕಡಿ ದಿರಿದು ಬಗಿ ದುಗಿದು ಗಬ್ಬರಿಸಿ |
ಪರಿದು ಸೀಳ್ದುತ್ತರಿಸಿ ಕೆತ್ತಿ ಖಂಡಿಸಿ ಬಳಿಚಿ ತಿವಿದಿಕ್ಕಿ ಕೊಯ್ದು ಪೊಯ್ದು ||
ಎರಗಿ ಕಲಿ ದಿಡಿಮೊತ್ತಿ ಕದುಕಿ ಕೀಲಿಸಿ ಕೇರಿ |
ತುರುಗಿ ತುಂಡಿಸಿ ತುಳುಕಿ ನಾಂಟಿ ಮರು ಮೊನೆಗೊಂಡು |
ನೆರೆ ಪೊರಕ್ಕಿದು ಪರಿ ಚತುರ್ಬಲವನೆಲ್ಲಮಂ ಕರ್ಣಜನೆಸುವ ಕಣೆಗಳು || ||೪೪||
ತಲೆಬೀಳ ಲಟ್ಟಿಗ ಳ್ದಾಡಿದುವು ಮೇಣಟ್ಟೆ |
ನೆಲಕುರುಳೆ ತಲೆಗ ಳೆದ್ದಾಡಿದುವು ಕೈದುಗಳ |
ನಲುಗಿದುವು ಖಂಡಿಸಿದ ತೋಳ್ಗಳುರೆ ಕಡಿದ ಕಾಲ್ಗಳ್ಮುಂದ ಕಡಿಯಿಟ್ಟುವು ||
ಕಲಿತನ ಮದೆಂತೊ ಪಟುಭಟ ರೆನಿಪ ಗೊಟ್ಟಾಗಿ |
ನಲೆ ಸರಳ ಸಾರದಿಂ ಮಡಿಯುತಿರ್ದರು ಸಮು |
ಜ್ಜ್ವಲ ದೀಪ ದಡೆಗೆ ಮುಗುಳ್ವ ಪತಂಗ ಪ್ರಸರಮೆನೆ ವೃಷಧ್ವಜನಿದಿರೊಳು ||೪೫||
ಕಡಿಕಡಿದು ಬಿದ್ದ ಕೈಕಾಲ್ಗಳಿಂ ತೋಳ್ಗಳಿಂ |
ಪೊಡೆಗೆಡೆದ ಪೇರೊಡಲ ಸೀಳ್ಗಳಿಂ ಪೋಳ್ಗಳಿಂ |
ಮುಡಿಮುಡಿ ದುರುಳ್ವ ಕಟ್ಟಾಳ್ಗಳಿಂ ಬಾಳ್ಗಳಿಂದೊಡೆದ ತಲೆಪೋಳ್ಗಳಿಂದೆ ||
ಕಡು ಭಯಂಕರಮಾಗಲಾ ರಣದ ದಾರಣದ |
ನಡುವೆ ಕಲ್ಪಾಂತ ಭೈರವನಂತೆ ಜವನಂತೆ |
ಕಡು ಮುಳಿದವನ ಕಾಣುತನೆ ಬಿಟ್ಟು ಸಲೆಕೆಟ್ಟು ನಡೆದ ರೆಣ್ದೆಸೆಗೆ ಭಟರು || ||೪೬||
ಸೈಮರೆದ ಭೂಪನಂ ಬಿಟ್ಟು ಪಟುಭಟ ರುಳಿದೆ |
ನ್ನೈ ಮಹಾದೇವೆನುತೆ ನಡೆದ ರೆಣ್ದೆಸೆಗಿವಂ |
ಕೈನಾಪಟೊರ್ದರಂ ಕಾಣದೆ ಬಳಲ್ದಿರ್ಪ ಚೇತರಿಸಿಕೊಳ್ವ ದಿರಲು ||
ನೈಮನಸ್ಯದೊಳಕಟ ತಪ್ಪಿತ್ತೆ ರಣಾಟೋಪ |
ವೈದೊಗಂ ಜಲ್ಲನೆನು ತವ ನೆಡೆಗೆ ಬಂದಿದೇ |
ವೈ ಮೂರ್ಛೆ ನಿನಗೆನ ಲ್ಕದಿಯುದಿರ ಲೊಯ್ಯನಾ ನೃಪ ನುಸಿರ ನಾರೈದನು ||೪೭||

ಸತ್ಯ ಮನಗುಂಟಾದೊ ಡಾಂ ಧೀರನಾದೊ ಡಾ |
ದಿತ್ಯಂಗೆ ಪೌತ್ರನಾದೊಡೆ ತನ್ನ ತಾತಂ ಗ |
ಪತ್ಯ ನಾನಾದೊಡೀ ನೃಪತಿ ಜೀನಿಸ ಲೆಸುತೆ ಕರ್ಣಜಂ ಪಗೆ ಮಾಡುವ ||
ಕೃತ್ಯಮಂ ಬಿಟ್ಟಾಮಹೀಶನ ಬಳಲ್ಕೆ ಗೌ |
ಚಿತ್ಯಮಾ ದುಪಚಾರದಿಂದೆ ಸಮರಶ್ರಮ ಪ |
ರಿತ್ಯಾಗ ಮಪ್ಪಂತೆ ಸಂತೈಸುತಿರಲಾ ಧರಾಧಿಪಂ ಮೈಮುರಿದನು || ||೪೮||

ಅರಸ ಕೇಳಾ ಯೌವನಾಶ್ವಸಿಂತಾಗ ಮೈ
ಮುರಿದು ಕಣ್ದೆರೆ ವನಿತರೊಳ ಗಾತನರಿಯನಂ |
ತಿರೆ ಕರ್ಣಸಂಭವಂ ಮುನ್ನ ತಾನಿರ್ದ ಪ್ರದೇಶ ಕೈತಂದು ನಿಂದು |
ಕರದ ಕಾರ್ಮುಕವ ನೊದರಿಸಿ ದಿವ್ಯಬಾಣಮಂ |
ತಿರುಪು ತಾರ್ದಿಸುವ ತೆರದಿಂ ಬರಿದೆ ಮುಳಿಸಿ ಸು |
ಬ್ಬರಮಂ ನೆಗಳ್ಚಿತನ್ನಾಳ್ತನದ ಬಿಂಕಮಂ ಕಾಣಿಸಿದ ನೇ ನೇಳ್ವೆನು || ||೪೯||

ಕೂಡೆ ಕಣ್ದೆರೆದೆದ್ದು ಚೇತರಿಸಿ ದೆಸೆಗಳಂ |
ನೋಡಿ ತನ್ನವರೊರ್ವರಂ ಕಾಣದಿದಿರೆ ಕೈ |
ಮಾಡದೆ ವೃಥಾಟೋಪಮಂ ನೆಗಳ್ವುವ ವಿರೋಧಿಯ ವಿಕ್ರಮವನೆ ಕಂಡು ||
ಮೂಡಿದ ವಿರಕ್ತಿಯಿಂ ನಾಚಿ ಮನದೊ ಳ್ಪಂತ |
ಪಾ ಡಿವನೊಳಿನ್ನು ಸಲ್ಲದು ತನಗೆ ಕಾರುಣ್ಯ |
ಕೀಡಾದ ಬಳಿ ಕದೇತಕೆ ಸಮರ ವೆನು ತವಂ ಕರ್ಣಜಂ ಗಿಂತೆಂದವನು || ||೫೦||

ಮೂಲೋಕದೊಳ್ತನಗೆ ಸಮರಾದ ಮೇದಿನೀ |
ಪಾಲರಂ ಸುಭಟರಂ ಕಾಣೆನೆಂದಾ ನಿನಿತು |
ಕಾಲಮುಂ ಬೆರೆತಿರ್ದೆನೆನ್ನುವಂ ಗೆಲ್ದು ನೀನತಿ ಬಲ ನೆನಿಸಿಕೊಂಡೆಲಾ ||
ಬಾಲ ನೀನಾರವಂ ನಿನ್ನ ಪೆಸರೇ ನಿಳೆಗೆ |
ಮೇ ಲೆನಿಸು ವೀಹಯಂ ನಿನ ಗದೇತಕೆ ನಿನ್ನ |
ಶೀಲಕಾಂ ಮಾರುವೋದೆಂ ಕಾವ ಲೊಲ್ಲೆ ನಿ ನ್ನುಸಿರೆಂದೊ ಡಿಂತೆಂದವನು || ||೫೧||

ಆದೊಡೀಜಗಕೆ ಲೋಚನನೆನಿಸಿ ನಭದೊ ಳೆಸೆ |
ವಾದಿತ್ಯಸಿಂ ದೊಗೆದ ಕರ್ಣನಂ ಕೇಳ್ದರಿಪೆ |
ಯಾದೊ ಡಾತನ ಸುತಂ ಪೆಸರೆನಗೆ ವೃಷಕೇತುವಿಂದು ನರಲೀಲೆಗಾಗಿ ||
ಯಾದವ ಗರ್ರಸಾದ ಕೃಷ್ಣನಂ ಭರತಕುಲದ |
ಮೇದಿನೀಶ್ವರ ಯುಧಿಷ್ಠಿರನಿಂ ಮುಖಂ ಗೈಸ |
ಲೀ ದಿವ್ಯಹಯಕೆ ಭೀಮನ ಸಟ್ಟ ಲವನೊಡನೆ ಬಂದೆನಿದು ಹವನೆಂದವನು || ||೫೨||

ಎಂದೊ ಡೆಲೆ ಕುವರ ನೀನಿನ್ನೆಗಂ ತನ್ನೊಳಿಂ |
ತೆಂದುದಿ ಲ್ಲಕಟ ಧರ್ಮದ ರೂಪು ತಾನೀತ |
ನೆಂದೆಂಬರಾಯುಧಿಷ್ಠಿರ ಮಹೀಪತಿಯುನವನಿಂ ಮುಖಂಗೈಸಿದಪನೆ ||
ಇಂದಿರಾವಲ್ಲಭನ ಪದಕೆ ನಮ್ಮಾಹಯುವ |
ನೊಂದವನೊಯ್ವರೆ ತನ್ನ ಸರ್ವಸ್ವಮಂ ತಾನೆ |
ತಂದು ಹರಿ ಪದ ಕರ್ಪಿಸುವೆನೆಲ್ಲಿ ಭೀಮನಂ ತೋರೆಂದ ನಾ ಭೂಪನು || ||೫೩||

ಎನಲಚ್ಯುತನ ಪದಕೆ ಸರ್ವಸ್ವಮೊಪ್ಪಿಸುವ |
ಮನಮುಳ್ಳ ನಾವನಾತಂಗೆ ಪಾಂಡವರೊಳಿರ |
ಪಿಸಿತಿಲ್ಲ ಮಾ ಪಾರ್ಥಿವರ ಸಖ್ಯಮಾವಂಗೆ ದೊರೆವು ದಾತಂಗೆ ಪರಿಯು ||
ಮುನಿಸಿಲ್ಲ ಮದರಿಂದೆ ಭೀಮನಂ ಕಾಣ್ಬುದೀ |
ಗನುನಯಂ ನಿನಗೆಂದು ಕರ್ಣಜಂ ನುಡಿದೊ ದಾ |
ಜನಪ ಸುತ್ಸನೆಮೊ ಳಳವಡಿಸಿದಂ ತನ್ನ ಮಣಿರಥವ ನಿವರ್ರುಮ್ಯೈದಲು || ||೫೪||
ಮಾನನಾಥೇಶ ಕೇಳ್ಬಳಿಕ ವೃಷಕೇತು ಸು |
ಮ್ಮಾನದಿಂದಾ ಯೌವನಾಶ್ವಭೂಪತಿಗೆ ಪವ |
ಮಾನಸುತನಂ ಕಾಣಿಸುವೆನೆಂಬ ತವಕದಿಂ ದಾತನ ಪರೂಥ ಮೊಳಗೆ ||
ಮಾನದಿಂ ಪಡಪರ್ವಂ ನೆರೆಸಿ ನಡೆತರುತಿರೆ ವಿ |
ಮಾನದಿಂ ನೋಡು ವನಿಮಿಷ ನಿಕರ ಮಾತನ ಸ |
ಮಾನ ದವರಿಲ್ಲೆಂದು ಕೊಂಡಾಡು ತಾಗಸ ದೊ ಳರಲ ಸರಿಯಂ ಕರೆದರು || ||೫೫||
ಅನ್ನೆಗಂ ಭದ್ರಾವತೀಶ್ವರನ ಸುತನ ಸೈ |
ನ್ಯ ನ್ನಡೆದು ಬಂದಾವೃಕೋದರನ ಮುತ್ತಿದೊಡ|
ಪ ನ್ನಿಜ ಗದಾದಂಡಮಂ ಕೊಂಡು ದಿಂಡುಗೆಡಸಿದೊ ಡಾ ನೃಪಾಲಸೂನು ||
ತನ್ನ ಸಾಹಸದೊ ಳನಿಲಜನ ಕೋಪಾಟೋಪ |
ಮ ನ್ನಿಲಿಸಿ ಕಾದುತಿರಲಾ ಸಮಯ ಕಿವರೊಂದೆ |
ರನ್ನ ದೇರೊಳ ಗಿರ್ವರುಂ ಬರುತಿರ ಲ್ಕಂದು ಜಿರಗಾದ ರವ ರತ್ತಲು || ||೫೬||
ಪವಮಾನ ನಂದನ ಸುವೇಗ ರನ್ಯೋನ್ಯ ಮಾ |
ಹವದ ಬೇಳಂಬಮಂ ಮರೆದೊಂದೆ ಪೊಂದೇರೊ |
ಳವ ರಿರ್ವರುಂ ಬರಲ್ಕಂಡು ವಿಸ್ಮಿತರಾಗಿ ನಿಂದ ರನಿತರೊ ಳಿತ್ತಲು ||
ರನಿಸುತನ ಸೂನು ಕಲಿಯೌವನಾಶ್ವಂಗೆ ಪಾಂ |
ಡವರಾಯ ನನುಜನಂ ತೋರಿಸಿದೊಡಾ ವರೂ |
ಥವ ನಿಳಿದು ನಡೆಯುತಾ ಭೂವರಂ ತನ್ನ ತನುಸಂಭವಂ ಗಿಂತೆಂದನು || ||೫೭||
ತನಯ ದಿವ್ಯಾಶ್ವಮಂ ಪಿಡಿದ ರಿವರೆಂಬ ಮನ |
ದನುತಾಪಮಂ ಬಿಡು ಸರೋಜಾಂಬಕಂ ಪಾಂಡು |
ಜನಪ ನಂದನ ಯುಧಿಷ್ಠಿರ ನರೇಶ್ವರನ ಮಖಕೆಂದು ನಮ್ಮಾಕುದುರೆಗೆ ||
ಅನಿಲಸುತನಂ ಕಳುಹಿದೊಡೆ ಬಂದನಾತಂಗೆ |
ವಿನಯದಿಂ ನಮ್ಮ ಸರ್ವಸ್ವಮಂ ಕುಡುವೆ ವಿ |
ಷ್ಣುವರ ದ ಪೇಕ್ಷೆ ನಿಲ್ಲೆನ ಲವಂ ಶರಧನುವ ನಿಳುಹಿ ಪಿತನಂ ನಾರ್ದನು || ||೫೮||
ಬಳಿಕ ತನುಜಾತನಂ ಕೂಡಿಕೊಂಡಾನೃಪಂ |
ನಳಿನಸಖ ಸುತನ ಮಗನೊಡನೆ ಬಂ ದನಿಲಜನ |
ಬಳಿಸಾರ್ದು ಕಾಲ್ಗೆರಗ ಲವನೀ ವೃಷಧ್ವಜನ ಮೊಗನೋಡುತಿವ ರಾರೆನೆ ||
ಎಳೆ ನಗೆ ಯೊಳಾತ ನಿವ ನೀಗಳೀ ಮೇದಿನೀ |
ತಳ ಕರಸೆನಿಪ ಯೌವನಾಶ್ವ ನೀತಂಗೆ ಮೈ |
ನೆಳಲೆನಿಪ ಕುವರಂ ಸುವೇಗ ನೆಂಬವ ನೀತ ನೆನುತೆ ಮಣಿದಂ ಪದದೊಳು || ||೫೯||

ಇವ ರಚ್ಯುತಾಂಘ್ರಿ ದರ್ಶನ ಲಂಪಟತ್ವದಿಂ ।
ದವನಿಪತಿ ಕುಲ ಶಿರೋಮಣಿ ಯೆನಿಸಿದ ಧರ್ಮ ಸಂ ।
ಭವ ನಡಿಯ ನೋಳ್ಪೆಸಕೆಂದು ನಿನ್ನಂ ಕಾಣಲೋಸುಗಂ ಬಂದರೆಂದು ॥
ದವನಜಂಗಾ ವೃಷಧ್ವಜನೊರೆದೊ ಡಾತ ನು ।
ತ್ಸವದೊಳಾ ಭೂಪಾಲನಂ ತೆಗೆದು ತಕ್ಕೈಸು ।
ತವನ ತನುಜಾತನಂ ಬಿಗಿಯಪ್ಪಲಾ ನೃಪಂ ಬಕವೈರಿ ಗಿಂತೆಂದನು ॥ ॥೬೦॥
ಎಲೆ ವೃಕೋದರ ಬಾಹುಬಲಮುಳ್ಳ ವೀರರುಂ ।
ಪಲಬರುಂ ಟಳೆಯೊ ಳವರಂ ಕಂಡು ಬಲ್ಲೆ ನಾಂ ।
ಕಲಹದೊ ಳ್ಮಲೆತವಂ ವೈರಿಮುರಿದೊ ಡಿರಿವ ರಲ್ಲದೆ ಪಗೆಯ ಪೊರೆಗೆ ಬಂದು ॥
ಅಲಸಿದವ ನಿವಂ ಧುರದೊಳೆಂ ದವನ ನುಪಚರಿಸಿ ।
ಸಲಹಿದ ಪರಾಕ್ರಮಿಗ ಳಾರ್ಮಹೀತಳದೊ ಳೀ ।
ಕಲಿ ವೃಷಧ್ವಜನಲ್ಲದಮರ ದಾನವ ಮಾನವ ರೊಳೊಗೆದ ಪಟುಭಟರೊಳು ॥ ॥೬೧॥
ಆವನ ವಿನೋದ ಮಾತ್ರದೊ ಳೀ ಸಮಸ್ತ ಭುವ ।
ನಾವಳಿಗಳಾಗಿ ಬಾ ಳ್ದಳಿವು ವಾ ವಿಭು ನಿಮ್ಮ ।
ಸೇವೆ ಯಾಳ್ಗಡ ನಾ ದವೇಸರವನೆಂ ದೆನ್ನ ಮೇಲೆ ಸಾಹಸವ ನೆಸಗಿ ॥
ಈ ವಾಜಿಯಂ ಪಿಡಿದಿ ರಕಟ ತಪ್ಪಿದಿರಿ ಲ ।
ಕ್ಷ್ಮೀವರನ ಕಿಂಕರರ್ಗೀಯುದನೆ ತಾ ನೆನ್ನ ।
ಜೀವಮಂ ಸಮರದೊ ಳ್ಕಾದುಳಿಪಿದಂ ಕರ್ಣತನಯನದ ನೇ ನೇಳ್ವೆನು ॥ ॥೬೨॥
ಈ ವೃಷಧ್ವಜನಿಂದು ಸಮರದೊ ಳ್ಕಾಯದೊಡೆ ।
ಹಾ ವೃಥಾಕೃತಮಾಗಿ ಪೋಗುತಿರ್ದುದು ಜನ್ಮ ।
ಮಾವೃತ ಸಮಸ್ತಯಾದವನಾಗಿ ನಿಮ್ಮೊಳಗೆ ನರಲೀಲೆಯಂ ನಟಿಸುವ ॥
ಶ್ರೀವತ್ಸ ಕುಚಕುಂಕುಮಾಂಕನಂ ಕಂಡಪೆ ನ ।
ಲಾ ವೃಕೋದರ ನೀವು ಮಾಡಿ ದುಪಕಾರ ಕಬ ।
ಲಾವೃಂದ ಸಹಿತ ಬಂದೆನ್ನ ಸರ್ವಸ್ವಮಂ ಹರಿಗರ್ಪಿಸುವೆನೆಂದನು ॥ ॥೬೩॥
ಎಂದೊ ಡರಸಂಗೆ ನೋದರ ರಾವು ನಾಲ್ವರುಂ ।
ಬಂದುವರೆಗಿನ್ನು ನೀಂ ಸಹಿತೈವರಾಡೆ ವಿದ ।
ರಿಂದೆ ಹರಿದರ್ಶನಮಸಾಧ್ಯಮಪ್ಪುದೆ ನಿನಗೆ ಧರ್ಮಜನ ವರಮುಖವನು ॥
ನಿಂದು ಮಾಡಿಸುವ ಭಾರಕ ನಸುರಹರ ನಾ ಮು ।
ಕುಂದನಂ ಕಾಣ್ಬುದುಳ್ಳೊಡೆ ತನ್ನ ಕೂಡೆ ನೀಂ ।
ಬಂದು ಸೇವಿಪುದೆನಲ್ಮಾರುತಿಗೆ ವಿನಯದಿಂದಾ ಭೂಪನಿಂತೆಂದನು ॥ ॥೬೪॥
ಅಹುದು ನೀನೆಂದುದಂ ಮೀರೆ ನೆನ್ನೊ ರ್ವಗದೆ ।
ಬಹಿರಂಗದಿಂ ತೆರಳ್ವುದು ನೀತಿ ಯಲ್ಲೆನ್ನೊ ।
ಳಸ ಸೇವೆಯಂ ಪುರದೊಳೊಂದೆರಡುದಿವಸಂ ಗಳಿರ್ದು ಕೈಕೊಂಡ ಬಳಿಕ ॥
ಬಹು ವಸ್ತುಚಯ ಸಹಿತ ಪಡೆವೆರಸಿ ನಿನ್ನೊಡನೆ ।
ಬಹೆ ನೆನ್ನನೊಡಗೊಂಡು ಮುದದೆ ಪೋಪಂತನು ।
ಗ್ರಹಿಸೆಂ ದವಂ ಬೇಡಿಕೊಳ ಲೊಪ್ಪಿದಂ ಕೀಚಕಾಂತಕಂ ಸಂತಸದೊಳು ॥ ॥೬೫॥

ತರಿಸಿ ಕೋಳ್ವಿಡಿದ ಹಯಮುಮಂ ಸುವೇಗನ ವಶದೊ |
ಳಿರಿಸಿ ಬಳಿ ಕನಿಲಜಂ ಹೈಡಿಂಬಿ ಕರ್ಣಜ |
ರ್ನೇರಿಸಿ ಭದ್ರಾವತಿಗೆ ಬರಲಾನೃಪಂ ಪೊಳಲ ಸಿಂಗರಿಸಿ ಮೇಣಿವರನು ||
ಅರಸಿಯರ ಗಡಣದೊಳಿದಿರ್ಗೊಂಡು ಮನೆಯೊಳಾ |
ದರಿಸಿ ದಿವಸತ್ರಯಂ ತಡೆದೊಡನೆ ಮಂತ್ರಿಯಂ |
ಕರೆಸಿ ರಾಜ್ಯದ ಭಾರಮಂ ಪೊರಿಸಿ ಹಸ್ತಿನಾಪುರ ಕೈದ ಲನುವಾದನು || ||೬೬||
ತೀವಿರ್ದ ನಿಖಿಳ ಭಂಡಾರಮಂ ತೆಗೆಸಿ ನಾ |
ನಾ ವಸ್ತು ನಿಚಯಮುಮಂ ಪೇರಿಸಿ ಸಮಸ್ತ ಸೇ |
ನಾನಿತತಿ ಸಹಿತಾಹಯಂ ಸಹಿತ ಸುತ ಸಹೋದರ ಭಂಧುವರ್ಗ ಸಹಿತ ||
ಆ ವಸುಮತೀ ವಲ್ಲಭಂ ಪ್ರಭಾವತಿ ಯೆಂಬ |
ದೇವಿ ಸಹಿ ತಗಣಿತ ವಧೂಜಾಲ ಸಹಿತ ಭ |
ದ್ರಾವತಿಯ ಪುರಜನ ಸಹಿತ ಪೊರಮಟ್ಟ ನೊಲವಿಂ ಭೀಮಸೇನ ನೊಡನೆ || ||೬೭||
ಎಲ್ಲರುಂ ಪೊರಮಟ್ಟ ಬಳಿಕಾನೃಪಂ ರಮಾ |
ವಲ್ಲಭನ ದರ್ಶನಕೆ ಮಾತೆಯುಂ ಕರೆಯ ಲವ |
ಳೊಲ್ಲೆನಾನಿ ಲ್ಲಿರದೊ ಡೀಬದುಕ ಸಾಗಿಸು ವಧಾರೆಂದು ಚಂಡಿಗೊಳಲು ||
ಫುಲ್ಲನಾಭಂಗೆ ಸರ್ವಸ್ವವೊಪ್ಪಿಸುವೊ ಡಿವ |
ಳಿಲ್ಲದಿರಬಾರದೆಂ ದಾಕೆಯುಂ ಬಲ್ಪಿನಿಂ |
ನಿಲ್ಲ ದಂದಳವ ನೇರಿಸಿ ಮತ್ತೆ ಮಾರುತಿಯೊಡನೆ ಪಯಣ ಕನುವಾದನು || ||೬೮||
ಪಟ್ಟಣದೊ ಳಾರುಮಿ ಲ್ಲೆನಿಸಿ ತನ್ನೊಡನೆ ಪೊರ |
ಮಟ್ಟು ವಖಿಳ ಪ್ರಜೆಗ ಳಿವರ ನಡೆಸಲ್ ದಿನಂ |
ತಟ್ಟದಲ್ಲದೆ ಮಾಣ ದನ್ನೆಗಂ ಧರ್ಮಜಂ ಗೀರಾಜಕಾರ್ಯ ದನುವ ||
ಮುಟ್ಟಿಸದಿರ ಲ್ಬಾರದೆಂ ದಾ ಮಹೀಶ್ವರನ |
ಬಟ್ಟೆಗಾವಲ್ಗೆ ಕರ್ಣಜ ಮೇಘನಾದರಂ |
ಕೊಟ್ಟು ನಿಂದಲ್ಲ ನಿಲ್ಲದೆ ಬಂದು ಭೀಮಸೇನಂ ಪೊಕ್ಕ ನಿಭಪುರಿಯನು || ||೬೯||
ನುತ ವಸಂತಾಗಮವ ನೆಚ್ಚರಿಪ ಮಲಯ ಮಾ |
ರುತ ಸುಪವನ ಸ್ಥಳಕೆ ಸುಳಿವಂತೆ ಪವನಜಂ |
ಕ್ಷಿತಿಪ ನಾಸ್ಥಾನಮಂ ಪೊಕ್ಕರಸನಂ ಕಂಡು ಪಾದಪಲ್ಲವ ಕೆರಗಲು ||
ಅತಿಶಯ ಪ್ರೀತಿಯಿಂ ತೆಗೆದು ಬಿಗಿಯಪ್ಪಿ ರವಿ |
ಸುತಜ ಹೈಡಿಂಬಿಗ ಳದೆಲ್ಲಿ ನೀಂ ಪೋದ ಸಂ |
ಗತಿಯದೆಂತೈ ನಿನ್ನ ಭಾಷೆ ಗಳಿವಿಲ್ಲಲಾ ತುರಗ ವಿಷಯದೊಳೆಂದನು || ||೭೦||
ಎನ ಲವನಿಪತಿಗೆ ಬಿನ್ನೈಸಿದಂ ಪವಮಾನ |
ತನಯ ನಲ್ಲಿಂದೆ ಭದ್ರಾವತಿಗೆ ನಡೆದುದಂ |
ವಿನುತ ಹಯರತ್ನಮಂ ಪಿಡಿದುದಂ ಮುಂಕೊಂಡು ಸೇನೆಯಂ ಸದೆಬಡಿದುದ ||
ಅನುವರದೊ ಳಹಿತನಂ ಜಡಿದುದಂ ಬಳಿಕವಂ |
ತನಗೆರಗಿ ನುಡಿದುದಂ ತನ್ನ ಸರ್ವಸ್ವಮಂ |
ದನುಜಾರಿಗೀಯ ಲ್ಕದುರೆವೆರಸಿ ಹೈಡಿಂಬಿ ಕರ್ಣಜರೊಡನೆ ಬಹುದನು || ||೭೧||

ಕೇಳಿ ನೃಪನುತ್ಸವದೊಳನುಜನಂ ತಕ್ಕೈಸಿ ।
ಬೀಳುಕೊಡ ಲರಸಿಯರ ತಂಡ ದಾರತಿಗಳ ನಿ ।
ವಾಳಿಗಳ ಸಡಗರದೊಳರಮನೆಗೆ ಬಂದು ಪಾಂಚಾಲಿ ಗೀ ಸಂಗತಿಯನು ॥
ಹೇಳಿ ಮುರಹರನ ಮಂದಿರಕೆ ನಡೆತಂದು ನಿಜ ।
ಭಾಳಮಂ ಚರಣದೊಳ್ಚಾಚಿ ತಮ್ಮಯ ವಿಜಯ ।
ದೇಳಿಗೆಯ ನೊರೆಯಲ್ಕೆ ಮನ್ನಿಸಿದನಾತನಂ ದೇವಪುರಲಕ್ಷ್ಮೀಶನು ॥ ॥೭೨॥

ಸಂಧಿ ೪ ಕ್ಕೆ ಪದ್ಯಗಳು ೧೯೩ ಕ್ಕೆ ಮಂಗಳಮಸ್ತು.

# ಐದನೆಯ ಸಂಧಿ.

ಸೂಚನೆ॥ ಧರ್ಮಜಂ ಯೌವನಾಶ್ವನ ನಿದಿರ್ಗೊಂಡು ನೃಪ ।
ಧರ್ಮದಿಂ ಕೃಷ್ಣನಂ ದ್ವಾರಕೆಗೆ ಕಳುಹಿ ವರ ।
ಧರ್ಮಗಳಂ ಕೇಳ್ದನೊಲವಿಂದೆ ಸಲೆಬಾದರಾಯಣಮುನೀಶ್ವರನೊಳು ॥

ಸತ್ಸಂಗತಿಯ ನಾಲಿ ಸಿನ್ನೆಲೆ ಮಹೀಶ್ವರ ಮ ।
ರುತ್ಸುತನ ಮನೆಗೆ ಬೀಳ್ಕೊಟ್ಟ ನೊಲವಿಂ ಭಕ್ತ ।
ವತ್ಸಲಂ ಬಳಿ ಕಿತ್ತ ಲರಸಾಳ್ಗಳಾ ಯುಧಿಷ್ಠಿರ ಭೂಮಿಪತಿಗೆ ಬಂದು ॥
ತ್ವತ್ಸಮೀಪದ ಸೇವೆಗೋಸುಗಂ ತನ್ನ ಸಂ ।
ಪತ್ಸಹಿತ ಮಾ ಯೌವನಾಶ್ವ ಧರಣೀಂದ್ರ ನ ।
ತ್ಯುತ್ಸವದೊಳೈತಂದ ನಿದೆ ನಿನ್ನ ಪಟ್ಟಣದ ಬಾಹ್ಯದೇಶದೊಳೆಂದರು ॥ ॥೧॥
ಉಚಿತಮಂ ತೆಗೆ ದವಗಿತ್ತು ಬಳಿ ಕನುಜ ಮಂ ।
ತ್ರಿ ಚಮೂಪ ಸಾಮಂತ ಗುರು ಪುರೋಹಿತ ಸುಭಟ ।
ನಿಚಯಮಂ ಕರೆಸಿಕೊಂ ಡಸುರಾರಿಸಹಿ ತಖಿಳ ಚತುರಂಗ ಸೈನ್ಯದೊಡನೆ ॥
ಅಚಲ ನಿಭದಿಭದ ಮೇಲಡರಿ ಸಿಂಗರದ ಗುರು ।
ಕುಚೆಯ ರರಸಿಯ ಕೂಡೆ ಬರಲಿ ಗುಡಿತೋರಣದ ।
ರಚನೆ ಮೆರೆಯಲಿ ಪುರದೊಳೆನುತೆ ಪೊರಮಟ್ಟನವನಿಪನೊಸಗೆವೆರೆ ಮಸಗಲು ॥೨॥
ಸಿಂಗರದೊಳಾ ಹಸ್ತಿನಾವತಿಯೊಳಿರ್ದ ಜನ ।
ಜಂಗುಳಿ ಮಹೀಪಾಲನೊಡನೆ ಪೊರಮಟ್ಟಬಳಿ ।
ಕಂಗನೆಯರಾ ದ್ರುಪದಸುತೆಯ ಪೊನ್ನಂದಳದ ಕೂಡೆ ಸಂದಣಿಸಿ ಬರಲು ॥
ಮಂಗಳ ಧ್ವಾನದಿಂ ಮುಲಿವ ಭೇರಿಗಳ ನಾ ।
ದಂಗಳೈದಿದು ವಷ್ಟದಿಕ್ಪಾಲಕರ ಪಟ್ಟ ।
ಣಂಗಳ್ಗೆ ಪಾಂಡವರ ಪುರದ ಸಂಭ್ರಮವ ನೆಚ್ಚರಿಸಿ ನಾಚಿಸುವಂತಿರೆ ॥ ॥೩॥
ಭದ್ರ ಗಜಕಂಧರದೊಳರಸ ನೆಸೆದಿರ್ದಂ ಲ ।
ಸದ್ರತ್ನಭೂಷಣಂಗಳ ಕಾಂತಿಯಿಂ ಮೂಡ ।
ಣದ್ರಿಯೊಳ್ತೊಳಗು ವೆಳನೇಸರನೆ ಬಳಿ ಕಿದಿರ್ಗೊಂಬ ಹರ್ಷವನೆ ಕಂಡು ॥
ಭದ್ರಾವತೀಶ್ವರನೆನಿಪ ಯೌವನಾಶ್ವಂ ಜ ।
ಗದ್ರಾಜನಾದ ಪಾಂಡವ ನೆಡೆಗೆ ಬಂದಂ ಸು ।
ಹೃದ್ರಾಗದಿಂ ತನಗೆ ಭೀಮ ನಭಿಮುಖನಾಗಿ ಬರಲಾತನೊಡನೆ ನಗುತೆ ॥ ॥೪॥

ವಾಯುಸುತನೊಡನೆ ತಾನಿರ್ದಪೊರೆಗಾಗಿ ಬ।
ರ್ಪಾ ಯೌವನಾಶ್ವನಂ ಕಂಡಿಭವನಿಳಿದು ನಿಂ।
ದಾ ಯುಧಿಷ್ಠಿರ ನರೇಶ್ವರ ನಡಿಗೆ ಕಾಣಿಕೆಯ ನಿತ್ತೆರಗಿ ಕೈಮುಗಿಯಲು ॥
ಪ್ರೀಯದಿಂದಾತನಂ ತೆಗೆದು ತಕ್ಕೈಸಿ ಮಾ।
ದ್ರೇಯ ಭೀಮಾರ್ಜುನರ ಸಮನೆನಗೆ ನೀನವರಿ।
ನೀ ಯಾದವೇಂದ್ರನಂ ಭಾವಿಸೆಂದರಸಂ ಮುಕುಂದನಂ ತೋರಿಸಿದನು ॥ ॥೫॥

ಬಳಿಕವಂ ಕಂಡನುತ್ಪಲದಳಶ್ಯಾಮ ಕೋ।
ಮಲತರ ಶರೀರನಂ ನವರತ್ನ ಮಕುಟ ಕುಂ।
ಡಲ ಕಟಕ ಕೇಯೂರ ಹಾರನಂ ಪ್ರಕಟ ಕಟಿಸೂತ್ರ ಮಣಿಮಂಜೀರನಂ ॥
ವಿಲಸಿತ ಶ್ರೀವತ್ಸ ಕೌಸ್ತುಭ ಶುಭೋರನಂ।
ಲಲಿತ ಪೀತಾಂಬರೋಜ್ಜ್ವಲ ದಲಂಕಾರನಂ।
ಜಲಜ ಸಮ ಚರಣಯುಗ ಮೋಹನಾಕಾರನಂ ಲಕ್ಷ್ಮೀಮನೋಹಾರನಂ ॥ ॥೬॥

ಅಚ್ಯುತನ ಮಂಗಳ ಶ್ರೀಮೂರ್ತಿ ಕಣ್ಮನವ।
ನೊಚ್ಚತಂಗೊಳಲೇಳ್ವ ರೋಮಪುಳಕದೊಳೆ ನೃ।
ಪೆಚ್ಚಿದತಿಹರ್ಷದಿಂ ದಜ ಭವ ಸುರೇಂದ್ರ ಮುನಿಮುಖ್ಯರ್ಗೆ ಗೋಚರಿಸದ ॥
ಸಚ್ಚಿದಾನಂದಮಯನಂ ಕಂಡುದಿದು ಜಗದೊ।
ಳಚ್ಚರಿಯಲಾ ನರರ್ಗೆನುತಾ ನೃಪಾಲಕಂ।
ಚೆಚ್ಚನಸುರಾಂತಕನ ಪದಕೆ ಪೊಸಮಿಸುನಿ ಬೆಳಗೆಸೆವ ಮಕುಟದ ನೊಸಲನು ॥೭॥

ಕಮಲದಳ ನಯನ ಕಾಳಿಯಮಥನ ಕಿಸಲಯೋ।
ಪಮಚರಣ ಕೀಶಪತಿಸೇವ್ಯ ಕುಜಹರ ಕೂರ್ಮ।
ಸಮ ಸತ್ಕಪೋಲ ಕೇಯೂರಧರ ಕೈರವಶ್ಯಾಮ ಕೋಕನದ ಗೃಹೆಯ ॥
ರಮಣ ಕೌಸ್ತುಭಶೋಭ ಕಂಬು ಚಕ್ರ ಗದಾಬ್ಜ।
ವಿಮಲಕರ ಕಸ್ತೂರಿಕಾತಿಲಕ ಕಾವ್ರಸೆಂ।
ದಮಿತ ಪ್ರಭಾಮೂರ್ತಿಯಂ ನುತಿಸಲಾತನಂ ಹರಿ ನೆಗಪಿದಂ ಕೃಪೆಯೊಳು ॥ ॥೮॥

ಎದ್ದಾ ನೃಪಂ ಕೃತಾಂಜಲಿಪುಟಾವನತ ನಾ।
ಗಿದ್ದಾಗ ಭೀಮನಂ ನೋಡಿ ವಿಷಯಂಗಳಂ।
ಗೆದ್ದ ನಿರ್ಮಲತಪಸ್ವಿಗಳ ನಿಶ್ಚಲಹೃದಯಮಧ್ಯ ಪಂಕೇಜಾತದ ॥
ಗದ್ದುಗೆಯೊಳೆಸೆವ ಚಿದ್ರೂಪನಂ ಜಗವರಿಯೆ।
ಪೊದ್ದಿಯೊಳ್ಕೂಡಿ ತೇರ್ಗುದುರೆಯಂ ಪೊಡೆವ್ರದಂ।
ಪೊದ್ದಿಸಿದ ಪಾರ್ಥ ನಾರಿದರೊ ಳೆನಲರ್ಜುನಂ ಬಂದಾತನಂ ಕಂಡನು ॥ ॥೯॥

ಗುಣದೊಳಾ ಯೌವನಾಶ್ವ ಕ್ಷಿತಿಪನೆರಗಿ ಫಲು।
ಗುಣನ ಮೊಗಮಂ ನೋಡಿ ನೀನಲಾ ತಿಳಿಯ ಲ್ತ್ರಿ।
ಗುಣದೊಳೊಂದದ ಘನಶ್ರುತಿ ಶಿರೋಮಣಿಯ ನಿಳೆಯರಿಯೆ ನಿಜಭಕ್ತಿಯೆಂಬ ॥
ಗುಣದಿಂದೆ ಬಂಧಿಸಿದ ಕೋವಿದ ನದೇಂ ಬಯಲ।
ಗುಣ ನಿರ್ಗರಕಟ ಯೋಗಿಗಳೆಂದು ನರನ ಸ।
ದ್ಗುಣವ ನುರೆ ಕೊಂಡಾಡಿ ಬಳಿಕ ಸಹದೇವ ನಕುಲಾದ್ಯರಂ ಮನ್ನಿಸಿದನು ॥ ॥೧೦॥

ಬಳಿಕ ಪೊಳೆಪೊಳೆವ ಮಿಂಚಿನ ಗೊಂಚಲೆತ್ತಲುಂ |
ಬಳಸಿ ಕಂಗೊಳಿಸುತಿಶ ಲಡಿಗಡಿಗೆ ಘುಡುಘುದಿಸಿ |
ನೊಳಗುವ ಸಿತಾಭ್ರಮುಂ ಕುಲಗಿರಿ ತಟ ಪ್ರದೇಶಕೆ ಸಾರ್ಚುವನಿಲನಂತೆ ||
ಲಲಿತ ಕನಕಾಭರಣಗಳ ಕಾಂತಿಯಿಂ ಸುಗತಿ |
ಗುಲಿವ ಪೊಂಗೆಜ್ಜೆಗಳ ರಭಸದಿಂ ದೆಸೆವ ನಿ |
ರ್ಮಲವಾಜಿಯಂ ಸುವೇಗಂ ತಂದು ನಿಲಿಸಿದಂ ಧರ್ಮಜನ ಸಮ್ಮುಖದೊಳು || ||೧೧||
ತುರಗಮೇಧಂ ಗೆಯ್ಯದೆಂ ದಿನಿಸು ಕುಂದೆನ್ನ |
ಶಿರದ ಮೇಲಿದೆ ತಾಸಿದಂ ತಾನಲಾರೆ ನೀಂ |
ಪರಿಹರಿಪುದೆಂದು ನಿಜಕೀರ್ತಿ ಹಯರೂಪದಿಂ ಭೂಪನಂ ಬೇಡಿಕೊಳಲು ||
ಪೊರೆಗೆ ಬಂದವೊಲೆಕ ಕರ್ಣದ ಸಿತತ್ವದಿಂ |
ಪರಿಶೋಭಿಸುವ ಶುಭ್ರ ವಾಜಿಯಂ ಕಾಣು ತ |
ಚ್ಚರಿವಟ್ಟು ಸಕಲಜನವ್ಮೆತಂದು ನೋಡುತಿರ್ದುದು ಬಳಸಿ ದೆಸೆದೆಸೆಯೊಳು ||೧೨||
ಕೊಂಡುಬಂದಾ ಹಯವನೊಪ್ಪಿಸಿ ಯುಧಿಷ್ಠಿರನ |
ಕಂಡಂ ಸುವೇಗ ನತಿಭಕ್ತಿಯಿಂ ದೆರಗಿದಂ |
ಪುಂಡರೀಕಾಕ್ಷಂಗೆ ಬಳಿ ಕರ್ಜುನಾದಿಗ ಳ್ಗುಚಿತದಿಂ ವಂದಿಸಿದನು ||
ಬಂಡಿ ವೇರೆ ತ್ತೊಟ್ಟಿಗಳ ಮೇಲೆ ತಂ ದಖಿಳ |
ಭಂಡಾರಮಂ ಕರಿ ರಥಾಶ್ವಮಂ ನಾರಿಯರ |
ತಂಡಮಂ ಗೋಮಹಿಷ ಮೊದಲಾದ ವಸ್ತುಚಯಮಂ ನೃಗೆ ಸಮರ್ಪಿಸಿದನು ||೧೩||
ಮೇಲೆ ಪರಿತೋಷದಿಂದಾ ಯೌವನಾಶ್ವ ಭೂ |
ಪಾಲಕಂ ತನ್ನ ಸರ್ವಸ್ವಮಂ ತಂದು ಲ |
ಕ್ಷ್ಮೀಲೋಲ ನಂಘ್ರಿಗೊಪ್ಪಿಸಿದ ಬಳಿಕವನೊಡನೆ ಬಂದಿಹ ಸಮಸ್ತಜನರು ||
ನೀಲಮೇಘಶ್ಯಾಮಲನ ಕೋಮಲಾಂಗದ ವಿ |
ಶಾಲತರ ಲಾವಣ್ಯಲಹರಿಯ ಸುಧಾಂಬುಧಿಯೊ |
ಳೋಲಾಡುತಿರ್ದ ರಡಿಗಡಿಗೆ ವಂದಿಸಿ ನುತಿಸಿ ಜಯಜಯ ನಿನಾದದಿಂದೆ || ||೧೪||
ಇತ್ತಲಾ ಯೌವನಾಶ್ವನ ರಾಣಿ ಕಾಣಿಕೆಯ |
ನಿತ್ತು ಕುಂತಿಗೆ ನಮಿಸಿ ಬಳಿಕ ಪಾಂಚಾಲಭೂ |
ಭೃತ್ತನೂಜೆಯ ಚರಣ ಸೀಮೆಗಾನತೆಯಾಗಲವಳ ಕಚಭರಮೆಸೆದುದು ||
ಒತ್ತಿಡಿವ ಸಂಜೆಗೆಂಪಿನ ಮೇಲೆ ಕವಿದ ಬ |
ಳ್ಳಿತ್ತಲೆಯೊ ಶೋಣಗಿರಿತಟಕಿಳಿವ ಕಾರ್ಮುಗಿಲ |
ಪೊತ್ತುಮೊ ಕಮಲಕೆರಗುವಳಿಕುಲವೊ ತಳಿರ್ಗೊಂಬಡರ್ದ ಬರ್ಹಿಯೊ ಪೇಳೆನೆ||೧೫||
ದ್ವೇಷಮಂ ಬಿಟ್ಟು ಕೆಂಬಾವರೆಯ ಚೆಲ್ವಿನ ವಿ |
ಶೇಷಮಂ ನೋಡಲ್ ಸಮೀಪಮಂ ಸಾರ್ದ ಪೀ |
ಯೂಷಕರಬಿಂಬಮೆನಲಾ ಪ್ರಭಾವತಿಯ ಮೊಗಮಂಘ್ರಿದೇಶದೊಳೊಪ್ಪಿರೆ ||
ಭೂಷಣಂ ಚಲಿಸೆ ಮಣಿದೆತ್ತಿ ಬಿಗಿಯಪ್ಪಿ ಸಂ |
ತೋಷದಿಂ ದವಳ ನುಪಚರಿಸಿ ತಿರುಗಿದ ಳಖಿಳ |
ಯೋಷಿ ಜ್ಜನದೊ ಳತಿವಿಲಾಸದಿಂ ದ್ರೌಪದಿ ಸುಭದ್ರಾದಿಸತಿಯರೊಡನೆ || ||೧೬||

ಶೌರಿ ಸಹಿತರಸಂ ಬಳಿಕ ರಜತಗಿರಿಯಂತೆ |
ಗೌರಾಂಗದಿಂವೆ ಕಣ್ಗೊಳಿಸುವ ತುರಂಗಮದ |
ಪೌರಂಭಮಂ ನೋಡಿ ಬಿಗಿಯುಪ್ಪಿ ಮುಂಡಾಡಿ ಹೈಡಿಂಬಿ ಕರ್ಣಜರನು ||
ಗೌರವಂ ಮಿಗೆ ಯವನಾಶ್ವ ಭೂಪಾಲಸಂ |
ಪೌರುಷದೊಳುಪಚರಿಸಿ ತಂದ ನಿಭಪುರಿ ಗಖಿಳ |
ಪೌರಜನ ಪರಿಜನದ ರಥ ನಾಗ ವಾಜಿಗಳ ಸಂದಣಿಯ ಸಂಭ್ರಮದೊಳು || ||೧೭||

ಭೂಪಲ್ಲಭಂ ಮುದದೊಳಾಯೌವನಾಶ್ವನಂ |
ಭಾವಿಸಿದ ಬಳಿಕ ಪಕ್ಷದ್ವಯಂ ಹರಿ ಹಸ್ತಿ |
ನಾವತಿಯೊಳಿರ್ದ ನೃಪವರನೊಳಿಂತೆಂದ ನೀಂ ಚೈತ್ರಮಾಸಂ ಪೋದುದು ||
ಈವೇಳೆಗಧ್ವರದ ಸಮಯವ ನುಪಕ್ರಮಿಸ |
ಲಾವಿರಲ್ಪನ್ನೊಂದು ತಿಂಗಳಿರ್ಪುದು ಮುಂದೆ |
ನೀವು ಕರೆಸಿದೊಡೆ ಬಂದಪೆ ವಂದಿಗೊದವಿದ ಸಮಸ್ತವಸ್ತುಗಳ ಕೊಂಡು || ||೧೮||

ರಾಯ ನೀಂ ಕರೆಸಿದೊಡೆ ನಿನ್ನಯ ಮಹಾಧ್ವರಸ |
ಹಾಯಕೆ ಸಮಸ್ತ ವಸ್ತುವ ನಖಿಳಯಾದವ ನಿ |
ಕಾಯಮಂ ಕೂಡಿಕೊಂಡೈತಪ್ಪೆವನ್ನೆಗಂ ಸುಯ್ವಾನದಿಂ ಹಯವನು ||
ಈ ಯವನಾಶ್ವ ಭೂಪತಿಸಹಿತ ಕಾವುದೆಂ |
ದಾ ಯುಧಿಷ್ಠಿರಮುಖರನಂದು ಬೀಳ್ಕೊಂಡು ಕಮ |
ಲಾಯತಾಕ್ಷಂ ಬಂಧುಕೃತ್ಯದಿಂ ದ್ವಾರಕೆಯ ಪುರಕೆ ಬಿಜಯಂಗೈದನು || ||೧೯||

ಇತ್ತ ಲವನಿಪ ನಸುರಹರನ ಕಳುಹಿದ ಚಿಂತೆ |
ಗಿತ್ತು ನಿಜಬುದ್ಧಿಯಂ ಮುಂದರಿಯದಿರೆ ಬಂದು |
ಪುತ್ತೆ ವೇದವ್ಯಾಸಮುನಿ ತಿಳುಹ ಲಮಲ ಮಂಟಪವ ನೋಜೆಯೊಳು ರಚಿಸಿ ||
ತತ್ತುರಗಮಂ ನಿಲಿಸಿ ಬಳಿಕ ಕಾವಲ್ಗೆ ರಥ |
ಮತ್ತಗಜ ಹಯ ಪದಾತಿಗಳ ಸಂದೋಹಮಂ |
ಸುತ್ತಲುಂ ಪರುಠವಿಸಿ ಕೇಳ್ದನಾ ಋಷಿಯೊಳ್ಮರುತ್ತ ನೃಪತಿಯ ಕಥೆಯನು ||೨೦||

ವಿಧುಕುಲಲಲಾಮ ಕೇಳ್ಧರ್ಮಸುತ ನಾ ತಪೋ |
ನಿಧಿಗೆ ಕೈಮುಗಿದು ಬೆಸಗೊಂಡಂ ಮರುತ್ತ ನೃಪ |
ನಧಿಕತರ ಯಾಗಮಂ ನಡಾವ ಋಷಿಮುಖದಿಂದ ಮುಂದು ವಿರಚಿಸಿದ ನದರ ||
ವಿಧಿಯಂ ತನಗೆ ಪೇಳ್ವುದೆನೆ ಬಾದರಾಯಣಂ |
ಮಧುರೋಕ್ತಿಯಿಂ ದವನಿಪತಿಗೆ ವಿಸ್ತರಿಸಿದಂ |
ಬುಧಜನ ಪ್ರೀತಿಕರಮಾಗಲಾ ರಾಯನ ಮಹಾಕ್ರತುವ ನೀ ಕ್ರಮದೊಳು || ||೨೧||

ಆ ದೊಡೆ ನರೇಂದ್ರ ಕೇಳಾದಿಯುಗದಲ್ಲಿ ವಿಮ |
ಲಾದಿತ್ಯ ವಂಶದೊಳ್ಮೆರೆದ ರಿಕ್ಷ್ವಾಕು ನೊದ |
ಲಾದವ ಧರ್ಮ ಕೀರ್ತಿ ಪ್ರತಾಪಂಗಳಿಂ ದವರ ಪಾರಂಪರೆಯೊಳು ||
ಮೇದಿನೀಪತಿ ಕರಂದಮನೆಂಬವಂ ಸಕಲ |
ಭೂದೇವಕುಲಮೊಲಿದಾಮನೆಸಿ ಪಂಗಿರಸ |
ನಾದರಿಸಿ ವರಿಸಿ ಹಯಮೇಧಶತಮಂ ಮಾಡಿ ಸುರಪಪದವಿಯಂ ಪಡೆದನು || ||೨೨||

ಆ ಕರಂಧಮನ ಸುತ ನಾವಿಕ್ಷಿಯೆಂಬ ವಸು |
ಧಾಕಾಂತ ನಾತನಿಂ ಮುದಯಿಸಿ ಮರುತ್ತಂ ತ್ರಿ |
ಲೋಕ ವಿಖ್ಯಾತನಾದಂ ಪಗೆಗಳಂ ಗೆಲ್ದಿಡೆಯೊಳುಸು ಪಿಡುತಿರಲ್ಕೆ ||
ವ್ಯಾಕೀರ್ಣ ಚಾತುರ್ವರ್ಣಲಂ ಪುಟ್ಟುತಿಹುದಸಂ |
ಜೇಕೆಂದಕಡೆ ಸಾಧ್ಯನಾಗಿ ಬಹುದೀಧರೆಯ |
ನೇಕಾಧಿಪತ್ಯದಿಂದಾಳ್ದನಂ ದಮಲಧರ್ಮದ ಮೇರೆತಪ್ಪದಂತೆ || ||೨೩||

ಪ್ರಾಜ್ಯ ವೈಭವದಿಂದೆ ರಂಜಿಸುವ ಧರೆಯ ಸಾ |
ಮ್ರಾಜ್ಯಾಧಿಪತ್ಯದ ಮಹಾಧನಂ ಸುರವಿಪ್ರ |
ಭೋಜ್ಯಮಪ್ಪವೊಲಾ ನೃಪಾಲಕಂ ತುರಗಮೇಧಾಧ್ವರದ ಮಾಳ್ಕೆಗೆಳಸಿ ||
ಯಾಜ್ಯ ಯಾಜನಕೆ ವರಿಸುವೊಡಂಗಿರನ ಸುತಂ |
ಪೂಜ್ಯ ನೆಮ್ಮ ಕುಲದವರ್ಗೆಂಬ ನಿಶ್ಚಯದೊ |
ಳಾಜ್ಯ ಪರ್ಗಾಚಾರ್ಯನಾಗಿಹ ಬೃಹಸ್ಪತಿಯ ಪೊರೆಗೆ ಬಂದಿಂತೆಂದನು || ||೨೪||

ಎಲೆ ಬೃಹಸ್ಪತಿ ಮತ್ಪಿತಾಮಹಂ ಕ್ರತುಗಳ್ಗೆ |
ಸಲೆ ನಿನ್ನ ತಾತನಂ ವರಿಸಿರ್ದ ನದರಿಂದೆ |
ಕುಲಧರ್ಮಮಂ ಬಿಡದೆ ನೀನೆನಗೆ ಯಜ್ಞಮಂ ಮಾಡಿಸೆನ ಲವನೊಪ್ಪಲು ||
ಬಲರಿಪು ಕನಲ್ದು ಮಾನವರ ಮಖಯಾಜನಂ |
ಪೊಲೆ ಸುರರ್ಗುಚಿತ ಮಲ್ಲೆಂದು ಗುರುವಂ ತಡೆದು |
ನಿಲಿಸಲಾ ನೃಪತಿ ಭಂಗಿತ ನಾಗಿ ಬರುತ ನಾರದಮುನಿಪನಂ ಕಂಡನು || ||೨೫||

ಮುಗುಡದಿಂ ದಾ ನೃಪಂ ನಾರದಂ ಗೆರಗೆ ನಸು |
ನಗು ತಿದೇನೆಲೆ ರಾಯ ನಿನಗೆ ದುರ್ಮಾನಸ ಮೆನೆ |
ಮಿಗೆ ಬೃಹಸ್ಪತಿ ತನಗೆ ಮಾಡಿ ದವಮಾನಮಂ ಪೇಳ್ದತಿ ವಿರಕ್ತಿಯಿಂದೆ ||
ನಗರಮಂ ಪುಗ ದರಣ್ಯದೊಳುಗ್ರತಪದಿಂದೆ |
ಜಗದೊಳುತ್ಕೃಷ್ಟಪದಮಂ ಪಡೆವೆನೆನೆ ಕೇಳ್ದು |
ವಿಗಡ ಮುನಿವರ ನಾಗಳಾ ಮಹೀಪಾಲನಂ ಸಂತೈಸುತಿಂತೆಂದನು || ||೨೬||

ಜನಪ ನಿನ ಗೆಚ್ಚರಿಪೆ ನಾದಿಯೊಳ್ಪಂಕಜಾ |
ಸನನ ಮಾನಸಪುತ್ರನಾದ ನಂಗಿರ ನವನ |
ತನುಜರ್ ಬೃಹಸ್ಪತಿಯುಮಿನ್ನೊರ್ವ ಸಂವರ್ತ ನೆಂಬವಂ ಬಳಿ ಕವರ್ಗೆ ||
ದಿನದಿನಕೆ ದಾಯಾದ ಮತ್ಸರಂ ಪೆರ್ಚುತಿರೆ |
ಮನೆವಾಳ್ತೆಯೊಳ್ಪಸುಗೆಯಂ ಕುಡದೆ ಗುರು ತಗು |
ಳ್ದನುಜನಂ ಪೊರಮಡಿಸೆ ಕಾಶಿಯೊಳ್ಪೋಗಿರ್ಪ ನಾತ ನವಧೂತನಾಗಿ || ||೨೭||

ಆತನಂ ವರಿಸಿದೊಡೆ ಯಜ್ಞಮಾದಪುದು ನಿನ |
ಗೀತ ಕಿನ್ನೆಣಿಕೆ ನಡೆ ಕಾಶಿಕಾ ಪಟ್ಟಣದೊ |
ಳಾ ತಪೋನಿಧಿ ನಿನ್ನ ಕಣ್ಗೆ ಗೋಚರಿಸದಿರೆ ಪೊಳಲ ಪೆರ್ಬಾಗಿಲೊಳಗೆ ||
ಘಾತಿಯಾಗಿರ್ದ ಪೆಣನಂ ಬಿಸುಡಿಸದೆ ನಖಿಳ |
ಜಾತಿಗಳ್ಸುತ್ತಿಮುಕೊಂಡೆಡೆಯಾಡುತಿರ್ಪ ವವ |
ಧೂತನಾಗಿರ್ದವಂ ಕಂಡು ತೊಲಗಿದೊಡರಿದು ಬೆಂಬಿಡದೆ ಪೋಗೆಂದನು || ||೨೮||

ಪೊಕ್ಕಲ್ಲಿ ಪೊಕ್ಕು ಬೆಂಬಿಡದೆ ನೀಂ ಬರೆ ಕಂಡು |
ಸಿಕ್ಕಿದೆತ್ತಣದೆಂದು ಬಯ್ದಪಂ ಪೊಯ್ದಪಂ |
ಮುಕ್ಕುಳಿಸಿ ಮೇಲುಗುಳ್ದಪನೇನನಾದೊಡಂ ಮಾಡುವಂ ನೀನದಕ್ಕೆ ||
ಪೆಕ್ಕಳಿಸಿ ಹಿಮ್ಮೆಟ್ಟದಿರ್ದೊಡಾತೊರೆದಪ ರೆ |
ನ್ನಿಕ್ಕೆಯಂ ಪೇಳೆಂದವಂ ಕೇಳ್ದು ಜೆನ್ನಸಿದಿ |
ರಿಕ್ಕಿ ನಾರದ ನರುಪಿ ತಾಂ ಕಿಚ್ಚಿನೊಳ್ಪೊಕ್ಕನೆಂ ದುಸಿ ಪೋಗೆಂದನು || ||೨೯||
ನಾರದನ ಬುದ್ಧಿಯಂ ಕೇಳ್ದು ಸಂತೋಷದಿಂ |
ಘೂರಮಣ ನಲ್ಲಿಂದೆ ಬೀಳ್ಕೊಂಡು ರತಿಸಾರ |
ತಾರಕ ಬ್ರಹ್ಮೋಪದೇಶದಿಂ ಪ್ರಾಣಿಗಳ್ಗಾತ್ಮಸಾಯುಜ್ಯ ಮೀವ ||
ಘೋರದುರಿತಂಗಳಂ ಕಂಡಮಾತ್ರದೊಳೆ ಸಂ |
ಹಾರಮಂ ಮಾಳ್ಪ ನಿಖಿಳ ಪ್ರಳಯ ಬಾಧೆಗ |
ಳ್ದೂರಮೆನಿ ಪವಿಮುಕ್ತ ಕಾಶಿಗೈತಂದು ವಿಶ್ವೇಶಂಗೆ ಪೊಡಮಟ್ಟನು || ||೩೦||
ಬಳಿಕಲ್ಲಿ ನಾರದಂ ಪೇಳ್ದಂತೆ ಭೂವರಂ |
ಪೊಳಲ ಪೆರ್ಬಾಗಿಲ್ಗೆ ಕುಣಪಮಂ ತಂದಿರಿಸ |
ಲುಳಿಯ ಪೆಡೆಯಾಡುತಿರ್ದುದು ಜನಂ ಕಂಡು ಸಂವರ್ತ ನತ್ತಲೆ ತೊಲಗಲು ||
ಬಳಿವಿಡಿದು ಪೋದೊ ದವನೀಶಂ ಜೈಮ ಪೊ |
ಯ್ದಳಲಿಸಿ ಕನಲ್ದುಗುಳ್ದೀಕರಿಸಿ ನೂಕಲದ |
ಕಳುಕ ದಿರ್ದೊಡೆ ತಾ ನದಾರೆಂದು ಬಂದೆ ನೀನೆಂದು ನೃಪನಂ ಕೇಳ್ದನು || ||೩೧||
ಸುರಪುರೋಹಿತ ನನುಜ ನಂಗಿರನ ಸೂನು ಮುನಿ |
ವರಮೌಳಿ ಸಂವರ್ತನೆಂ ದರಿದು ಬಂದು ನಿ |
ನ್ನರವಂ ಪರೀಕ್ಷಿಸಿದೆನೆಂದು ನೃಪ ನುಸಿರ ಲವರಾರ್ನಿನಗೆ ಪೇಳ್ದರೆನಲು ||
ಪರಮರ್ಷಿ ನಾರದಂ ತನಗೊರೆದು ಕೂಡೆ ತಾ |
ನುರಿಯೊಳ್ಪ್ರವೇಶಿಸಿದ ನೆನೆ ತಾಪಸಂ ತಿಳಿದು |
ಕರುಣದಿಂ ದೇತಕ್ಕೈತಂದೆ ನೀನಾ ರೆನ್ನೊಳಹ ಕಜ್ಜಮೇನೆಂದನು || ||೩೨||
ಆದೊಡೆ ಮರುತ್ತನಾ ನಾವಿಕ್ಷಿನೃಪಸುತಂ |
ಮೇದಿನಿಯೊಳೆನಗೆ ಹಯಮೇಧಮಂ ಮಾಡಿಸೆಂ |
ದಾದರಿಸಿ ನಿಮ್ಮಣ್ಣನಂ ಕೇಳ್ದೊಡಾತಂ ತಿರಸ್ಕರಿಸಿದೊಡೆ ನಿನ್ನನು ||
ಆದೇವಮುನಿ ಪೇಳ್ದೊಡೈತಂದೆ ನೆನ್ನಘ್ನ |
ಕೋದಯಕೆ ನೀನಲ್ಲದನ್ಯರಂ ಕಾಣೆನೆಂ |
ದಾ ದಿನಪಕುಲದರಸನಂದು ಸಂವರ್ತನಂ ಬೇಡಿಕೊಳ ಲಿಂತೆಂದನು || ||೩೩||
ಶ್ರೀನಾದುದೆಲೆ ರಾಯ ನಿನ್ನಯಜ್ಞಕ್ಕೆ ತಾ |
ನೋಸರಿಸುವವನಲ್ಲ ಪುರುಡಿಂ ಮಮಾಗ್ರಜಂ |
ವಾಸವನ ಮುಖದಿಂ ದೊಡಂಬಡಿಸಿ ಮಖಕೆ ತಾನಧ್ಯಕ್ಷನಪ್ಪೆನೆಂದು ||
ಆಶೆಯಿಂ ಕೇಳ್ದೊಡೀಗೈವೆ ನೀಂ ಪೇಳಿನ |
ಲ್ಬ್ಬಾಸುರನ ಕೊಂದಗತಿ ತನಗಹುದು ನಿಮ್ಮಂ ಪ್ರ |
ಯಾಸದಿಂ ಬಿಟ್ಟೊಡೆಂ ದರಸಂ ಪ್ರತಿಜ್ಞೆಯಂ ಮಾಡಲವನಿಂತೆಂದನು || ||೩೪||

ಯಾಜಕಂ ತಾನಪ್ಪೆನಧ್ವರಕೆ ನೀನಿನ್ನು ।
ರಾಜಿಪ ಹಿಮಾಲಯದೊಳೆಸೆವ ರಜತಾದ್ರಿಯೊ ।
ಳ್ತೇಜೋಮಯಂ ಸದಾಶಿವನಿರ್ಪ್ಪನಾತನ ಪದಾಬ್ಜಮಂ ಪೋಗಿ ಕಂಡು ॥
ಪೂಜೆಗೈದೊಡೆ ಕನಕರಾಶಿಗಳನಿತ್ತಪಂ ।
ಮೂಜಗಂ ತಣಿವಂತೆ ವರಮಖಂ ನಡೆಪುದೆನ ।
ಲಾ ಜನಪನಲ್ಲಿಗೈತಂದು ಗಿರಿಜೇಶನಂ ಪ್ರಾರ್ಥಿಸಿದನರ್ತಿಯಿಂದೆ ॥ ॥೩೫॥
ತರುಣೇಂದುಮೌಳಿಯಂ ಪ್ರಾರ್ಥಿಸಿದೊಡಿತ್ತನತಿ ।
ಕರುಣದಿಂದಪರಿಮಿತ ವಸ್ತುವಂ ಬಳಿಕ ಹಿಮ ।
ಗಿರಿತಟದೊಳಾನೃಪಂ ಕಟ್ಟಿಸಿದನಧ್ವರದ ಶಾಲೆಯಂ ಕನಕದಿಂದೆ ॥
ವರವೈದಿಕ ಪ್ರಮಾಣದೊಳಂದು ವಿಪ್ರರಂ ।
ಕರೆಸಿ ಸಂವರ್ತನಂ ಕೂಡಿಕೊಂಡುತ್ಸವದೊ ।
ಳರಸಂ ಮಹಾಕ್ರತು ಪ್ರಾರಂಭದೊಳ್ಮೆರೆದನೈಶ್ವರ್ಯ ವಿಭವದಿಂದೆ ॥ ॥೩೬॥
ಕೇಳ್ದಂ ಬೃಹಸ್ಪತಿ ಮರುತ್ತನ ಮಖೋದಯವ ।
ನಾಳ್ದನತಿಚಿಂತೆಯೊಳ್ ಮುಂದೆ ಧನಯುತನಾಗಿ ।
ಬಾಳ್ದಪಂ ಸಂವರ್ತನೆಂಬ ಪುರುಡಿಂ ದುಬ್ಬಗಂ ಬಟ್ಟು ದಿವಿಜಪತಿಗೆ ॥
ಪೇಳ್ದೊಡವನಗ್ನಿಯಂ ಕಳುಪಿದೊಡೆ ದೀಕ್ಷೆಯಂ ।
ತಾಳ್ದಿಸೆವ ಭೂಪನೆಡೆಗೈತಂದು ವೃತ್ರನಂ ।
ಸೀಳ್ದವಂ ತನ್ನೊಳಾಡಿದ ಮಾತನಿಂತೆಂದು ವಿವರಿಸಿದನಾ ಕೃಶಾನು ॥ ॥೩೭॥
ರಾಯ ಕೇಳಿಂದ್ರನಾಡಿದ ಮಾತನೊರೆವೆ ನಾ ।
ನೀ ಯಜ್ಞಮಂ ಬೃಹಸ್ಪತಿಯ ಕೈಯಿಂ ತೊಡಗಿ ।
ಸಾಯಸಂಬಟ್ಟು ಸಂವರ್ತನಂ ವರಿಸ ಬೇಡೆನ್ನಾಜ್ಞೆಯಂ ಮೀರ್ದೊಡೆ ॥
ಪಾಯದಿಂದಧ್ವರಂ ಕಿಡುವಂತೆ ಮಾಡುವೆನ ।
ಪಾಯಮಂ ನಿನಗೆಂದು ಪೇಳ್ದ ಸುರಪನೆಂಬ ।
ವಾಯುಸಖನಂ ನೋಡಿ ನಸುನಗುತೆ ವಿನಯದಿಂ ಭೂಪಾಲನಿಂತೆಂದನು ॥ ॥೩೮॥
ಗುರುವೆ ಕುಲಗುರುವೆಂದು ಮೊದಲೆ ನಾಂ ಪೋಗಿ ವಿ ।
ಸ್ತರದಿಂದೆ ಮಾಡಿಸಧ್ವರವನೆಂದಾಡಿದೊಡೆ ।
ನರಯಾಜನ ಕ್ಕೊಲ್ಲೆನೆಂದ ಬಳಿಕೈಸಲೀ ಸಂವರ್ತನಂ ಮಖಕ್ಕೆ ॥
ವರಿಸಿದೆನಸತ್ಯಮಂ ನುಡಿಯಲಂಜುವೆನಿನ್ನು ।
ತುರಗಮೇಧಂ ನಡೆಯದೊಡೆ ಮಾಣಲೆಂದು ಭೂ ।
ವರನಗ್ನಿಯಂ ಜೇಡಿಕೊಳುತಿರಲ್ಕಂಡು ಮುಳಿದಾ ಮುನಿಪನಿಂತೆಂದನು ॥ ॥೩೯॥
ಭೂಕಾಂತ ನಿನಗಿವನೊಳುಪಚಾರಮೇಕಿನ್ನು ।
ಸಾಕೀತನಂ ಕಳುಹು ಯಜ್ಞಮಂ ಕಿಡಿಸಿದೊಡೆ ।
ನಾಕಮಂ ಕಿಡಿಸುವೆಂ ಸಕಲಮಂ ಸುಡುವನಿಲನಂ ಸುಡುವೆನೀಕ್ಷಣದೊಳು ॥
ಪಾಕಶಾಸನನನೊಡಗೊಂಡು ಬರಲಗ್ನಿಯಂ ।
ನೂಕೆಂದು ಸಂವರ್ತನಾಡಲ್ಬೆದರ್ದು ಸುರ ।
ಲೋಕಕ್ಕೆ ಪೋಗಿ ವೈಶ್ವಾನರಂ ವಜ್ರಿಗರುಹಿದೊಡಾತನಿಂತೆಂದನು ॥ ॥೪೦॥

ಇನ್ನೊಂದುಬಾರಿ ನೀಂ ಪೋಗಿ ಪೇಳಾ ನೃಪತಿ |
ಗೆನ್ನ ವಜ್ರಕ್ಕೆ ಗುರಿಯಾಗಬೇಡೆಂದೆನ |
ಲ್ತಿನ್ನ ಕಯ್ಯೊಳ್ಸಾಗದಂಜುವೆಂ ಸಂವರ್ತನತಿ ತಪೋಬಲ ನಿಳೆಯೊಳು ||
ಮುನ್ನೆ ಭೂಸುರ ಶಾಪದಿಂದೆ ಪಲರಳಿ ದುಳಿದು |
ಬನ್ನ ಬಟ್ಟವರುಂಟು ಸಾಕೆಂದು ಶಿಖಿ ತೊಲಗೆ |
ಮನ್ನಿಸಿ ಪುರಂದರಂ ಧೃತರಾಷ್ಟ್ರನೆಂಬ ಗಂಧರ್ವಂಗೆ ನೇಮಿಸಿದನು || ||೪೧||

ಧೃತರಾಷ್ಟ್ರನೆಂಬ ಗಂಧರ್ವರಾಜಂ ಬಂದು |
ಶತಮುಖಂ ಸಂವರ್ತನಂ ಬಿಟ್ಟು ವರ ಬೃಹ |
ಸ್ಪತಿಯ ನಧ್ವರಕೆ ವರಿಸದೊಡೀಗ ವಜ್ರದಿಂದಿರಿವಪಂ ನಿನ್ನನೆಂದು ||
ಕ್ಷಿತಿಪಂಗೆ ಪೇಳ್ದೊಡದ ಕೇಳ್ದಾ ಮುನೀಶ್ವರಂ |
ಖತಿಗೊಂಡೊ ಡಾತಂ ಮರಳ್ದು ಶಕ್ರಂ ಗರುಹ |
ಲತುಳ ಸನ್ನಾಹದಿಂ ಪೊರಪುಟ್ಟೆ ನಮರೇಂದ್ರ ನಸಿಮಿಷರ ಗಡಣದಿಂದೆ || ||೪೨||

ಕೋಪದಿಂದಾಗ ಳೆತ್ತಿದ ವಜ್ರಹಸ್ತದಿಂ |
ದಾ ಪುರಂದರ ನೈದೆ ಕಂಡು ನಡ ನಡುಗುತಿಹ |
ಭೂಪನಂ ಸಂತೈಸಿ ಸಂವರ್ತ ನಿಂದ್ರಾಗ್ನಿ ಮೊದಲಾ ದಮರಗಣವನು ||
ರೂಪಿಸಿದ ಚಿತ್ರಪಟ ದಂತಾಗ ನಿಲಿಸ ಲ್ತ |
ತಾಪಂಗ ಳುಡುಗಿ ನಿರ್ಜರ ನಿಕರ ಮಳವಳಿಯ |
ಲಾ ಪರಮಧಾರ್ಮಿಕ ಮರುತ್ತಂ ತಪಸ್ವಿಯುಂ ಜೇಡಿಕೊಂಡಂ ನಯದೊಳು || ||೪೩||

ಎಲೆ ಮುನೀಶ್ವರ ಹವಿರ್ಭಾಗಮುಂ ಕೊಂ ಬಮರ |
ಕುಲ ನಿಂತಿರ ಲ್ಬಹು ಪ್ರತ್ಯಕ್ಷ ಮಾಗಿ ಬಂ |
ದೊಲಿ ದೆನ್ನ ಯಾಗದೊ ಳ್ವಿನಯದಿಂ ದೀಸಿಕೊಳ ಲಾಹುತಿಯ ಪಸುಗೆಗಳನು ||
ಸಲಿಸ ಬೇಕೆನ್ನ ಬಿನ್ನಪವ ನೀ ಸುರಪ ನೊ |
ಳ್ಕಲಹಮುಂ ಬಿಡಿಸೆಂದು ಭೂವಲ್ಲಭಂ ಕೃತಾಂ |
ಜಲಿಯಿಂದೆ ಸಂವರ್ತನಂ ಪ್ರಾರ್ಥಿಸಿದೊ ಡಿತ್ತ ನಾ ನೃಪನ ವಾಂಛಿತವನು || ||೪೪||

ಭೂಮಿಶ ಕೇಳ್ ಳ್ಗೊಳಿಕ ಸಂವರ್ತಮುನಿವರನ |
ಸಾಮರ್ಥ್ಯಮಂ ನೋಡಿ ವೈರಮಂ ಬಿಟ್ಟು ಸು |
ತ್ರಾಮುಂ ಸಕಲ ದಿವಿಜ ರೊಡಗೂಡಿ ಯಜ್ಞದ ಹವಿರ್ಭಾಗಮುಂ ಕೊಳಲ್ಕೆ ||
ಪ್ರೇಮದಿಂ ಪ್ರತ್ಯಕ್ಷ ಮಾಗಿ ಬಂದಿರುತಿರ್ದ |
ನಾ ಮರುತ್ತಂಗೆ ಸಂತೋಷಂ ನೆಗಳ್ದುದು ಮ |
ಹಾಮಖಂ ನೆರೆದುದು ಸಮಸ್ತ ವೈಭವದ ವಿಸ್ತಾರದಿಂ ಖ್ಯಾತಮಾಗಿ || ||೪೫||

ವರ್ತಿಸಿತು ವೈದಿಕ ವಿಧಾನದಿಂ ದೆಸೆವ ಸಂ |
ವರ್ತಮುನಿ ಮಾಡಿಸೆ ಮಹಾಧ್ವರಂ ಸಕಲ ದಿವಿ |
ಜ ರ್ತಮ್ಮತಮ್ಮ ಭಾಗಂಗಳಂ ಪ್ರತ್ಯಕ್ಷಮಾಗಿ ಕೈಕೊಂಡರಿರ್ದು ||
ಮರ್ತ್ಯಲೋಕಂ ಕನಕಮಯಮಾಗೆ ಭೂಮಿ ಯಮ |
ರ ರ್ತಿಗೆದು ಪೊತ್ತ ದಕ್ಷಿಣೆಗಳಿಂ ದಣಿದು ಬಿಸು |
ಟ ರ್ತುಹಿನ ಗಿರಿಯೊ ಳಗಣಿತ ಹೇಮರಾಶಿಗಳ ನೇನೆಂಬೆ ನಚ್ಚರಿಯನು || ||೪೬||

ಪಾರ್ಥಿವಾಗ್ರಣಿ ಮರುತ್ತಂ ಬಳಿಕ ವಿನಯದಿಂ |
ಪ್ರಾರ್ಥಿಸಿದ ನಿಂದ್ರಾದಿಗಳ ನವರ್ಮದದೊಳಿ |
ಷ್ಟಾರ್ಥಮಂ ಸಲಿಸಿ ದರ್ತಣೆ ದಲಸಿದ ದ್ವಿಜ ಭೂರಿದಕ್ಷಿಣೆಗಳಿಂದೆ ||
ಸ್ವಾರ್ಥಮೆಲ್ಲವು ನಿತ್ತು ಸಂವರ್ತಮುನಿಗೆ ಮಖ |
ತೀರ್ಥದೊಳ್ಮಿಂದು ಶುಚಿಯಾಗಿ ದೇವರ್ಕಳಿದು |
ಸಾರ್ಥಮೆನೆ ಚಿರಕಾಲ ಮವನಿಯೊಳವಂ ಬಾಳ್ದು ಪಡೆದ ನುತ್ತಮ ಗತಿಯನು ||೪೭||
ರಾಯ ಕೇಳಾಯಜ್ಞ ಸಂಗತಿಯ ನಾ ಬಾದ |
ರಾಯಣಂ ಪೇಳಿ ಬಳಿ ಕವನಿಪಂ ಧರ್ಮ ಸಾ |
ರಾಯಮಂ ಕೇಳ್ದನಾಮುನಿವರನೊಳಾವ ನರನಾವ ಕೃತ್ಯಂಗೆಯ್ಯಲು ||
ಬೀಯದ ಜಸಂ ಬಳೆವುದಿಲ್ಲಿ ನಾರಕದ ಬಿರು |
ಬೀಯದ ಸುಖಂ ಪರದೊಳಿಂತು ದೊರೆಕೊಂಬುದೆಂ |
ಬೀ ಯವಸ್ಥೆಯ ನೆನಗೆ ವಿಸ್ತರಿಸಿ ಪೇಳ್ವುದೆನೆ ಶುಕತಾತ ನಿಂತೆಂದನು || ||೪೮||
ಸಾರ್ವನಿಗಮಾರ್ಥಮಂ ತಿಳಿದು ಸತ್ಕರ್ಮಮಂ |
ಸಾರ್ವಕಾಲಂ ಗೆಯ್ದು ಪರ ವಧೂವಿಷಯಮಂ |
ಸಾರ್ವಚಿಂತೆಯ ನುಳಿದು ಲೋಕಾಪವಾದಮಂ ಪರಿಹರಿಸಿ ಪರರೊಡವೆಗೆ ||
ಪಾರ್ವನಲ್ಲದೆ ಸದಾಚಾರದಿಂ ನಡೆದೊ ಡಾ |
ಪಾರ್ವ ನಿಹದೊ ಳ್ಕೀರ್ತಿಪರನಾಗಿ ಬಳಿ ಕವಂ |
ಪಾರ್ವ ನುತ್ತಮಗತಿಗೆ ದೇಹಾವಸಾನ ದೊ ಳ್ಭೂಪಾಲ ಕೇಳೆಂದನು || ||೪೯||
ಸರ್ವಧರ್ಮಗಳ ನರಿ ದೋವಿದೊಡೆ ರಣಕೆ ಜೀ |
ಸರ್ವ ನಲ್ಲದೊ ಡಾತ್ಮವಿದ ನಾ ದೊ ಡಿಳೆಯೊ ಳ್ಪಿ |
ಸ ರ್ವಡೆದು ಕ್ಷತ್ರಿಯಂ ಕಾದಿ ಮಡಿದೊಡೆ ಸೂರೆಗೊಂಬ ನಮರಾವತಿಯನು ||
ಮುರ್ವಚನಮಂ ನುಡಿಯ ದತಿಥಿಗಳ ಕೆಡೆ ನುಡಿಯ |
ಮುರ್ವ ಧನಮಂ ಕೂಡಿ ಗೋರಕ್ಷಣಂ ಮಾಳ್ಪ |
ಮುರ್ವರೆಯೊ ಳಿದು ಕೀರ್ತಿ ವೈಶ್ಯಂಗೆ ಪರಗತಿ ಮುಕುಂದ ಸೇವೆಯೊಳಪ್ಪುದು ||೫೦||
ದ್ವಿಜರಾಪರಂ ದಳಿದು ಬೆಸಗೈವ ಶೂದ್ರನುಂ |
ದ್ವಿಜರಾಜ ವಾಹನ ಸ್ಮರಣೆಯಿಂ ದೈದುವಂ |
ದ್ವಿಜರಾಜ ಸನ್ನಿಭವ ಸುಗತಿಯಂ ಜಗದೊಳಂತದು ಕುಲಸ್ತ್ರೀಯರೊಳಗೆ ||
ನಿಜನಾಥಭೀತೆ ಸುಚರಿತ್ರೆ ಗುಣವತಿ ಮಾನಿ |
ನಿ ಜನಾಪವಾದ ವಿರಹಿತೆ ಯೆನಿಪ ನಾರಿ ನ |
ನ್ನಿ ಜನಾರ್ದನಾದಿ ನಿರ್ಜರವರ್ಯ ವಿನುತೆಯಹಳಿ ಸಲವಳ ಸುಕೃತಮೆಂತೋ ||೫೧||
ಪತಿ ದೈವಮೆಂದರಿದು ನಡೆವಸತಿ ಗಹುದು ಪರ |
ಗತಿ ಯಲ್ಲ ದಂಗನೆಯ ರತಿಸಾಹಸಿಗ ಳವರ |
ಕೃತಕ ಶೀಲಂಗಳಂ ನಂಬಲಾಗದು ಮೇ ಣ್ಸ್ವತಂತ್ರಮಂ ಕುಡಲಾಗದು ||
ಪಿತಸಿಂದೆ ಬಾಲ್ಯದೊ ಳ್ಪತಿಯಿಂದೆ ಪರೆಯ ದೊ |
ಳ್ಸುತಸಿಂದೆ ವೃದ್ಧಾಪ್ಯ ದೊ ಳ್ಕುಲಸ್ತ್ರೀ ಸುರ |
ಕ್ಷಿತೆ ಯಾಗದಿರ್ದೊಡವಳಿಂದೆ ನಿಜವಂಶ ಕುಪಹತಿ ಬಾರದಿರ ದಿಳೆಯೊಳು || ||೫೨||

ವರ ಯಜ್ಞಶಾಲೆಯುಂ ಬಾಲೆಯುಂ ದ್ವಿಜ ಪಂಗ್ತಿ |
ಪರಿಶೋಭಿಸದೊಡೆ ಸತ್ಕನಿತೆಯುಂ ಯುವತಿಯುಂ |
ಚರಣಗತಿ ಸಮತೆ ವೆತ್ತಿರದೊ ಡಬ್ಜಾರಿಯುಂ ನಾರಿಯುಂ ಚಾರುತರದ ||
ಕರಭೋರು ಕಾಂತಿ ಸಂಯುಕ್ತಮಾಗಿರ ದಿರ್ದೊ |
ಡರಸಾಳ್ವ ಧರಣಿಯುಂ ತರುಣಿಯುಂ ಶಾಲಿ ಸುಂ |
ದರ ಮಾಗಿರದೊಡೆ ಸೌಮಂಗಳ್ಯಮಾಗಿಯುಂ ಮೇಲೆ ಯುನ್ನತಿ ಯಪ್ಪುದೆ || ||೫೩||
ಮಾವಂಗೆ ಭಾವಂಗೆ ಮೇಣತ್ತೆಗೈವೆ ಸಂ |
ಭಾವಿಸುತೆ ಸೇವಿಸುತೆ ಕಾಂತಂಗೆ ಸುರತ ಸಂ |
ಜೀವನವ ನೀವ ನವಯುವತಿಯುಹ ಲಕ್ಷಣಂ ಸುಕೃತ ಫಲ ಮಂತಲ್ಲದೆ ||
ಪಾವಿನಂ ತಾವಿನಂ ತಡಿಗಡಿಗೆ ಮೊರೆವೆದ್ದು |
ಡಾವರಿಸಿ ಸೀವರಿಸಿ ಮನೆಗೆಲಸಮಂ ಗೆಯ್ಯ |
ದಾವನಿತೆ ಸಾವನಿತೆ ಲೇಸೆನಿಸದಿಹಳೆ ತತ್ಪತಿಗೆ ತಪ್ಗುರು ಜನಕ್ಕೆ || ||೫೪||
ಕಾಲು ನಾಲಗೆಗಳುಂ ಕಪ್ಪಾಗಿ ಮೇದಿನಿಯು |
ಮೇಲೆ ಕಾಲಂಗುಳಿಗ ಳೋರಗೆಯೊ ಳೊಂದದಿರೆ |
ಬಾಲೆಗೀ ಲಕ್ಷಣಂ ಮುತ್ತೈದೆತನಮಾಗ ಲರಿಯದು ವಿಧವೆಯಾದೊಡೆ ||
ಶೀಲಮಾಲಂಬಿಸಿ ತವರ್ಮನೆಯೊಳಿರ್ದನಿತು |
ಕಾಲ ಮಾಲಸ್ಯಮಿಲ್ಲದೆ ಸದಾಚಾರ ಕಸು |
ಕೂಲೆಯಾ ಗಿರುತಿರ್ದು ದೇಹಮಂ ದಂಡಿಸ ಲ್ಪತಿಲೋಕಮಂ ಪಡೆವಳು || ||೫೫||
ವಿಟಗೋಷ್ಠಿಯೊಳ್ಭೋಗಮಂ ಬಯಸಿ ಕಾಮ ಲಂ |
ಪಟೆಯಾಗಿ ಮೇಣರ್ಥಮಂ ಗಳಿಸಿ ಗರ್ವದಿಂ |
ಜಟರಮಂ ಪೊರೆಯುತ್ತೆ ಗರಿ ಯೊಗೆ ದುರಗಿ ಪೊಲಿಹ ದುಷ್ಟವಿಧವೆಯರ ರತಿಯು ||
ಘಟಿಪು ದಾವಂಗವನು ಮವಳು ಮವಳಾಣ್ಮನುಂ |
ಸಟೆಯಲ್ಲ ಮೂವರುಂ ಪತಿತ ರದರಿಂದೆ ಸಂ |
ಕಟದೊಳಂ ನೋಡಲಾಗದು ಪರಸ್ತ್ರೀಯರಂ ನೆರೆದೊ ಡುತ್ಕುಲಮಪ್ಪುದೆ || ||೫೬||
ಗೃಹಕೃತ್ಯಮಂ ಬಿಟ್ಟು ನೆರೆಮನೆ ತವರ್ಮನೆಯೊ |
ಳಿಹ ಳಿಳಿಯರಂ ಚುಂಬಿಸುವ ಳೊಲಿದು ಪಾಡುವಳ್ |
ಗಹಗಹಿಸಿ ಬರಿದೆ ನಗುವ ಳ್ಬೀದಿಗರ ನೈದೆ ಬಾಗಿಲೊ ಳ್ನೋಡುತಿಹಳು ||
ಬಹುಜನವ ಮುಂದೆ ಸುಳಿವ ಳ್ನಾಡಮಾತಂ ಗ |
ಳಹುವವಳ್ ತರುವಲಿಗ ಳೊಡನಾಡುವ ಳ್ತನ್ನ |
ಸಹಜ ಮಲ್ಲದೆ ಪಿರಿ ದಲಂಕರಿಸಿಕೊಂಬವ ಳ್ಚಲ್ವಳೀ ಶಿಕ್ಷಿಸಿದೊಡೆ || ||೫೭||
ನರ್ತಕಿಯು ನಾಪಿತೆಯು ಪರ್ಣವಿಕ್ರಯಿಯ ಪ್ರ |
ವರ್ತಕಿಯು ದಾಸಿಯು ಬುರುಂಡೆಯು ಕಪಾಲಿಸಿಯ |
ಭರ್ತಾರ ನುಳಿದವಳ ಮಾಲೆಗಾತಿಯು ಜಟಿಯು ಸೂತಕಿಯ ಸೈರಂಧ್ರಿಯು ||
ಕರ್ತವ್ಯದಿಂ ದಿಸಿಬ ರೊಡನಾಡಿದೊಡೆ ಬಾಲೆ |
ಮ ರ್ತನೆ ದುರಾಚಾರಮಂ ಕಲಿವ ರದರಿಂ ಬು |
ಧ ರ್ತರುಣಿಯರ ನಡೆವಳಿಗೆ ಭಂಗ ಮಂಕುರಿಸದಂತೆ ಪಾಲಿಸ ವೇಳ್ಪುದು || ||೫೮||

ಪುರುಷಾಂತರಕ್ಕೆಳಸಿ ಪುಷ್ಪಶರತಾಪದಿಂ |
ಕರಗಿ ಕಾತರಿಸಿ ಮೆಲ್ಲನೆ ದೂತಿಯೊರ್ವಳಿಂ |
ಕರೆಸೊಡಂಬಡಿಸಿ ಬೇಡಿತಸಿತ್ತು ಸತ್ಕರಿಸಿ ಪೊತ್ತುವೇಳೆಗಳ ನರಸಿ ||
ನೆರೆಹೊರೆ ಯರಿಯುವಂತೆ ಪತಿಯಂ ಮರೆಸಿ ಮನೆಯ |
ವರನೆಲ್ಲರಂ ಟೊಣೆದು ಮದನಕೇಳಿಗೆ ಸಂದು |
ಮರಳಿ ಮಾನಿನಿಯರಂ ತಿರಬಲ್ಲ ರವರೆ ಜಾರೆಯರವರ ನೋವಬಹುದೆ || ||೫೯||
ಸೋಲ್ವನಂ ಕಂಡು ಕಣ್ಗೊನೆಗೊಲೆದು ನೋಟಮಂ |
ಜೋಲ್ದುರುಬ ನೊಂದಿಸುವ ನೆವದಿಂದೆ ಕೈ ನೆಗಪಿ |
ಸಾಲ್ವ ಮೇಲುದ ನೋಸರಿಸಿ ಮೊಲೆಗೆಲದ ಪೊಗರ್ದೋರಿ ಪುಸಿ ಲಜ್ಜೆಯಿಂದೆ ||
ತೇಲ್ದವಳ ತೆರದಿಂದೆ ನಸುನಗೆಯ ಪಸರಿಸುತೆ |
ಕಾಲ್ದೆಗೆಯ ಮೊಯ್ಯನೊಯ್ಯನೆ ನಡೆವ ಭಂಗಿಯಂ |
ನಾಲ್ದೆಸೆಗೆ ಕಾಣಿಸುವ ಮೈಸಿರಿಯ ಕಾಮಿನಿಯ ರವರೆ ಜಾರೆಯ ರೆನಿಪರು || ||೬೦||
ಚಪಲೆ ಚಂಚಲೆ ಚಾಟುವತಿ ಚಂಡಿ ಛಲವಾದಿ |
ಕುಪಿತೆ ಕುತ್ಸಿತೆ ಕುಹಕೆ ಕುಜೆ ಕಡ್ಡಿ ಕುಲಗೇಡಿ |
ಕಪಟೆ ಕಂಟಕಿ ಕಟಕಿ ಕಡುದುಷ್ಟೆ ಕಲಹಾರ್ಥಿ ವಿರಸೆ ಪರವಶೆ ಪಾಮರಿ ||
ವಿಫಲೆ ವಿಹ್ವಲೆ ವಿಷಮೆ ವಿರಹಿ ವಿಪರೀತೆ ಮಿಗೆ |
ತಪಿತೆ ತಸ್ಕರೆ ತವಕಿ ತವೆ ತಂದ್ರಿ ತಾಮಸಿ ಯೆ |
ನಿಪ ವನಿತೆಯರ ನಿಜಕೆ ನಿಲಿಸಿ ನಿಶ್ಚೈಸಿದೊಡೆ ಬಳಿಕ ಬಣ್ಣಿಲಿಕೆ ಬಾರವೆ || ||೬೧||
ಹಲವು ಮಾತೇಂ ನರಸ ಚಿತ್ರದೊಳ್ಬರೆವ ಕೋ |
ಮಲೆಯರಂ ನಂಬಬಾರದು ನಿರುತಮೆನ ಲವರ |
ಪೊಲಬು ಗಂಡವರುಂಟೆ ಸಾಕವಂತಿರಲಿ ಪರಿಕಲ್ಪಿತ ವ್ರತ ಸಮಾಧಿ ||
ಸಲೆ ತೀರ್ಥಯಾತ್ರೆ ಜಪ ತಪ ನಿಷ್ಠೆ ಬೇಕೆಂಬ |
ವಿಲಗ ವಿಲ್ಲಾತ್ಮ ಪತಿಸೇವೆಯಂ ಪ್ರತಿದಿನ ದೊ |
ಳಲಸದೆ ನೆಗಳ್ಚಿದೊಡೆ ಸತಿಯರ್ಗೆ ಕೀರ್ತಿ ಸುಗತಿ ಗಳಪ್ಪುವಿಹ ಪರದೊಳು ||೬೨||
ಭೂಪಾಲ ಕೇಳ್ಧರ್ಮಸಾರವಿದು ಜಗದೊಳ್ಮ |
ಹೀಪತಿಗಳರ್ಥಲೋಲುಪ್ತಿಯಿಂ ತಮ್ಮಯ ಸ |
ಮೀಪದೊಳ್ದ್ಯೂತ ರತರಂ ನಾಸ್ತಿಕರನೈದೆ ಪಿಸುಣರ ನಸೂಯಕರನು ||
ಸೋಪಚಾರದೊಳಿರಿಸಿಕೊಂ ಡಿರುತಿರಲ್ಪ್ರಜಾ |
ಲೋಪ ಮಪ್ಪುದು ರಾಜ್ಯ ಮುದರಿ ನಪಕೀರ್ತಿಯಿಂ |
ಪಾಪದಿಂ ದರಸುಗಳ್ಗಿಹಪರಂ ಕಿಡುಗು ಮಿದ ನರಿಯದಿರ ಬಹುದೆ ನೃಪರು ||೬೩||
ಆಚಾರ ಧರ್ಮದಿಂ ನಡೆಯ ಲರಿಯದ ವಿಪ್ರ |
ನೇಂ ಚಕ್ರಿಯಾಜ್ಞೆಯಂ ಮೀರಿದವ ನವನಿಂದೆ |
ನೀಚನೆ ಹರಿಪ್ರಿಯಂ ಮಾಧವನ ಪೂಜೆಗೆಯ್ವವಂಗೆ ಸುಗತಿಯುಂಟೆ ||
ಈ ಚತುರ್ದಶ ಜಗದೊಳಂತಿರ ಲದಿನ್ನು ಸಲೆ |
ಸೂಚಿಪೆಂ ನಿನಗೆ ಜಿನಗೊಂಬುದಿನೆ ರಮು ನಲಿಸಿ |
ಗೋಚರಿಪ ಪಾವನ ಮನೆದೊಳೆಂದು ಭೂವರಂ ಕೇಳ್ವುದಾ ಮುನಿ ನುಡಿದನು ||೬೪||

ವತ್ಸ ಕೇಳಾದೊಡೀ ಧರೆಯೊಳಖಿಳ ಪ್ರಾಣಿ |
ವತ್ಸಲನ ಸತ್ಯಶೌಚಾನ್ವಿತನ ಮನೆಗೆ ಶ್ರೀ |
ವತ್ಸಲಾಂಛನ ನರಸಿ ತೊಡವೆನಿಪ ಳಾವಗಂ ಪತಿಪರಾಯಣೆಯ ರೆನಿಪ ಸತ್ಸತಿಯರೆಲ್ಲಿ ||
ಸತ್ಸತಿಯರೆಲ್ಲಿ ಮೇಣ್ಸತ್ಸ್ಮುಖ ನಖಾಂಗುಲಿಕ |
ಸತ್ಸರೋಜಾಸ್ತ್ರಕಳುಕದ ಪುರುಷನೆಲ್ಲಿ ವಿಲ |
ಸತ್ಸಮುದ್ರಾತ್ಮಜೆ ಸರಾಗದಿಂದಲ್ಲಿ ಸುಸ್ಥಿರೆಯಾಗಿ ನೆಲಸಿರ್ಪಳು || ||೬೫||
ರನ್ನದಿಂ ಧ್ಯಾನವೆ ವಿಶೇಷಮೆಂದೊದವಿಸುವ |
ಸನ್ನುತೀ ಕರಿಸದಿಂ ಕಡೆಯೆಂದು ವೆಚ್ಚಿಸುವ |
ಸುಸ್ನಿಸ ಬ್ಬಾಲಕನು ಮತಿಥಿಯುಂ ಸರಿಯೆಂದು ಸತ್ಕರಿಪನಾವ ನವನ ||
ತನ್ನ ತಾಯ್ತಂದೆ ಸೋದರ ಬಂಧು ಬಳಗಮಂ |
ಮನ್ನಿಸುವ ನಾತನ ಸದಾಚಾರ ಸಂ |
ಪನ್ನ ನಾವನ ನವನ ಮಂದಿರದೊಳೈಶ್ವರ್ಯಲಕ್ಷ್ಮಿನೆಲೆಯಾಗಿರ್ಪಳು || ||೬೬||
ಮಧುರವಾಣಿಯ ಕೃತಜ್ಞನ ದಾನಪರನ ಪರ |
ವಧುವಿನೊಲ್ಮೆಯ ಬೇಟಕೊಳಗಾಗದನ ಮಾನ |
ನಿಧಿ ಯೆನಿಸುವನ ತೀರ್ಥಸಂಗತನ ಸಲೆ ಕೂಟಸಾಕ್ಷ್ಯವಂ ನುಡಿಯದವನ ||
ವಿದಿತಕರ್ಮದ ಮಾರ್ಗ್ಗಮಂ ಮಾಜದಾತನ ವ |
ಸುಧೆಯೊಳಿಷ್ಟಾರ್ಥವಂ ತನೆ ನೆಗಳ್ಚುವನ ಬಹು |
ವಿಧದ ಧರ್ಮಂಗಳಂ ರಚಿಸುವನ ಮನೆಯೊಳಿಂದಿರೆ ಬಿಡದೆ ನೆಲಸಿರ್ಪಳು || ||೬೭||
ಹೊಸ್ತಿಲೊರಲೊನಕೆಗಳ ಮೇಲೆ ಕುಳ್ಳಿರ್ದವನ |
ಮಸ್ತಕವ ನೆರಡುಕಯ್ಯಿಂ ತುರಿಸಿಕೊಂಬವನ |
ವಿಸ್ತರದ ಜೂಜುಗಳೊಳೆಸಗುವನ ಪಿರಿದುಂಬವನ ನಿಂದು ನೀರ್ಗುಡಿವನ ||
ಅಸ್ತಮಯ ಮುದಯಕಾಲದೆ ನಿದ್ರೆಗೈವ ನಾ |
ತ್ಮಸ್ತುತಿಯ ಪರನಿಂದೆಯುವನ ಸಾಧಿಸಿ ಪರರ |
ವಸ್ತುವಂ ಕಳುವನ ನಿರುದ್ಯೋಗವವನ ಸಿರಿ ತೊಲಗಿದಲ್ಲದೆ ಮಾಣ್ಬಳೆ || ||೬೮||
ಜಡನ ಮೂರ್ಖನ ಶಠನ ತಾಮಸನ ನಿಷ್ಠುರದ |
ನುಡಿಯುವನ ಪಿಸುಣನ ಕೃತಘ್ನನ ಕರುಬನ ಬಾ |
ಯ್ಬಡುಕನ ಕುಚೇಷ್ಟಕನ ಕಾಮುಕನ ಹಿಂಸಕನ ಡಾಂಭಿಕನ ಪಾಷಂಡಿಯ ||
ಕಡುಗೋಪದವನ ಬಹುಭಕ್ಷಕನ ಕೊಳಕನ ನ |
ವೃಥನ ಕುತ್ಸಿತನ ಕುಹಕನ ದುರಾಚಾರದಿಂ |
ನಡೆವವನ ವಿಶ್ವಾಸಘಾತುಕನ ಪಾತಕನ ಲಕ್ಷ್ಮಿ ತೊಲಗದೆ ಮಾಣ್ಬಳೆ || ||೬೯||
ಈ ಪರಿಯೊಳಾಮುನಿ ಸಮಸ್ತ ಧರ್ಮಂಗಳಂ |
ಭೂಪತಿಗೆ ವಿಸ್ತರಿಸಿ ಬಳಿಕ ಮುಖಕಾಲಂ ಸ |
ಮೀಪವಾದಪುದಿನ್ನು ಹಿಮಗಿರಿಯೊಳಿರ್ಪ ಧನಮಂ ತರಿಸವೇಳ್ಪುದೆಂದು ||
ಆ ಪರಾಶರಸುತಂ ನೇಮಿಸಿದೊಡರಸಂ ಚ |
ಮೂಪರಂ ಕರೆಸಿ ಪೊರಮಟ್ಟು ನಡೆಗೊಂಡಂ ಪ್ರ |
ತಾಪದಿಂ ಪಯಣಪಯಣಕೆ ಬಿಡುವ ಬೀಡುಬೀಡುಗಳ ಸನ್ನಾಹದಿಂದೆ || ||೭೦||

ಸವ್ಯಸಾಚಿ ಪ್ರಮುಖ ರೊಡಗೂಡಿ ಹಿಮಗಿರಿಯ |
ದಿವ್ಯಸ್ಥಳಂಗಳಂ ನೋಡು ತೊಲವಿಂದೆ ವೇ |
ದವ್ಯಾಸಮುನಿವೆರೆಸಿ ವಿಪ್ರರಗೂಡಿ ಮರುತಾಧ್ವರದೊಳಂದು ಬಿಸುಟ ||
ದ್ರವ್ಯದೆಡೆಗೈತಂದು ಗಂಧಾಕ್ಷತೆಗಳಿಂದೆ |
ನವ್ಯ ಕುಸುಮೋತ್ಕರ ಸುಧೂಪ ದೀಪಂಗಳಿಂ |
ಗವ್ಯ ಮಧು ಶರ್ಕರಾದ್ಯುಪಹಾರದಿಂ ನೃಪಂ ಧನದನಂ ಪೂಜಿಸಿದನು || ||೭೦||

ಅಷ್ಟದಿಕ್ಪಾಲರ್ಗೆ ಪೂಜೆಯಂ ಮಾಡಿ ಚೌ |
ಷಷ್ಟಿಯೋಗಿನಿಯರ್ಗೆ ಬಲಿಗೊಟ್ಟು ಭೂತ ಸಂ |
ತುಷ್ಟಿಯಪ್ಪಂತೆ ಕುರಿ ಕೋಣಂಗಳಂ ಪೊಯ್ಸಿ ಬಣ್ಣಗೂಳಂ ಪಸರಿಸಿ ||
ದೃಷ್ಟವಾ ದಖಿಳಧನಮಂ ತೆಗೆಸಿ ಭೂಪನು |
ತ್ಕೃಷ್ಟಮಖಮಿನ್ನು ಸಂಪೂರ್ತಿಯಾದಪುದೆಂಬ |
ಹೃಷ್ಟತೆಯೊಳರ್ಥಮಂ ಸಾಗಿಸಿದ ನಿಭಪುರಿಗೆ ಪೆರ್ವೊರೆಗ ಳಿಟ್ಟಣಿಸಲು || ||೭೧||

ಪೊರೆಯಾಳ್ಗ ಳೊಟ್ಟೆ ಪೇಸರ ಮೆತ್ತು ಬಂಡಿಗ |
ಳ್ನೆರೆ ಕನಕಭಾರದಿಂದೈದಿದುವು ಮಾರ್ಗದೊ |
ಳ್ತಿರಪಿಲ್ಲವೆನೆ ಕೋಟಿ ಸಂಖ್ಯೆಯಿಂ ಕೃಷ್ಣಮುನಿಸಹಿತ ನೃಪನುತ್ಸವದೊಳು ||
ಮೆರೆವ ನಿಜನಗರ ಪ್ರವೇಶಮಂ ಮಾಡುತ |
ಕ್ಕರೊಳಂದು ಭೀಮನಂ ಕಳುಹಿದಂ ದೇವಪುರ |
ದೆರೆಯಲಕ್ಷ್ಮೀಶನಂ ದ್ವಾರಕೆಗೆ ಪೋಗಿ ಬಿಜಯಂಗೈಸಿ ತಪ್ಪುದೆಂದು || ||೭೨||

ಸಂಧಿ ೫ ಕ್ಕೆ ಪದ್ಯ ೨೨೬ ಕ್ಕೆ ಮಂಗಳಮಸ್ತು.

## ಆರನೆಯ ಸಂಧಿ.

ಸೂಚನೆ॥ ಸಿಂಧುರ ನಗರದಿಂದೆ ನಡೆತಂದು ಪವನಜಂ |
ಸಿಂಧು ರಂಗವೊಳಿಸೆವ ದ್ವಾರಕೆಯೊಳ್ಮೆವೆ ಮುಳಿ |
ಸಿಂ ಧುರದೊಳಸುರರಂ ಗೆಲ್ದವನ ನಾರೋಗಣೆಯ ಸಮಯದೊ ಳ್ಕಂಡನು ॥

ಎಲೆ ಮಹೀಶ್ವರ ನಾಗನಗರಮಂ ಪೊರಮಟ್ಟ |
ನಿಲಸುತಂ ಪಯಣಗತಿಯೊಳ್ಬರುತೆ ಕಂಡನಘ |
ಕುಲದಪ ವಿಘಾತಭಯ ಶಮ ನೌಷಧಿಯ ನತುಲಕಲ್ಲೋಲನಿರವಧಿಯನು ||
ಜಲಜಂತು ಚಾರಣವಿಧಿಯ ನಿಳಾಮಂಡಲದ |
ಬಳಿಸಿನ ಪರಿಧಿಯನಪಹೃತ ಗಣಿತಸುಧಿಯ ನವಿ |
ರಳ ಘೋಷಮುದಧಿಯನನೇಕರತ್ನ ಪ್ರತತಿಗಳ ನಿಧಿಯನಂಬುಧಿಯನು || ||೧||

ಮುನಿಮುನಿಮ ಪೀರ್ದುದಂ ರಾಜವಂಶಕುಠಾರ |
ಕನ ಕನಲ್ಕೆಗೆ ನೆಲಂಬಿಟ್ಟುದಂ ರಘುಜರಾ |
ಮನ ಮನದ ಕೋಪದುರುಬೆಗೆ ಬಟ್ಟೆಗೊಟ್ಟುದಂ ಬಡಬಾನಲಂ ತನ್ನೊಳು ||
ದಿನದಿನದೊಳವಗಡಿಸುತಿರ್ಪುದಂ ಬಹಳ ಜಡ |
ತನ ತನಗೆ ಬಂದುದಂ ಭಂಗವೆಡೆಗೊಂಡುದಂ |
ನೆನೆನೆನೆದು ನಿಟ್ಟುಸಿರ್ವಿಟ್ಟು ಸುಯ್ವಂತುದಧಿ ತೆರೆವೆಚ್ಚುಗೆಯೊಳಿರ್ದುದು || ||೨||

ಘುಳಿಘುಳಿಸು ತೇಳ್ವಬೊಬ್ಬುಳಿಗಳಿಂ ಸುಳಿಗಳಿಂ |
ಸೆಳಿಸೆಳೆದು ನಡೆವ ಪೆರ್ದೆರೆಗಳಿಂ ನೊರೆಗಳಿಂ |
ಪೊಳೆವ ತುಂತುರಿನ ಸೀರ್ಪನಿಗಳಿಂ ಧ್ವನಿಗಳಿಂ ವಿವಿಧರತ್ನಂಗಳಿಂದೆ ||
ಒಳಕೊಳ್ವ ನಾನಾಪ್ರವಾಹದಿಂ ಗ್ರಾಹದಿಂ |
ವಳತೆ ಗಳವಡದೆಂಬ ಪೆಂಪಿನಿಂ ಗುಂಪಿನಿಂ |
ಪಳದ ಪವಳದ ನಿವಿರ್ದ ಕುಡಿಗಳಿಂ ತಡಿಗಳಿಂದಾ ಕಡ ಲ್ಕಣ್ಗೆಸೆದುದು || ||೩||

ಪಾಕಶಾಸನನ ಸಕಲೈಶ್ವರ್ಯ ಸಂಪದಕೆ |
ಜೇಕಾದ ವಸ್ತುವಂ ಪಡೆದಿತ್ತೆನೆನ್ನವ |
ಗಾರ್ ಕುಲಿಶಧರನುಪಹತಿಯನೆಸಗ ಸವರಿಂದಮಿನ್ನಿಳಿಗೆ ಮುನ್ನಿನಂತೆ ||
ಜೋಕೆ ಮಿಗೆ ತೆರಳಿ ನೀವೆಂದು ಸಂತೈಸಿ ರ |
ತ್ನಾಕರಂ ಕಳುಹಿದ ಕುಲಾದ್ರಿಗಳ ಪರ್ಬುಗೆಗ |
ಳೀ ಕರಮಿವಹುವೆನಲ್ಪೆರ್ದೆರೆಗಳೆದ್ದು ಬರುತಿರ್ದುವು ಮಹಾರ್ಣವದೊಳು || ||೪||

ಶಿವನಂತೆ ಗಂಗಾಹಿಮಕರಾವಹಂ ರಮಾ |
ಧವನಂತೆ ಗೋತ್ರೈಕಪಾಲಕಂ ಪಂಕರುಹ |
ಭವನಂತೆ ಸಕಲಭುವನಾಶ್ರಯಂ ಶಕ್ರನಂ ತನಿಮಿಷನಿಕರಕಾಂತನು ||
ದಿವಸಾಧಿಪತಿಯಂ ತನಂತರತ್ನಂ ರಾಜ |
ನಿವಹದಂ ತಪರಿಮಿತ ವಾಹಿನೀ ಸಂಗತನು |
ಪವನಾಳಿಯಂತೆ ವಿದ್ರುಮ ಲತಾಶೋಭಿತಂ ತಾನೆಂ ದುವಧಿ ಮೆರೆದುದು || ||೫||

ಚಿಪ್ಪೊಡೆದು ಸಿಡಿವ ಮುತ್ತುಗಳಲ್ಲದಿವು ಮಗು |
ಳ್ದುಪ್ಪರಿಸು ವೆಳಮಿನ್ನಿದಿರ್ದ ಶೀಕರಮಲ್ಲ |
ಸೊಪ್ಪುವ ಸುಲಲಿತ ಶಂಖದ ಸರಿಗಳಲ್ಲದಿವು ಬೆಳ್ನೊರೆಗಳೊಟ್ಟಿಲಲ್ಲ ||
ತಪ್ಪದೊಳಗಣ ರನ್ನವೆಳಗಲ್ಲದಿವು ತೊಡ |
ರ್ದಿಪ್ಪ ಕೆಂಬವಳಮಲ್ಲಿವು ಪಯೋನಿಧಿಯ ಕೆನೆ |
ಯೊಪ್ಪವಲ್ಲದೆ ನೀರ್ಮೊಗೆಯ ಲಿಳಿವ ಮೇಘಂಗ ಳಲ್ಲೆನಿಸಿದುವು ಕಡಲೊಳು ||೬||

ಕ್ರೂರ ಕರ್ಕಟಕ ಕಟಕಂ ಕಮಠ ಮಠಮಿಡಿದ |
ನೀರಾನೆಗಳ್ನೆಗ ಳ್ದಡೆ ಮುದ ಮುದಯಿಪ ಶಾ |
ಲೂರ ಕುಲರಾಜಿ ರಾಜಿಪ ಗೃಹಂ ನಿಬಿಡ ಗಂಡೂಪದ ಪದಂ ಪೆರ್ಚಿದ ||
ಘೋರ ಸಮುದಗ್ರದ ಗ್ರಾಹಭವ ಭವನಮುಂ |
ಘೂರಿ ಭೀಕರ ಮಕರ ಮಹಿ ತಿಮಿ ತಿಮಿಂಗಿಲ ಕ |
ಠೋರತರ ರಾಜೀವ ಜೀವಪ್ರತತಿ ವಾಸವಾ ಸಮುದ್ರದೊಳೆಸೆದುದು || ||೭||

ಸುಳಿದೊಂದು ಮೀನ್ನುಂಗಿ ತಾ ಮೀನ ನಾ |
ಗಳೆ ನುಂಗಿತೊಂದು ಮೀ ನಾಮೀನ ನುಂಗಿದುದು |
ಬಳಿಕೊಂದು ಮೀನದಂ ಮತ್ತೊಂದು ಮೀನ್ನುಂಗಿತಾ ಮೀನ ನುಂಗಿತೊಂದು ||
ತೊಳಲು ತೊಂದೊಂದ ನೊಂದಿಂತು ನುಂಗ ಲ್ತಿಮಿಂ |
ಗಿಲ ನೆಲ್ಲಮಂ ನುಂಗುತಿರ್ಪುದೆನೆ ಬೆದರಿ ಮೀ |
ಳ್ಗನು ತಿರುಗುತಿರ್ದು ವರಕೆಗ ಳೊಡನೆ ಮುಂಪೊಕ್ಕ ಗಿರಿಗ ಳೆಡೆಯಾಡುವಂತೆ ||೮||

ಆ ಮಹಾಂಭೋಧಿಯಂ ನೋಡಿ ಹರ್ಷಿತನಾಗಿ ।
ಭೀಮಸೇನಂ ಬಳಿಕ ನಲವಿನಿಂ ದ್ವಾರಕೆಯ ।
ಸೀಮೆ ಗೈತಂದು ನಗರದ್ವಾರಮಂ ಪೊಕ್ಕು ಬರೆ ರಾಜಮಾರ್ಗದೊಳಗೆ ॥
ಸಾಮಜಗಿರಿಯ ಹಯತರಂಗದ ನೆರವಿದೊರೆಯ ।
ಚಾಮರ ಶಫರಿಯ ಬೆಳ್ಗೊಡೆ ನೊರೆಯ ಭೂಷಣ ।
ಸ್ತೋಮ ಮಣಿಗಣದ ಕಳಕಳರವದ ಜನದ ಸಂದಣಿಯ ಕಡಲಂ ಕಂಡನು ॥ ॥೯॥
ಪೆರ್ಚಿದಿಂಗಡ ಲೂರ್ಮಿಮಾಲೆ ಮಾಲೆಗ ಳೆಡೆಯೊ ।
ಳುಚ್ಚಳಿಸಿ ಪೊಳೆಪೊಳೆವ ಮರಿಮೀನ್ಗ ಳೆನೆ ತೊಳಗು ।
ವಚ್ಚ ಬೆಳ್ಮುಗಿಲೊಡ್ಡುಗಳ ತರ ತರಂಗಳೊ ಳ್ತಲೆದೋರ್ಪ ಮಿಂಚುಗಳೆನೆ ॥
ಅಚ್ಚರಿ ಯೆನಿಪ ರಾಜಮಾರ್ಗ ದಿಕ್ಕೆಲದೊ ಳಿಹ ।
ನಿಚ್ಚಳದ ಕರುಮಾಡ ದೋರಣದ ನೆಲೆನೆಲೆಯೊ ।
ಳೊಚ್ಚೇರಿಗಂಗ ಳೆಳವೆಂಗಳ ಕಟಾಕ್ಷದ ಮರೀಚಿಗ ಳ್ಸೊಗಯಿಸಿದುವು ॥ ॥೧೦॥
ವಿರಚಿಸಿದ ಕರುವಾಡ ದಿಕ್ಕೆಲದ ನವರತ್ನ ।
ಪರಿಖಚಿತ ಕನಕ ತೋರಣಮೊಪ್ಪಿದುದು ರಜತ ।
ಗಿರಿ ಶಿಖರಮಂ ಸಾರ್ದ ಶುಭ್ರಾಭ್ರದೊ ಳ್ಮೂಡಿ ದಮರೇಂದ್ರಚಾಪದಂತೆ ॥
ಪರಿಪರಿಯ ಗುಡಿ ಕಳಸ ಕನ್ನಡಿ ಪತಾಕೆ ಸೀ ।
ಗುರಿ ಚವರಿಗಳ ಸಾಲ್ಗ ಳೆಸೆದುವು ಗಗನ ಮೆಂಬ ।
ಕರಿಯ ಸಿಂಗರಿಸಿದರೊ ಪರಿಮಳೋತ್ಸವಕ್ಕೆ ಪೊರಮಡು ವನಿಲ ರಾಜಂಗೆನೆ ॥೧೧॥
ಹರ್ಮ್ಯಾಗ್ರದೊ ಳ್ವಿರಾಜಿಪ ಚಂದ್ರಶಾಲೆಗಳ ।
ನಿರ್ಮಲಸ್ಥಲದೊ ಳೇಕಾಂತದಿಂ ತನುಲತೆಯ ।
ಘರ್ಮಶ್ರಮಂ ಗಳೆವ ಸೊಕ್ಕು ಜೌವನದ ನೀರಜಗಂಧಿಯರ ಕೊಬ್ಬಿದ ॥
ಪೆರ್ಮೊಲೆಗ ಳೆಡೆಯ ಚಂದನದಣ್ಪು ಮಲ್ಲಿಗೆ ಯ ।
ಲರ್ಮುಡಿಯ ತನಿಗಂಪ ನೆರವಿ ನೆರವಿಗೆ ತಂ ದೆ ।
ಲ ರ್ಮೆಲ್ಲ ಮೆಲ್ಲನೆ ಪರಪುತಿರ್ದು ದಾ ರಾಜಮಾರ್ಗದೊ ಳ್ಪಿಸುಣರಂತೆ ॥ ॥೧೨॥
ದುರ್ಗಮಜಡಾಶ್ರಯಮ ನುಗ್ರಜಂತುಗಳ ಸಂ ।
ಸರ್ಗಮಂ ಬಿಟ್ಟು ಮುಕ್ತಾಳಿ ವಿದ್ರುಮರತ್ನ ।
ವರ್ಗಂಗಳಿಲ್ಲಿ ಸೇರಿದುವೆಂಬೊಲೊಪ್ಪಿದ ವನರ್ಘ್ಯಮಣಿವಸರಂಗಳು ॥
ಭರ್ಗಸಖನೊಲಿದು ನವನಿಧಿಗಳಂ ಧಾತ್ರಿಯ ಜ ।
ನರ್ಗೆ ವಿಸ್ತರಿಸಿ ತೋರಿಸಿದನೆನೆ ಚಿನ್ನವರ ।
ದ ಗುರ್ಡಿಸಿಕೊಂಡಿರ್ಪ ರಾಸಿಪೊನ್ಗ ಳ್ಪಿಂಗದಂಗಡಿಗಳೆಸೆದಿರ್ದುವು ॥ ॥೧೩॥
ದಾನವಧ್ವಂಸಿ ಗೀ ದ್ವಾರಕಾಪುರಿ ರಾಜ ।
ಧಾನಿ ಗಡ ಸಕಲ ವೈಭವದೊಳಾತನ ರಾಣಿ ।
ತಾನಿರದಿಹಳೆ ಲಕ್ಷ್ಮಿ ಮೇಣಿವಳು ಮರಸಿಯಲ್ಲವೆ ಧರಣಿ ತನ್ನೊಳಿರ್ದು ॥
ನಾನಾ ಸುವಸ್ತುಗಳ ನೊದವಿಸದಿಹಳೆ ಚೋದ್ಯ ।
ಮೇನೆನೆ ವಣಿಗ್ವಾಟಪಙ್ಕ್ತಿಗಳ್ಶೋಭಾಯ ।
ಮಾನ ಮಾದುವು ರಾಜಮಾರ್ಗದೊಳ್ಬಹಳ ಧನ ಸಂಪತ್ಸಮಾಜದಿಂದೆ ॥ ॥೧೪॥

ಸವಿಯೆ ಪ್ರಿಯ ರಾಗಮದ ರಾಗಮದ ರಾಗ ಮದ |
ಸ ವಿಲಾಸ ವೆಂದು ತಾಂಬೂಲಮಂ ತೋರ್ಪರ್ಮು |
ಡಿವೊಡೆ ಬೇಕಾದಲರ್ಕಾದಲರ್ಕಂಗಜಾಹವದೊಳೆಂದು ||
ನವಸುಗಂಧಾಮೋದ ಕುಸುಮಂಗಳಂ ತೋರಿ |
ಸುವರೊಂದು ಪೇಕಾಂತ ಕಾಂತ ಕಾಂತರನೊಲಿಸ |
ಲಿವು ಬಲ್ಲವೆಂದು ಪರಿಮಳದ ಕರಡಿಗೆಗಳಂ ತೋರ್ಪರ್ಪಲರ್ವಿಟಗರ್ || ||೧೫||
ನಸುನಗೆಯೊಳರೆಬಿರಿದ ಮಲ್ಲಿಗೆಯ ನುರಿಪೊಳೆವ |
ದಶನದೊಳ್ಕುಂದಮಂ ಮೊಗದೊಳರವಿಂದಮಂ |
ಮಿಸುಪ ನಳಿತೋಳ್ಗಳೊಳ್ಶಿರೀಷಮಾಲೆಯ ಸೆಸೆವ ನಾಸದೊಳ್ಸಂಪಗೆಯನು ||
ಎಸಳ್ಗಣ್ಣೊಳುತ್ಪಲವ ಸುಗುರ್ಗಳೊಳ್ಕೇತಕಿಯ |
ನೊಸೆದಿರಿಸಿಕೊಂಡುಳಿದಲರ್ಗಳಂ ಮಾರ್ಪವೊ |
ಲ್ಕುಸುಮದ ಪಸರದೊಳೊಪ್ಪಿದರಲ್ಲಿ ಪೂವಡಿಗವೆಣ್ಗಳವನೇಂ ಪೇಳ್ವೆನು || ||೧೬||
ಕಬ್ಬು ವಿಲ್ತುಂಬಿ ವೆದೆ ಪೂಸರಳ್ಪೂಣ್ದೆ ಸ |
ಲ್ನಿಬ್ಬರ ಮಿದೆಂದು ಮದನಂ ಮಾಲೆಗಾತಿಯರ |
ಹುಬ್ಬೆಂಬ ಚಾಪಮಂ ಕುರುಳೆಂಬ ನಾರಿಯಂ ಕಣ್ಣೆಂಬ ಕೂರ್ಗಣೆಯನು ||
ಉಬ್ಬರದ ಸಾಹಸದೊಳಳವಡಿಸಿಕೊಂಡು ಬಿಡ |
ದಬ್ಬರಿಸಿ ಸೋವಿತಂ ದವರ ಬಲ್ಮೊಲೆ ಯೆಂಬ |
ಹೆಬ್ಬೆಟ್ಟದೆದೆ ಯಿರುಬಿನೊಳ್ಕಿಡವುತಿಹನಲ್ಲಿ ವಿಟಪಕ್ಷಿ ಮೃಗಕುಲವನು || ||೧೭||
ಮಲ್ಲಿಗೆ ಯಲರ್ವಿಡಿದು ಕೆಂಜಾದಿ ಯೆಂ ದೀವ |
ರುಲ್ಲಾಸದಿಂದೆ ನೀಲೋತ್ಪಲವ ನೆಳೆನಗೆಯ |
ಸೊಲ್ಲಿಂದೆ ಕುಮುದಮಂ ದುಸಿರುವರ್ಸುರಹೊನ್ನೆಯರಲ ಮಾಲೆಯನೊಪ್ಪುವ ||
ಸಲ್ಲಲಿತ ಕಾಯದ ಸರಿಸಕೆತ್ತಿ ಸುರಗಿ ಯೆಂ |
ದೆಲ್ಲರ್ಗೆ ತೋರಿಸುವ ರರುಣ ತಾಮರಸಮಂ |
ಚೆಲ್ಲೆಗಣ್ಣೊಸೆಯೊಳೀಕ್ಷಿಸಿ ಪುಂಡರೀಕ ಮಂ ದೆಚ್ಚರಿಪರೆಳೆವೆಣ್ಗಳು || ||೧೮||
ಪಸರದೊಳ್ಮಲರ್ಗಳ ಸರಂಗಳ್ಗೆ ಸೊಗ |
ಯಿಸುವ ಸುಯ್ಯಲರ ಕಂಪಿಂದೆ ಕಂಪೇರಿಸುವ |
ರೊಸೆದು ಕೋಮಲದ ತನುವಲ್ಲರಿಯ ಸೊಂಪಿಂದೆ ಸೊಂಪುದೋರಿಸುತಿರ್ಪರು ||
ಲಸದವಯವಂಗಳಾಕೃತಿಯ ಚೆಲ್ವಿಕೆಯಿಂದೆ |
ಪೊಸತೆನಿಪ ಚೆಲ್ವಿಕೆಯನೈದೆ ನಲವಿಂದೆ ಕಾ |
ಣಿಸುವರಲ್ಲಿಯ ಮಾಲೆಗಾರ್ತಿಯರ್ಮದನಶರ ಮೂರ್ತಿಯರ್ವಿರಹಿಗಳ್ಗೆ || ||೧೯||
ನಾನಾಸುವಸ್ತುಗಳ ವಿಸ್ತರವನೊಲಿದು ಪವ |
ಮಾನಾತ್ಮಜಂ ನೋಡುತೈತರಲ್ಕಂದೆ ಗಣಿ |
ಕಾಸಾರಿಯರ ಸದನಪಂಗ್ತಿಗಳ ಲೋವೆಗಳ ಸಾಲ್ಮೆರೆದು ವಿಕ್ಕೆಲದೊಳು ||
ಏನಾದೊಡಂ ಮುನಿಮೃಗಾವಳಿಯ ಬೇಂಟೆಯುಂ |
ತಾನಾಡಲೆಂದು ಸಿಂಗರದ ಪೆಣ್ಗೂಡಿನೊ |
ಳ್ಮೀನಾಂಕನೃಪತಿ ಕಟ್ಟಿಸಿದ ಬೆಳ್ಮಾರಂಗಳಾಗಬೇಕೆಂಬಂತಿರೆ || ||೨೦||

ಘನಕುಚದ್ವಯಕೆ ಲೋಚನಯುಗಕೆ ಸೊಗಯಿಸುವ |
ತನುಮಧ್ಯ ಕಿಂಪಾದ ನುಣ್ದೊಡೆಗೆ ಪಡಿಗಟ್ಟು |
ವನಿತು ಸೊಬಗುಳ್ಳ ವಸ್ತುಗಳ ನಂಬುಜಭವಂ ಭುವನದೊಳ್ಕಾಣೆನೆಂದು ||
ಜನಮರಿಯೆ ಪೆರ್ಗವತೆ ಸೇರೆ ಪಿಡಿ ಕರಭಂ ಗ |
ಳೆನಿ ಪಿವರೊಳಭಿನಯಿಸಿ ತೋರಿಸ ಲ್ಮೃದುಪಾಣಿ |
ವನಜಮಂ ಸೃಷ್ಟಿಸಿದನೆಂಬ ಚೆಲ್ವಿನ ಕೋಮಲೆಯರಲ್ಲಿ ಕಣ್ಗೆಸೆವರು || ||೨೧||
ಗುರುಕುಚದ ಭರಣಿ ಸುಂದರಗಜಾರೋಣಿ ಮ |
ಧುರಕಾಮಕೇಳೀರಸಾದ್ರ್ರ ಸನ್ಮೋಹನೋ |
ತ್ತರೆ ಸುರತತಂತ್ರ ವಿರಚಿತಹಸ್ತಚಿತ್ತೆ ಪ್ರಸ್ವಾತಿಪತುರ್ಗಳಸುಕಂಠಿ ||
ವರಬಾಹುಮೂಲ ಮಣಿಭೂಷಣಶ್ರವಣೆ ವಿ |
ಸ್ತರಗುಣಾಪೂರ್ವೆ ಯೆನಿಪಬಾಲಿಕೆಯರಲ್ಲಿ |
ಪರಿಶೋಭಿಸಿದರೆಸೆವ ನಕ್ಷತ್ರಗಣದಂತೆ ಮೊಗಸಸಿಯ ಸೇರುವೆಯೊಳು || ||೨೨||
ಅಡಿಯುಮಮಲಾಸ್ಯಮುಂ ಕಮಲಮಂ ಕಮಲಮಂ |
ನಡೆಯುಮೆಳವಾಸೆಯುಂ ನಾಗಮಂ ನಾಗಮಂ |
ಕಡುಚೆಲ್ವಪಾಣಿಯು ಮಧರಮಂ ಲಲಿತಪ್ರವಾಳಮಣಿಯ ||
ತೊಡೆಯು ಮೆಸೆವಕ್ಷಿಯುಂ ಬಾಳೆಯಂ ಬಾಳೆಯಂ |
ನಡುವುಂ ಸುಪಾಣಿಯುಂ ಹರಿಯುಮಂ ಹರಿಯುಮಂ |
ಬಿಡದೆಪೊಲ್ತಿರೆ ಮೆರೆವ ಕಾಂತೆಯರ್ನೀಲಾಳಕಾಂತೆಯರ್ಸೊಗಯಿಸಿದರು || ||೨೩||
ನಾಗರಿಪುಮಧ್ಯ ಮುರ್ವಸಿಯ ನಡುವಿಂಗೆ ಸರಿ |
ಯಾಗಬಲ್ಲುದೆ ಪೊಸ ವಸಂತೋತ್ಸವದೊ ಳುಲಿವ |
ಕೋಗಿಲೆಯ ಸರಮೇತಕೀನಿತಂಬಿನಿಯ ನುಣ್ದನಿಗೆ ಪಾಸಟಿಯಪ್ಪುದೆ ||
ಪೂಗಣೆ ವಿಲಾಸದಾರಂಭೆಯ್ಯ ವಿರಾಜಿಸುವ |
ಸೋಗೆಗಣ್ಗೆಣೆಯಹುದೆ ನೋಡೆಂದು ಪೊಗಳ್ದನನು |
ರಾಗದಿಂದೊರ್ವಳಂ ವಿಟನಪ್ಸರಸ್ತ್ರೀಯರಂ ಪೆಸರಿಸುವ ನೆವದೊಳು || ||೨೪||
ಸುನಿಮೇಷ ಮೀನಚಾಪಲನೇತ್ರೆ ಚಕ್ರೋನ್ನಿ |
ಘನಕುಂಭಕುಚೆ ಮಕರಕೇತುಮಾತುಳ ಸಮಾ |
ನನೆ ಸಿಂಹಮಧ್ಯೆ ವೃಷಭಧ್ವಜಾರಿಯ ಪಟ್ಟದಾನೆ ಕನ್ಯಾಕುಲಮಣಿ ||
ಮನಸಿಜ ಶರಾಂಕ ಕರ್ಕಟಿ ಜೀಲಮಂತೊಡುವ |
ತನಿಸೊಬಗುವಡೆದ ಸನ್ಮೋಹನದ ಕಣೆಯೆ ಬಾ |
ಮೀನು ತೊರ್ವಸಿರೆ ಸಖಿಯುಂ ಕಟಿವಕ್ಕೀರಾರುರಾಶಿಯುಂ ಪೆಸರಿಸುವರೊಲು || ||೨೫||
ಜೇಡ ಪೂರ್ವಸ್ನೇಹಮಿನಿಸು ದಾಕ್ಷಿಣ್ಯಮುಂ |
ಮಾಡಿದ ಸಿರಿಸ ಗಸರ ವಯಸಾದೊ ಡೊರ್ವರುಂ |
ನೋಡ ರಿವಿರುತ್ತಿರಂ ಗುಡು ಬಿಡಿಸು ವಾಸವಂ ಸುಡಿದ ಕಾಲಂ ನಡೆದುದು ||
ಕೂಡಿರ್ದ ಪಾಠ ದನುಬಂಧಮುಂ ಪರಿ ಧನದ |
ಕೊಡಲಿತನಂ ನೂಕು ಸಾಕೆಂದು ಬುಡಿ ಯುಂ |
ಮೂಡಿಸಿದ ಕುವರ್ಣಜಾಗೆಗೆ ನಾಲ್ಕುಪಕ್ಕದಾಣ್ಮರಂ ಪೆಸರಿಸುವ ನವರೊಳು ||೨೬||

ಮೊಳೆ ನೊಲೆಯೊ ಳೆಸೆವ ಸಸಿ ವದನದೊ ಳ್ಕುಡಿ ನೋಟ |
ಮೊಳೆ ಪರ್ಬು ತೋಳ್ಗಳೊ ಳ್ಬೆಳೆದುಬ್ಬು ಜಘನದೊಳ್ |
ಸೆಳೆ ನಡುವಿನೊಳ್ ಸುಳಿಕುರುಳ್ಗಳೊಳೊ ಗಯಿಸುವ ಪುಡಲಿಡಿದ ಸೌಂದರಮೊಳು ||
ತಳಿರಡಿಗಳೊ ಳ್ಮಗುಳ್ನಗೆಯೊ ಳಲರಕ್ಷಿ ಯೊ |
ಳ್ದಳೆದು ಸಲೆ ರಾಜಿಸುವ ತನುಲತೆಯೊ ಳೊಪ್ಪಿರ್ದ |
ೆಳವೆಣ್ಗ ಳಚ್ಚಪೊಸ ಜೌವನದೊಳಾವಗಂ ವಿಟಪೀವರಾಶ್ರಯದೊಳು || ||೨೭||
ದಾನ ಸಾಮಜ ಭೇದನೋದ್ದಂಡ ದುಗ್ರ ಪಂ |
ಚಾನನಂ ಗೆಲ್ವ ಚತುರೋಪಾಯಮಂ ಬಿಟ್ಟು |
ತಾನಕ್ಕಿ ಬಕ್ಕಿ ಕಡುದೈನ್ಯದಿಂದೀಗ ಮುಗ್ಧಾಂಗಮಂ ತಳೆದಿರ್ಪುದು ||
ಏನಿದಚ್ಚರಿಯೆಂದು ವಿಟನೊರ್ವಳಂ ಕೇಳ್ದೊ |
ಡಾನೀರೆ ನಗುತಮಬಲಾಶ್ರಯದೊಳಿರೆ ಮೇರು |
ಮಾನವನ ಕೈವಿಡಿತೆಗೊಳಗಪ್ಪುದೆಲೆಮರುಳೆ ನೀನರಿವುದಿಲ್ಲೆಂದಳು || ||೨೮||
ಕಲಹಂಸಗಮನೆ ಪೂರ್ಣೇಂದುಮುಖಿ ಚಾರುಮಂ |
ಗಳಗಾತ್ರೆ ಘನಸೌಮ್ಯಸೌಂದರವಿಲಾಸಿನಿ ವಿ |
ಮಲಗುರುಪಯೋಧರೆ ಸರಸಕವಿಸುತಪ್ರಮದೆ ಮಲ್ಲಿಕಾಮಂದಸ್ಮಿತೆ ||
ವಿಲಸದ್ಭುಜಂಗಸಂಗತೆ ಮದನಕೇತುಚಂ |
ಚಲನೇತ್ರೆ ಕೇ ಳ್ನಿನ್ನ ದೆಸೆಗಿದೆ ನವಗ್ರಹಂ |
ಗಳ ಪೆಸರಬಲಮಿನ್ನು ಸೋಲ್ದಪುದು ನಿನಗೆ ಜನಮೆಂದಳೊರ್ವ ಳ್ಸಖಿಯೊಳು ||೨೯||
ಇನ್ನು ಹಿಡಿಯದಿರು ಸಾಕ್ಸಾಳ ಪನ್ನಗವೇಣಿ |
ಮುನ್ನಾನೆ ಸಿಕ್ಕಿದುದ ನೋಡಿದಾ ಶಶಿವದನೆ |
ಯೆನ್ನ ಮನೆಯೊ ಳ್ಪೋದು ದಕಟಕಟ ನಿನ್ನ ಕೈಗುದುರೆ ಪೊಂಗೊಡನೊಲೆಯುಳೆ ||
ನಿನ್ನ ತೇವರ್ಪಜ್ಜೆಗೆಟ್ಟುದು ಸರೋಜಾಕ್ಷಿ |
ನಿನ್ನಾಟ ಕಟ್ಟೆ ತರಸಂಜೆ ನಡೆಯುಳೆ ಪೋಗು |
ನಿನ್ನ ಚದುರಂಗಮಂ ಗೆಲ್ದೆನೆಂದೊರ್ವನಾಡುತೆ ಮುನಿದನಿಸಿಯುಳೊಡನೆ || ||೩೦||
ಅಚ್ಚಪಳದಿಯ ಕಾಯ ಜೋಡ ಮೇಲೊತ್ತದೊಡೆ |
ನಚ್ಚಿರ್ದ ಕೈಯ ಕರಿದಿನ ಹಿಂಡ ಹಿದಿಯದೊಡೆ |
ಮೆಚ್ಚಿನಾಟಕೆ ನಿಾರಿ ಬಂದ ಕೆಂಪಿನ ಹಣ್ಣ ಸಂಡಲೆದು ಬಿಡದಿರ್ದೊಡೆ ||
ಬಚ್ಚನಾಲಗೆಯೆ ಬೀಳೆಂದು ಹಾಸಂಗಿಯಂ |
ಪಚ್ಚಿಯ ವಿದೂಷಕ ಸುರುಳ್ಚಿದಂ ಬಾಲೆಯರ |
ಮಚ್ಚಿಸುವ ಕಟಕಿವಾತುಗಳ ಜಾಣ್ಮೆಗಳಿಂದೆ ಪಗಡೆಯಾಡುವನೆಸವಮೊಳು || ||೩೧||
ಕೈಗೆ ವೊಲೆಗಳ ಬಿಣ್ಪು ಕಣ್ಗೆ ಚೆಲ್ವಿನ ಸೊಂಪು |
ಬಾಯ್ಗೆ ಚೆಂ ದುಟಿಯಿಂಪು ಕಿವಿಗೆ ನುಡಿಗಳ ಸುಣ್ಪು |
ಸುಯ್ಗೆ ತನುವಿನ ಕಂಪು ಸೋಂಕಿಗಣ್ಪಿನ ತಂಪು ಚಿತ್ತಕೆ ಸೊಗಸಿನಲಂಪು ||
ನ್ಮೈಗೂಟದೊಳ್ಮುನಿಪೆಳೆವೆಣ್ಗಳೆಸೆದಿರ್ದ |
ರ್ಕೈಗಣೆಗ ಳಿಸುಗೆ ಗಳುಕದ ಯೋಗಿನಿಕರಮಂ |
ಕ್ಕೈಗೆಡಪಲೆಂದಂಗಜಂ ಪೂಜೆಗೈವ ಸಮ್ಮೋಹನಾಸ್ತ್ರಂಗಳೆನಲು || ||೩೨||

ಇವಳ ಮನವೇಕಿವಳ ತುಂಗಕುಚದಂತಾದು |
ದಿವಳ ಸನ್ಮಾನಮೇಕಿವಳ ನಡೆಯಂತಾದು |
ದಿವಳೊಲವಿದೇಕಿವಳ ಮಧ್ಯದಂತಾದುದಿರ್ದಪೊಲೀಗಳಿನ್ನೆಡೆಯೊಳು ||
ಇವಳ ನುಡಿಯೇಕಿವಳ ಕುರುಳಂಪವಾದುದಿಂ |
ದಿವಳರಿಯಳಿವಳ ತಾಯ್ಬೋಧಿಸಿದಳಾಗಬೇ |
ಕಿವಳನೆಂದವಳ ಕಣ್ಮಂತಾಗಿ ನಿಜಸಖನೊಳೋರ್ವ ನಾಲೋಚಿಸಿದನು || ||೩೩||
ಸವಿನೋಟದೊಳ್ಸಂಚು ನಗೆಯೊಳ್ಪ್ರಪಂಚು ಸೊಗಯಿ |
ಸುವ ಬೇಟದೊಳ್ಕೃತಕವೊಲವಿನೊಳ್ಗತಕಮುಸಿ |
ರುವ ಲಲ್ಲೆಯೊಳ್ಕೊಂಕು ಬಗೆಯೊಳ್ಕಳಂಕು ಸವಿಗಲೆಗಳೊಳ್ಸಲೆ ವಂಚನೆ ||
ತವಕದೊಳ್ಪುಸಿಯಳವು ತಕ್ಕೈಯೊಳ್ಕಳವು ಮಿಾ |
ರುವನೇಹದೊಳ್ನುಸುಳು ಕೂಟದೊಳ್ಮಸುಳು ಸೇ |
ರುವೆಯಾಗಿ ನೆಲೆಗೊಂಡ ಗಣಿಕೆಯರ ತಂಡವಿಾತೆರದೆಚೆಲ್ವಂ ಪಡೆದುದು || ||೩೪||
ಅಕ್ಕಜವ ಮಾಡದಿರಿವಂ ನಿನ್ನ ಮೈವಳಿಗೆ |
ತಕ್ಕನಲ್ಲಂ ನೀನೊಲಿವಗೊಡವೆಯೇಕಿನ್ನು |
ಕಕ್ಕುಲಿತೆ ಜೇಡಿವನ ಕೂಟಮಂ ಪರಿದಬಳಿಕವನಲೇಸಾವುದುಂಟು ||
ಟಕ್ಕಿಪೊಡೆ ಪೊನ್ನಿಲ್ಲದಾತನಿವನಾಗನಿದಿ |
ರಿಕ್ಕದಿರ್ಸಾರ್ಕೆಂದು ಮುಳಿಸಿನೊಳ್ವಿಟನ ಚಿ |
ತ್ತಕ್ಕೆ ಸೊಗಸೆನೆ ಸೂಳೆಗವಳದೂತಿಕೆ ನುಡಿದವಳವನಂ ಜರೆದು ಪೊಗಳ್ವೊಲು ||೩೫||
ತಾಂ ತವೆ ಕೃತಾಂತರಿಪುನೇತ್ರದಿಂದುರಿದ ವೃ |
ತ್ತಾಂತಮಂ ನೆನೆಯದೆ ಲತಾಂತಶರನಗಲ್ದವನಿ |
ತಾಂತರ್ನಿತಾಂತವನಮಂ ಸುಡುವೆನೆಂದು ಪೊರಮಟ್ಟು ನಡೆತಪ್ಪನಂತೆ ||
ಕಾಂತೆ ನಿನ್ನೇಕಾಂತದಿಂ ಪವಡಿಸುವಚಂದ್ರ |
ಕಾಂತಭವನದೊಳಗೇಕಾಂತದೊಳಿಹಂ ನಿನ್ನ |
ಕಾಂತನೇಕಾಂತರಂಗದೊಳೆಣಿಕೆಯೆಂದೋರ್ವ ಚಪಳೆ ತರಳೆಗೆ ನುಡಿದಳು || ||೩೬||
ತೋಟಿಗೆಳಸದರನೊಯ್ಯೊಯ್ಯನೆ ಮನೋಭವನ |
ವಾಟಿಗೊಳಗಾಗಿ ನಿಲಿಸುವ ಮದನಕಲೆಗಳಂ |
ಪಾಟಿಸುವ ಬಗೆಯನೆಳೆಯರ್ಗೆ ಕಲಿಸುವನಾಯಕಿಗೆ ಧನಯುತರನೊಲಿಸುವ ||
ತಾಟ ಗಂಟಿಕ್ಕಿ ಸಂಧಿಗಳನೆಸಗುವ ಮುಳಿಯೆ |
ನೋಟಿಗೊರ್ವನನರಸಿ ಸೊಗಸುಬಲಿಸುವ ಚಾರು |
ಜೇಟಿಯುಚರ್ಲಿಸುವರನಂಗಶಬರನ ಬೇಂಟೆವೋಹಿನ ಮೃಗಂಗಳಂತೆ || ||೩೭||
ಇಂತೆಸೆವ ಗಣಿಕಾಸಮೂಹಮಂ ನೋಡುತ |
ಲ್ಲಿಂ ತಳರ್ದನಿಲಜಂ ಬರೆ ಮುಂದೆ ನಾನಾದಿ |
ಗಂತದಿಂ ಮುರಹರನ ಕೀರ್ತಿಯಂ ಕೇಳ್ದೊದನಿದಿಷ್ಟಾರ್ಥಮಂ ಪಡೆಯಲು ||
ತಂತಮ್ಮ ವಿದ್ಯಾವಿನೋದಮಂ ತೋರಿಸುವ |
ಸಂತಸದೊಳೈತಂದು ನೆರೆದಿರ್ದ ಕೋವಿದರ |
ತಿಂತಿಣಿಯರಾಜಿ ರಾಜಿಸರಾಜಗೇಹದ ಸಮಿಾಪವೆಡೆಯಂ ಕಂಡನು || ||೩೮||

ತಗರ್ವೆಣಗಿಸುವ ಸಿಪಿಲೆಗಚ್ಚೈಸುವ ಕೋಳಿಗಾ |
ಳಗವ ಕಾದಿಸುವ ಕರಿತುರಗದೇರಾಟವಂ |
ಮಿಗೆ ತೋರಿಸುವ ನೆತ್ತಪಗಡೆಯೊಳ್ಬಿನದಿಸುವ ಜೂಜುಗಳನೊಡ್ಡಿ ನಲಿವ ||
ಬಗೆಬಗೆಯ ರಾಜಪುತ್ರರ ತನುವಿಲೇಪನಾ |
ದಿಗಳೊರಸೊರಸಿನಿಂದುದಿರ್ದಪರಿಮಳದ ಧೂ |
ಳಿಗಳನಲ್ಲಿರ್ದ ಸೊಕ್ಕಾನೆಗಳ್ಮೊಗೆದೊಗೆದು ಮಿಗೆ ಚೆಲ್ಲಕೊಳುತಿರ್ದುವು || ||೩೯||

ತನ್ನೊಳಿರ್ದಚ್ಯುತಂ ದ್ವಾರಕೆಗೆ ಬಂದಿರ |
ಲ್ಮನ್ನ ತಾನೈತಂದು ನಿಂದುದೋ ರಾಜಿಸುವ |
ರನ್ನಂಗಳೊಡನೆ ಪಾಲ್ಗಡಲೆನಲ್ಮಣಿಸೌಧ ಕಾಂತಿಗಳ್ಕಣ್ಗೊಳಿಸುವ ||
ಪನ್ನಗಾರಿಧ್ವಜನ ರಾಜಗೃಹಮಂ ಕಂಡು |
ಸನ್ನುತ ವರೂಥದಿಂದಿಳಿದು ಮೆಯ್ಯಿಕ್ಕಿ ಸಂ |
ಪನ್ನಮತಿಪವನಜಂ ತಳರ್ದನಲ್ಲಿಗೆ ವಿಪುಲಪುಲಕೋತ್ಸವಂ ಪೊಣ್ಮಲು || ||೪೦||

ಮಾರನಂ ಪಡೆದಚೆಲ್ವಿಂತಿರೆಯ ನಾಳ್ದ ಸಿರಿ |
ವಾರಿಜಾಸನ ಮುಖ್ಯ ದೇವರ್ಕಳಂ ಪೊರೆವು |
ದಾರಂ ತನಗೆ ಸಾಲದೆಂದು ಭೂಪಾಲಕರ ಭಾಗ್ಯಮಂ ತಳೆದನೆಂಬ ||
ನೀರದಶ್ಯಾಮ ನರಮನೆಯೆಂದೊ ಡದರ ವಿ |
ಸ್ತಾರಮಂ ಬಣ್ಣಿಸುವೊ ಡೆನ್ನಳವೆ ಸೇಳೆನ |
ಲ್ಮಾರುತಿಯ ಕಣ್ಗೆ ರಮಣೀಯಮಾದುದು ಬಹುಳಮಣಿ ತೋರಣ ಪ್ರಭೆಗಳು ||೪೧||

ಪಾರಿಜಾತಪ್ರಸವ ಪರಿಮಳಕೆ ಗಗನದೊ |
ಳ್ಸೇರಿ ದಳಿಮಾಲೆಗಳೆ ಸುಜ್ಜ್ವಲಪ ನೀಲಮಣಿ |
ತೋರಣ ಪ್ರಭೆಗಳಂ ಬೇರ್ಪಡಿಸ ಲರಿ ದೆನ ಲ್ಮೆರೆವ ಹರಿ ಯರಮನೆಯನು ||
ಸಾರಿದಂ ಪವನಜಂ ಬಾಗಿಲೊ ಳ್ತನ್ನ ಪರಿ |
ವಾರಮಂ ನಿಲಿಸು ತೊಳಪೊಕ್ಕನೇಂ ಸಲುಗೆಯೊ ಮು |
ರಾರಿ ಯೆಡೆಯೊ ಳ್ದ್ವಾರಪಾಲಕ ರ್ತಡೆಯ ರೊರ್ವರು ಮಂತರಾಂತರದೊಳು ||೪೨||

ಜನಪಕೇ ಳಾ ಸಮಯ ಕಸುರಾರಿ ಕನಕಭಾ |
ಜನ ರತ್ನದೀಪ್ತಿಗಳ ಸಾಲ್ಗಳಿಂದೆಸೆವ ಭೋ |
ಜನಶಾಲೆಗೈತಂದು ಬಾಂಧವರ್ವೆರೆಸಿ ಕುಳ್ಳಿರ್ದು ದಿವ್ಯಾಸನದೊಳು ||
ಜನನಿಯು ದಣಿಸನಿಕ್ಕಿ ಸವಿಗೊಳಿಸೆ ಚಮರ ವ್ಯ |
ಜನಮಂ ಪಿಡಿದು ರಾಣಿಯ ರ್ಕೆಲದೊಳಿರೆ ಸುರಂ |
ಜನ ಕಥಾಲಾಪ ರಸದಿಂ ಷಡ್ರಸಾನ್ನದಾರೋಗಣೆಯೊಳಿರುತಿರ್ದನು || ||೪೩||

ಎಸೆವ ಪೊಂಬರಿವಾಣ ಮಿಸುನಿವಟ್ಟಲ್ಗಳೊ |
ಳ್ಮಸುಪ ಶಾಲ್ಯೋದನಂ ಸೂಪ ಘೃತ ಭಕ್ಷ್ಯ ಪಾ |
ಯಸ ಪರಡಿ ಮಧು ಶರ್ಕರಾಮಿಷ ಪಳಿದ್ಯಸೀಕರಣೆ ಶಾಕ ತನಿವಣ್ಗಳ್ ||
ರಸ ರಸಾಯನ ಸಾರ್ಗಳುಪ್ಪುಗಾಯ್ವಾಳುಕಂ |
ಕ್ರಸರಿ ಕಚ್ಚಡಿ ಪಾಲ್ಮೊಸರ್ಗಳಿವು ಬಗೆಗೊಳಿಸಿ |
ಪೊಸತೆನಿಸಿರಲ್ಸವಿದನಚ್ಯುತಂ ಪೇಸಕಿ ಯಶೋದೆ ಯರ್ತಂದಿಕ್ಕಲು || ||೪೪||

ಗುಪ್ತದಿಂ ದಮರ ರ್ಗಮ್ಯುತನ ನುಣಿಸಿದ ನಿತ್ಯ ।
ತೃಪ್ತಂ ಸಕಲಮುಖಂಗಳ ಹವಿರ್ಭಾಗಮಂ ।
ಸಪ್ತಾರ್ಚಿ ಮುಖದಿಂದೆ ಕೈಕೊಂ ಡದರಫಲವ ನೂಡಿಸುವ ಪರಮಾತ್ಮನು ॥
ಕ್ಲುಪ್ತಮೆನಿಸುವ ರಾಜಭೋಜ್ಯದೊಳ್ ಗಾವ್ರದಂ ।
ಲುಪ್ತಮಾಗದವೊ ಲಾರೋಗಣೆಯ ನೈದೆ ಲೋ ।
ಲುಪ್ತಿಯಿಂ ಮಾಡುತಿರ್ದಂ ತನ್ನ ಮಾನುಷ್ಯಲೀಲೆಗಿದು ಸಾರ್ಥಮೆನಲು ॥ ॥೪೫॥

ಹಾರ ನೂಪುರ ಕಂಕಣಾದಿ ಭೂಷಣ ಝಣ ।
ತ್ಕಾರ ಧ್ವನಿಗಳ ಮೇಲುದಿನೊಳ್ಪೊದಳ್ದ ಕುಚ ।
ಭಾರದಿಂ ನಸುವಾಗಿದಂಗಲತೆ ಲಹರಿಗಳ ಸಿರಿಮೊಗಕೊಲಿವ ಕಂಗಳ ॥
ಸ್ಮೇರೊಲ್ಲಸದ್ರುಚಿರ ದಂತಪಂಕ್ತಿಗಳ ಶೃಂ ।
ಗಾರ ಸರಸೋಕ್ತಿಗಳ ವಿನುತಾಷ್ಟಮಹಿಷಿಯ ।
ರ್ಚಾರು ಚಾಮರ ತಾಲವೃಂತಮಂ ಪಿಡಿದಿರ್ದರಚ್ಯುತನ ಕೆಲಬಲದೊಳು ॥ ॥೪೬॥

ಕದ್ದು ಮನೆಮನೆವೊಕ್ಕು ಬೆಣ್ಣೆ ಪಾಲ್ಗೆನೆಗಳಂ ।
ಮೆದ್ದು ಗೋವಳರ ಮೇಳದ ಕಲ್ಲಿಗೂಳ ಕೈ ।
ಮುದ್ದೆಯಂ ತೆಗೆದುಂಡು ತುರುಗಾವ ಪಳ್ಳಿಯಂ ಬಿಟ್ಟು ಬಳಿಕೆರವಿಲ್ಲದೆ ॥
ಹೊದ್ದಿ ಪಾಂಡವರ ನೋಲೈಸ ಲಾದುದು ಭಾಗ್ಯ ।
ಮಿದ್ದಪುವು ರಾಜಭೋಜ್ಯಂಗಳಿವು ಪಡೆದವ ।
ರ್ಮೃದ್ವಗ್ಗೈದಪ ರೂಟ ವೆಡೆಗಳೊಳ್ ಚೋದ್ಯಮೆಂದಳ್ ಸತ್ಯಭಾಮೆ ನಗುತೆ ॥೪೭॥

ಬರಿದೆ ಗಳಹದಿ ರತ್ತೆಮಾವದಿ ರಿರಲ್ಕೆ ನೀ ।
ನರಿಯಲಾ ತನ್ನ ಬಂಧನ ಮೀತ ನುದಯಿಸ ।
ಲ್ಪರಿದು ದೀತನೆ ಜಗದ್ಗುರು ಕಣಾ ಪಾಲಿಸುವ ನಿಂದ್ರಾದಿನಿರ್ಜರರನು ॥
ಕುರುಪಿಡ ಲ್ಬಹುದೆ ಮಾನವನೆಂದು ಕೃಷ್ಣನಂ ।
ಜರಿಯೆ ನೀ ನೇಸರವ ಳೊಡನಾಡಿತನ ದಿಂದೆ ।
ಬೆರೆಯಬೇ ಡತ್ತ ಹೋಗೆಂದು ದೇವಕಿ ಸತ್ಯಭಾಮೆಯಂ ಗರ್ಜಿಸಿಡಳು ॥ ॥೪೮॥

ನಿಮ್ಮ ಬಂಧನವ ಬಿಡಿಸಿದವಂಗೆ ತನೆ ಬಂಧ ।
ನಮ್ಮಗು ಳದೇಕಾಯ್ತು ದಿವಿಜರಂ ಪೊರೆವವಂ ।
ಚಮ್ಮಟಿಗೆ ವಿಡಿಯಲೇತಕೆ ನರನ ಕುರುಹುಗಾಣಿಸದವಂ ಪೆಳವಿಗೊಲ್ದು ॥
ಸುಮ್ಮನೇತಕೆ ಸಿಕ್ಕಿದಂ ಜಗದ್ಗುರುವೆನ ।
ಲ್ನಮ್ಮಜಗದೊಳಗಿಹಿರಿ ನೀವು ನಿಮಗೆಯು ಗುರುವೆ ।
ನಮ್ಮ ನಂಜಿಸದೆ ನೀಂ ತಿಳಿಪುದೆಂದ ಳ್ದೇವಕಿಗೆ ಸತ್ಯಭಾಮೆ ನಗುತ ॥ ॥೪೯॥

ಸತ್ಯಭಾಮಾದೇವಿ ನುಡಿದ ಕಟಕಿಯ ಮಾತಿ ।
ಗತ್ಯಂತ ಹರ್ಷಮಂ ತಾ ಳ್ದದಕೆ ನಸುನಗುತೆ ।
ಪ್ರತ್ಯುತ್ತರಂ ಗುಡುವೆನೆಂ ಬನಿತರೊಳ್ ಭೀಮಸೇನ ನೈತರುತಿಹುದನು ॥
ಸೃತ್ಯಕಿಚ್ಛಿಸಿಮೊಡೆ ಭಾವಮೈದುನತನದ ।
ಕೃತ್ಯದಿಂ ದಚ್ಯುತಂ ಸೂಚಿಸ ಲ್ತಡೆವನಾ ।
ಚಿತ್ರಮು ಲ್ಲೊಳ ಪುಗುವೊ ಡಾರೋಗಣೆಯ ಸಮಯಮೆಂದು ಸೈರಂಧ್ರಿಬಂದು ॥೫೦॥

ಆರೋಗಣೆಯ ಸಮಯಮಾರ್ಗೆ ಭೂತಂ ಪೊಯ್ದು |
ದಾರ ನೀಮನೆಯೊಳಿಂ ತೀಗಳೀತಕೆ ಪೌನ |
ಮಾಮಮಿಲ್ಲವೆ ಪೊರೆಯೊಳಿಹಳೆ ದೇವಕಿ ಸತ್ಯಭಾಮೆಗಾವುದುಮಿಲ್ಲಲ ||
ಆರೆನ್ನನಿಂತು ತಡೆಸಿದರಾಯ್ತು ದುರ್ಭಿಕ್ಷ |
ಮೂರೊಳ್ಭಳಿಯದೆ ಧಾನ್ಯಂ ಕರೆಯದೇ ವೃಷ್ಟಿ |
ನಾರಿಯರ ನಿನಿಬರಂ ಕಟ್ಟಿಕೊಳಲೇಕೆ ಬಿಡಲೆಂದು ಮಾರುತಿ ನುಡಿದನು || ||೫೧||

ಭೀಮನಾಡಿದ ನುಡಿಯ ಕೇಳಿ ರುಕ್ಮಿಣಿ ಸತ್ಯ |
ಭಾಮೆಯರ ಮೊಗನೋಡಿ ನಸುನಗುತೆ ಮುರಹರಂ |
ತಾ ಮತ್ತೆ ರಭಸದಿಂ ಭೋಜನಂಗೈಯ ತೊಡಸೊಡನೆ ಧರ್ರನೆ ತೇಗಲು ||
ತಾಮಸಮಿದೇಕೆ ನಾಂ ಬಂದವನೊರ್ವನೆ ಮುಳಿದೊ |
ಡೀಮೂಜಗಂ ನಿನ್ನ ಬಾಯ್ಗೊಂದು ತುತ್ತಾಗ |
ದೀ ಮನುಜಗಿನುಜರಂ ಬಲ್ಲ ರಾರೆನ್ನ ನುಳುಹೆಂ ದನಿಲಜಂ ಚೀರ್ದನು || ||೫೨||

ಬಿಡದೆ ಕಳವಿಂದೆ ಲೋಗರ ಮನೆಗಳಂ ಪೊಕ್ಕು |
ತುಡುತಿಂದವನ ಭೋಜನಕ್ಕೆ ಮೃಷ್ಟಾನ್ನಮಾ |
ದೊಡೆ ಕೆಲಬಲಂಗಳಂ ನೋಡುವನೆ ಗೋವಳಂ ಗರಸುತನ ಮಾದಬಳಿಕ ||
ಪೊಡವಿಯಂ ಕಂಡು ನಡೆವನೆ ಮುಳಿದು ಮಾವನಂ |
ಬಡಿದವಂ ನಂಟರ ನರಿವನೆ ಮೊಲೆಗೊಟ್ಟ ಳಸು |
ಗುಡಿದವಂ ಪುರುಷಾರ್ಥಿಯಾಡಪನೆ ನಾವಜ್ಞರೆಂದು ಮಾರುತಿ ಜರೆದನು || ||೫೩||

ದೇವತನಮಂ ಬಿಟ್ಟು ನರನಾದವಂಗೆ ಬಳಿ |
ಕಾವ ಗೌರವ ಮಿಹುದಿವಂ ನಾಚುವನೆ ಸಾಕು |
ನಾಪೀತನಂ ಕಾಣ್ಬುದುಚಿತಮಲ್ಲೆಂದು ಭೀಮಂ ನಿಭಾಡಿಸಲತ್ತಲು ||
ಶ್ರೀವರಂ ನಸುನಗೆಯೊಳಾಗಳರಿದಂದದಿಂ |
ದಾವಾಗ ಬಂದ ನನಿಲಜ ನಿತ್ತ ಕರೆ ತಡೆದ |
ನಾವ ಳೀತಕೆ ಕೋಪಮೆನೆ ಮತ್ತೆ ಪವನಸುತ ನೊಳ ವುಗುತ್ತಿಂತೆಂದನು || ||೫೪||

ದೇವ ನಿಮ್ಮರ್ಜುನನ ಸಲುಗೆ ನಮಗುಂಟೆ ಸಂ |
ಭಾವಿಸುವ ರಿಲ್ಲೆಮ್ಮನಿಲ್ಲಿ ನಿಲಸಿದರೆನ |
ಲ್ಕಾವು ತಡೆಸಿದೆವಿತ್ತ ಬಾ ಯೆನುತೆ ಸೆರಗುವಿಡಿ ದೊಡನೆ ಕುಳ್ಳಿರಿಸಿಕೊಂಡು ||
ಆವಿವಿಧಭೋಜ್ಯದಿಂ ದಾರೋಗಿಸಿದ ಬಳಿಕ |
ತೀವಿದ ಸುಗಂಧ ಕರ್ಪೂರ ತಾಂಬೂಲ ವು |
ಪ್ಪಾವಳಿಗಳಿಂದೆ ಸತ್ಕರಿಸಿದಂ ಭೀಮನಂ ಸುರಪುರದ ಲಕ್ಷ್ಮೀಶನು || ||೫೫||

ಸಂಧಿ ೬ ಕ್ಕೆ ಪದ್ಯಗಳು ೩೨೧ ಕ್ಕೆ ಮಂಗಳಮಸ್ತು.



# ಏಳನೆಯ ಸಂಧಿ.

ಸೂಚನೆ॥ ಅಧ್ವರಕೆ ಯಾದವರ ಗಡಣದಿಂ ದಾನವ ಕು ।
ಲಧ್ವಂಸಿ.ಹಸ್ತಿನಾಪತಿಗೆ ಬಿಜಯಂ ಗೆಯ್ಯು ।
ತಧ್ವದೊ ಳ್ಸಾಗಿ ದನುಸಾಲ್ವನಂ ಗೆಲ್ದು ಪಾಂಡವರ ನುರೆ ಪಾಲಿಸಿದನು ॥

ಘೂರಮಣ ಕೇ ಳನಿಲ ತನಯನಂ ಕೂಡಿಕೊಂ ।
ಡಾರೋಗಿಸಿದಬಳಿಕ ನವಕುಸುಮ ಗಂಧ ಕ ।
ರ್ಪೂರ ತಾಂಬೂಲಮಂ ಕೊಟ್ಟು ಕೃತವರ್ಮನಂ ಕರೆಸಿ ಧರ್ಮಜನ ಮಖಕೆ ॥
ವಾರಣ ನಗರಿ ಗೀಗ ನಮ್ಮೊಡನೆ ನಡೆತರಲಿ ।
ದ್ವಾರಕೆಯೊಳಿರ್ದ ಜನರೆಲ್ಲರುಂ ಪೊಯ್ಸು ಗೂ ।
ಡಾರಮಂ ಪೊರಗೆ ಸಾರಿಸು ಪುರದೊಳೆಂದು ಮಧುಸೂದನಂ ನೇಮಿಸಿದನು ॥ ॥೧॥
ವಸುದೇವ ಹಲಧರ ರ್ಪೊಳಲಿನಲ್ಲಿರ್ದು ಪಾ ।
ಲಿಸ ಲುಳಿದ ಪ್ರದ್ಯುಮ್ನ ಗದ ಸಾಂಬ ನನಿರುದ್ಧ ।
ನಿಶಿತ ಶಠ ನಕ್ರೂರ ಸಾತ್ಯಕಿ ಪ್ರಮುಖ ಯಾದವರೆಮ್ಮ ಕೂಡೆ ಬರಲಿ ॥
ಒಸಗೆ ಮಿಗೆ ದೇವಕಿಯೊಡನೆ ತೆರಳ ಲರಸಿಯ ।
ರ್ಪೊಸತೆನಿಪ ವಸ್ತುವಂ ತೆಗೆಸು ಭಂಡಾರದಿಂ ।
ದೆಸೆವ ಪುರಜನ ಪರಿಜನ ಸ್ತ್ರೀಯ ರೈದಲೆಂ ದಸುರಾರಿ ನೇಮಿಸಿದನು ॥ ॥೨॥
ಬಳಿಕ ಕೃತವರ್ಮಕನ ನೇಮದಿಂ ನಗರ ದೊ ।
ಳ್ರೊಮ್ಮಳಗಿಮವು ನಿಸ್ಸಾಳಕೋಟಿಗ ಳ್ಪೊರಮಟ್ಟು ।
ದುಳಿಯದೆ ಸಮಸ್ತಜನಮೈದಿಮವು ದೇವಕಿ ಯಶೋದೆಯರ ದಂಡಿಗೆಗಳು ॥
ಕೆಳದಿಯ ರ್ವೆರೆಸಿ ರುಕ್ಮಿಣಿಸತ್ಯಭಾಮಾದಿ ।
ಲಲನೆಯರ ಪಲ್ಲಕ್ಕಿಗಳ ಸಾಲ್ಗಳಂದು ಕೆಲ ।
ಬಲದ ಸುಯ್ದಾನದಿಂ ತೆರಳಿಮವು ಕೋಶದ ಸುವಸ್ತುಗಳನೆತ್ತಿಸಿದರು ॥ ॥೩॥
ಸುತ ಸೋದರ ಜ್ಞಾತಿ ಮಿತ್ರ ಬಾಂಧವ ಪುರೋ ।
ಹಿತ ರೊಡನೆ ಪೊರಮಟ್ಟನಸುರಾಂತಕಂ ಸಮಾ ।
ವೃತ ವಟುಗಳಿಂದೆ ಸನ್ನಿಹಿತ ಶಾಸ್ತ್ರಂಗಳಿಂ ದ್ವಿಜರಾಯುಧಂಗಳಿಂದೆ ॥
ಚತುರಂಗಬಲದಿಂದೆ ಭೂಭುಜ ದ್ರವ್ಯದಿಂ ।
ದತುಳ ಸಂಭಾರದಿಂ ವೈಶ್ಯರೈದಿತು ಶೂದ್ರ ।
ವಿತತಿ ನಾನಾಜಾತಿಗಳ ನೆರವಿಯಿಂ ತಮ್ಮ ತಮ್ಮ ವಿನಿಯೋಗದಿಂದೆ ॥ ॥೪॥
ಬಟ್ಟಿಗಳ ವೇಸರದ ಪೊರೆಯಾಳ ಕಂಬಿಗಳ ।
ಕೊಟ್ಟಿಗೆಯ ಕೊಲ್ಲಾರ ಬಂಡಿಗಳ ಮೇಲೆ ಸರ ।
ಕಿಟ್ಟಣಿಸಿ ಸೂಕಿದುದು ಗೋ ಮಹಿಷಿ ಮೇಷಿ ಕುಲದಾರಿ ಬಿಡದೆಯ್ದಿ ತೊಡನೆ ॥
ದಟ್ಟಿಸಿದು ವಾನೆಕುದುರೆಯ ರಥದ ಸೇನೆ ಪೊರ ।
ಮಟ್ಟುದಂದಣದ ಪಲ್ಲಕ್ಕಿಗಳ ರಾಜಿ ಸಾ ।
ಲಿಟ್ಟು ನಡೆಮವು ಛತ್ರ ಚಾಮರ ಪತಾಕೆ ಗಳ್ಕೈರಳಿತು ಜನಂ ಮುದದೊಳು ॥ ॥೫॥

ವಿಟರ ಮೇಳಂಗಳಿಂ ಚೇಟಿಯರ ಗಡಣದಿಂ |
ನಟ ವಿದೂಷಕ ವಂದಿ ಗಾಯಕರ ತಂಡದಿಂ |
ಕಟಕಿ ಧ್ವನಿ ವ್ಯಂಗ್ಯ ಸರಸೋಕ್ತಿಗಳ ಬೆಡಗುಗಳ ಬಯಲ ನಗೆ ಸೋಟಂಗಳ ||
ನಟನೆಗಳ ನಡೆಯ ಭಂಗಿಯ ಬರಿಯ ಜೇಟವತಿ |
ಕುಟಿಲಾಂಗದೊಲಪುಗಳ ವಾರನಾರೀಜನಂ |
ಕಟಕಮೊಳ್ಕಾಮುಕರ ನಡೆಗೆಡಿಸು ತೊಗ್ಗಿನಿಂ ಪೊರಮಟ್ಟು ಬರುತಿರ್ದುದು || ||೬||
ನಾಗಪತಿಗಸದಳಂ ಕಮಠಂಗರಿದು ದಿಶಾ |
ನಾಗತತಿ ಗಳವಲ್ಲ ಧರಿಸ ಲರಿದೆಂಬಂತೆ |
ನಾ ಗಣಿಸಲರಿಯೆನಿದು ಪೊಸತೆನಲ್ಪಟಹ ನಿಸ್ಸಾಳ ಕಹಳಾರವದೊಳು ||
ಸಾಗರದ ಮಧ್ಯದಿಂದೆದ್ದುದೋ ಮತ್ತೊಂದು |
ಸಾಗರಂ ಪೇಳೆನ ಲ್ಕಖಿಳ ಯಾದವ ಕಟಕ |
ಸಾಗರಂ ದ್ವಾರಕಾನಗರಮಂ ಪೊರಮಟ್ಟು ನಡೆಗೊಂಡುದೇವೇಳ್ವೆನು || ||೭||
ಕಳುಪುತ್ತೈತಂದ ವಸುದೇವ ಬಲಭದ್ರರಂ |
ಬಳಿಕ ವಂದಿಸಿ ಪರಕೆಗೊಂಡು ಸಂತೈಸಿ ನಿಜ |
ನಿಳಯರಕ್ಷೆಗೆ ನಿಲಿಸಿ ಭೀಮನಂ ಬೀಳ್ಕೊಳಿಸಿ ಸಿತಹಯಾರೂಢನಾಗಿ ||
ಉಳಿದ ಯಾದವರೆಲ್ಲರಂ ಕೂಡಿಕೊಂಡು ಮುಂ |
ದಳೆದು ಮಧುಸೂದನಂ ಮಧ್ಯಮಾರ್ಗದೊಳೊಂದು |
ಕೊಳನಿರಲ್ಕಲ್ಲಿ ಬೀಡಂಬಿಡಿಸಿ ನಸುನಗುತೆ ರುಕ್ಮಿಣಿಯೊಳಿಂತೆಂದನು || ||೮||
ರಾಜಮುಖಿ ನೋಡೀ ಸರೋವರದ ಪದ್ಮಿನಿಗೆ |
ರಾಜಹಂಸಕ್ರೀಡೆ ಪುನ್ನಾಗಕೇಳಿ ವಿ |
ಭ್ರಾಜಿತ ಮಧುಪ ಗೋಷ್ಠಿ ಸಂದಪುದು ರವಿಗೆ ತಾನರಸಿಯಾದಪಳದೆಂತೊ ||
ಸ್ತ್ರೀಜನಕೆ ಸಹಜಮಿದು ಮೇಲೆ ಕರ್ದಮಜಾತೆ |
ಮಾಜುವ ಳಿದೆಯೊಳಿರ್ದ ಕೃಷ್ಣತೆಯ ನಿದು ಜಗಕೆ |
ಸೋಜಿಗವೆ ಚಂಚಲೆಯಲಾ ಪತಿಯನೆಣಿಸುವಳೆ ಪೇಳೆಂದೊ ಡಿಂತೆಂದಳು || ||೯||
ದೇವ ನೀಂ ಪದ್ಮಿನಿಗೆ ಪಳಿವನಾರೋಪಿಸುವ |
ದಾವಸಮ್ಮತಿ ರಾಜಹಂಸ ಪುನ್ನಾಗ ಮಧು |
ಪಾವಳಿಯ ನೋವಲಾಗದೆ ಪಾತೆ ಮಕ್ಕ ಳೊಡಗೂಡಿರ್ದೊಡೇಂ ಧರೆಯೊಳು ||
ಜೀವನಂ ನಿಂದೊಡಾದುದು ಪಂಕಮಿಲ್ಲಿ ತಾ |
ನಾವಿರ್ಭವಿಸಿದೊಡೇಂ ಕೃಷ್ಣ ಹೃದಯಕೆ ದೋಷ |
ಮಾವು ದಾಣ್ಮಂಗೆ ನಡನಡುಗಿದೊಡೆ ಚಂಚಲೆಯೆ ನಾವರಿಯೆವಿದನೆಂದಳು || ||೧೦||
ಪುರುಷನೊರ್ವಂಗೆ ನಾರಿಯರುಂಟು ಪಲಬರೀ |
ಧರೆಯೊಳಂಗನೆಗೆ ಪತಿಯೊರ್ವನೇ ಗತಿಯೆಂಬ |
ಪರಿವಿಡಿಯ ನರುಹಿಸುವೊಡಾವಿರ್ವರಲ್ಲದೊರ್ವರು ಮಿಲ್ಲಮಿನ್ನು ಬರಿಪೆ ||
ಸರಸಿಯೊಳಗಣ ಪದ್ಮಿನಿಯನೆ ದೂಷಿಸಬೇಡ |
ಪರಮ ಪಾವನೆಯೆಂದು ಶಿವನುತ್ತಮಾಂಗದೊಳ್ |
ಧರಿಸಿದ ನೆನ ಲ್ಪತಿವ್ರತೆಯಲ್ಲದಿಹಳೆ ವೇಳೆಂದು ರುಕ್ಮಿಣಿ ನುಡಿದಳು || ||೧೧||

ನರಕಾಂತ ಕೇಳ್ಬಳಿಕ ರುಕ್ಮಿಣಿಯ ಮಾತಿಂಗೆ ।
ನರಕಾಂತಕಂ ಮೆಚ್ಚಿ ನಸುನಗುತೆ ನಿಂದು ವಾ ।
ನರಕಾಂತ ಕೇತನಾಗ್ರಜನೊಳ್ಸರಸವಾಡುತೊಲವಿಂದೆ ಪಾಳಯವನು ॥
ಸರದ ಸುತ್ರಾಣ ತೀರದೊಳ್ಬಿಡಿಸಿ ಸುಭಟ ಪ್ರ ।
ಸರದ ಸುಯ್ದಾನದಿಂದಿರ್ದನಂದು ಪರಿವಾ ।
ಸರದ ಸೂರ್ಯೋದಯದೊಳಲ್ಲಿಂದೆ ಯಾದವರದಂಡು ನಡೆದುದು ಪಥದೊಳು ॥೧೨॥
ಆ ಮಾಧವಂ ಪಯಣಗತಿಯಿಂದೆ ಗಜಪುರದ ।
ಸೀಮೆಗೈತಂದು ಗಂಗಾನದಿಯ ತೀರದೊಳ್ ।
ಭೀಮನಂ ಸುಯ್ದಾನಕಿರಿಸಿ ಯಾದವ ಕಟಕ ಸಾಗರವನಲ್ಲಿ ಬಿಡಿಸಿ ॥
ಭೂಮಿಶ ದರ್ಶನೋತ್ಸವಕೆ ಬಿಜಯಂಗೈದ ।
ಸಾಮಧ್ಯಮಾರ್ಗದೊಳ್ಕಂಡುದು ಮಹಾಜನಂ ।
ತಾಮರಸನೇತ್ರನಂ ತಮತಮಗೆ ನುತಿಸಿದರ್ನಿಗಮೋಕ್ತಿಯಿಂದೆ ॥ ॥೧೩॥
ಶ್ರುತಿ ಧರ್ಮಶಾಸ್ತ್ರಾಗಮ ಸ್ಮೃತಿವಿಚಾರದಿಂ ।
ಗತಿಗೆಟ್ಟ ಬ್ರಹ್ಮಹತ್ಯಾದಿಪಾತಕಕೆ ನಿ ।
ಷ್ಕೃತಿ ತವಸ್ಮರಣಮಾತ್ರದೊಳಪ್ಪುದೆಂದೊಡಾಶ್ರಮನಾಲ್ಕರೊಳ್ಮಾಡಿದ ॥
ವ್ರತ ದಾನ ಜಪ ತಪ ಸ್ವಾಧ್ಯಾಯಪೂಜೆ ಸ ।
ತ್ಕ್ರತು ಸಮಾಧಿಗಳೆಮಗೆ ನಿನ್ನ ನೀಕ್ಷಿಸಲನು ।
ಷ್ಠಿತಮಾದುವೆಂಬುದೇಂ ನುತಿಯೆ ನಿನಗೆಂದು ಹರಿಯಂ ಪೊಗಳ್ದರಾಪಾರ್ವರು ॥೧೪॥
ಕಾಣಿಕೆಯನಿತ್ತೆರಗಿ ಕಂಡುದು ಸಕಲ ಜನ ।
ಶ್ರೇಣಿ ತಮತಮಗೆ ಮುಗಿದೆತ್ತಿದ ನೊಸಲೆಡೆಗೆ ।
ಪಾಣಿಗಳನಾ ಪಥದೊಳೊರ್ವನರ್ತಕಿ ಬಂದು ನಾನಾ ಪ್ರಕಾರದಿಂದೆ ॥
ವೇಣು ವೀಣಾದಿ ಸಂಗೀತ ವಾದ್ಯ ಶ್ರುತಿಯು ।
ಕೇಣಿಗೊಂಡುರುಪು ತಿರು ಪಭಿನವ ಕಳಾ ಸಪ್ರ ।
ಮಾಣದ ಸುನೃತ್ತದಿಂ ಮೆಚ್ಚಿಸಿದ ಳಚ್ಯುತನ ನಚ್ಚರಿಯ ರಚ್ಚರಿಯೆನೆ ॥ ॥೧೫॥
ನಾಗ ನಗರಿಯ ನಗಧರಂ ಪೊಕ್ಕು ಬರುತಿರ್ದ ।
ನಾಗ ನಗರಿಪು ಮುಖ್ಯರೈದೆ ಸಾಸಿರಪೆಡೆಯ ।
ನಾಗ ನಗರೀಯೊಂಗತಲ್ಪದವ ನಿವನೆಂದು ಗಗನದೊಳ್ಕೈವಾರಿಸೆ ॥
ಬಾಗಿಲಂ ಸಾರ್ದು ತಮತಮಗೆ ಕಾಮಿನಿಯರಿಂ ।
ಬಾಗಿ ಲಂಬಿಸು ವಲರ್ಮುಡಿಗಳ ಶಿರಂಗಳಿಂ ।
ಬಾಗಿ ಲಕ್ಷ್ಮೀಪತಿಗೆ ವಂದಿಸಿದ ರೊಲವಿಂದೆ ರಾಜಮಾರ್ಗಾಂತರದೊಳು ॥ ॥೧೬॥
ರಾಜಮಾರ್ಗದ ಕೆಲಬಲದ ಗೋಪುರದೊಳಿರ್ದ ।
ರಾಜವದನೆಯ ರಗರು ಚಂದನ ಸುಧೂಪ ನೀ ।
ರಾಜನ ಫಲಾಳಿ ತಾಂಬೂಲ ಬಹುವಿಧ ಕುಸುಮ ಲಾಜ ದೂರ್ವಾಕ್ಷತೆಗಳ ॥
ರಾಜಿಗಳ ನಳವಡಿಸೆ ಮಣಿತೋರಣ ಪ್ರಭೆ ವಿ ।
ರಾಜಿಸುವ ಧರ್ಮಸುತ ನರಮನೆಯ ಬಾಗಿಲ್ಗೆ ।
ರಾಜೀವಲೋಚನಂ ಬರೆ ಕೇಳ್ದು ಭೂವರ ನಿದಿರ್ಗೊಂಡ ನುತ್ಸವದೊಳು ॥ ॥೧೭॥

ಧರ್ಮಸುತನಂ ಕಂಡು ನಗುತೆ ಮುರರಿಪು ಹೇಮ |
ನಿರ್ಮಿತ ವರೂಥದಿಂದಿಳಿದು ನೃಪವರನಡಿಗೆ |
ನಿರ್ಮಲ ಕಿರೀಟಮಂ ಚಾಚುತಿರೆ ತೊಲಗಿ ಹರಿಯಂಘ್ರಿಗರಸಂ ನಮಿಸಲು ||
ಪೆರ್ಮೆಯಿಂ ತೆಗೆದು ಬಿಗಿಯಪ್ಪಲವನೀಶ್ವರಂ |
ನಿರ್ಮಾಯನಂ ಮುಗುಳಿ ತಕ್ಕೈಸಲಾಗಳವು |
ರ್ಮಹೀಪಾಲಕನ ಪೂರ್ವಕೃತ ಪುಣ್ಯಮಂ ಬಣ್ಣಿಸಿವರಂಬರದೊಳು || ||೧೮||
ತವನಂತರದೊಳಾ ಮುರಾಂತಕಂ ಧೃತರಾಷ್ಟ್ರ |
ವಿದುರ ಕೃಪ ಗಾಂಧಾರಿ ಕುಂತಿಯರ್ಗಭಿನಮಿಸಿ |
ಮುದದಿಂದೆ ನರ ನಕುಲ ಸಹದೇವ ವೃಷಕೇತು ಯೌವನಾಶ್ವಾದಿಗಳನು ||
ಪದಕಮಲಕೆರಗಿದೊಡೆ ತೆಗೆದು ತಕ್ಕೈಸಿ ದ್ರೌ |
ಪದಿ ಸುಭದ್ರೆಯರ ನೊಲವಿಂದೆ ಕಾಣಿಸಿಕೊಂಡು |
ಪದುಳಮಂ ಕೇಳ್ದು ಸುಖಗೋಷ್ಠಿಯಿಂ ಕುಳ್ಳಿರ್ದ ಬಳಿಕ ನೃಪನಿಂತೆಂದನು ||೧೯||
ದೇವ ದೇವಕಿದೇವಿ ಮೊದಲಾದವರ್ಗೆ ವಸು |
ದೇವ ಹಲಧರ ಮನ್ಮಥಾದಿಗಳ್ಗಖಿಳರಾ |
ಜ್ಞೀವಾಸಕ್ಕೈದೆ ಪದುಳವೆ ಭೀಮಸೇನನೇಗೈದನಾರುಂ ಬಾರದೆ ||
ನೀವೆ ಚಿತ್ತೈಸಿದಿರಿದೇನೆನೆ ಸಮಸ್ತ ಪ್ರ |
ಜಾವಿಭವದಿಂದೆ ಮಾರುತಿ ಸಹಿತ ಬಂದು ಗಂ |
ಗಾವರನದೀತೀರದೊಳ್ಬಿಟ್ಟುದೆಮ್ಮ ಕಟಕಂ ನೋಳ್ಪೊಡೇಳೆಂದನು || ||೨೦||
ಎಂದು ಹರಿ ನುಡಿಯಲರ್ಜುನನ ಮೊಗನೋಡಿ ನಾ |
ವಿಂದು ಧನ್ಯರ್ಭಕ್ತರೆಡೆಗೀ ದಯಾರ್ಣವಂ |
ಬಂದುದಚ್ಚರಿಯಲಾ ಬಾಂಧವರ ದರ್ಶನಂ ನಮಗೆ ಕೌತುಕಮಪ್ಪುದು ||
ಮಂದಿಯಂ ಕರೆಸು ನಡೆ ನಗರಿ ಗುಡಿ ತೋರಣಗ |
ಳಿಂದೆ ಮೆರೆಯಲಿ ಬರಲಿ ಸಿಂಗರದ ಬಾಲಕಿಯ |
ರಂದಣಗಳಂ ಪಿಡಿಯಲರಸಿಯರ್ಪೊರಮಡಲಿ ಜನಮೆಂದು ನೃಪನೆದ್ದನು || ||೨೧||
ಬಳಿಕ ನೃಪನಾಜ್ಞೆಯಿಂದಾ ಹಸ್ತಿನಾವತಿಯ |
ಪೊಳಲನುರೆ ಸಿಂಗರಿಸೆ ಮೊಳಗಿದುದು ಕೂಡೆ ಮಂ |
ಗಳವಾದ್ಯ ಸಂಕುಲಂ ನೆರೆದುದು ಸಕಲ ಪೌರಜನ ಮಲಂಕಾರದಿಂದೆ ||
ಹೊಳೆವ ಮಣಿಭೂಷಣದ ಪೆಣ್ಗಳಿಟ್ಟಣಿಸಿದ |
ರ್ತಳತಂತ್ರಮೈದೆ ಸಂದಣಿಸಿದುದು ಪಾಠಕರ |
ಕಳಕಳದ ನೃತ್ತಗೀತಂಗಳ ವಿಲಾಸದಿಂ ದಿದಿರ್ಗೊಳಲ್ಪೊರಮಟ್ಟರು || ||೨೨||
ಉತ್ಸವದೊಳಧ್ವರಹಯಂ ಮುಂದೆ ನಡೆಯೆ ಭೀ |
ಭತ್ಸುಮೊದಲಾದನುಜರೆಡದೊಳಡಿಯಿಡೆ ಭಕ್ತ |
ವತ್ಸಲಂ ಬಲದ ಭಾಗದೆ ಬರಲ್ಪಿಂತೆ ಮುನಿನಿಕರಮೈತರೆ ಮುದದೊಳು ||
ಸತ್ಸಿಕತಮಯ ವಿರಾಜಿತ ವಿಮಲ ನಿರ್ಜರ ಸ |
ರಿತ್ಸಮೀಪದೊಳೆಸೆವ ಯಾದವರ ಪಾಳೆಯವ |
ನುತ್ಸುಕದೊಳವನೀಶ್ವರಂ ಸಾರ್ದನಂಬುಧಿಯನಂಭೋಧಿಬೆರೆಸಿವಂತೆ || ||೨೩||

ದೇವಕಿ ಯಶೋದೆ ರೋಹಿಣಿ ಯರ್ಗೆ ಪಾಂಡವ |
ಭೂವರಾರ್ಜುನ ಕುಂತಿ ಯರ್ಗಖಿಳಯಾದವ |
ಭಾವಿಸಿದರುಳಿದವರ್ಗಾಲಿಂಗನಗಳಾದವನ್ಯೋನ್ಯಮವರವರ್ಗೆ ||
ಆ ವಾಯುಜಂ ಕಂಡಸರಸನಂ ರುಕ್ಮಿಣೀ |
ದೇವಿ ಮೊದಲಾದರಂ ದ್ರೌಪದಿ ಸುಭದ್ರೆಯು |
ತೀವಪ್ಪಿದ ಪ್ರಭಾವತಿ ಹರಿಯರಾಣಿಯರ್ಗೆರಗಿ ಕಾಣಿಕೆಗೊಟ್ಟಳು || ||೨೪||
ಮೂಡುವೆಳಗಿನಗೆಗೂಡಿ ದ್ರುಪದ ನಂದನೆಯು ಮೊಗ |
ನೋಡಿ ನೀನೇ ಚದುರೆ ಲೋಕದೊ ಳ್ಕೃಷ್ಣನಂ |
ಷೋಡಶ ಸಹಸ್ರ ನಾರಿಯರ್ಕೈದಲರಿಯರಾತನ ನೊಲಿಸಿ ಕೊಂಡೆ ನಿನ್ನ ||
ಗಾಡಿಗಿದು ಪೊಸತೆ ಗಂಡರನ್ನೈವರಂ ಮರುಳು |
ಮಾಡುವ ಮಹಾಪತಿವ್ರತೆ ನಿನ್ನೊಳಾವು ಮಾ |
ತಾಡಲಂಜುವೆವೆಂದು ಸತ್ಯಭಾಮಾದೇವಿ ನುಡಿಯಲವಳಿಂತೆಂದಳು || ||೨೫||
ಕಾರುಣ್ಯನಿಧಿಯ ನಾ ನೊಲಿಸಿಕೊಳದಿರ್ದೊಡೆ ವಿ |
ಚಾರಿಸುವರುಂಟೆ ಯೆನ್ನಭಿಮಾನಹಾನಿಯಂ |
ಕೌರವನ ಸಭೆಯೊಳುಳಿದವ ರಿರ್ದೊಡೇನಾಯ್ತು ಕೃಷ್ಣನೇ ಪಾಲಿಸಿದನು ||
ಪಾರಿಜಾತದ ನೋಂಪಿಗಂದು ನಿಜರಮಣನಂ |
ನಾರದಮುನಿಗೆ ಕೊಟ್ಟ ಬಳಿಕೊಡೆಯರುಂಟೆ ನಿನ |
ಗೀ ರುಕ್ಮಿಣೀಧವ ನನಾಥರ್ಗೆ ನಾಥನೆಂಬುದು ಪುಸಿಯೆ ಪೇಳೆಂದಳು || ||೨೬||
ಎಂದು ದ್ರೌಪದಿ ನುಡಿದ ಮಾತು ಮುಗಿವನಿತರೊಳ್ |
ಮಂದಿಯುಂ ಕಡೆಗೆ ತೊಲಗಿಸಿ ಯಜ್ಞತುರಗಮಂ |
ತಂದು ನಿಲಿಸಿದರಲ್ಲಿ ಹರಿ ನಿರೂಪಿಸ ಲರಸನಾಜ್ಞೆಯಿಂದಾಕ್ಷಣದೊಳು ||
ಇಂದೀವರಾಕ್ಷಿಯರ್ನೋಡಿದ ಕೌತುಕ ವಿ |
ದೆಂದು ವಸ್ತ್ರಾಭರಣ ಪುಷ್ಪ ಗಂಧಾಕ್ಷತೆ ಗ |
ಳಿಂದೆ ಪೂಜಿಸುತಿರ್ದರಶ್ವಮಂ ಭೂಪ ಕೇಳ್ಮೇಲಾದ ಸಂಗತಿಯನು || ||೨೭||
ಆ ಸಮಯದೊ ಳ್ಸಾಲ್ವನನುಜ ನನುಸಾಲ್ವ ನೀ |
ವಾಸುದೇವನ ಪೂರ್ವವೈರಕಲ್ಲಿಗೆ ಬಂದು |
ಮೋಸದೊ ಳ್ತಾಗಿ ತತ್ತುರಗಮಂ ಪಿಡಿದೆತ್ತಿಕೊಂಡೊಯ್ದು ಕಟ್ಟಿ ಬಳಿಕ ||
ಆ ಸುತ್ತುವಳಯದೊ ಳ್ಪದ್ಮಿನಾಕಾರಕೆ ಮ |
ಹಾಸೇನೆಯಂ ನಿಲಿಸಿ ತಾನದರ ಮುಖದೊ ಳ್ಕ |
ರಾಸನದೊ ಳಂಬನೇರಿಸಿ ನಿಂದು ನುಡಿದಂ ಸುಧಾರನೆಂಬಾಪ್ತನೊಡನೆ || ||೨೮||
ಅಣ್ಣನಂ ಕೊಂ ದೆಮ್ಮ ಸೌಭ ನಗರವ ನಿರಿದ |
ಬೆಣ್ಣೆಗಳ್ಳನ ಕೊಬ್ಬಿ ದುದರದೊ ಳ್ಪೊಚ್ಚ ಪೊಸ |
ಸುಣ್ಣಮಂ ಪೊಯ್ದು ನೀರೆರೆದಂತೆ ಮಾಡಿ ಯಾದವ ಪಾಂಡವರ ಬಿಂಕದ ||
ಬಣ್ಣಮಂ ಕೆಡಿಸಿ ಕಾಳಗದೊ ಳುಬ್ಬಸವ ನುರೆ |
ಹಣ್ಣಿದಲ್ಲದೆ ಮಾಣೆ ನಹಿತರ್ಗೆ ಪಗೆ ಯೆನ್ನ |
ಕಣ್ಣಮುಂದೇಂ ಸುಳಿದು ಜೀವಿಸನೆ ಸೇನೆ ಸನ್ನದ್ಧವಾಗಲೆಂದನು || ||೨೯||

ಇಂದು ತುರುಗಾಹಿಯಂ ಬಂ ದಿರಿಯದವ ನೆಸಗೆ|
ಸಂದಪಗೆ ಗೋವಳೆಯ ರುಪನಾಯಕನ ರಣಕೆ |
ನಿಂದು ಕಾದುವ ನಾಪ್ತ ನಿನಿತರೊ ಳ್ಸಂದೇಹಮಿಲ್ಲ ಪರಿವಾರದೊಳಗೆ ||
ಹಿಂದ ಣಪರಾಧಮುಂ ಮುಂದಣ ದ್ರೋಹಮಂ ಗ |
ಳೊಂದುಮಂ ನೋಡೆ ನೂರುಂ ಬಳಿ ಗಜಾಶ್ವ ಗೋ |
ವೃಂದ ಧನ ಯುವತಿಯು ರ್ಮೊದಲಾದ ಸಕಲ ವಸ್ತುಗಳ ನಿತ್ತಪೆನೆಂದನು || ||೩೦||
ಸೊಕ್ಕಿ ದನುಸಾಲ್ವನೀತೆರದಿಂದೆ ತನ್ನ ಪಡೆ |
ಗಿಕ್ಕಿದೀ ಸೆಲವಂ ಸುಧಾರನೆಂಬಾ ಸಚಿವ |
ನಕ್ಕರಿಂ ದಖಿಳ ಸೇನಾ ವಳಯದೊ ಳ್ಪಾಸರಿಸ ಲ್ಪ್ರಳಯಮೇಘಂಗಳ ||
ಕಕ್ಕಸದ ಸಿಡಿಲ ಗರ್ಜನೆಗಳಂ ಕಲ್ಪಾಂತ |
ಕುಕ್ಕು ವಬ್ಧಿಗಳ ಪೆರ್ದೆರೆಗಳ ಸುಘೋಷಮಂ |
ಮಿಕ್ಕುವು ಸಮಸ್ತ ವಾದ್ಯಧ್ವನಿಗ ಳತಿಬಲರ ಬೊಬ್ಬೆ ಯಬ್ಬರದ ಕೂಡೆ || ||೩೧||
ಇತ್ತ ಲಡಹಾಯ್ದು ಮೋಸದೊಳಾತುರಂಗಮುವ |
ನತ್ತ ಲನುಸಾಲ್ವನೆಳೆದು ಯ್ದ ಭರ ಕಬಲೆಯರ |
ಮೊತ್ತಮುಗಲಕೆ ಚೆಲ್ಲಿ ತಂಜಿದ ರ್ಮುನಿಗಳೆಲ್ಲಾ ಜನಂ ತಲ್ಲಣಿಸಿತು ||
ಚಿತ್ತದೊಳ್ ನೃಪನೆಣಿಕೆಗೊಳುತಿರ್ದನುಳಿದವ ರಿ|
ದೆತ್ತ ಣದ್ಭುತಮೆಂದು ಬೆರಗಾದ ರಸುರಹರ |
ನುತ್ತಮಾಂಗವ ನೊಲೆಯುತಂದು ಸುಮ್ಮಾನದಿಂಪಟುಭಟರ್ಗಿಂತೆಂದನು || ||೩೨||
ಈತ ನನುಸಾಲ್ವನೆಂಬಾತ ನಿವನಣ್ಣನಂ |
ಘಾತಿಸಿದೆವಂ ದದರ ಖಾತಿ ಗೆನ್ನೊಡನೆ ಸ |
ತ್ವಾತಿಶಯಮುಂ ತೋರುವಾತುರದೊ ಳತಿಬಲವ್ರಾತಮಂ ಕೂಡಿಕೊಂಡು ||
ಭೀತಿಯಿಲ್ಲದೆ ಪರ ಮಹೀತಳಕೆ ಬಂದು ನ |
ಮ್ಮಾತುರಗಮುಂ ಪಿಡಿದನೀತರ ಪರಾಕ್ರಮದ |
ಮಾತು ನಮಗಿನ್ನು ಮರುಪೂತು ದಾನವ ಯೆನುತೆ ಪೀತಾಂಬರಂ ಪೊಗಳ್ದನು ||೩೩||
ಆರೀತನಂ ಗೆಲ್ದು ಕುದುರೆಯಂ ಬಿಡಿಸಿ ತಹ |
ವೀರರೀ ಪಟುಭಟ ರೊಳಪರ್ಗಿದೆಕೊ ವೀಳೆಯಂ |
ಪೂರೈಸುವೊಡೆ ಪಿಡಿಯುಲೆಂದು ಹರಿ ನುಡಿಯಲತಿಬಲರಂಜಿ ಸುಮ್ಮನಿರಲು ||
ಚಾರುಹಯಮುಂ ತಂದು ಕುಡುವೆನಲ್ಲದೊಡೆ ವೃಷ |
ಕೇರಮಣ ನುಗ್ರಗತಿ ಗಿಳಿವೆನೆಂ ದಸುರ ಸಂ |
ಹಾರ ನಡಿಗೆರಗಿ ತಾಂಬೂಲಮಂ ಪ್ರದ್ಯುಮ್ನನಾಂತು ಕಳುಹಿಸಿಕೊಂಡನು || ||೩೪||
ಬಳಿಕ ವೃಷಕೇತು ಗರುಡಧ್ವಜನ ಮೃದುಪದಯು |
ಗಳಕೆರಗಿ ದೇವ ಚಿತ್ತೈಸಾದೊಡಿನ್ನು ಕೊಳು |
ಗುಳದೊಳನುಸಾಲ್ವನೆಂಬೆಂಬ ಖಳನಂ ಪಿಡಿದು ನಿಮ್ಮಂಘ್ರಿಗೊಪ್ಪಿಸದೊಡೆ ||
ಮುಳಿದು ವಿಪ್ರನ ವಧೆಗೆಳಸಿದವನ ಗತಿಗೆಯಾ |
ನಿಳಿವೆನೆನ್ನಂ ಕಳುಹಬೇಕೆಂದು ಕೈಮುಗಿಯೆ |
ನಳಿನಾಕ್ಷನಾತನಂ ತೆಗೆದು ತಕ್ಕೈಸಿ ವೀಳೆಯವಿತ್ತು ಬೀಳ್ಕೊಟ್ಟನು || ||೩೫||

ಸದ್ಯೋಗಿ ಜಯದ ವಿಮಾನಧ್ವಜವ ನಳವಡಿಸಿ |
ವಿದ್ಯುತ್ಪ್ರಚಾರಮುಂ ಗೆಲ್ವಹಯಮುಂ ಪೂಡಿ |
ಖದ್ಯೋತ ಬಿಂಬಮುಂ ಮಣಿಖಚಿತಕಾಂಚನ ಮಯಪ್ರಭೆಗಳಿಂದೆ ನಗುವ ||
ಉದ್ಯದ್ವರೂಥಮುಂ ಜೋಡಿಸಿ ಮಹಾಸಮರ |
ಕುದ್ಯುಕ್ತನಾಗಿ ಸಾರಥಿ ತಂದು ನಿಲಿಸ ಲಾ |
ಪ್ರದ್ಯುಮ್ನನಡರ್ದು ನಿಜಚಾಪಮುಂ ಜೇಗೈದುಬಂದನಾಹವಕೆ ಸಲಿದು || ||೩೬||
ಕಂಡ ನನುಸಾಲ್ವನಿವನಾರೀಗ ರಣಕೆ ಮುಂ|
ಕೊಂಡು ಬಹ ವೀರ ನಸುರಾರಿಯಾದೊಡೆ ಕೇತು |
ದಂಡ ದಗ್ರದೊಳಿರದು ಮತ್ಸ್ಯವಿದ ನವನ ಸುತನಾಗಬೇಕಿಲ್ಲಿ ಬರಲಿ ||
ದಿಂಡುಗೆಡಪುವೆ ನೆನುತೆ ಸೇನೆಯಂ ಪಿಂದಿಕ್ಕಿ |
ಪುಂಡರೀಕಾಕ್ಷನ ಕುಮಾರನಂ ತಡೆಯೆ ಕೋ |
ದಂಡದೊ ಳ್ಪ್ರದ್ಯುಮ್ನನೈದುಕಣೆಯಂ ಪೂಡಿ ದೈತ್ಯನಂ ತೆಗೆದೆಚ್ಚನು || ||೩೭||
ವ್ಯಗ್ರವೇತಕೆ ನಿನಗೆ ನಾ ವಿಂದ್ರಿಯಂಗಳಂ |
ನಿಗ್ರಹಿಸಿಡವರಲ್ಲ ವಿರಹ ವೆಮಗಿಲ್ಲ ಸುರ |
ತ ಗ್ರಾಹ್ಯಮೋಹನದ ಪಂಚಬಾಣಪ್ರಯೋಗಂಗಳೇಕೀಗ ನಿನ್ನ ||
ವಿಗ್ರಹಕೆ ನಮ ಗಿಕ್ಷುಚಾಪವಾರಡಿ ವೆಪೆ ಸ |
ಮಗ್ರ ಕುಸುಮಾಸ್ತ್ರಂಗಳಿಲ್ಲ ನೋ ಡೆಮ್ಮದೊಂ |
ದುಗ್ರಸಾಯಕವ ನೆಂದಾರ್ದು ತೆಗೆದೆಚ್ಚನನುಸಾಲ್ವನಚ್ಯುತನ ಸುತನ || ||೩೮||
ಪೃಥಿವಿಪತಿ ಕೇಳಿಡೆಯ ಮೇಲೆ ಕೋಲ್ಮೀಲಿಸಲ್ |
ವ್ಯಥಿಸಿ ಮೈಮರೆದನಾ ಪ್ರದ್ಯುಮ್ನ ನೊಡನೆ ಸಾ |
ರಥಿ ಕೃಷ್ಣನಿದ್ದೆಡೆಗೆ ತೇರನಾಗಳೆ ಕೊಂಡು ಬರೆ ಶೌರಿ ಕಂಡು ಬಳಿಕ ||
ಪೃಥುಲಪೌರುಷದಿಂದೆ ನಮ್ಮ ಸುತನಿಂದು ರಿಪು |
ಮಥನಮುಂ ಮಾಡಿ ಬಳಲಿದನೆನುತೆ ಬಂದೆಲವೊ |
ಶಿಥಿಲಪೌರುಷ ನಿನ್ನನೇಗೆಯ್ಯಲೆಂದು ಹರಿಯೊದೆದ ನೆಡಗಾಲ್ತುದಿಯೊಳು || ||೩೯||
ದ್ವಾರಕೆಯನೆಂ ತಬಲೆಯರ ಮುಂದೆ ಪುಗುವೆ ಪೋ |
ಗಾರಣ್ಯಕೆನಲಲ್ಲಿ ಮುನಿಗಳ್ಗೆ ಸೇರೆ ಕೆ |
ಟ್ಟಾತಶೂರಸಾರ್ದೊಡಂ ನೀಂ ವಿರಹಿತನುವಿಷಮುನೆಂದೊರ್ವರುಂ ಕೂಡರು ||
ಆರಿನ್ನು ಗತಿ ನಿನಗೆ ಸಂಬಂಧಿ ಬಾಣನಂ |
ಹಾರೈಸುವೊಡೆ ನಿನ್ನ ಬೋರ್ಗ್ಗೊಲೆಗೆ ಶಿವನಿಪ್ಪ |
ಕಾರಣವಸಂಗತ್ವಮೇ ಪ್ರಾಪ್ತಮೆಂದು ಹರಿ ತನ್ನ ಸುತನಂ ಜರೆವನು || ||೪೦||
ಕಾಲ್ದುದಿಯೊಳೊದೆಯಲ್ಕೆ ನಿನ್ನ ಮಗನೀತಂಗೆ |
ಸೋಲ್ದಪನೆ ಸಾಕಿನ್ನು ಕರ್ಣನ ಕುಮಾರಂಗೆ |
ಸೀಲ್ದಳವನಟ್ಟೆಂದು ಮಾರುತಿ ನುಡಿಯೆ ಶೌರಿ ಪೋಗು ನೀನಾಮೊಡೆನಲು ||
ಸೋಲ್ದುದಿನ್ನಾಹವಂ ತನಗೆಂಬ ಹರ್ಷದಿಂ |
ನಾಲ್ದೆಸೆಗಳದಿರೆ ಬೊಬ್ಬಿರಿದಾರ್ದು ಬಿಲ್ಲೆದೆಗೆ |
ಕೋಲ್ದುಡಿಸಿ ತೆಗೆದಿಸುತೆ ರಿಪುಚಾತುರಂಗಮುಂ ತಾಗಿದಂ ಪವನಸೂನು || ||೪೧||

ಆಭೀಮ ನುರವಣಿಸೆ ಕಂಡು ವೃಷಕೇತು ನಗು ।
ತೀಭೂಮಿಗಿಂದು ಪೊಸತಾದುದೆಲೆ ತಾತ ಬಾ ।
ಲಾಭಿಲಾಷೆಯ ಫಲಕೆಳಸುವರೆ ಪಿತರ್ತನಗೆ ಮೀಸಲೀಸಮರಮಿದಕೆ ॥
ಲೋಭದಿಂ ನೀಂ ಬರ್ಪುದುಚಿತಮೇ ಪೇಳೆನಲ್ ।
ಕೋಭಿಸುವಪಣ್ಣಿಡಿದು ತಂದೆ ಸನಿಸದೊಡೆ ತಾ ।
ನೇ ಬುಂಜಿಪನೆ ಪಸುಳೆ ನಿನಗೆ ರಣದನುದೋರಬಂದೆನೆಂದಂ ಮಾರುತಿ ॥ ॥೪೨॥
ನಸುನಗುತೆ ವೃಷಕೇತು ಬಳಿಕ ಕಾರ್ಮುಕವನೊದ ।
ರಿಸುತೆ ರಿಪುಸೈನ್ಯಮಂ ತಾಗಿದಂ ನೀರ್ದ ಗ ।
ರ್ಜಿಸೆ ವನಾಂತರಕೆ ಸಿಡಿಲೆರಗಿದಂತಿದಿರಾಂತ ಭಟರ ಗೋಣ್ಗಳನರಿಯಲು ॥
ಮುಸಗಿ ಚಿಮ್ಮುವ ರಕ್ತಧಾರೆಗಳ್ಕೂಡೆ ಕ ।
ಣ್ಗೆಸೆದುವಲ್ಲಿಯ ಕಿಚ್ಚಿನಂತೊಡನೆ ಮುಸುಕಿತೆ ।
ಣ್ದೆಸೆಯನಿಸುವಂಬು ಬಿರುವಳೆಯಂತೆ ಹೊನಲಾಯ್ತುರುಧಿರಂ ಪ್ರವಾಹದಂತೆ ॥೪೩॥
ಝುಷಕೇತನಂ ತನಗೆ ಸೋಲ್ಧು ಹಿಮ್ಮೆಟ್ಟಿದಂ ।
ವೃಷಭಾಂಕಿತ ಧ್ವಜಸ್ತಂಭದವ ನಾರಿವಂ ।
ವಿಷಮಗೋಪಾಲನಲ್ಲೆನುತೆ ಕಡುಗೋಪದಿಂ ದನುಸಾಲ್ವಸಿವನ ಮೇಲೆ ॥
ಇಷುವೃಷ್ಟಿಯಂ ಕರೆಯಲಾ ಕರ್ಣಸಂಭವಂ ।
ಮೃಷೆಯಲ್ಲ ದೆನ್ನೊಡನೆ ತೋರಿಸಾ ನಿನ್ನ ಪೌ ।
ರುಷವ ನೆಂದೆಸುತವಂ ಮುಸುಕಿದಂ ಪೊಸಮಸೆಯ ವಿಶಿಖದೊಳವನ ರಥವನು ॥೪೪॥
ಉಚ್ಚಳಿಸಿ ಹಾಯ್ದ ವಂಬುಗ ಳವನ ಕಾಯದಿಂ ।
ದೆಚ್ಚರಿಲ್ಲದೆ ನಿಮಿಷಮಿರ್ದು ಚೇತರಿಸಿ ಕೊಂ ।
ಡೆಚ್ಚ ನನುಸಾಲ್ವನೀ ಕರ್ಣಜನ ವಕ್ಷಸ್ಥಲವ ನೊಂದುಬಾಣದಿಂದೆ ॥
ಅಚ್ಚಪೂರಾಯ ಗಾಯದೊಳೆ ಮೈಮರೆದು ಕ ।
ಣ್ಮುಚ್ಚುತೆ ವರೂಥದೊಳ್ಮಲಗಲ್ಕೆ ಕಂಡು ಖತಿ ।
ವೆಚ್ಚಿ ಪವಮಾನಜಂ ಬಂದವನ ತೇರ ನಪ್ಪಳಿಸಿದಂ ಬಲ್ಗದೆಯೊಳು ॥ ॥೪೫॥
ಮುಗ್ಗಿದುದು ಕುದುರೆ ಸಾರಥಿ ಮಡಿದನಾರಥಂ ।
ನೆಗ್ಗಿದುದು ಚಿಗಿದ ನನುಸಾಲ್ವನಾತನ ಬಲಂ ।
ಮುಗ್ಗಿದುದು ಸಂದಣಿಸಿ ಪವನಜನ ಮೇಲೆ ಶಸ್ತ್ರಾಸ್ತ್ರಪ್ರಯೋಗದಿಂದೆ ॥
ತಗ್ಗಿದುದು ದಿಗ್ದಂತಿ ಭೋಗಿರಾಜನ ಕೊರ ।
ಲ್ಕುಗ್ಗಿದುದು ಧರಣಿತಲ ಮಿಬ್ಭಾಗಮಾಗಿ ಸಲೆ ।
ಹಿಗ್ಗಿದುದು ಪೋಗೆಸ ಲ್ಬೊಯ್ದನುರುಗದೆ ಯಿಂದೆ ಪರಸೈನ್ಯಮಂ ಭೀಮನು ॥೪೬॥
ಕಾದಿ ವಂಡುಗವಡೆದ ಮುನ್ನವೇ ತನ್ನಳವಿ ।
ಗೈದಿದಂಕದ ಭಟರ ತೇರ್ಗಳಂ ತೆಗೆ ದಿಳೆಗೆ ।
ಮೋದಿದಂ ಕೊಂದನಡಗೆಡಹಿದಂ ಸದೆದನೊದೆದಂ ಪಿಡಿದು ಸುಂಡಿಲ್ಗಳ ॥
ಸೇದಿ ದಂತಿಗಳ ನೀಡಾಡಿದಂ ರುಧಿರದಿಂ ।
ನಾದಿದಂ ಧರೆಯ ನುಸಿರ್ಗಾಳಿಯಿಂದಂ ಪಾರ ।
ಲೂದಿದಂ ರಣದೊಳ್ಪೆಣದ ರಾಶಿಮಾಡಿದಂ ಪರಬಲದೊಳಾಭೀಮನು ॥ ॥೪೭॥

ಮೆಟ್ಟಿದಂ ಪಡಪೋಳಿ ಟ್ಟೊರಸಿ ಕಾಲಾಳ್ಗಳಂ |
ಘಟ್ಟಿಸಿದ ಸುರುಬುವ ಹಯಂಗಳಂ ಸಘಕೆ ತೆಗೆ |
ದಿಟ್ಟಸಾನೆಗಳ ನಪ್ಪಳಿಸಿದಂ ತೇರ್ಗಳಂ ಘುರಮೊ ಳಸಿಲಜನ ಕೂಡೆ ||
ಮುಟ್ಟಿ ಕಾದುವರುಂಟೆ ಸೇನೆ ಸಿಮಿಷಾರ್ಧದೊಳ್ |
ಬಟ್ಟಬಯಲಾಯ್ತು ಪೊಸರಥಮೊಳ್ಳೈತಂ ದಳನಿ |
ಗೊಟ್ಟ ನನುಸಾಲ್ವನಂಬುಗಳ ಮಳೆಯಂ ಕರೆಯುತಾ ವೃಕೋದರನ ಮೇಲೆ || ||೪೮||
ಸಾಲ್ವಾನುಜಂ ಪೂಣ್ದೆಸಲ್ಕೆ ಯಮದಂಡಮಂ |
ಪೋಲ್ವ ಗದೆಯಂ ಕೊಂಡು ಮತ್ತೆ ಮಾರುತಸುತಂ |
ಮೇಲ್ವಾಯ್ದು ಬರಲೊಂದು ಬಾಣಮಂ ಕಿವಿವರೆಗೆ ತೆಗೆದೆಚ್ಚು ಬೊಬ್ಬಿರಿಯಲು ||
ಕೋಲ್ವಕ್ಷದೋಳ್ನಾಂಟಿ ತಳವಳಿದು ಪವನಜಂ |
ತೇಲ್ವನಿತರೊಳ್ಕಂಡು ದೈತ್ಯಸುಳಿ ದಘಟರ್ಗೆ |
ಸೋಲ್ವನಲ್ಲೆಂ ದಚ್ಯುತಂ ತಾನೆ ಕೋಪದಿಂದಾಹವಕೆ ನಡೆತಂದನು || ||೪೯||
ದರ್ಪದಿಂ ಕುದುರೆಯಂ ಕೊಂಡು ಬಹೆನೆಂದು ಕಂ |
ದರ್ಪನೊಂದೆಸೆಯೊಳುರವಣಿಸಿದಂ ಕೂಡೆ ನಡೆ |
ದರ್ಪರಬಲಕೆ ಸಾಂಬ ಕೃತವರ್ಮ ಗದ ಸಾತ್ಯಕಿ ಪ್ರಮುಖ ಯದುವೀರರು ||
ಸರ್ಪನ್ಮೈರಿಧ್ವಜನ ರಥಮೈದೆ ಕಂಡು ನೇ |
ಸರ್ಪಲಪ ನಡಗಿಸುವ ಚಕ್ರದಿಂ ತ್ರೈತ್ಯರ ಪೆ |
ಸರ್ಪರಿಯದಂತೆ ಮಾಡುವ ಕೃಷ್ಣನಿವನೆಂದರಿದು ಮೊರೆದ ನನುಸಾಲ್ವನು || ||೫೦||
ಪೊಳೆವ ಮಿಂಚುಗಳೈಸೆ ತೇಜಿಗಳಿವಲ್ಲ ಬ |
ಲ್ಮೊಳಗುಗಳಿವೈಸೆ ರಥಚಕ್ರಧ್ವನಿಗಳಲ್ಲ |
ತೊಳಗುವಮರೇಂದ್ರ ಕಾರ್ಮುಕವೈಸೆ ಪಿಡಿದಿರ್ದ ಶಾರ್ಙ್ಗಧನುವಲ್ಲ ಬೀಳ್ವ ||
ಮಳೆವನಿಗಳೈಸೆ ಕೂರಂಬುಗಳಿವಲ್ಲ ಕ |
ಡ್ಗೊಳಿಪ ಕಾರ್ಮುಗಿಲೈಸೆ ಕೃಷ್ಣನಲ್ಲೆಂಬವ್ರೋ |
ಲ್ಕ್ಮಳುಗುಳಕೆ ಮೈದೋರೆ ಕಂಡು ಕಲಿಸಿಂಹದಂತಿದಿರಾದನನುಸಾಲ್ವನು || ||೫೧||
ವ್ಯಗ್ರದಿಂದೆಯ್ದುವ ಮುರಾರಿಯಂ ಕಂಡು ತ |
ನ್ನಗ್ರಜನನಂದು ಕೊಂದಾಪಗೆವ ನೀತನಂ |
ನಿಗ್ರಹಿಪೆನೆಂದು ಕಣೆನಾಲ್ಕರಿಂ ದಚ್ಯುತನ ಹಯಚತುಷ್ಟಯವನಿಸಲು ||
ಉಗ್ರಶರಘಾತಿಗವು ಸೂತನಂ ಕೈಕೊಳದೆ |
ವಿಗ್ರಹವ ಸುಳಿ ದೊಂದು ಕಡೆಗೆ ಹಾಯ್ದುವು ಯದು ಕು |
ಲಾಗ್ರಣಿಯುನಿದಿರೆ ಕಾಣದೆ ನೊಂದು ತನ್ನವ್ಯಗ್ರನುಸಾಲ್ವನಿಂತೆಂದನು || ||೫೨||
ನಪೆದಪುದೊ ಪರಿವಾರವಿದಾವ ಧನಮಂ ತರಿಸ |
ಲವಿಚಾರದಿಂ ಪ್ರಜೆಗಳಲಸಿದರೊ ದೇಶದೊಳ್ |
ತವಕಪಿಗೆ ನಾರಿಯ ಪತಿಗಳಿರ ಲನ್ಯರೊಳ್ನೆರೆದಪರೊ ಮತ್ಸ್ಯೋತ್ಸಕೆ ||
ತವೆ ಪುತ್ರರಿಲ್ಲ ದಳಿದವರೊಡವೆ ಸಾರ್ದಪುದೊ |
ಬವರಕ್ಕೆ ತಂದ ರಿಪು ಕೃಷ್ಣನಂ ಕಾಣದಿರೆ |
ಪವಣಾವ ದಕಟ ಪೊಸತಿದು ತನ್ನ ಹಗೆ ಹರಿಯದೆಂದು ಚಿಂತಿಸುತಿರ್ದನು || ||೫೩||

ಅನ್ನೆಗಂ ಕುದುರೆಗಳ ನುಪಚರಿಸಿ ಸಾರಥಿಗೆ |
ಸನ್ನೆಗೈ ದನುಸಾಲ್ವ ನಭಿಮುಖಕೆ ಮುರಹರಂ |
ಕೆನ್ನೆಗೇರಿಸಿ ಚಾಪದೊಳ್ಪೂಡಿ ದಂಬ ನಾರ್ದಿಸುತೆ ಬರಲವನತ್ತಲು ||
ಪನ್ನಗಾರಿಧ್ವಜಂ ಮಗುಳ್ಚೈತರಲ್ಕಂಡು |
ತನ್ನೊಳ್ಪೊಣರ್ವ ಛರದಿಂ ಬಂದು ಸಮರ ದೊ |
ಳ್ಗನ್ನಗತಕವನೆಸಗ ಲೇನಹುದು ಮಾರಾಂತು ನೋಡೆನುತೆ ತೆಗೆದೆಚ್ಚನು || ||೫೪||
ಸಂಜನಿಸು ವೆಳೆನಗೆಯೊಳಗಧರಂ ಮಾರಾಂ ಪೊ |
ಡಂಜುವೆವು ನಿಮಗೆ ಸಂಗ್ರಾಮದೊಳ್ದಾನವರ |
ಭಂಜನೆಗಲಪಿದೊಡಂ ಬಿಡವಲಾ ನಮಗೆನುತ ತೆಗೆದಿಸಲದಂ ಸೈರಿಸಿ ||
ಶಿಂಜಿನಿಯೊಳಂದು ಸರಳಂ ಪೂಡಿ ಬರೆ ಸೆಳೆದು |
ರಂಜಿಪ ವಿಶಾಲ ವಕ್ಷಸ್ಥಳವ ನೆಚ್ಚನಂ |
ದಂಜನಾದ್ರಿಯಮೇಲೆ ಸಿಡಿಲೆರಗಿದಂತಾಗೆ ದನುಜಾರಿ ಮೈಮರೆದನು || ||೫೫||
ಪಾಥೋರುಹಾಕ್ಷನಂ ದಾರುಕಂ ನಿಟ್ಟಿಸಿ ವ |
ರೂಥಮಂ ತಿರುಗಿಸಿದ ನಖಿಳ ಯಾದವರ ವರ |
ಯೂಥಮದು ಮಸಗಿತು ಭಯಂಗೊಂಡು ಪುರಜನದ ನೆರವಿ ಪೆರ್ಬಾಗಿಲ್ಗಳ ||
ವೀಥಿಗಳೊಳಿಟ್ಟಣಿಸಿ ಪಟ್ಟಣಕೆ ಸರಿಯೆ ನರ |
ನಾಥನಿರ್ದಲ್ಲಿ ಜರಗಾಗಿ ಸಿಂದಂ ವಧೂ |
ಯೂಥಮಸುರಾರಿಯಂ ಬಳಸಿ ತದರೊಳ್ಸತ್ಯಭಾಮೆ ನಗುತಿಂತೆಂದಳು || ||೫೬||
ದಾನವಂಗಿದಿರಾಗಿ ಪೋಗಿ ರಣದೊಳ್ಪ್ರಾಣ |
ದಾನವಂ ಪಡೆದು ಮರಳಿದ ನಿನ್ನ ಸತ್ವದ ನಿ |
ದಾನವಂ ತಿಳಿ ದಹಿತರೇ ಗೆಯ್ಯರಕಟ ನಿಜಶೌರ್ಯದಿಂ ಪ್ರದ್ಯುಮ್ನನ ||
ಮಾನವಂ ಭಂಗಿಸಿದೆ ನಿನ್ನಂ ಜಗದೊಳಾವ |
ಮಾನವಂ ಬಣ್ಣಿಸುವನಿನ್ನು ನಿನ್ನದಟಿಗೆ ಸ |
ಮಾನವಂ ಕಾಣೆನೆಂದ ಳ್ಸತ್ಯಭಾಮೆ ನಗುತುರೆ ಜರೆದು ನಿಜಪತಿಯನು || ||೫೭||
ಕಂದೆರೆದು ವಲ್ಲಭೆಯ ನುಡಿಗೆ ಲಜ್ಜಿಸಿ ಮನಂ |
ಕಂದೆ ಕಣ್ಣಾಲಿಗ ಳ್ಕಂಪಡರೆ ಖತಿ ಮಿಗ |
ಲ್ಕಂ ಡೆಡಬಲಂಗಳಂ ನೋಡಿ ಹರಿ ಮತ್ತೆ ರಣ ಕನುವಾಗುತಿರ ಲಿತ್ತಲು ||
ನಿಂದು ವೃಷಕೇತು ವನುಸಾಲ್ವನಂ ತಡೆದು ನೀ |
ನಿಂದು ಮುರವೈರಿಯಂ ತೆರಳಿಚಿದೆ ವೀರ ಯೆ |
ನ್ನಿಂದುಳಿದೆ ಯಾದೊಡಾಂ ಕರ್ಣಜನೆ ನಿಲ್ಲೆನುತೆ ತೆಗೆದೆಚ್ಚು ಬೊಬ್ಬಿರಿದನು ||೫೮||
ಹೆಂಗುಸಂ ಕೊಂ ದದಟ ತನದಿಂದೆ ಬಂಡಿಯಂ |
ಭಂಗಿಸಿದ ಬಲ್ಪಿಂದೆ ಯೆತ್ತು ಕತ್ತೆಯ ನಿರಿದ |
ತುಂಗವಿಕ್ರಮದಿಂದೆ ಹಕ್ಕಿ ಹಾವಂ ಸದೆದ ಸಾಹಸದೆ ಬೆರೆತಿರ್ಪೋಡೆ ||
ಸಂಗರದೊಳಾಳಹನೆ ಗೋಪ ನವನಂ ಯುದ್ಧ |
ರಂಗದೊಳ್ಪೊಲಗಿಪು ದೆನಗೆ ಪರಾಕ್ರಮವೆ ನಿ |
ನ್ನಂಗವಣೆ ಯಾವು ದೆಮ್ಮೊಡನೆ ಸೆಣಸಿದೆಯೆನುತೆ ತೆಗೆದೆಚ್ಚನನುಸಾಲ್ವನು ||೫೯||

ಎಲವೊ ಖಳ ನೀನರಿಯದಿರ್ದೊಡೇನಚ್ಯುತಂ।
ತಿಳಿಯೆ ಗೋಪಾಲನಲ್ಲವೆ ಕಪಟರೂಪದಿಂ।
ಮುಳಿದು ದುಷ್ಟರನೈದೆ ಶಿಕ್ಷಿಸದೆ ಮಾಣ್ದಪನೆ ನೋಣಸೂರಿ ಮದಗಜವನು॥
ಬಳಲಿಪುದು ಗಡ ದಿಟಂ ನಿನಗಸುರಕುಲಮಥನ।
ನಳುಕುವನೆ ಶಿವಶಿವಾ ನಿನ್ನೊಡನೆ ಸೆಣಸುವೊಡೆ।
ಬಲವಂತರಾವಲ್ಲ ನೋಡು ಸಾಕಿನ್ನೆನುತೆ ತೆಗೆದೆಚ್ಚನಿನಜಸೂನು॥ ॥೬೦॥
ಕರ್ಣಜನ ಕಣೆಗಳಂ ಕತ್ತರಿಸಿ ಪೊಸಮಸೆವೊ।
ಗರ್ನಭೋಮಂಡಲವನಂಡಲೆಯ ಲೊಪ್ಪುವಸು।
ವರ್ಣಪುಂಖದ ಸರಳ್ಗರೆದ ನನುಸಾಲ್ವನವನೆಲ್ಲಮಂ ತತ್‌ಕ್ಷಣದೊಳು॥
ನಿರ್ಣಯಿಸಿ ವೃಷಕೇತು ಕೈಕೊಂಡನಿಸುಗೆಯಂ।
ದುರ್ನಿರೀಕ್ಷಣವಾದುದರಸ ಕೇಳದನೆನಗೆ।
ವರ್ಣಿಸುವೊಡರಿದು ಕೂರಂಬುಗಳ್ಗಂಬರದೊಳಿಂಬಿಲ್ಲ ಮೆಂಬೊಲಾಯ್ತು॥ ॥೬೧॥
ಮಂಡಲಾಕೃತಿಯಲ್ಲದಿರದು ನೋಡಲ್ಕೆ ಕೋ।
ದಂಡವಂ ಬುಗಿವ ಹೂಡುವ ಬಿಡುವ ಭೇದಮಂ।
ಕಂಡವರದಾ ರಸ್ತಮಯ ಮಾದು ದೆಣ್ದೆಸೆಗಳನುಸಾಲ್ವ ನಳವಳಿದನು॥
ದಿಂಡುರುಳಿ ತಾತನ ಚತುರ್ಬಲಂ ಬಳಿಕ ಕೋ।
ದಂಡಮಂ ಕೊಂಡವನ ರಥದೆಡೆಗೆ ಬಂದೆಳೆದು।
ಕೊಂಡು ಕೃಷ್ಣನ ಪದಾಂಬುಜದ ಹೊರೆಗಾಗಿ ನಡೆತಂದಿಳುಹಿ ಕೈಮುಗಿದನು॥೬೨॥
ಕೊಂಡಾಡಿ ಶೌರಿ ತಕ್ಕೈಸಿದಂ ನೃಪನಪ್ಪಿ।
ಮುಂಡಾಡಿ ಮನ್ನಿಸಿದ ನರ್ಜುನಾದಿಗಳಿಳಿಕೆ।
ಗೊಂಡಾಡಿದ ರ್ತಮ್ಮ ಸಾಸಮಂ ಸತಿಯಪ್ಪೊಗಳ್ದರೀ ಕ್ಷತ್ರಿಯರೊಳು॥
ಉಂಡಾಡಿಗಳ್ಪಲಬರಿರ್ದೊಡೇನಹುದಿವಂ।
ಗಂಡಾಡಿ ದುರುಭಾಷೆ ಗರಿಗಳ ಶಿರಂಗಳಂ।
ಚೆಂಡಾಡಿ ಪಗೆವನಂ ಪಿಡಿದೊಪ್ಪಿಸಿದ ನೆಂದರೆಲ್ಲರುಂ ಕರ್ಣಜನನು॥ ॥೬೩॥
ಯುದ್ಧಶ್ರಮಂ ಪೋಗೆ ಕಂದೆರೆದನನಿಶರೊ।
ಳ್ಬುದ್ಧಿ ಪಲ್ಲಟಿಸಿ ತನುಸಾಲ್ವಕನು ಕಂಡನನಿ।
ರುದ್ಧನ ಪಿತಾಮಹನ ಮೂರ್ತಿಯಂ ದೇವ ನೀನಾಪನೆಂದಾನರಿಯದೆ॥
ಬದ್ಧಮಾಯಾಪಾಶನಾಗಿ ಬಿದ್ದಿಹೆ ನೆನ್ನ।
ನುದ್ಧರಿಸು ಮರೆವೊಕ್ಕೆನೆನೆ ಕೇಳ್ದು ಕರ್ಣಜಂ।
ಕ್ರುದ್ಧನಾದಂ ಜರೆದು ನುಡಿದ ಕಲಿತನ ಮೆಲ್ಲಿ ಸುಡು ನಿನ್ನೊಡಲನೆಂದನು॥ ॥೬೪॥
ರೋಷಮೇತಕೆ ಮರುಳೆ ವೃಷಕೇತು ಕೃಷ್ಣನಂ।
ದ್ವೇಷದಿಂ ಬೈದೊಡಂ ತನ್ನ ಮನವಾರೆ ಸಂ।
ತೋಷದಿಂ ನುತಿಗೈದೊಡಂ ಪೋಗದಿರ್ದಪುವೆ ಕೋಟಿಜನ್ಮದೊಳೊದವಿದ॥
ದೋಷಂಗಳಿಂದು ನೀರಾವೇಶದಿಂದೆ ನಾಂ।
ದೂಷಿಸಿದೊಡೀದಯಾಂಬುಧಿ ಕಾಯದುಳಿಪನೆ ವಿ।
ಶೇಷಸುಕೃತದ ಫಲಂ ದೊರೆದುದೆನಗೆಂದವಂ ಬಿದ್ದ ನಚ್ಯುತನಂಘ್ರಿಗೆ॥ ॥೬೫॥

ನಗುತೆ ಮಧುಸೂದನಂ ಪ್ರೀತಿಯಿಂದಾತನಂ ।
ತೆಗೆದಪ್ಪಿ ನೀನಿಂದು ಮೊದಲಾಗಿ ದಿವಿಜರ್ಗೆ ।
ಪಗೆಯೆನಿಸದೆಮ್ಮೊಡನೆ ಧರ್ಮಜನ ಯಜ್ಞದ ಸಹಾಯಕಿಲ್ಲಿಪ್ಪುದೆಂದು ॥
ಮಿಗೆ ಮನ್ನಿಸನಿತರೊಳ್ ಪ್ರದ್ಯುಮ್ನನುಳಿದ ಸೇ ।
ನೆಗಳೆಲ್ಲಮಂ ಗೆಲ್ದು ತುರಗಮಂ ಬಿಡಿಸಿಕೊಂ ।
ಡಗಧರನ ಸಮ್ಮುಖಕೆ ತಂದು ನಿಲಿಸಿದ ನಿತ್ತಭಾಷೆಗುತ್ತಾರವಾಗೆ ॥ ॥೬೬॥
ಬಳಿಕ ಜಯಲಾಭದಿಂ ದಸುರಾರಿ ಪಾಂಡವ ।
ರ್ಕೊಗ್ಗಳಗುವ ನಿಖಿಳ ವಾದ್ಯಕುಲದಿಂದೆ ವಂದಿಗಳ ।
ಕಳಕಳದ ರಭಸದಿಂ ಬಳಸಿದ ಸಮಸ್ತ ಪುರುಷಸ್ತ್ರೀ ಕದಂಬದೊಡನೆ ॥
ಪೊಳಲಂ ಪುಗಲ್ಕಾ ಯುಧಿಷ್ಠಿರ ನರೇಶ್ವರಂ ।
ನಿಳಯಂಗಳಿತ್ತನಿಬರೆಲ್ಲರಂ ಸತ್ಕರಿಸಿ ।
ಕಳುಹಿ ನಿಜ ಭವನದೊಳ್ದೇವಪುರ ಲಕ್ಷ್ಮೀಪತಿಯನುಪಚರಿಸುತಿರ್ದನು ॥ ॥೬೭॥

ಸಂಧಿ ೭ಕ್ಕೆ ಪದ್ಯಗಳು ೩೮೮ಕ್ಕೆ ಮಂಗಳಮಸ್ತು.

## ಎಂಟನೆಯ ಸಂಧಿ.

ಸೂಚನೆ॥ ಅಧ್ವರೋಪಕ್ರಮದೊಳಮಲಹಯಮೈದೆ ನೀ
ಲಧ್ವಜನ ಪಟ್ಟಣದೊಳಗ್ನಿಯಂ ಕಂಡರಿಬ ।
ಲಧ್ವಂಸಿ ಪಾರ್ಥನವನಂ ಜಯಿಸೆ ಭಂಗದಿಂ ತನ್ನ ಪುರಮಂ ಪೊಕ್ಕನು ॥

ರಾಯ ಕೇಳನುಸಾಲ್ವನಂ ಕೂಡಿಕೊಂಡು ಕಮ ।
ಲಾಯತಾಂಬಕ ನಖಿಳ ಯಾದವರ ಗಡಣ ದಿಂ ।
ದಾ ಯುಧಿಷ್ಠಿರನೃಪನ ಸನ್ಮಾನಮಂ ತಳೆಯುತಿರೆ ಜಾಹ್ನವೀ ತಟದೊಳು ॥
ಆಯಿ ತಧ್ವರಶಾಲೆ ಶಾಸ್ತ್ರ ವಿಶ್ರುತದ ವಿವಿ ।
ಧಾಯತ ವಿಚಿತ್ರ ವೈಭವದಿಂದೆ ಬಳಿಕಾ ಮ ।
ಹಾಯಾಗ ದನುಪಮ ಪ್ರಾರಂಭಕಾಲದ ವಸಂತರ್ತು ಸಂಭವಿಸಿತು ॥ ॥೧॥
ಒಂದೆಡೆಯೊಳಂ ತನಗೆ ನಿಲವಿಲ್ಲ ದತಿವೇಗ ।
ದಿಂದೆ ನಿರತಂ ಪ್ರಬಲಮಾಗಿ ಬೀಸುವಗಾಳಿ ।
ಚಂದನದ್ರುಮಮಂ ತೊಡರ್ದಹಿಗ ಳಾಹಾರಮಂ ಕೊಂಡುಕೊಂಡು ಮಿಕ್ಕ ॥
ಮಂದತ್ವಮಂ ತಳೆದು ಮಲಯಾಚಲದ ಸೀಮೆ ।
ಯಿಂದೆ ಸರಸಿನೊಳ್ಭ್ರಮಿಸುವ ಮರಿದುಂಬಿಗಳ ।
ವೃಂದಮಂ ಕೂಡಿಕೊಂಡೆಳನೆಲರ್ಬಂದುದು ವಿರಹಿಗಳೆದೆಯಾರುವಂತೆ ॥ ॥೨॥
ಮಿರುಗುವ ತಳಿರ್ದೋರಣಂಗಳಂ ಕಟ್ಟಿಸುತೆ ।
ಮರಿಗೋಗಿಲೆಗಳ ಬಾಯ್ಗಳ ಬಲಿದ ಬಂಧನದ ।
ಸೆರೆಗಳಂ ಬಿಡಿಸುತ್ತೆ ತುಂಬಿಗಳ ದಳಕೆ ಕಮ್ಮಲರ್ಗಳಂ ಸೂರೆವಿಡುತೆ ॥
ಕಿರುವೆಲರೊಳೆತ್ತಲುಂ ಸಾರಿಸುತೆ ವಿರಹಿಗಳ ।
ನೆರಗಿಸುತೆ ಜೊನ್ನದ ಜಸಂ ಪೆರ್ಚೆ ಮಧುನೃಪಂ ।
ಪೊರ ಮಟ್ಟು ಮಾಗಿಯು ನ್ನುಡುಗಿಸಿ ಸಮಸ್ತ ವನರಾಷ್ಟ್ರಮಂ ಕೈಕೊಂಡನು ॥ ॥೩॥

ಪೊಸಮಾ ವಶೋಕೆಯೊ ಳ್ಮರಿದುಂಬಿ ಕೋಗಿಲೆ ಯೊ |
ಳೆಸೆವ ಸಂಪಗೆ ಪೊಚ್ಚಪೊಂದಾವರೆಯೊ ಳೊಳ್ಪ |
ಡಸಿವ ಮಲ್ಲಿಗೆ ಯಲ ರ್ಗಳತಬೆಳ್ದಿಂಗಳೊ ಳ್ಗಿಳಿವಿಂಡು ಬನಸಿರಿಯೊಳು ||
ಮಸೆದುಪೊಂದೊಂದರೊ ಳ್ಮಧುಮಾಸ ಕಂಗಜನ |
ಪೆಸೆಯಂತೆ ಖತಿಯಂತೆ ಧನದಂತೆ ಜಸದಂತೆ |
ಪಸು ರ್ವೆಳಸಿನಂತೆ ಕೆಂಪಸಿತಂ ಪಳದಿ ಪಳುಕುಪಚ್ಚೆಗಳ ಬಣ್ಣದಿಂದೆ || ||೪||

ತಳಿತೆಸೆವ ತರುಗಳ ನೆಳಲ್ಗಳಂ ಸಾರ್ದು ಶೀ |
ತಳದ ನಿರ್ಮಲ ಸುವಾರಿಯ ನೀಂಟಿ ಸವ್ಯ ಪರಿ |
ಮಳದಿಂದೆ ಸೊಗಸು ತೀಡುವ ತೆಳು ವೆಲರ್ಗೆ ಮೆಯ್ಯೊಡ್ಡಿ ಮಾರ್ಗಶ್ರಮವನು ||
ಕಳೆವ ರಧ್ವಗ ರೋಪರೊ ಳ್ಕೆರೆದು ವಿರಹಿಗ |
ಳ್ಮಲಯಜದ ಘನಸಾರದೊ ಳ್ತಂಪುವೆತ್ತು ನಿ |
ಚ್ಚಳದ ಕರುವಾಡದೊ ಳ್ಭೋಗಿಸಿದ ರಂದು ಚೈತ್ರಾಗಮದ ಸಂಭ್ರಮದೊಳು ||೫||

ಆ ಚೈತ್ರಮಾಸ ಮೆಸೆದುದು ಧರ್ಮಜನ ಕೀರ್ತಿ |
ಭೂಚಕ್ರಮಂ ಮುಸುಕಿದಂತೆ ಬೆಳ್ದಿಂಗ ಳಿರೆ |
ಯಾಚಕರ ನೆತ್ತಲುಂ ಕೂಗಿ ಕರೆವಂ ತುಲಿಯೆ ಕೋಗಿಲೆಗ ಳೆಳೆಯ ಜನದ ||
ಲೋಚನ ಕುದಯಿಪ ಪೊಸತಂತೆ ಚೂತಾಂಕುರಂ |
ಗೋಚರಿಸೆ ಪಾತಕಕ್ಷಯದಂತೆ ಮಾಗಿಯ ವಿ |
ಮೋಚನಂ ಕಾಣಿಸಲ್ಪುಣ್ಯವಾಸನೆಯಂತೆ ದಕ್ಷಿಣದ ವಾಯು ಸುಳಿಯೆ || ||೬||

ಧಾತ್ರೀಶ ಕೇಳ್ಬಳಿಕ ಧರ್ಮಜಂ ತಾಮರಸ |
ನೇತ್ರ ವೇದವ್ಯಾಸರಾಜ್ಞೆಯಿಂ ದಖಿಳರ್ಷಿ |
ಗೋತ್ರದ ಮುನಿಗಳೆಲ್ಲರಂ ಕರೆಸಿ ಮೇಲವರನುಜ್ಞೆಯಿಂದಾ ಯಜ್ಞದ ||
ಸೂತ್ರಪ್ರಕಾರದಿಂ ದಾರಾಜಿಸುವ ಬಹಿಃ |
ಕ್ಷೇತ್ರ ದಧ್ವರಶಾಲೆಯೊ ಳ್ದೀಕ್ಷೆಯಂ ತಳೆದು |
ಚೈತ್ರಸಿತ ಪೌರ್ಣಮಾಸಿಯ ದಿನದೆ ಬಿಟ್ಟನರ್ಚಿಸಿ ಹಯವನುತ್ಸವದೊಳು || ||೭||

ಇಂದುಕುಲ ದಗ್ಗಳಿಯ ಪಾಂಡು ವಸುಧಾಪಾಲ |
ನಂದನ ಯುಧಿಷ್ಠಿರ ನರೇಂದ್ರ ನಧ್ವರ ಹಯ ವಿ |
ದಂ ಬಿಟ್ಟರಾರಾದೊಡಂ ಕಟ್ಟಿಕೊಳ ಲಾರ್ಪೊ ಡಿಳೆಯೊಳೆಂಬೀ ಲಿಪಿಯನು ||
ಸಂದಿಸಿ ಬರೆದ ಕನಕ ಪಟ್ಟಮ ನದರ ಪಣೆಯೊ |
ಳೊಂದಿಸಿ ತುರಂಗಮವ ನಮಲ ವಸ್ತ್ರಾಭರಣ |
ದಿಂ ದಿವ್ಯಗಂಧ ಮಾಲ್ಯಾಕ್ಷತೆಗಳಿಂ ದಲಂಕರಿಸಿ ಬಿಟ್ಟಶರ್ಘದೊಳು || ||೮||

ಶ್ಲಾಘ್ಯದಿಂದಾದ ಮಜ್ಜನ ಭೋಜನದ ಸದಾ |
ರೋಗ್ಯದಿಂ ತಾಂಬೂಲ ವಸ್ತ್ರ ಭೂಷಣದ ಸೌ |
ಭಾಗ್ಯದಿಂ ಕುಸುಮ ಪರಿಮಳ ಲೇಪನಂಗಳಿಂ ಸ್ತ್ರೀಪುರುಷರೇಕಾಂತಕೆ ||
ಯೋಗ್ಯವಹ ಸಜ್ಜವನೆಯೊಳಗಿರ್ಪರುಂ ದಿವ್ಯ |
ಭೋಗ್ಯಮೆನಿಪೊಂದು ಮಂಚದೊ ಳೊರಗಿ ಕಾಮನ್ವೈ |
ರಾಗ್ಯಮಾಗಿರ್ಪದಸಿಪತ್ರವ್ರತಂ ತದ್ವ್ರತದೊ ಳರಸ ನಿರುತಿರ್ದನು || ||೯||

ತದ್ಯಾಗ ಮೊಂದು ಬರಿಸಕೆ ಮುಗಿವು ದನ್ನೆಗಂ |
ಸದ್ಯಾಜಮಾನ ದೀಕ್ಷೆಯು ಸವನಿಪಂ ತಾಳ್ದ |
ಸುವ್ಯಕ್ತರಾದ ರರ್ಜುನನೊಡನೆ ಹಯರಕ್ಷೆಗಸುರಹರ ನಾಜ್ಞೆಯಿಂದೆ ||
ಉದ್ಯ ತ್ಪರಾಕ್ರಮಿಗ ಳನುಸಾಲ್ವ ಸಾತ್ಯಕಿ |
ಪ್ರದ್ಯುಮ್ನ ಕೃತವರ್ಮ ಯೌವನಾಶ್ವಾತಿಬಲ |
ಖದ್ಯೋತಸುತಸೂನು ಮೊದಲಾದ ವೀರರೊದಗಿತು ಚಾತುರಂಗನೊಡನೆ || ||೧೦||
ಇಭಮುಖಾರ್ಚನೆಯಂ ನವಗ್ರಹದ ಪೂಜೆಯಂ |
ವಿಭವದಿಂ ಮಾಡಿ ಧರ್ಮಜ ಭೀಮ ಕುಂತಿಗ |
ಳ್ಗಭಿನಮಿಸಿ ಕೃಷ್ಣನ ಪದಾಂಬುಜಕ್ಕೆರಗಿ ದಿಕ್ಪಾಲರಂ ಬೇಡಿಕೊಂಡು ||
ಶುಭಮುಹೂರ್ತದೊ ಳರಸಿಯರ ಸೇಸೆವೆತ್ತು ಮುನಿ |
ಸಭೆಗೆ ವಂದಿಸಿ ಪರಕೆಗೊಂಡು ಪಾಠಕರ ಜಯ |
ರಭಸದಿಂದೆಸೆವ ಮಂಗಳವಾದ್ಯಘೋಷದಿಂದರ್ಜುನಂ ಪೊರಮಟ್ಟನು || ||೧೧||
ಮುರಹರನ ರಾಣಿಯು ಧುರಧೀರ ಕರ್ಣಸುತ |
ನರಸಿ ಯೆಂದೆನ್ನ ಪೊಗಳ್ವಂತೆ ಮಿಹೆ ಸಂಗರ ದೊ |
ಳರಿಗಳಂ ಗೆಲ್ವುದೆಂ.ದಾರತಿಯನೆತ್ತಿ ಮುತ್ತಿನ ಸೇಸೆಗಳನೆ ಸೂಸಿ ||
ಭರದಿಂದೆ ಬಂದಪ್ಪಿ ದಂಗನೆಯ ಮೊಗನೋಡಿ |
ಕುರುಳುಗಳ ನುಗುರ್ಗಳಿಂ ತಿದ್ದಿ ಮುದ್ದಿಸಿ ತನ್ನ |
ಬೆರ ಲುಂಗುರಂಗೊಟ್ಟು ಸಂತೈಸಿ ವೃಷಕೇತು ಕಾಂತೆಯಂ ಬೀಳ್ಕೊಂಡನು || ||೧೨||
ಅಂಕೆಯಿಂ ದರ್ಜುನಂ ಗಂದು ಯಾದವ ಸೈನ್ಯ |
ಮಂ ಕೂಡಿಕೊಟ್ಟು ದಳಪತಿಯಾಗಿ ತನಯನಂ |
ಮುಂಕೊಳಿಸಿ ಕರ್ಣಜ ಸುವೇಗಾನುಸಾಲ್ವರ ಸಹಾಯಮಂ ಕೈವರ್ತಿಸಿ ||
ಪಂಕರುಹಲೋಚನಂ ಪೊರಮ ಟ್ಟನಿಬರೆಲ್ಲ |
ರಂ ಕಳುಹಿ ತಿರುಗಿದಂ ಸ್ವೇಚ್ಛೆಯಿಂದಾಹಯಂ |
ತೆಂಕನೊಗಮಾಗಿ ನಡೆದುದು ಕರಿ ತುರಗ ರಥ ಪದಾತಿಗ ಳ್ಪಂದಣಿಸಲು || ||೧೩||
ಊಹಿಸುಪೊ ಡರಿದೆನೆ ತುರಂಗಮದ ಕೂಡೆ ಸ |
ನ್ನಾಹದಿಂ ಮೀರೆದಪ್ಪಿದ ಮಹಾರ್ಣವ ಪ್ರ |
ವಾಹಮೆನೆ ತಳ್ತಿಡಿದ ತರು ಗುಲ್ಮ ಲತೆಗಳಿಂ ನಡೆಗೊಂಡ ಕಾನನಮೆನೆ ||
ನೋಹರಂ ಭೂತಳಮ ನೊಳಕೊಂಡು ಬರುತಿರ್ದು |
ದಾಹಯಂ ಬಳಿಕ ದಕ್ಷಿಣ ದಿಶಾಮುಖಮಾಗಿ |
ಮಾಹಿಷ್ಮತೀಪಟ್ಟಣದ ಬಹಿರ್ಭಾಗದ ದುಪವನ ದೆಡೆಗೆ ನಡೆತಂದುದು || ||೧೪||
ಆ ನಗರ ದರಸು ನೀಲಧ್ವಜಂ ಮೇ ಣವನ |
ಸೂನು ಪ್ರವೀರನೆಂಬವ ನಾಗ ಳಲ್ಲಿ ಗು |
ದ್ಯಾನಕೇಳಿಗೆ ಬಂದನೊಲವಿಂದೆ ಮದನ ಮಂಜರಿಯೆಂಬ ಕಾಂತೆಯೊಡನೆ ||
ಆ ನಳಿನಲೋಚನೆಯು ಕೆಳದಿಯ ರ್ಬಿಡಯದಿಂ |
ದಾ ನಂದನ ದೊಳು ಸಂಚರಿಸುತಿರ್ದ ಬಳಿಕ |
ಮೀನಕೇತನ ಮಹೀಪಾಲ ನರಮನೆಯ ಸೊಕ್ಕಾನೆಗಳ ತಂಡದಂತೆ || ||೧೫||

ನೋಡಿ ತಿಲಕವನಪ್ಪಿ ಕುರವಕವ ನೆಳೆನಗೆಯೊ |
ಳೂಡಿ ಸಂಪಗೆಯಂ ಪ್ರಿಯಂಗುವಂ ಸೋಂಕಿ ಮುರಿ |
ದಾಡಿ ಚೂತವನು ನೊದೆ ದಶೋಕೆಯಂ ಬಕುಳವಂ ಮುಕ್ಕುಳಿಸಿ ಮದ್ಯದಿಂದೆ ||
ಪಾಡಿ ಪುನ್ನಾಗಮಂ ಕರ್ಣಿಕಾರವನೆ ಕೊಂ |
ಡಾಡಿ ಮಂದಾರಮಂ ಜಾಣ್ನುಡಿದು ಪುಷ್ಪಿತಂ |
ಮಾಡಿ ತೋರಿದ ರಂಬುಜಾಕ್ಷಿಯ ರ್ನಾನಾವಿಲಾಸದಿಂದಾ ಬನದೊಳು || ||೧೬||

ಮುಟ್ಟಲ್ಪ್ರಿಯಂಗು ಪೂವಹ ತರಳೆಯರ ಕೈಗೆ |
ಸಿಟ್ಟಿಸಲ್ತಿಲ ಕಮಲರಹ ನೀರೆಯರ ಕಣ್ಗೆ |
ಮೆಟ್ಟಿದೊಡಶೋಕ ಮಂಕುರಮಪ್ಪ ಬಾಲೆಯರ ಮೆಲ್ಲಡಿಗೆ ಮಿಗೆ ಜೆಳ್ನಗೆ ||
ಪುಟ್ಟಲ್ಕೆ ಸಂಪಗೆ ಮುಗುಳ್ದೋರ್ಪ ಸುದತಿಯರ |
ಬಟ್ಟಮೊಗ ಕೆಣೆಯಹವೆ ತಾವರೆಗಳೆಂ ದವಂ |
ಬಿಟ್ಟು ತುಂಬಿದ ಜೌವನೆಯರ ತನುಪರಿಮಳಕೆ ಕವಿದುವಾ ಬನ ದಳಿಗಳು || ||೧೭||

ಸಣ್ಣನಡು ಸೈ ನಿಮಿರೆ ತೋಳ್ನೊದಲೊಳ್ಪೆಸೆಯೆ |
ತಿಣ್ಣ ಮೊಲೆಗಳ್ಪೊದಳೆ ಜೆನ್ನಸೋರ್ಮುಡಿ ಯಲೆಯೆ |
ಕಣ್ಣ ಬೆಳಗಾ ಗಸವ ಸಾವರಿಸೆ ಮೊಗಮೆತ್ತಿ ತುದಿಗಾಲ್ಗಳಿಂದೆ ಸಿಂದು ||
ಬಣ್ಣವಳಿಯದ ಪೂಗಳಂ ಕೊಯ್ದು ಜೆಂಡಾಗಿ |
ಸಣ್ಣಿಲ ಗೊರ್ಡ್ಡಿ ಮೈಬೆಮರ ನಾರಿಸಿಕೊಂಡು |
ಪೆಣ್ಣುವಿಂಡಾ ಬನದೊಳಲರ್ಗಳಂ ತಮ್ಮ ತನುವಿನ ಕಂಪಿನಿಂ ಪೊರೆದರು || ||೧೮||

ಸಿಲುಕಿ ಪೂಗೊಯ್ವ ಲಲಿತಾಂಗಿಯರ ಬಟ್ಟ ಬ |
ಲ್ಮೊಲೆಗಳಂ ಪೊರಲಾರದಸಿಯ ಸೆಳೆನಡುವಿದು ಶಿ |
ಥಿಲಮೆಂದು ಹರಿ ನೀಲದೆಸೆವೊಂದು ಸಣ್ಣಸರಳಂ ಮನೋಜಂ ನಿರ್ಮಿಸಿ ||
ನಿಲಿಸಿ ಬಿಗಿದನೊ ಮೂರುಕಟ್ಟ ನೆಡೆ ಗೆಡೆ ಗೆನ |
ಲ್ಸಲೆ ರಾಜಿಸಿತು ವಳಿತ್ರಯದ ಜೆಲ್ವಿಕೆಯಿಂದೆ |
ಲಲನೆಯರ ಮಧ್ಯದೊಳೊಗೆದಬಾಸೆ ಕುಸುಮಾಪಚಯ ಸಮಯದೊಳ್ಪೊಸತೆನೆ||೧೯||

ತುಂಬಿಗಳ ನೋಡಿದ ಚಂಪಕಂ ಸೊಕ್ಕಾನೆ ||
ಯಂ ಜೆದರಿಸಿದ ಸಿಂಗಮಿಡಿ ದಂಧಕಾರಮಂ |
ತುಂಬಿಸಿದ ಚಂದ್ರಮಂಡಲಮಿರ ಲ್ಕಂಡಿಲ್ಲಿ ನಾವು ಮಿರ್ದೊಡೆ ನಮ್ಮನು ||
ಶಂಬರಾರಿಯ ಶರಂ ಕಾಡದಿರುಳಿನ ವಿರಹ |
ಕೆಂಜ ನಿಶ್ಚಯದೊಳಗಲದೆ ಬಾಲಿಕೆಯ ರುರವ |
ನಿಂಬುಗೊಂ ಡೆಣೆವಕ್ಕಿ ಯೆನ ಲೆಸೆದ ವಲರ್ಗೊಯ್ವ ನೀರೆಯರ ಸೆಲೆಮೊಲೆಗಳು ||೨೦||

ಮೊಳೆವಲ್ಲ ಮೊಲ್ಲೆಯಂ ಚಂದುಟಿಯ ಬಂದುಗೆಯ |
ನೆಳೆನಗೆಯ ಮಲ್ಲಿಗೆಯ ನೆಸಳ್ಗಣ್ಣ ನೈದಿಲಂ |
ನಳಿತೋಳ ಸಿರಿಸಮಂ ನೆಳ್ಳುಗುರ ಕೇತಕಿಯನಾನನದ ತಾವರೆಯನು ||
ತೊಳಗುವ ಸುನಾಸಿಕದ ಸಂಪಗೆಯ ನವಯವ ದೊ |
ಳಳವಡಿಸಿ ಕುಸುಮಗಂಧಿಯ ರೇತಕಿನ್ನು ಪೂ |
ಗಳನರಸಿ ಕೊಯ್ವರೆಂ ದವರ ನಡು ಚಿಂತಿಸಿಯೆ ಬಡವಾದುದೆನ ಲೆಸೆದುದು ||೨೧||

ಕರವೀರ ವರ್ಗಮಂ ಬಾಗಿಸಿದ ರವಟರಂ ।
ತಿರವೆ ಪುನ್ನಾಗಮಂ ಪತ್ತಿ ರಂಜಿಸಿದ ಚರ್ ।
ಮರಮಾವು ತಿಗರಂತೆ ಜಾತಿಯಂತರವ ನರಿದಾಯ್ದ ರವನೀಶರಂತೆ ॥
ಸುರಗಿಯಂ ತುಡುಕಿದ ಘರ್ಟರಂತೆ ಬಗೆ ಗೆಳಿಸಿ ।
ಪರಿದ ಸರ್ವಿಟರಂತೆ ಪಾದರಿಯ ನರಸಿ ಪಿಡಿ ।
ಮರವಣಿಸಿದ ರ್ನಗರಶೋಧನೆಯ ತಳವಾರರಂತೆ ಬನದೊ ಳ್ಪೆಣ್ಗಳು ॥ ॥೨೨॥

ಜಾತಿಸೇವಂತಿಗೆ ಶಿರೀಷ ಮೊದಲಾದ ಪೂ ।
ಜಾತಿಗಳೊಳಿಂತಲರ್ಗೊಯ್ಯು ತುಪವನದೊ ಳ್ನಿ ।
ಜಾತಿಶಯ ಲೀಲೆಯಿಂದಿರುತಿರ್ದಳಾ ಮದನಮಂಜರಿ ಕೆಳದಿಯರೊಡನೆ ॥
ಭೂತಳದೊಳಿದು ಶುಭಾಕಾರದಿಂದಾಶ್ಚರ್ಯ ।
ಭೂತಮನೆ ವ್ಯೆದೋರಿತಾಗ ಳಮರೇಂದ್ರ ಸಂ ।
ಭೂತನ ತುರಂಗಮ ಮದಂ ಕಂಡು ಮುತ್ತಿದ ರ್ಮತ್ತಗಜಗಾಮಿನಿಯರು ॥ ॥೨೩॥

ವನಿತೆಯರೊ ಳಾಮದನಮಂಜರಿ ಹಯದ ಪಣೆಯ ।
ಕನಕ ಪಟ್ಟದ ಲೇಖನವ ನೋದಿಕೊಂಡು ಯಮ ।
ತನುಜ ನಗ್ಗಳಿಕೆಯಂ ಕಂಡು ನಸುನಗುತೆ ನಿಜಪತಿ ಗಾಗ ಳದ ನುಸಿರಲು ॥
ಕನ ಲ್ದಿನಿಯಳಂ ನೋಡುತವ ನೆದ್ದು ಕಾಣಬಹು ।
ದೆನುತೆ ಪಿಡಿ ದಶ್ವಮಂ ಕಟ್ಟಿ ಪಟ್ಟಣಕೆ ಮಾ ।
ನಿನಿಯರಂ ಕಳುಹಿ ಪರಿವಾರಮಂ ಕರೆಸಿ ಸರನೊ ಳ್ಕಾದ ಲನುವಾದನು ॥ ॥೨೪॥

ಭೂಲೋಲ ಕೇಳಗ್ನಿ ಮನೆಯಳಿಯ ನಾಗಿಹಂ ।
ನೀಲಧ್ವಜಂ ಗದೆಂತೆನೆ ಮುನ್ನವನ ಮಗ ।
ಳ್ಮ್ರಲೋಕಮೊ ಳ್ಸುಭಗ ರಾರೆಂದರಸಿ ನೋಂತು ಪಾಪಕನ ನೊಲಿಸೆ ಮೆಚ್ಚಿ ॥
ಬಾಲಿಕೆಯ ನಂದು ಮೊದಲಾಗಿ ವೈಶ್ವಾನರಂ ।
ಪಾಲಿಪಂ ಪತಿರೂಪದಿಂ ದಾಪುರಮೊ ಳವನ ।
ಮೂಲಬಲದಿಂ ಪ್ರವೀರಂ ಪಿಡಿದು ಕಟ್ಟಿದಂ ಪಾರ್ಥನ ತುರಂಗಮವನು ॥ ॥೨೫॥

ಕಟ್ಟಿರ್ದ ಕುದುರೆಯಂ ಕಂಡು ಕಾಪಿನ ಭಟ ।
ರ್ಘಟ್ಟಿಸಿದೊಡಾ ಪ್ರವೀರಂ ಕೆರ ಳ್ದಾಹವಂ ।
ಗೊಟ್ಟೆ ನಾರ್ಪೊಡೆ ಬರಲಿ ತನ್ನೊಡನೆ ಕಾಳಗಕೆ ಪಡೆಸಹಿತ ಪಾರ್ಥನೆಂದು ॥
ತೊಟ್ಟಂ ಶರಾಸನದೊ ಳಂಬ ನಪನೀ ಮಾತು ।
ಮುಟ್ಟಿದುದು ಫಲುಗುಣಂ ಗೆಳೆನಗೆಯ ಕೋಪದಿಂ ।
ದಟ್ಟಿ ನೋಡಿದೊಡಾಗ ನಡೆದುದು ಚತುರ್ಬಲಂ ಸರ್ವಸನ್ನಾಹದಿಂದೆ ॥ ॥೨೬॥

ಚೂಳಿಯ ಚತುರ್ಬಲದ ಧಾಳಿ ನಗರಿಕೆ ನಭಕೆ ।
ಧೂಳಿ ದೆಸೆದೆಸೆಗಳ್ಗೆ ಘೀಳಿಡುವ ವಾದ್ಯರವ ।
ದೋಳಿ ನೆರೆ ಮುಸುಕಿತೊಂದೇ ಬಾರಿ ಪುರಜನಕೆ ರವಿಗೆ ದಿಕ್ಪಾಲಕರ್ಗೆ ॥
ಬಾಳುವೆ ಮಹಾತೇಜಮತಿಶಯದ ಪದವಿ ಗ ।
ಣ್ಕಾಳಹುದು ಮಸುಳಿಪುದು ಚಲನ ಮಹುದೆಂದು ಹೇ ।
ರ್ದಾಸ ಭಯದಿಂ ಶಂಕೆಯಿಂ ದದ್ಭುತಂಗಳಿಂ ಧೃತಿ ಗತಿ ಮತಿ ಗಳಳಿದುವು ॥ ॥೨೭॥

ಮೇರೆದಪ್ಪಿದ ಮಹಾರ್ಣವದಂತೆ ಭುವನ ಸಂ।
ಹಾರಕಾಲದ ಮೇಘಚಯದಂತೆ ಭರದಿಂ ಪ್ರ।
ವೀರನಂ ಮುಸುಕಿ ತರ್ಜುನನ ಮುಂಚೂಣಿಯ ಚತುರ್ಬಲಂ ದೆಸೆದೆಸೆಯೊಳು ॥
ತೇರ್ಯೆಸದಿರ್ದ ನವ ನಶಿ ಸತ್ವದಿಂದೆ ಸಂ।
ಸಾರಪ್ರಲಾಪಮಾಲಾಕುಲಮ ನಧ್ಯಾತ್ಮ।
ಸಾರದಿಂ ತಡೆವ ಯೋಗೀಶ್ವರನ ಚಿತ್ತದಂ ತೆಚ್ಚರಿನ ಧಾತುಗೆಡದೆ ॥ ॥೨೮॥

ಮೇಗೆ ಮುಸುಕಿದ ಚೂಣಿ ಯನಿತು ಚಾತುರ್ಬಲವ।
ನಾಗಳೊರ್ವನೆ ಚಾರಿ ವರಿವರಿದು ಬಾಣ ಪ್ರ।
ಯೋಗಂಗಳಿಂ ಪ್ರವೀರಂ ಕೊಲ್ವುದಂ ಕಂಡು ಬಿಲ್ಗೊಂಡು ಕೋಪದಿಂದೆ ॥
ಬೇಗದಿಂ ಪ್ರದ್ಯುಮ್ನ ಸಾತ್ಯಕಿ ವೃಷಧ್ವಜ ಸು।
ವೇ ಗಾನುಸಾಲ್ವ ಕೃತವರ್ಮಾದಿ ಪಟುಭಟ।
ರ್ತಾಗಿದ ಕಲ್ಪಮೇಘಂಗಳಂ ತಡೆವಿಟ್ಟ ಮಳೆಯೆನ ಲ್ಕಣೆಗರೆಯುತೆ ॥ ॥೨೯॥

ಆ ಪ್ರವೀರಂ ಬಳಿ ಕನಿಬರೆಲ್ಲ ರೊಡನೆ ನಾ।
ನಾಪ್ರಕಾರದ ಸಮರದೊ ಳ್ಕಾದಲಿತ್ತ ಸೇ।
ನಾಪ್ರತತಿ ಸಹಿತ ನೀಲಧ್ವಜಂ ನಗರಮಂ ಪೊರಮಟ್ಟನೇವೇಳ್ವೆನು ॥
ಈಪ್ರಭಾಕರ ಕಿರಣ ಮೀ ವಾಯುಸಂಚರಣ।
ಮೀಪ್ರವಹಿಸುವ ನದಿಗಳೀ ಗಗನ ಮೀಧರೆ ಮ।
ಹಾಪ್ರಳಯ ಕಡಗುವಂ ತಡಗಿ ಭುವನತ್ರಯಂ ಬರಿಧೂಳಿಮಯವಾಗಲು ॥ ॥೩೦॥

ಮೊಗಸಿದ ರ್ಪರಬಲವ ಸಾಗ ಳ್ಪ್ರವೀರನಂ।
ತೆಗೆಸಿದ ರ್ಪಿನ್ನೆಲಿಗೆ ರಿಪುಸೈನ್ಯದಳವಿಯಂ।
ತಗೆಸಿವರ್ತಮುತಮಗೆ ಕೈಕೊಂಡು ವಾರಣ ವರೂಥ ವರವಾಜಿಗಳನು ॥
ಪುಗಿಸಿದ ರ್ವೈರಿಮೋಹರ ದೊಳಗೆ ಸಾಹಸಂ।
ಮಿಗಿಸಿದ ರ್ಪೊಯ್ದಾಡಿ ತನಿವೀರರಸದಿಂದೆ।
ಸೊಗಸಿದ ರ್ಧುರಧೀರ ನೀಲಧ್ವಜನ ಮನೆಯ ಚತುರ ಚತುರಂಗದವರು ॥ ॥೩೧॥

ಮಗ್ಗಿದ ರ್ಮಸಗಿ ದಂಬುಧಿಯ ತೆರೆಯಂತೆ ಸಲೆ।
ಮುಗ್ಗಿದ ರ್ಮುಗಿಲ ಮೊಗ್ಗರದಂತೆ ಭೋಂಕರಿಸು।
ತೊಗ್ಗಿದ ರ್ಕವಿದು ಜೇನ್ನೊಣದಂತೆ ಪೊಯ್ದಾಡಿ ರಿಪುಸೈನ್ಯ ಕಾನನವನು ॥
ನೆಗ್ಗಿದ ರ್ನೆಲೆಗೆಡಿಸಿ ಬಿರುಗಾಳಿಯಂ ತ್ರೈದೆ।
ನುಗ್ಗಿದ ರ್ನುಚ್ಚುನುರಿಯಾಗೆ ಬರಸಿಡಿಲಂತೆ।
ಹಿಗ್ಗಿದ ರ್ಪೆಚ್ಚಿ ವೀರಾವೇಶದಿಂದೆ ಪಟುಭಟರಾಗ ಳಾಹವದೊಳು । ॥೩೨॥

ಪೊಯ್ದಾಡಿ ಮಡಿದ ಕಲಿಗಳ ಶರೀರಂಗಳಂ।
ಪೊಯ್ದಳಿದು ಪರಿತಿಂಬ ಮರುಳ್ಗಳಂ ಮೇಣವರ।
ನೊಯ್ದಲ್ಲಿ ದಿವ್ಯತನುಗಳೊಳಪ್ಪಿ ಚುಂಬಿಸುವ ಸುರಸತಿಯರಂ ಕಾಣುತೆ ॥
ಮೆಯ್ದಗೆವಪರ ವೀರರೆಂದೊರ್ವ ರೊರ್ವರಂ।
ಬಯ್ದು ಮೂದಲಿಸಿ ರಣರಂಗದೊ ಳ್ಪಟುಭಟ।
ರ್ಕೈ ಯ್ದೋರುತಿರ್ದರೊಡೆವೆರೆಸಿ ಕೇಶಾಕೇಶಿ ಯುದ್ಧದಿಂ ದಳವಳಿಯದೆ ॥ ॥೩೩॥

ಕೃತವರ್ಮ ನುರವಣೆಯ ನನುಸಾಲ್ವ ನುಬ್ಬಟೆಯ।
ನತಿಬಲ ಸುವೇಗನ ಪರಾಕ್ರಮುವ ನಾದಿತ್ಯ।
ಸುತಸುತನ ಶೌರ್ಯಮಂ ಸಾತ್ಯಕಿಯ ವೀರ್ಯಮಂ ಪರ ಯೌವನಾಶ್ವನೃಪನ ॥
ಅತುಳವಿಕ್ರಮುವ ನನಿರುದ್ಧನಾಟೋಪಮಂ।
ಪ್ರತಿಭಟ ಭಯಂಕರ ಪ್ರದ್ಯುಮ್ನನದಟ ನು।
ನ್ನತಿ ಗೆಡಿಸಿತಾಗ ನೀಲಧ್ವಜನ ಪರಿವಾರಮೇ ವೇಳ್ವಿನಾಹವದೊಳು ॥ ॥೩೪॥
ಅರ್ಜುನಂ ಕಂಡ ನಹಿತಪ್ರಬಲ ಬಲ ಮುಸುರ।
ನಿರ್ಜರ ರ್ಗರಿದೆನೆ ಕಠೋರವಾಗ ಲ್ತನ್ನ।
ವ ರ್ಜಯಿಸಲರಿಯ ರೇನೆಂದು ಕಡುಗೋಪದಿಂ ಚಾಪಮಂ ಪಿಡಿದು ಮಿಡಿದು ॥
ಗರ್ಜನೆಯೊಳೆಯ್ದೆ ಕವಿಗಾಲದೊ ಳ್ಮಳೆಗರೆವ।
ಪರ್ಜನ್ಯನಂ ತಾರ್ದಿಸುತೆ ನಡೆಯ ಲಿದಿರಾಂಪ।
ವ ರ್ಜಗದೊಳುಂಟೆ ಮುರಿದುದು ಪುರಕೆ ನೀಲಧ್ವಜನ ಸೇನೆ ಕೆಟ್ಟುಕೆದರಿ ॥ ॥೩೫॥
ಮುರಿದು ಬಹಸೇನೆಯಂ ಕಂಡಾ ಪ್ರವೀರ ನುರೆ।
ಜರೆದು ಕೋದಂಡಮಂ ಕೊಂಡು ಕೌಂತೇಯನಂ।
ತರುಬ ಲಡಹಾಯ್ದು ವೃಷಕೇತು ಬರಲಾತನೊ ಳ್ಸರಿಯಾಗಿ ಕಾದುತಿರಲು ॥
ಪೆರಗಿಕ್ಕಿ ಕಾರ್ಷ್ಣಿಯಂ ಮುಂದೆ ನಿಂ ದನುಸಾಲ್ವ।
ನುರುಬಿದೊಡವಂ ನೋಯೆ ನೀಲಧ್ವಜಂ ತಾನೆ।
ತುರುಗಿ ದಗ್ಗದ ಸಕಲಬಲ ಸಹಿತ ನೂಕಿದಂ ಫಲುಗುಣನ ಪಡೆಯ ಮೇಲೆ ॥ ॥೩೬॥
ವಾನರ ವರಧ್ವಜಂ ಮುಳಿದು ನೀಲಧ್ವಜನ।
ಸೇನೆಯಂ ತಡೆಗಡಿಯೆ ತಾತನಂ ಮುಕಿದ ನ।
ನೂನ ಶರಜಾಲದಿಂ ಬಳಿಕವಂ ಕಂಗೆಟ್ಟು ಪಾವಕಂ ಪೊರೆಯೊಳಿರಲು ॥
ನೀ ನಳಿಯನಾಗಿರ್ದ ಮೆನಗಿನಿ ತಪಾಯಮೇ।
ಕೀ ನರನ ಪೆಸೆಯ ಭಯಮಂ ಬಿಡಿಸಬೇಕೆನೆ ಕೃ।
ಶಾನು ಕೇಳ್ದಾಗ ಸುಡತೊಡಗಿದಂ ತಾನೆ ಪೊ ಕ್ಕರ್ಜುನನ ಸೈನಿಕವನು ॥ ॥೩೭॥
ಛತ್ರಚಾಮರ ಹರಿಗೆ ಹಕ್ಕರಿಕೆ ಹಲ್ಲಣ ವಿ।
ಚಿತ್ರದ ಪತಾಕೆ ಸೀಗುರಿ ಸಿಂಧ ಸೀಸಕ ತ।
ನುತ್ರ ರಂಜಿಕೆ ಪಾಶ ವಸ್ತ್ರವಾಹನ ವಾದ್ಯ ಕೈದು ಬತ್ತಳಿಕೆ ಬಂಡಿ ॥
ಪತ್ರ ಬಂಧುರ ಬಾಣ ಕೋದಂಡ ರಥ ರಥಾಂ।
ಗ ತ್ರಿವೇಣುಕ ಯುಗಾಕ್ಷಂಗ ಳುರಿಗೊಳೆ ಪಾಂಡು।
ಪುತ್ರಸೇನೆಯೊ ಳೆಲ್ಲರುಂ ಚೆದರಿದ ರ್ಕೆಟ್ಟು ಕೆದರಿದ ರ್ಕಡಿ ಯನೊದರಿ ॥ ॥೩೮॥
ಹೊಗೆಹೊಗೆದು ಹೊಗೆಸುತ್ತಿ ಹೊಗಲು ದೆಸೆದೆಸೆಗಳಂ।
ನೊಗೆನೊಗೆದು ನೊಗಸಿ ಪಲನೊಗದೊ ಳವ್ವಳಿಸಿ ಪುಟ।
ನೆಗೆನೆಗೆದು ನೆಗಳ್ದು ಸೋನೆಗಳಾಗಿ ಸುರಿಪ ಕಿರುಗಿಡಿಗಳ ತುಷಾರದಿಂದೆ ॥
ಧಗಧಗಧಗನೆ ಪೊತ್ತುವ ಜ್ವಾಲೆಗಳ ಮಾಲೆ।
ಭುಗು ಭುಗು ಭುಗಿ ಲ್ಭುಗಿ ಲ್ಭುಗಿ ಲೆಂದು ಡಾವರಿಸೆ।
ತಗೆತಗೆದು ತಗು ಳ್ದೆಲ್ಲರಂ ದಹಿಸತೊಡಗಿದುದು ದಳ್ಳುರಿ ನರನ ಬಲದೊಳು ॥ ॥೩೯॥

ಕಟ್ಟುಗ್ರಕೋಪದಿಂ ಮುಳಿದಂದು ರಾಘವಂ |
ತೊಟ್ಟಬಾಣದ ಸೊಸೆಯ ದಳ್ಳುರಿಯ ಜಳಕೆ ಕಂ |
ಗೆಟ್ಟು ಪಿಡಿಮಿಡಿಗೊಂಡ ಸಾಗರದ ಜೀವಾಳಿಯಂತೆ ಖಾಂಡವದ ಜೀವ ||
ಅಟ್ಟಿ ಸುಡು ವನಲ ಧೂಮಜ್ವಾಲೆ ಗೂಡಸೆ ಗೋ |
ಳಿಟ್ಟು ಹೊದಕುಳಿಗೊಂಡು ಹೊರಳುತಿರ ಲಬ್ಧಿಗಂ |
ಬಟ್ಟೆ ಪಾರ್ಥಂ ಚಿಂತಿಸಿದ ನೆತ್ತ ಣದ್ಭುತಮಿದೆಂದು ಪಾವಕನ ನುಡುಬಗೆಗೆ ||೪೦||
ಭಗ್ನರಾದ ಕರ್ಲ ಕರ್ಣವಜಾದಿಗಳ್ಪಿಂದು |
ನಗ್ನರಾದ ರ್ಕ್ಕಲ ಪರ್ಣಚ್ಛಿದುರಿಗಿಚ್ಛಿನೊ |
ಳ್ಮಗ್ನರಾದ ರ್ಕ್ಕಲ ರ್ತ್ತಸ್ನ ಸೇನೆಯೊಳಕಟ ಧರ್ಮಜನ ಹಯಮೇಧಕೆ ||
ವಿಘ್ನಮಾದುದೆ ಶಿವಶಿವನುತೆ ಚಿಂತಿಸಿದ ನಿದ |
ಕಗ್ನಿಯಂ ಭಜಿಸಿ ನೋಡುವೆನೆಂದು ನಿಜಕರ ವಿ |
ಲಗ್ನಚಾಪವ ನಿಳುಹಿ ಶುಚಿಯಾಗಿ ಯಾಶುಚಿಯ ನರ್ಜುನಂ ಪ್ರಾರ್ಥಿಸಿದನು ||೪೧||
ಬಳಿ ಕನಲ ಸೂಕ್ತಂಗಳಿಂದೆ ನುತಿಗೈದು ಭೂ |
ತಳಕೊಂದಿ ಸಾಷ್ಟಾಂಗದಿಂ ಪೆರಗಿ ನಿಂದು ನೀಂ |
ಮುಳಿಯಲೇಕೀ ಮಖಂ ನಿನಗೈಸೆ ಮೇ ಣನ್ನದೆಸೆ ಯಿಂ ದಖಿಳಸುರರ್ಗೆ ||
ತಳಿದು ಹವಿರ್ಭಾಗ ಮಿಾ ಚರಾಚರದ ಪೊರ |
ಗೊಳಗೆಲ್ಲಮುಂ ನೀನೆ ನಿನ್ನಿಂದೆ ಮೂಲೋಕ |
ದಳಿವುಳಿವು ಸಾ ಕದಂತಿರೆ ಲೆನಗೆ ಮಾರ್ಗಮಂ ಕೊ ಟ್ಟುಳುಹ ಬೇಕೆಂದನು || ||೪೨||
ದೇವ ನೀನಂದು ಗಾಂಡೀವಮಂ ತನಗಿತ್ತೆ |
ಭಾವಿಸಲ್ಕಂಜಾಲೆ ನಿನ್ನೊಳುದ್ಭವಿಸಿದ |
ಳ್ನಾವು ಲೋಗರೆ ನಿನಗೆ ಪೇಳೆಂದು ನುತಿಸಿ ಕುಂತೀಸುತಂ ಬೇಡಿಕೊಳಲು ||
ಪಾವಕಂ ಮೆಚ್ಚಿ ನುಡಿದಂ ಪಾರ್ಥ ಕೇಳಾದೊ |
ಡಾವು ಮುಳಿಯೆವು ನಿನಗೆ ಹರಿ ಸಮಿಾಪದೊಳಿರ್ದು |
ಮಿಾವಾಜಿಮೇಧಮೇ ಕಮೃತಮಿರ ಲಳಿಯೇವುದೆನೆ ಪಾರ್ಥನಿಂತೆಂದನು || ||೪೩||
ಅಹುದು ನೀವೆಂಬುದಂ ಮಿಾರಬಪ್ಪರ್ದೆ ಹರಿಯು |
ಸಹವಾಸಮೇ ಸಾಕು ಜಗದೊ ಳ್ಸ್ವಧರ್ಮಮಂ |
ವಹಿಸದವರಾರು ಮುನಿವರನಾಜ್ಞೆಯಾದಪುದು ಮೇ ಣಂತುಮಲ್ಲದೆಮಗೆ ||
ವಿಹಗೇಂದ್ರವಾಹನಂ ಮಾಡನೇಕೆಂ ದನು |
ಗ್ರಹಿಸಿದಂ ಮಖಮನಿದ ಕೆಂತೆಂದು ನರನೆ ಸ |
ಲ್ಲಹಿಪುದಂ ಮಾಣ್ದೆನೆಂ ದಘಯನಿ ತ್ತಗ್ನಿ ನೀಲಧ್ವಜಂ ಗಿಂತೆಂದನು || ||೪೪||
ಸಂಗರಂ ಬೇಡ ನರನೊಡನೆ ಸಾಕಾತನ ತು |
ರಂಗಮುವ ಬಿಡು ನಡೆ ನಗರಕೆಂದು ವೈಶ್ವಾನ |
ರಂ ಗುಣದೊ ಳರಸನಂ ತಿರುಗಿಸಿದ ನತ್ತಲರ್ಜುನನ ನುರಿಯ ಡಾವರವನು ||
ಭಂಗಿಸಿದ ನೆಚ್ಚು ನಾರಾಯಣಾಸ್ತ್ರದೊ ಳನ್ನೆ |
ಗಂ ಗಗನಮಣಿ ಪಶ್ಚಿಮಾಂಗನೆಯ ಚೈತ್ರಕೆಯ |
ರಂಗುಮಾಣಿಕದಂತೆ ಕಣ್ಗೆ ಕಾಣಿಸುತಿರ್ದ ದಸ್ತಗಿರಿ ಮಸ್ತಕಮೊಳು || ||೪೫||

ರಂಜಿಸುವ ಪಶ್ಚಿಮಾಚಲ ಕಿರಾತಂ ತೊಟ್ಟ |
ಗುಂಜಾಭರಣವೊ ಮೇಣ್ಗಗನಾಂಬುಧಿಯ ತಡಿಯ |
ಮಂಜು ವಿದ್ರುಮಲತೆಯೊ ಮೇಣಪರ ದಿಗ್ವಧುವಿ ನಂಗ ಕುಂಕುಮ ಲೇಪವೋ ||
ಅಂಜನೇಭದ ಸಿಂದುರವೊ ಶಿವನ ಕೇಶಗಳ |
ಕೆಂಜಡೆಯೊ ವಿಷ್ಣುಪದ ಪಂಕರುಹ ವರುಣತೆಯೊ |
ಸಂಜೆವೆಣ್ಣುಟ್ಟ ರಕ್ತಾಂಬರವೊ ಪೇಳೆನಲ್ಕಾ ಬೈಗು ಗೆಂಪೆಸೆದುದು || ||೪೬||

ಬಿಚ್ಚುವೆಣೆವಕ್ಕಿಗಳ ಹೃದಯಮಂ ಜೇಯಿಸುವ |
ಪೊಚ್ಚ ಪೊಸಕೆಂಡಂಗಳೆನೆ ಲೋಕಮಂ ನುಂಗ |
ಲಿಚ್ಚೈಸಿ ಬಪ್ಪಕತ್ತಲೆಯೆಂಬ ಕಾಳರಕ್ಕಸಿ ಕೋಪದಿಂ ದುಗುಳ್ದ ||
ಕಿಚ್ಚಿನ ಕಿದರ್ಗಿಡಿಗಳೆನೆ ತನ್ನ ಬಾಳುವೆಗೆ |
ನಚ್ಚಿನವಳೀ ರಾತ್ರಿವಧು ವೆಂದು ಹಿಮಕರಂ |
ಮೆಚ್ಚಿ ಮುಂಗುಳುಪಿ ದೆಳೆಮಾಣಿಕದ ಮಣಿಗಳೆನೆ ಸಂಜೆದಾರೆಗಳೆಸೆದುವು || ||೪೭||

ಓಡಿದುವು ಪಕ್ಷಿಗಳ್ಗೂಡಿಂಗೆ ದೆಸೆಗಳಂ |
ನೋಡಿದುವು ಘೂಕಂಗಳಳಿಗಳಂ ಸೆರೆಗೈದು |
ಹೂಡಿದುವು ಬಾಗಿಲಂ ಕಮಲಂಗಳರಲ್ದುವಿಂದೀವರಂಗಳ್ನಭದೊಳು ||
ಮೂಡಿದುವು ತಾರೆಗಳ್ಚಕ್ರವಾಕಂಗಳಂ |
ಕಾಡಿದುವು ವಿರಹತಾಪಂಗಳಿಳೆಯೆಲ್ಲಮಂ |
ತೀಡಿದುವು ಕತ್ತಲೆಗಳಲ್ಲಿಗಲ್ಲಿಗೆ ಮನೆಮನೆಯ ಸೊಡರ್ಗಣ್ಗೆಸೆದುವು || ||೪೮||

ರವಿ ಪಶ್ಚಿಮಾದ್ರಿಯಂ ಮರೆಗೊಳೆ ತಮಸ್ತೋಮ |
ಮವನಿಯಂ ಮುಸುಕಿತೀ ತೆರದೊಳಸಿತಧ್ವಜಂ |
ಬವರದೊಳ್ಮುರಿದು ಭಂಗಿತನಾಗಿ ತಿರುಗಿದಂ ತನ್ನ ಪಟ್ಟಣಕತ್ತಲು ||
ಪವನಸಖನಂ ಬೇಡಿಕೊಂಡು ನಾರಾಯಣಾ |
ಹ್ವಯನೆಚ್ಚು ಪೆಚ್ಚುರ್ಗದುರಿಯಂ ಕಿಡಿಸಿ ನಿಜಸೈನಿ |
ಕವನಲ್ಲಿ ಬಿಡಿಸಿದಂ ದೇವಪುರಲಕ್ಷ್ಮೀಪತಿಯ ಮೈದುನಂ ಮುದದೊಳು || ||೪೯||

ಸಂಧಿ ೮ ಕ್ಕೆ ಪದ್ಯಗಳು ೪೩೭ ಕ್ಕೆ ಮಂಗಳಮಸ್ತು.

## ಒಂಬತ್ತನೆಯ ಸಂಧಿ.

ಸೂಚನೆ|| ಜ್ವಾಲೆ ನಿಜಕಾಂತನಂ ಛಲದಿಂದೆ ಬಿಟ್ಟು ತ |
ನ್ನಾಲಯದೊಳಿರದೆ ಪೊರಮಟ್ಟು ಬಂ ದರ್ಜುನನ |
ಮೇಲೆ ತಂತ್ರನೆಸಗಿ ಶಾಪಮಂ ಕುಡಿಸಿದ ಳ್ಸುರನದಿಯಂ ಕೆರಳ್ಚಿ ||

ಇಂದುಕುಲತಿಲಕ ಜನಮೇಜಯ ನರೇಂದ್ರ ಕೇ |
ಳಂದು ನೀಲಧ್ವಜಂ ತಿರುಗಿ ತನ್ನರಮನೆಗೆ |
ಬಂದು ವೈಶ್ವಾನರ ನನುಜ್ಞೆಯಿಂ ಪಾರ್ಥನ ತುರಂಗಮಂ ಬಿಡುವೆನೆಂದು ||
ನಿಂದು ಮಂತ್ರಿಗಳಂ ಕರೆಸಲದಂ ಕೇಳ್ದು ನಡೆ |
ತಂದು ನುಡಿದ ಳ್ಜ್ವಾಲೆಯೆಂಬರಸಿ ಪತಿಗೆ ನೀ |
ನಿಂದು ಸಿತವಾಹನಂ ಗೀಯದಿ ರ್ಕುದುರೆಯಂ ಜವರದಿರೆನುತೆ ತಡೆದಳು || ||೧||

ಅನ್ನೆಗಂ ಕೇಳ್ದು ಜನಮೇಜಯ ನರೇಶ್ವರಂ |
ತನ್ನ ಮನದೊಳ್ಸಂದೆಗಂ ಬಟ್ಟು ಬೆಸಗೊಂಡ |
ನಿನ್ನೊಮ್ಮೆ ತಿಳಿಪೆಲೆ ಮುನೀಂದ್ರಪಾವಕ ನೇತಕಾಪಟ್ಟಣದೊಳಿರ್ದನು ||
ಮನ್ನಣೆಯ ಮನೆಯಳಿಯ ನಂತಾದ ನಾನೃಪನ |
ಕನ್ನಿಕೆಯದೇನ ಮಾಡಿದ ಳದರ ವೃತ್ತಾಂತ |
ಮನ್ನಿರೂಪಿಸ ವೇಳ್ಪುದೆನೆ ಮತ್ತೆ ಜೈಮಿನಿ ಧರಾಧಿಪಂ ಗಿಂತೆಂದನು || ||೨||
ಆಲಿಸಿನ್ನಾ ಮೊಡೆಲೆ ಭೂಪ ನೀಲಧ್ವಜಂ |
ಜ್ವಾಲೆಯೆಂಬರಸಿಯೊಳ್ಪಡೆದ ನತಿರೂಪ ಗುಣ |
ಶೀಲಂ ಗಳಿಂದೆಸೆವ ತನುಜೆಯಂ ಸ್ವಾಹಾಭಿಧಾನದೊಳ್ಬಳೆಯುತಿರುವ ||
ಆ ಲೋಲಲೋಚನೆಗೆ ಜೌವನಂ ಬರೆ ಪಿತಂ |
ಮೂಲೋಕದೊಳಗುಳ್ಳ ಪುರುಷರ್ಕಳಂ ಪಟದ |
ಮೇಲೆ ರೂಪಿಸಿ ತೋರಿಸಿದ ನಿವರೊಳಾರ್ನಿನಗೆ ವಲ್ಲಭಂ ಪೇಳ್ಪುದೆಂದು || ||೩||
ವಿಪುಲ ಗಂಧರ್ವ ಯಕ್ಷೋರಗ ಸುರಾಸುರರ |
ನುಪಹಾಸ್ಯಮಂ ಮಾಡಿ ಸಕಲ ಭೂಮಂಡಲದ |
ನೃಪವರ್ಗಮಂ ಪಳಿದು ಹರಿಹರ ವಿರಿಂಚಿ ಶಕ್ರಾದಿಗಳ ನಿಳಿಕೆಗೈದು ||
ತಪನೇಂದು ಮನ್ಮಥ ವಸಂತರ್ಕಳಂ ಜರೆ ದ |
ನುಪಮ ದಿಕ್ಪಾಲಕರ ನಡುವೆ ಕುಳ್ಳಿರ್ದ ರಾ |
ಜಿಪ ವೀತಿಹೋತ್ರನಂ ಕಂಡವ ಳ್ತೋರಿಸಿದ ಳಿನಗಿವಂ ಕಾಂತನೆಂದು || ||೪||
ಆ ನೀಲಕೇತು ನೃಪ ನವಳ ನುಡಿಗೇಳ್ದಣುಗೆ |
ನೀ ನಘಟಿತದ ವರನ ನುನ್ನಿಸಿದೆ ಪೇಳ್ದೊಡಿ |
ನ್ನೇನಪ್ಪುದೆಂದು ಚಿಂತಿಸುತಿರಲ್ಕಾತನಂ ಜರೆದು ಬೀಳ್ಕೊಂಡು ಬಳಿಕ ||
ಮಾನಿನಿ ಪುರೋದ್ಯಾನದೊಳ್ಪ್ರವಾಹಿಪ ನರ್ಮ |
ದಾನದಿಗೆ ಬಂದು ಮಿಂ ದಲ್ಲಿ ಸುವ್ರತೆಯಾಗಿ |
ನಾನಾವಿಧಾನದಿಂ ದರ್ಚಿಸಿದ ಳಗ್ನಿಯಂ ಭಕ್ತಿಯಿಂ ದನುದಿನದೊಳು || ||೫||
ಪಾವಕಂ ಬಳಿಕ ಮೆಚ್ಚಿದನವಳ ನೋಂಪಿಗೆ ಮ |
ಹೀ ವಿಬುಧವೇಷಮಂ ತಾಳ್ದು ನೀಲಧ್ವಜನ |
ಚಾವಡಿಗೆ ಬರಲಾತ ನಿದಿರೆದ್ದು ಸತ್ಕರಿಸಿ ಕೈಮುಗಿದು ವಿನಯದಿಂದೆ ||
ನೀವು ಬಿಜಯಂಗೈದ ಕಾರ್ಯಮಂ ಬೆಸಸಿಮೆನ |
ಲಾವು ಕನ್ಯಾರ್ಥಿಗ ಳ್ಕುಡು ನಿನ್ನ ಸುತೆಯ ನಿದ |
ಕಾವೆಣಿಕೆಬೇಡ ಭೂಭುಜರೀಯಬಹುದು ವಿಪ್ರರ್ಗೆಂದೊಡಿಂತೆಂದನು || ||೬||
ಕನ್ಯಾರ್ಥಿಯಾಗಿ ನೀಂ ಬಂದು ಬೇಡುವು ದಿಳೆಯೊ |
ಳನ್ಯಾಯವಲ್ಲ ವಿಪ್ರರ್ಗೆ ಕುಡಬಹುದು ರಾ |
ಜನ್ಯರದಕೇನೊಂದು ಛಲದಿಂದೆ ತನ್ನ ಕುವರಿಗೆ ಸುರುತ್ಸವನಲ್ಲದೆ ||
ಅನ್ಯರಂ ಪತಿಯಾಗಿ ವರಿಸಬೇಕೆಂಬ ಚ್ಛೆ |
ತನ್ಯೆಗುಳ್ಳೀನು ಮಾಡುವನೆನಿನ್ನು ನಿನಗೀವ |
ಧನ್ಯತೆಗೆ ಬಾಹಿರಂ ತಾನಾದೆನೆನಲಾ ಕಪಟವಿಪ್ರನಿಂತೆಂದನು || ||೭||

ಪ್ರಾಪ್ತಮಾದುದು ನಿನ್ನ ಮಗಳಿಣಿಕೆ ಸುವ್ರತ ಸ|
ಮಾಪ್ತಿಯಂ ಮಾಡಿಸಿ ನ್ನಾ ನಗ್ನಿ ಸಂಶಯ|
ವ್ಯಾಪ್ತಿಯುಂ ಬಿಡು ಕುಡು ನಿಜಾತ್ಮಜೆಯನೆನೆ ನಂಬದಾನೃಪಂ ಬಳಿಕ ತನ್ನ ||
ಆಪ್ತ ಮಂತ್ರಿಯೊಳೀಗ ಶಿವನಂ ಪರೀಕ್ಷಿಸನೆ|
ಗೋಪ್ತಾರನಾಜ್ಞೆಯಿಂ ಬಂದನಂ ನೋಡಿ ಶಿಖಿ|
ದೀಪ್ತಿಯಿಂ ತೋರಲಿವೆ ಗಡ್ಡ ಮೀಸೆಗ ಳುರಿಯ ಲನಲ ನೆಂ ದರಿದನಂದು || ||೮||

ಸಪ್ತರಸನಂ ತಪ್ಪದೆಂದಾನೃಪಂ ತಿಳಿದು|
ಗುಪ್ತದಿಂ ತನ್ನ ಸತಿ ಯನುಜೆಯಂ ಕರೆಸಿ ಲೋ|
ಲುಪ್ತಿಯಿಂ ಬಂ ದಿಪಂಗೀಯಬೇ ಕಣುಗೆಯಂ ಶಿಖಿಯಹುದೆ ನೋಡೆನಲ್ಕೆ ||
ದೃಪ್ತ ಭಾವದೊಳಾಕೆ ನಡೆತಂದು ನಿಟ್ಟಿಸ|
ಲ್ತೃಪ್ತಮಾದುದು ಮೇಲುದಿನ ವಸನ ಮಾಗಳಾ|
ಕ್ಷಿಪ್ತಮಂ ಮಾಡಿ ನಗುತಿರ್ದನಾ ಭೂವರಂ ಸಭೆಯೊಳ್ವಿನೋದದಿಂದೆ || ||೯||

ಭೂಕಾಂತ ಕೇಳ್ಬಳಿಕ ನೀಲಧ್ವಜಾವನಿಪ|
ನಾ ಕಪಟವಿಪ್ರನಂ ಕರೆ ದಗ್ನಿ ನೀನಾದೊ|
ಡೀ ಕುವರಿಯಂ ಕುಡುವೆ ನಿಂದುಮೊದಲಾಗಿ ಮಾಹಿಷ್ಮತಿಯ ಪಟ್ಟಣಕ್ಕೆ ||
ಪ್ರಾಕಾರಮಾಗಿ ತನ್ನರಮನೆಯೊಳಿಂದು ಮಿರ|
ಬೇಕೆಂದು ಬೇಡಿಕೊಳಲೊಪ್ಪಿ ಪವಮಾನಸಖ|
ನಾಕಮಲವದನೆಯಂ ಮದುವೆಯಾದಂ ವಿಧಿವಿಧಾನ ವಿಭವಂಗಳಿಂದೆ || ||೧೦||

ಶ್ರೀಹೈಮವತಿಯರಂ ದುಗ್ಧಾಬ್ಧಿ ಹಿಮಗಿರಿಗ|
ಳಾ ಹರಿಹರರ್ಗೆ ಕೊಟ್ಟಂಬಿಟ್ಟುಕೊಂಡಿಹವೊ|
ಲೀ ಹುತವಹಂಗಾತ್ಮಜೆಯನಿತ್ತು ನಿಲಿಸಿಕೊಂಡಂ ನೀಲಕೇತು ಬಳಿಕ ||
ಸ್ವಾಹಾವನಿತೆಯ ಸಂಮೇಳದತಿ ಸೌಖ್ಯದಿಂ|
ಮಾಹಿಷ್ಮತೀ ಪುರದೊಳಿರುತಿರ್ದ ನನಲಂ ಮ|
ನೋಹರದ ವಿವಿಧ ಭೋಗದೊಳಂದು ಮೊದಲಾಗಿ ಸಂದು ಸಂತೋಷದಿಂದೆ || ||೧೧||

ಅಲ್ಲಿ ಪಾವಕನಿರ್ದಕಾರಣಮಿದೀಗ ಮುಂ|
ದಿಲ್ಲಿಯ ಕಥಾಂತರವ ನರಸ ಕೇಳಾರಾತ್ರಿ|
ಯಲ್ಲಿ ನೀಲಧ್ವಜಂ ಮನೆಯೊಳಾಜ್ವಾಲೆಯ ನಿರೂಪಮಂ ತಳೆಯೊಳಾಂತು ||
ಸಲ್ಲಲಿತವಾಜಿಯಂ ಬಿಡೆ ನೆನ್ನೊಡನ ಕಾದಿ|
ದಲ್ಲದೆಂದಾ ಕಿರೀಟಿಗೆ ಪೇಳಿಸಿದ ನಿತ್ತ|
ಪಲ್ಲವಿಸಿ ತಮುಲ ಪೂರ್ವಾಶಾ ಲತಿಕೆ ಯೆಸಲ್ಕಿಂಪಡರ್ದುದು ಮೂಡಲು || ||೧೨||

ತನ್ನ ಪಗೆಯಾದ ಕತ್ತಲೆಯ ಸಾರೂಪ್ಯದಿಂ|
ದಿನ್ನಿದಿರ್ದ ಡೆಮ ಗಿಸಂ ಮುಳಿಯದಿರ ನೆಂ ದಂಜಿ|
ಕನ್ನೈದಿಲೆಯ ಮೊಗಂ ಬಾಡಿದುದು ಕೂಡೆ ನಗುತಿರ್ದುವರವಿಂದಂಗಳು ||
ಗನ್ನದೊಳ್ನೆರೆವ ಜಾರೆಯರ ಕುಂಟಣಿಯಂತೆ|
ಸನ್ನೆಗೈದುವು ತಾಮ್ರಚೂಡಂಗಳೊಂದಿದುವು|
ಮುನ್ನಿನಂತಿರೆ ಜಕ್ಕವಕ್ಕಿಗ ಳ್ಪಾಡಿದುವು ತುಂಬಿಗಳ್ಪಂಡನರಸಿ || ||೧೩||

ಧಾಮ ಮುನ್ನೊಮ್ಮೆ ತನ್ನಂ ತುಡುಕಿ ಬಿಟ್ಟನೆಂ |
ಬಾ ಪಗೆಯ ಮುಗುಜ ಲೊಳಪೊಕ್ಕು ಪಾತಾಳದ ಮ |
ಹಾಹಿ ಸಂಕುಲಮ ನಾಕ್ರಮಿಸಿ ಪೆಡೆವಣಿಗಳಂ ತೆಗೆದುಕೊಂಡಾಗಳವನು ||
ಸಾಹಸಂ ಮಿಗೆ ಪೆಸೆಪೆಸಗೆ ಚೆಲ್ಲುತ್ತೈತರ್ಪ್ಪ |
ನೋಂ ಹರಿದ್ವಾಜಿ ಪೇಳ್ಕಿನೆ ಪಸಾಳಿಸಿಸಿಲ ಪ್ರ |
ಭಾಸಂಗಳೆತ್ತಲುಂ ಪರಿವಿನಂ ದಿನಪನುದಯಂಗೈದು ಬರುತಿರ್ದನು || ||೧೪||
ಇತ್ತಲವನೀಶ ಕೇಳುದಯವಾಗದ ಮುನ್ನ |
ಮತ್ತೆ ಮಾಹಿಷ್ಮತಿಯ ಪಟ್ಟಣದ ಕೋಟೆಯಂ |
ಮುತ್ತಿಕೊಂಡುದು ನರನ ಚತುರಂಗಮೋಜೆಯೊಳು ನೀಲಧ್ವಜನ ವಾಹಿನಿ |
ಒತ್ತಿ ಕವಿದುದು ವೀರರೊದಗಿದಪೂರ್ವಯಾದ್ಡಿ |
ತಿತ್ತಂಡ ಮೊಡವೆರಸಿ ಚೂಣಿಗಾಳಗದ ಘಟ |
ದತ್ತಿದರ್ಪಾಂತ ಪಾಡುಗಳನಸಿತಧ್ವಜಂ ನಡೆದ ನರ್ಜುನನ ಮೇಲೆ || ||೧೫||
ತರಣಿ ತೊಲಗಿದ ಬಳಿಕ ಮಿಂಚುಂಬುಳುಗೆ ತಮಂ |
ತೆರಳಬಲ್ಲುದೆ ಕೃಶಾನುಜ್ವಾಲೆ ಗಳುಕದಾ |
ನರ ಸುಕೀಪವೀರರಂ ಬಗೆವನೇ ಪಡೆವೆರಸಿ ನೂಪದಂ ಕಣೆಗರೆಯುತೆ ||
ಮುರಿದು ಮರವಣೆ ಗಪನ ಸೇನೆ ಬಳಿಕಳಲಿಗ |
ತರಹರಿಸಿ ಸುತ ಸಹೋದರ ಮಂತ್ರಿ ಬಾಂಧವ |
ಘೂರ್ಜರಪೊಳಾಂತಳದ ರರ್ಜುನನೊಳಾತಂ ಕಾದಿನೊಂದು ಮೂರ್ಛಿತನಾದನು ||೧೬||
ಬಳಿಕ ಸಾರಥಿ ಮನೆಗೆ ತಂದನಾಭೂಪನಂ |
ಪೊಳಲ ಪೆರ್ಬಾಗಿಲ್ಗೆ ಕಿಕ್ಕಿದವು ಕೋಟೆ ಕೊ |
ತ್ತಳದ ಕಾವಲ್ಗಳಂ ಬಲಿದರಲ್ಲಲ್ಲಿ ಗಜಬಜವಾಯ್ತು ನಗರದೊಳಗೆ ||
ತಿಳಿದುದಾತನ ಮೂರ್ಛೆ ಕಣ್ದೆರೆದು ನೋಡಿ ಕೊಳು |
ಗುಳದ ಪರಿಭವಕೆ ಬೆಂಡಾಗಿ ನಿಜತನಯರಳಿ |
ದಳಲಿಂದೆ ಬೈದನಸಿತಧ್ವಜಂ ಜ್ವಾಲೆಯಂ ಪ್ರತಿಕೂಲೆಯಂ ಖತಿಯೊಳು || ||೧೭||
ನಿನ್ನ ಪಾರ್ಥನ ಹಯವನಾತಂಗೆ ಬಿಡಲೀಯ |
ದೆನ್ನ ಕೆಡಿಸಿದೆಯಲಾ ಪಾತಕಿಯೆ ಸುತರಳಿದ |
ರಿನ್ನೇನು ಘಾತಕಿಯೆ ಮತ್ಕುಲಕರಿಷ್ಟೆ ನೀನತಿಕಷ್ಟೆ ಪೋಗು ದುಷ್ಟೆ ||
ಎನ್ನರಮನೆಯೊಳಿರದಿರೆಂದಾಗಳಾಜ್ವಾಲೆ |
ಯನ್ನೀಲಕೇತು ಧಟ್ಟಿಸಿ ಬೈದು ಬಳಿಕತ್ತ |
ಮನ್ನರನೆಡೆಗೆ ಕಳುಪಿ ತಾನಾ ಕಿರೀಟಿಯಂ ಕಾಣಲ್ಕೆ ಪೊರಮಟ್ಟನು || ||೧೮||
ಕೊಂಡು ಬರಿಸಿದನಖಿಳ ವಸ್ತುಗಳ ನಮಲಮಣಿ |
ಮಂಡನಾಳಿಗಳಂ ವಿವಿಧ ದುಕೂಲಂಗಳಂ |
ಹಿಂಡಾಕಳಂ ಮಹಿಷಿಗಳನುತ್ತಮಸ್ತ್ರೀಯರಂ ಗಜಹಯವಾಸಳಿಯನು ||
ಭಂಡಾರದರ್ಥಮಂ ಗುಡತೈಲಧಾನ್ಯಮಂ |
ಬಂಡಿಗಳಮೇಲೆ ತುಂಬಿಸಿ ಪಾರ್ಥನಂ ಬಂದು |
ಕಂಡನಸಿತಧ್ವಜಂ ಬಳಿಕವನನರ್ಜುನಂ ಪ್ರೀತಿ ಮಿಗೆ ಮನ್ನಿಸಿದನು || ||೧೯||

ವಾಜಿ ನಡೆದುದು ಬಳಿಕ ತೆಂಕಮೊಗವಾಗಿ ಸೇ |
ನಾಬಲಧಿ ಸಹಿತ ನೀಲಧ್ವಜಂ ಪೊರಮಟ್ಟು |
ನಾಜನಪನಂ ಕೂಡಿಕೊಂಡು ಮುಂದಕೆ ಸವ್ಯಸಾಚಿ ತೆರಳಿದ ಸಿತ್ತಲು ||
ತೇಜವಿಲ್ಲದೆ ಮನೆಯೊಳಿಂ ಪೆಣ್ಣೊಡಲ್ವೆಳಿಸು |
ನೀಜೀವ ಮೇತಕೆನಗೆನುತೆ ನಿಜವಲ್ಲಭನ |
ರಾಜಗೃಹಮಂ ಬಿಟ್ಟು ಪೋದಳಾಜ್ವಾಲೆಯುನ್ಮುಖನೆಂಬ ತಮ್ಮನೆಡೆಗೆ || ||೨೦||
ಉನ್ಮುಖಂ ಕಂಡಿದಿರ್ಗೊಂಡಗ್ರಜಾತೆಯಂ |
ಸನ್ಮಾನಿಸಿದನೇಕೆ ಬಂದೆಯೆನೆ ಫಲುಗುಣಂ |
ಮನ್ಮನೋರಥವೆಲ್ಲಮಂ ಕಿಡಿಸಿ ಮಕ್ಕಳಂ ಕೊಂದು ಪತಿಯಂ ಗೆಲ್ದನು ||
ತನ್ಮರಣ ಕೊಂದುಪಾಯವ ನೆಸಗದಿರಲೆನ್ನ |
ಜನ್ಮವೇತಕೆ ನಿನ್ನ ದೆಸೆಯಿಂದೆ ನರನ ಪಿಲ |
ಸನ್ಮೌಳಿ ಮಸ್ತಕವ ನರಿಸದಿರೆನೆಂದೊಡಾ ಜ್ವಾಲೆಗವನಿಂತೆಂದನು || ||೨೧||
ವಾಯುಕರ್ಜುನನ ತಲೆ ಬಿಳ್ದಪುದೆ ಕೃಷ್ಣನ ಸ |
ಹಾಯವಿರಲೆಲೆ ಮರುಳೆ ಹರಿಯ ಹಗೆಗೊಂಡು ಕೆಡು |
ವಾಯಸಂ ತನಗೇಕೆ ರಾಘವಂ ಮಾಡಿದುಪಹತಿಯಿಂ ದಶಾನನಂಗೆ ||
ಜಾಯಮಂ ಪೇಳ್ದವನ ವಂಶಮಂ ಸವರಿಸಿದ |
ಮಾಯಕಾರ್ತಿಯ ಪೊಲೆನ್ನಾಲಯಕೆ ಬಂದೆನಗ |
ಪಾಯಮಂ ತಾರದಿಲ್ಲಿಂದೆ ಪೋಗೆಂದವಳನುನ್ಮುಖಂ ಕೋಪಿಸಿದನು || ||೨೨||
ಜ್ವಾಲೆ ಬಳಿಕನುಜನಂ ಜೈದು ಕೋಪದೊಳಾತ |
ನಾಲಯವೊಳರವೆ ಪೊರಮಟ್ಟು ನಡೆತರೆ ಮುಂದೆ |
ಲೀಲೆ ವಿಗೆ ನಲಿದುಲಿದು ಸುಳಿದಿಳಿದು ಬೆಳೆದಳಿದು ತಳಿದೆಳೆದು ಪೊಳೆವುಸೆಳೆದು ||
ನೀಲಮೇಲೊದಗುವ ಘನಪ್ರವಾಹದ ಸುಕ |
ಲ್ಲೋಲ ಪಾಲಾಕುಲದ ಬುದ್ಬುದದ ಜಲಜಂತು |
ಜಾಲದ ಲಳಿಯ ಲಹರಿಗಳ ವಿಸ್ತರದ ವರಗಂಗೆಯಂ ಕಂಡಳು || ||೨೩||
ತ್ರೆಕುಪ್ರಡಿಯ ಮುಳಿಡಿಯಲಿತ್ತಡಿಯ ತಳಗಡಿಯ |
ಪೊಳೆ ನೆರೆಯುಲುರೆ ಪೊರೆಯ ಮೊಳೊರೆಯ ಜೆಳ್ಳೊರೆಯ |
ತೊಳಪೆಳೆಯ ಮಾನ್ಮೊಳಿಯಲಿರಪೆಳೆಯ ಲಡಿಸೆಳೆಯ ತುಂತುರಿನ ತಸಿಗೆದರಿನ ||
ಸುಳಿಸುಳಿಯ ಸನ್ನಳಿಯ ಜೊಬ್ಬುಳಿಯ ಕಡುಲುಳಿಯ |
ಜಳಜರದ ತರತರದ ಸೀಕರದ ಫೇಕರದ |
ತುಳಗಂಗೆ ಸುತರಂಗೆ ನೋಳ್ಪಂಗೆ ಸಲೆ ಕಂಗೆಸೆದಳಂದು ವಿಪಿನಸಿಂಧು || ||೨೪||
ಕೂರ್ಮಗಡಿಯಾಗಿರ್ಪ ಗುಣ್ಪಿಂದೆ ತನ್ನೆಡೆಯೊ |
ಳಾರ್ಮಿಳುಗ ಲವರಿಂದ್ರರಹರೆಂಬ ಪಂಪಿಂದೆ |
ಘೂರ್ಮಿಸುವ ಗಂಗಾಪ್ರವಾಹಮಂ ಕಂಡಳಾಜ್ವಾಲೆ ಬಳಿಕಲ್ಲಿ ನಿಂದು ||
ಧಾರ್ಮಿಕರಿವರೊಳುಂಟೆ ತನ್ನಂತಾಮೊಡಂ |
ನೀರ್ಮುಟ್ಟವಂತೊಯ್ಯನಾತಡಿಗೆ ಡಾಂಟಿಸುವ |
ಕೂರ್ಮೆಯುಳ್ಳವರೆಂದೊಡಲ್ಲಿರ್ದ ನಾವಿಕರ್ಕೇಳ್ದವಳ್ಗಿಂತೆಂದರು || ||೨೫||

ಬಿಂದುಮಾತ್ರಂ ಮೇಲೆ ಬೀಳಲ್ಕೆ ವಿಪ್ರನಂ |
ಕೊಂದಪಾಪಂ ಪೋಪುದಿಲ್ಲ ಮಿಂದವನ ಗತಿ |
ಯಂದಮಂ ಬಣ್ಣಿಸುವೊಡಜನ ಪವಣಲ್ಲ ನೀನಿಲ್ಲಿಗೇನಂ ಪ್ರಾರ್ಥಿಸಿ |
ಬಂದೆ ಗಂಗಾಂಬುವಂ ಮುಟ್ಟದಿರಬಹುದೆ ಪೇ |
ಳೆಂದೊಡಾಜ್ವಾಲೆ ನುಡಿದಳ್ಜಾಹ್ನವಿಗೆ ದೋಷ |
ವೊಂದಿಹುದು ನಿಮಗೊರೆವುದಿಲ್ಲಮವಳಿನಗೆ ವೈದೋರಲುಸಿರುವೆನೆಂದಳು || ||೨೬||

ವೈಜದಿಂದಜನ ಕರಪಾತ್ರದಗ್ರೋದಕಂ |
ವೈಜಯಂತೀಧರನ ಪಾದಾಂಬು ಶಿವನ ತಲೆ |
ಗೈಜಡೆವೆಳಸಿಗೆರೆದ ಜೀವನಂ ತಾನಂತುಮಲ್ಲವತಿಪಾಪಂಗಳ ||
ವೈಜೋಡನುಗಿದು ಬಿಸುಡುವ ಗಂಗೆ ಬೆದರಿದಳ್ |
ತ್ರೈಜಗದೊಳಪವಾಡ ಕಂಜದವರುಂಟೇ ಕೇ |
ಳೈ ಜನಪ ಚಲದೆ ಜಾಹ್ನವಿ ಕೇಳ್ದು ಪೊರಮಟ್ಟಳವಳೆಂದ ನುಡಿಗೆ ನಡುಗಿ || ||೨೭||

ಅಂಬುರುಹ ರೋಲಂಬ ಮತ್ಸ್ಯ ಕಚ್ಛಪ ವಾರಿ |
ಕಂಬು ಶೀಕರ ಚಕ್ರವಾಕ ಶೈವಾಲ ಕಾ |
ದಂಬ ಗಂಭೀರ ಸೈಕತ ಮೃಣಾಳಂಗಳಿವು ತನಗವಯವಂಗಳಾಗೆ ||
ಇಂಬಾದ ಸೌಂದರ್ಯಮಾನದಿಯ ನಡುವೆ ಪ್ರತಿ |
ಬಿಂಬಿಸಿದವೋಲ್ ದಿವ್ಯರೂಪ ನಳವಡಿಸಿ ಜಗ |
ದಂಬೆ ಜಾಹ್ನವಿ ಸಲಿಲಮಧ್ಯದಿಂದೆದ್ದು ಬಂದಾಜ್ವಾಲೆಯಂ ಕೇಳ್ದಳು || ||೨೮||

ದೋಷಹರೆ ತಾನೆಂದು ವೇದಶಾಸ್ತ್ರಂಗಳುರೆ |
ಘೋಷಿಪುವು ಮುಟ್ಟಲಾಗದು ತನ್ನನೆಂದು ನೀಂ |
ದೂಷಿಸುವ ಕಾರಣಮದಾವುದೌ ಜ್ವಾಲೆ ಹೇಳೆಂದು ಜಾಹ್ನವಿ ನುಡಿಯಲು ||
ದೂಷಣದ ಮಾತನಾಡುವಳಲ್ಲ ಲೋಕದ ಸು |
ಭಾಷಿತವನುಸಿರಬೇಹುದು ಪುತ್ರರಿಲ್ಲದಿಹ |
ಯೋಷೆಯಂಗಸ್ಪರ್ಶನಂ ಪಾಪಮೆಂಬರದಕಾಗಿ ಬೆದರಿದೆನೆಂದಳು || ||೨೯||

ಎಂದೊಡೆ ಕೆರಳ್ದು ಭಾಗೀರಥಿ ಸಮಸ್ತನೃಪ |
ಬೃಂದದೊಳ್ತನ್ನ ಮಗನುದ್ದಾಮನಾಗಿರ್ಪ |
ನೆಂದು ಮಳಿವವನಲ್ಲವಂ ಯದ್ಭಚ್ಛಾಮರಣಿ ಭಾಗವತ ಮಸ್ತಕಮಣಿ ||
ಬೃಂದಾರ ಕೋಪಮಂ ಸತ್ಯಸಂಧಂ ಭೀಷ್ಮ |
ನೆಂದು ಮೂಲೋಕದೊಳ್ಪ್ರಖ್ಯಾತನಾಗಿಹಂ |
ಮಂದಮತಿ ನೀನೆನಗೆ ಸುತರಿಲ್ಲೆನಲ್ಬಹುದೆ ಪೋಗೆಂದೊಡಿಂತೆಂದಳು || ||೩೦||

ಉಂಟು ನೀನಾಡಿದಿನಿತೆಲ್ಲಮುಂ ತಥ್ಯವಹು |
ದೆಂಟ ಕೊಂದುಳಿದುದಂ ಬಲ್ಲೆನಾನವರಿಂದೆ |
ವೆಂಟಣಿಸಿತಿನ್ನೆಗಂ ನಿನ್ನೇಳ್ಗೆ ಮೂಜಗದೊಳೀಗ ದಾಯಾದರೊಳಗೆ ||
ಗಂಟಿಕ್ಕಿದಾಹವದೊಳರ್ಜುನಂ ತವ ಸೂನು |
ವಂ ಟಕ್ಕಿನಿಂ ಕೊಂದನಲ್ಲದಿರ್ದೊಡೆ ಮತ್ತೆ |
ಕಂಟಕ ಮದೆತ್ತಣದು ಭೀಷ್ಮನಭ್ಯುದಯಕೆಂದಾಜ್ವಾಲೆ ಕಾಳ್ಗೆಡೆದಳು || ||೩೧||

ಪಚ್ಚೆಲೆಯ ತರುವನೊಣಗಿದ ಮರದ ಪೊರೆಯ ಕಾ।
ಳ್ಕಿಚ್ಚು ಕೊಂಡುರಿವವೊಲ್ ಜ್ವಾಲೆಯ ಮುಳಿಸಿನೊಡನೆ।
ನೆಚ್ಚಿ ತಮರಾಪಗೆಯ ಕೋಪವೆತ್ತಿದ ಹಸ್ತದಿಂ ಭೀಷ್ಮನಂ ಧುರದೊಳು ॥
ಎಚ್ಚುಕೊಂದರ್ಜುನನ ತಲೆಯನಾತನ ಸುತಂ।
ಕೊಚ್ಚಿ ಕೆಡಹಲಿ ತಿಂಗಳಕಾಲಕಾಹವದೊಳಿಂ।
ಮುಚ್ಚರಿಸಿ ಶಾಪಮಂ ಕೊಟ್ಟಡಗಿದಳ್ಜಲದ ಮಧ್ಯದೊಳ್ವಿಜಿತಟಿನಿ ॥ ॥೩೨॥

ನಾರಿಯರ ಛಲಮೆಂತುಟೋ ಕೇಳ್ಮಹೀಶ ಭಾ।
ಗೀರಥಿಗೆ ಕೋಪಮಂ ಬರಿಸಿ ಕುಡಿಸಿದಳತಿ ಕ।
ಠೋರತರ ಶಾಪಮಂ ಜ್ವಾಲೆ ಬಳಿಕದು ಸಾಲದಾಸರನ ತಲೆಯನರಿವ ॥
ಕೂರಲಗಿನಸ್ತ್ರವಾದಪೆನೆಂದು ಸುರನದಿಯ।
ತೀರದೊಳ್ವಹ್ನಿಪ್ರವೇಶಮಂ ಮಾಡಿ ಜಂ।
ಭಾರಿತನಯನ ಸೂನು ಬಭ್ರುವಾಹನನ ಮೂಡಿಗೆಯೊಳಂಬಾಗಿರ್ದಳು ॥ ॥೩೩॥

ಬಂದುದು ನರಂಗೆ ವಾಯದೊಳೀಗ ಶಾಪನಿಾ।
ಮಂದಾಕಿನಿಯ ಮಾತು ತಾಗಿದಲ್ಲದೆ ಮಾಣ।
ದಿಂದುಕುಲ ಮಳಿವುದೀತನ ಕೂಡೆ ಧರ್ಮಜಾದಿಗಳಸು ವಿಡಿಯ ಲರಿಯರು ॥
ಮುಂದೆ ಸುರಪುರದ ಲಕ್ಷ್ಮೀಕಾಂತ ನಾವತೆರ।
ದಿಂದೆ ಪರಿಹರಿಸುವನೊ ತನ್ನ ಶರಣಾಗತರ।
ನೊಂ ದುಪಾಯದೊ ಳುಳುಪದಿರನೆಂದು ಧೈರ್ಯಮಂ ತಾಳ್ದರಿಂದ್ರಾದಿಸುರರು ॥೩೪॥

ಸಂಧಿ ೯ ಕ್ಕೆ ಪದ್ಯಗಳು ೪೭೧ ಕ್ಕೆ ಮಂಗಳಮಸ್ತು.

## ಹತ್ತನೆಯ ಸಂಧಿ.

ಸೂಚನೆ॥ ಹರಿ ಶಿಲೆಯಮೇಲೆ ನಡೆಗಿಡೆ ಸವ್ಯಸಾಚಿ ಸೌ।
ಭರಿಯ ವೆಸೆಯಿಂದ ಮುದ್ದಾಲಕನ ಕಥೆಗೇಳು।
ತಿರದೆ ಹಂಸಧ್ವಜನ ಪಟ್ಟಣಕೆ ಬರಲವಂ ಕಾವಲ್ಗೆ ಪೊರಮಟ್ಟನು ॥

ಆಲಿಸೆಲೆ ಜನಮೇಜಯಕ್ಷಿತಿಪ ಮುಂದಣ ಕ।
ಥಾಲಾಪ ಕೌತುಕವ ಸುಚಿತದಿಂ ಫಲುಗುಣಂ।
ನೀಲಧ್ವಜನ ಕಂಡ ಬಳಿಕಾತನಂ ಕೂಡಿಕೊಂ ಡಖಿಳಸೇನೆಸಹಿತ ॥
ಮೇಲೆ ನಡೆದಂ ತೆಂಕಮೊಗಮಾಗಿ ಹಯದೊಡನೆ।
ಕಾಲಿಡುವ ಮುಂದಿಗಿಂಬಿಲ್ಲ ನೆಲ ನಾಗಸೆಂ।
ಸಾಲದೇಳುವ ಧೂಳಿಗೆಣ್ದೆಸೆ ಕಠೋರವಾದ್ಯಧ್ವನಿಗೆ ನೆರೆಯದೆಸಲು ॥ ॥೧॥

ಸಹದೇವನಾಗಿ ಸಮುದಿತ ನಕುಲನಾಗಿ ಸ।
ನ್ನಿಹಿತಾರ್ಜುನನುಮಾಗಿ ವರವೃಕೋದರನಾಗಿ।
ಮಹದಿಳಾಭೃದ್ರಾಜನಾಗಿ ಶಶಿಕಾಂತಕುಲದಿಂದೆ ಪಾಂಡವನುಮಾಗಿ ॥
ಅಹಿತರುಗಳಂ ಧಾರ್ತರಾಷ್ಟ್ರರಂ ಕೂಡಿಕೊಂ।
ಡಿಹುದರಿಂ ದಚಲನಾಗಿಹೆನೆಂದು ಹರಿಯೊಡನೆ।
ಬಹಪಾರ್ಥನಂ ಕರೆದು ಮೂದಲಿಪ ತೆರದಿಂದೆ ವಿಂಧ್ಯಾದ್ರಿ ಮುಂದೆಸೆದುದು ॥ ॥೨॥

ಎಸೆದುದಾಗಿರಿ ಗಗನಮಂಡಲವ ನಂಡಲೆವ |
ಲಸದುನ್ನತದ ಶೃಂಗದುತ್ಕರದ ಸತ್ಕರದ |
ಶಶಿಕಾಂತಮಯಮಾದ ರಮಣೀಯ ಕಮನೀಯ ಕಂದರದ ಸೌಂದರದೊಳು ||
ಮುಸುಕಿ ತಪ್ಪಲ ಮೇವ ಮಂಜುಗಳ ನಂಜುಗಳ |
ದಶನದುಗ್ರಾಹಿಗಳ ಪುತ್ತುಗಳ ಮುತ್ತುಗಳ |
ಜೆಸಲಾದ ಪೆರ್ಬಿದಿರ ಕಾಡುಗಳ ಬೀಡುಗಳ ಶಬರಿಯರ ಸಂಕುಲದೊಳು || ||೩||
ಪಕ್ಷಿ ಮೃಗಜಾತಿಗಳು ಲೀಲೆ ಮಿಗೆ ರಮಿಸುತಿಹ |
ಯಕ್ಷ ಕಿನ್ನರ ಕಿಂಪುರುಷ ಗರುಡ ಗಂಧರ್ವ |
ರಕ್ಷೋಗಣಂಗಳಿಂದಲ್ಲಲ್ಲಿಗೆಸೆವ ಪುಣ್ಯಾಶ್ರಮದ ಮುನಿಗಳಿಂದೆ ||
ಋಕ್ಷವಾನರಕುಲದ ವಿವಿಧ ಚೇಷ್ಟೆಗಳಿಂದೆ |
ವೃಕ್ಷಲತೆಗಳ ಕುಸುಮ ಫಲ ಸಮೃದ್ಧಿಗಳಿಂದ |
ಮಕ್ಷಿಗಚಲೇಂದ್ರ ಮಸೆದಿರ್ದುದು ಪುಳಿಂದೆಯರ ತನುಗಂಧ ಬಂಧುರದೊಳು || ||೪||
ಅಭಿಲಾಷೆಯಂತಿರೆ ಸದಾನವಂ ಸಿರಿಯಂತೆ |
ವಿಭವಾಸ್ಪದಂ ಕಲಾನಿಧಿಯಂತೆ ಮೃಗಧರಂ |
ನಭದಂತೆ ಕುಜಯುತಂ ದ್ವಿಜನಂತೆ ವಂಶಪರಿಶೋಭಿತಂ ಸ್ವರ್ಗದಂತೆ ||
ಶುಭಸುರಭಿಸಂಭೃತಂ ರಣದಂತೆ ಶರವೃತಂ |
ಸಭೆಯಂತೆ ಚಿತ್ರಪತ್ರಾನ್ವಿತಂ ದಿನಕರ |
ಪ್ರಭೆಯಂತೆ ಪುಂಡರೀಕೋಲ್ಲಾಸಕರಮಾಗಿ ತಚ್ಛೈಲಮೆಸೆದಿರ್ದುದು || ||೫||
ನಾಗಭೂಷಣನಾಗಿ ಶಿವನಲ್ಲ ಹರಿಗಿರ್ಕೆ |
ಯಾಗಿ ಪಾಲ್ಗಡಲಲ್ಲ ಶಿಖಿನಿವಾಸಸ್ಥಾನ |
ಮಾಗಿ ದಿಗ್ಭಾಗಮಲ್ಲ ಷ್ಟಾಪದೋದ್ಭಾಸಮಾಗಿ ನೈಪಥ್ಯಮಲ್ಲ ||
ಗೋಗಣಾನ್ವಿತಮಾಗಿ ವ್ರಜಮಲ್ಲ ಖಡ್ಗಧರ |
ನಾಗಿ ಪಟುಭಟನಲ್ಲ ಮಹಿಷೀವಿಲಾಸಕರ |
ಮಾಗಿ ನೃಪಗೇಹಮಲ್ಲೆನಿಸಿರ್ದುದಾಶ್ಚರ್ಯ ಸಾಂಪ್ರಮಚಲೇಂದ್ರಮೆಸೆದು || ||೬||
ಶೃಂಗಮಯ ಮುರುಶಿಲಾಸಂಗಮಯ ಮಧಿಕ ಮಾ |
ತಂಗಮಯ ಮನುಪಮಭುಜಂಗಮಯ ಮುನ್ನತ ಲ |
ವಂಗಮಯ ಮಮಿತಸಾರಂಗಮಯ ಮದ್ಭುತಪಸಿಂಗಮಯ ಶರಭಮಯವು ||
ಭೃಂಗಮಯ ಮವಿರಳ ವಿಹಂಗಮಯ ಮೊಪ್ಪುವ ಕು |
ರಂಗಮಯ ಮಮರಿಯ ರನಂಗಮಯ ಕೇಳಿಗಳ |
ಸಂಗಮಯ ಮೆನಿಪ ಗಿರಿ ಭಂಗಮಯ ಮಲ್ಲಿದುತ್ತುಂಗಮಯ ಮಾಗಿರ್ದುದು ||೭||
ಬಹುಕಾಲಮೆಸಗೆ ನೀರ್ಮಳೆಗರೆದ ಪುರುಷಾರ್ಥ |
ಕಹಹ ವೃದ್ಧಿಂದುಗಳನೀಗ ಸುರಿದಪೆನೆಂದು |
ಮಹಿ ನಭಸ್ಥಳಕೂರ್ಧ್ವಮುಖಮಾಗಿ ಸೂಸುವ ರಜತಕೋಸಿಂಪಿನೆ [illegible] ||
ಬಹುಳ ತರು ಗುಲ್ಮಲತೆ ಮೃಗಪಕ್ಷಿ ಕ್ರಿಮಿ ಕೀಟ |
ಗುಹೆ ದೊಣೆ ಮೊರಡಿ ಪಳ್ಳ ಕೊಳ್ಳ ಜರಿ ಸರಿ ಜಲುಗು |
ಗಹನ ಗಹ್ವರದ ವಿಂಧ್ಯಾದ್ರಿಯಂ ಫಲುಗುಣನ ಸೇನೆ ತುಳಿದಸಿಯರೆದುದು || ||೮||

ಹರಿಯ ಸೇವಕರ ಬರವಂ ಕಾಣುತಾ ವಿಂಧ್ಯ ।
ಗಿರಿಯ ದುರ್ಮಾರ್ಗಮುಂ ಸನ್ಮಾರ್ಗಮಾಯ್ತುದು ।
ರ್ಧರಹೃದಯವನಜಾಂಧಕಾರಮುಂ ಸುಪ್ರಕಾಶಿತಮಾಯ್ತು ವಿಕೃತಿಯುಡಗಿ ॥
ಉರುತರ ಪ್ರಭವ ದವಮುಕ್ತಭಾವಿತಮಾಯ್ತು ।
ನಿರುಪಮಾಶಾಪರಿಜ್ಞಾನಮಾಯ್ತಿರದೆ ಗೋ ।
ಚರಮಾಯ್ತು ವಿಷ್ಣುಪದಮೆನೆ ನಡೆದುದಾಹಯಂ ಬೆಂಬಿಡದ ಸೇನೆಸಹಿತ ॥ ॥೯॥
ಮಂದಿ ಸಂದಣಿಸಿ ಬೆಂಕೊಂಡು ನಡೆತರೆ ಕುದುರೆ ।
ಮುಂದೆ ಬರೆಬರೆ ಕಂಡುದೊಂದು ಯೋಜನದಗಲ ।
ದಿಂದೆಸೆವ ಶಿಲೆಯು ನವರೊಳ್ಪೊರಳ್ದಪೆನೆಂಬ ತವಕದಿಂ ದತಿಘರಮೊಳು ॥
ಬಂ ದಡದರ್ಕಲ್ಲ ಮೇಲೆ ಹರಿ ಕಾಲಿಟ್ಟು ।
ವಂದು ಹರಿ ಮೆಟ್ಟಿದೊಡೆ ಪೆಣ್ಣಾದುದಂತೆ ಮೇ ।
ಣೆಂದಾಗದಿರ್ಪುದೆ ಪೇಳೆಂಬಿನಂ ಮಹೀಪಾಲ ಕೇಳದ್ಭುತವನು ॥ ॥೧೦॥
ಕಾಲಿಡಲ್ಕಾಶಿಲೆಯೊಳಾ ತುರಂಗದ ಖುರಂ ।
ಕೀಲಿಸಿತು ಭಿನ್ನಿಸದೆ ಕೂಡೆ ಬೆಚ್ಚಂದದಿಂ ।
ಮೇಲೆ ನಡೆಗೆಟ್ಟು ನಿಂದುದು ದರಿದ್ರನ ಮನೋರಥದಂತೆ ನಿಜ ತನುವಿನ ॥
ಲೀಲೆ ಯುಡಗಿರ್ದುದಾಕೃತಿಯ ಭಂಜಿಕೆ ಯೆನ ।
ಲ್ಬಾಲೋಲ ಕೇಳೈಕ್ಯಮಾಗಿರ್ದುದಾ ಕಲ್ಲೊ ।
ಳಾಲಲಿತವಾಜಿ ಪೂರ್ಣೇಂದುಮಂಡಲದೊಳೊಪ್ಪುವ ಮೃಗಾಂಕದ ತೆರದೊಳು ॥೧೧॥
ಗಾಳಿಯಂ ಮಿಕ್ಕು ನಡೆವಾ ಹಯಂ ಕಾಲ್ಗಳಂ ।
ಕೀಳಲಾರದೆ ನಿಂದು ದರೆಯೊಳೀನಚ್ಚರಿಯೊ ।
ಪೇಳಬೇಕೆಂದು ಚರರೈತಂದು ಪಾರ್ಥಂಗೆ ಕೈಮುಗಿದು ಬಿನ್ನೈಸಲು ॥
ಕೇಳಿ ವಿಸ್ಮಿತನಾಗಿ ಬಂದು ನೋಡಿದನಲ್ಲಿ ।
ಗಾಳನಟ್ಟಿದ ನಬ್ಬರಿಸಿ ಸೆಳೆಗಳೆಂದೆ ಪೊ ।
ಯ್ದೇಳಿಸಿದೊಡದು ವಜ್ರಲೇಪವಾದುದು ಸಿಲುಕಿ ತಾಕುದುರೆ ಕಲ್ಲೆಡೆಯೊಳು ॥೧೨॥
ಬಳಿಕ ಚಿಂತಿಸಿದ ನರ್ಜುನ ನಿದೇನಾದೊಡಂ ।
ಮುಳಿದ ಮುನಿಪನ ಶಾಪಮಾಗಬೇಕೀ ವನ ।
ಸ್ಥಳದೊಳಾಶ್ರಮಮುಂಟೆ ನೋಳ್ಪ ದಗಲದೊಳೆಂದು ಚಾರರಂ ಕಳುಹ ಲವರು ॥
ತೊಳಲಿ ನಿಮಿಷದೊಳರಸಿ ಬಂದು ಬಿನ್ನೈಸಲ್ಕೆ ।
ಫಲುಗುಣಂ ಪ್ರದ್ಯುಮ್ನ ವೃಷಕೇತು ಸಾಲ್ವಪತಿ ।
ಕಲಿಯೌವನಾಶ್ವ ನೀಲಧ್ವಜರ ನೈವರಂ ಕೂಡಿಕೊಂ ಡೈತಂದನು ॥ ॥೧೩॥
ವೆಗ್ಗಳಿಸ ರಿನಚಂದ್ರ ಪವನ ಶಿಖಿ ಪರ್ಜನ್ಯ ।
ರೊಗ್ಗಿಹವು ವೈರಮಿಲ್ಲದೆ ನಿಖಿಳ ಮೃಗಪಕ್ಷಿ ।
ಸೊಗ್ಗಲರ್ಕಾಯ್ಪಣ್ತಿರ್ಗಳಿಂ ಬೀಯುವೆಂಪೆಂದುಮೆಲ್ಲಾ ತರುಗಳು ॥
ಸಗ್ಗದವರಂತೆ ಬೇಡಿತ ನೀವು ಪಾವಗಂ ।
ಸುಗ್ಗಿಯಾಗಿಹುವಾರು ಋತುಗಳುಂ ಸಲೆ ಪೆಚ್ಚು ।
ತಗ್ಗಿ ಶೀತೋಷ್ಣ •ಸುಖ ದುಃಖಂಗಳೊಗೆಯದಾಶ್ರಮವೊಂದು ಮುಂದೆಸೆದುದು॥೧೪॥

ವೇದಶಾಸ್ತ್ರಾಗಮ ಸ್ಮೃತಿ ಪುರಾಣಾವಳಿಯ |
ನೋದಿಸುವ ಕುಶ ಸಮಿತ್ಪುಷ್ಪ ಫಲ ಮೂಲ ಪ |
ಣ್ರ್ಗಾದಿಗಳ ನೊದವಿಸುವ ಜಪ ತಪ ಸ್ನಾನಾಗ್ನಿ ಹೋತ್ರ ವಿಧಿವೇಳೆಗಳನು ||
ಸಾಧಿಸುವ ರವಿನಮಸ್ಕಾರ ಹರಿಹರ ಸಮಾ |
ರಾಧನೆಗಳಂ ಮಾಡು ವತಿಥಿಗಳ ನಕ್ಕರೆಯಿಂ |
ದಾದರಿಪ ಯೋಗಮಾರ್ಗದೊಳೆಸೆವ ಮುನಿಗಳಾಶ್ರಮದೆಡೆಯೊಳಿರುತಿರ್ದರು ||೧೫||
ಸುಡದಿರ್ದಪಾವಕನೊ ಬಿಸಿ ಮಾಣ್ದ ರವಿಯೊ ತಂ |
ಪಿಡಿದಿರದ ಚಂದ್ರಮನೊ ವಿಷಕಂಠನಾಗದಿಹ |
ಮೃಡನೋ ರಜಮಂ ಪೊರ್ದ ದಂಬುಜಾಸನನೊ ಫಣಿತಲ್ಪನಲ್ಲದ ವಿಷ್ಣುವೋ ||
ಕಡುತೇಜ ದೊಬ್ಬುಳಿಯೊ ಶಾಂತಿಯ ನಿಜಾಕಾರ |
ದೊಡಲೊ ಪೇಳೆಂಬಸೌಭರಿ ಮುನಿಪನಾಶ್ರಮದ |
ನಡುವೆ ಕುಳ್ಳಿರ್ದು ಸುಖಯೋಗದೊಳಿರಲ್ಕೆ ನಡೆತಂ ದರ್ಜುನಂ ಕಂಡನು || ||೧೬||
ಬಂದು ಸಾಷ್ಟಾಂಗದಿಂದೆರಗಿ ಸೌಭರಿಮುನಿಯ |
ಮುಂದೆ ಕೈಮುಗಿದು ನಿಲಲಾ ಪಾರ್ಥನಂ ಪ್ರೀತಿ |
ಯಿಂದೆ ಸತ್ಕರಿಸಿ ಕುಶಲಂಗಳಂ ಕೇಳ್ದಿಲ್ಲಿಗೇಕೆ ಬರವಾಯಿತೆನಲು ||
ಅಂದು ಕುಲಗೋತ್ರಮಂ ಕೊಂದಪಾಪಂ ಪೋಗ |
ಲೆಂ ದಶ್ವಮೇಧಮಂ ತೊಡಗಿಯೆಂದಂ ಧರ್ಮ |
ನಂದನಂ ಕಳುಹಿದಂ ಹಯರಕ್ಷೆ ಗದರೊಡನೆ ಬರೆ ಸಿಲ್ಕಿತದು ಶಿಲೆಯೊಳು || ||೧೭||
ಎಲೆ ಮುನೀಶ್ವರ ತವಾನುಗ್ರಹದೊಳಲ್ಲ ದೀ |
ಶಿಲೆಯೊಳೊಂದಿದ ಹಯಂ ಬಿಡುವುದಂ ಕಾಣೆ ನೀ |
ನುಳುಹಬೇಕೆಂ ದೆರಗ ಲರ್ಜುನನ ಮೊಗನೋಡಿ ನಗುತೆ ಸೌಭರಿ ನುಡಿದನು ||
ತಿಳುಹಿದಂ ಪಿಂತೆ ಭಾರತಯುದ್ಧಮಧ್ಯದೊ |
ಳ್ನಳಿನನಾಭಂ ನಿನಗೆ ಮತ್ತೆಯು ಮಹಂಕಾರ |
ಮುಳಿದುದಿ ಲ್ಲಕಟ ಜಗದೊಳ್ಕೊಲ್ವರಾ ರ್ಕಾವ ರಾರ್ಬಲ್ಲೊ ಡುಸಿರೆಂದನು || ||೧೮||
ಶ್ರೀಕೃಷ್ಣನಿರೆ ಮುಂದೆ ವಂಶಮಂ ಕೊಂದೆ ನೆಂ |
ಬೀಕೃತ್ಯದಿಂ ಪಾತಕಂ ಬಹುದೆ ನಿನ್ನೊಳ್ಸ |
ವಾ ಕೃಪಾನಿಧಿಯ ಸಾನ್ನಿಧ್ಯ ಮಿರುತಿರಲಾಗಿ ವಾಜಿಮೇಧಂ ಬೇಹುದೆ ||
ಆಕೃತಾಂತಕ ನರಿದ್ದುದಿಲ್ಲಲಾ ಲೋಕದೊ |
ಳ್ಪ್ರಾಕೃತರ ತೆರದಿಂದೆ ಹರಿ ಮನೆಯೊಳಿರೆ ಗರ್ದ |
ಭಾಕೃತಿಯ ಹರಿಯೊಡನೆ ಬಂದೆ ಸುರಭೂಜನಿರೆ ಶಾಲ್ಮಲಿಯ ನರಸುವಂತೆ || ||೧೯||
ಕೊಟ್ಟಿಗೆಯ ಕಾಮಧೇನುವ ನೊಲ್ಲ ದಕ್ಕರೆಯಿಂ |
ಕಟ್ಟರಣ್ಯದ ಪುಲಿಯ ನರಸಿ ಕರೆಯ ಲ್ಕೊದೆಯ |
ಕಟ್ಟುವೆ ಯಲಾ ತುರಗಮೇಧಮೇಗೈವು ದಾಹರಿಯ ಸಾನ್ನಿಧ್ಯನಿರಲು ||
ಹುಟ್ಟಿತಿಲ್ಲವೆ ನಿನಗರಿವು ಧರ್ಮಸೂನು ಮತಿ |
ಗೆಟ್ಟಿಹನೆ ಶಿವಶಿವ ವೃಥಾ ಪರಿಭ್ರಮಿಸುವೆ ನಿಮ |
ಗೆಟ್ಟಿತೆಂ ದಮರೇಂದ್ರಸೂನುವಂ ಜರೆದು ಸೌಭರಿ ನುಡಿದೊ ಡಿಂತೆಂದನು || ||೨೦||

ಹರಿಯನುಳಿದಾವು ಬದುಕುವರಲ್ಲ ಚಿತ್ತದೊ।
ಳ್ಪರಿತನಾಗಿಹ ನಾವಗಂ ಧರ್ಮಸೂನು ಮರೆ।
ದಿರನಾ ಮುರಾರಿಯ ನಿರೂಪದಿಂ ತೊಡಗಿ ಮಾಡುವ ನೀ ಮಹಾಕ್ರತುವನು ॥
ತರಳತೆಯ ಮರೆನೆಗಿಂ ತರಿವ ನುಪದೇಶಿಪೊಡೆ।
ಗುರುಗಳಲ್ಲವೆ ನೀವು ಧನ್ಯರಾದಪೆ ವಿನ್ನು।
ಕರುಣದಿಂ ದೀ ಶಿಲೆಯೊಳೊಂದಿದ ತುರಂಗಮಂ ಬಿಡಿಸಿಕೊಡ ಬೇಕೆಂದನು ॥ ॥೨೦॥
ಇನ್ನು ಚಿಂತಿಸದೆ ಕೃಷ್ಣಸ್ಮರಣೆಯಂ ಮಾಡಿ।
ನಿನ್ನ ಹಸ್ತಸ್ಪರ್ಶನಂ ಗೆಯ್ದೊಡಾ ಕುದುರೆ।
ಮುನ್ನಿನಂ ತವನಿಯೊಳ್ನಡೆವಪುದು ಪೋಗು ನೀನೆಂದು ಸೌಭರಿ ನುಡಿಯಲು ॥
ತನ್ನೊಳಗೆ ತಾನೆ ವಿಸ್ಮಿತನಾಗಿ ಪಾರ್ಥ ನದ।
ರುನ್ನತಿಯ ತುದಿಮೊದಲ ನರುಹೆನಲ್ ಜ್ಞಾನ ಸಂ।
ಪನ್ನ ತಾಪಸ ನರ್ಜುನಂಗೆ ವಿಸ್ತರಿಸಿದಂ ಮತ್ತೆ ಪೂರ್ವಾಪರವನು ॥ ॥೨೨॥
ಆಲಿಸರ್ಜುನ ಮುನ್ನ ವಿಪ್ರನುಂಟೊರ್ವ ನು।
ದ್ದಾಲಕಾಖ್ಯಂ ತಿಳಿದ ನಖಿಳ ಶಾಸ್ತ್ರಂಗಳಂ।
ಮೇಲೆ ವೈವಾಹದೊಳ್ವಧುವಾದ ಳಾತಂಗೆ ಚಂಡಿಯೆಂಬಾಕೆ ಬಳಿಕ ॥
ಕಾಲಕಾಲದ ಜಪಾನುಷ್ಠಾನ ಪೂಜೆಗಳಿ।
ಗಾಲಸ್ಯಮಂ ಮಾಡ ದೆನ್ನ ಪರಿಚರ್ಯೆ ಗನು।
ಕೂಲೆಯಾಗಿರ್ದು ಮನೆವಾಳ್ತೆಯಂ ಸಾಗಿಪುದು ನೀನೆಂದೊ ಡಿಂತೆಂದಳು ॥ ॥೨೩॥
ಎಳ್ಳನಿತು ನಿನ್ನ ಮಾತಂ ಕೇಳ್ವಳೆಂದೆಣಿಕೆ।
ಗೊಳ್ಳದಿರ್ ಪರಿಚರ್ಯೆ ಮನೆವಾಳ್ತೆಯೆಂ ದೆಂಬ।
ತಳ್ಳಿಯವಳಲ್ಲ ನೀನೆಂದುದಂ ಮಾಡೆನೆಂ ದಾಚಂಡಿ ಚಂಡಿ ಪೋರೆ ॥
ಮುಳ್ಳಿಡಿದ ಮರನೇರಿದಂತಾದು ದಿಹಪರ ಕ।
ದೊಳ್ಳಿತಾದಪುದೆ ಬಂದುದು ತಪೋಹಾನಿ ಯೆಂ।
ದಳ್ಳಿಯೊಳ್ಕೋಲ್ಗೊಂಡ ತೆರದೊಳುದ್ದಾಲಕಂ ಚಿಂತಿಪಂ ಪ್ರತಿದಿನದೊಳು ॥೨೪॥
ಇಂತಿರುತಿರಲ್ಕೆ ಕೌಂಡಿನ್ಯನೆಂಬೊರ್ವಮುನಿ।
ಪಂ ತನ್ನ ಮನೆಗೆ ಬರಲಾತನಂ ಸತ್ಕರಿಸಿ।
ಚಿಂತೆವೆತ್ತಿರ ಲವ ನಿದೇನೆಂದು ಬೆಸಗೊಂ ಡವಳ ಪ್ರತಿಕೂಲತೆಯನು ॥
ಅಂತರಿಸ ದೆಲ್ಲಮಂ ಪೇಳ್ದೊಡವನಿದಕೆ ನೀಂ।
ಮುಂತೆ ವಿಪರೀತಮಂ ಮಾಡಲಾದಪುದೆಂದು।
ಸಂತಾಪಮಂ ಬಿಡಿಸಿ ಬೀಳ್ಕೊಂಡವಂ ತೀರ್ಥಯಾತ್ರೆ ಗೈಧಿದನಿತ್ತಲು ॥ ॥೨೫॥
ಉದ್ದಾಲಕಂ ಬಳಿಕ ತನ್ನ ಮಂದಿರದೊಳಿರು।
ತಿದ್ದ ಸಮಯಕೆ ಪಿತೃ ಶ್ರಾದ್ಧ ದಿವಸಂ ಸಂದೊ।
ಡಿದ್ದು ಚಂಡಿಯೊಳೆಲಗೆ ನಾಳೆ ಪೈತೃಕಮುದಂ ನಾಡಿದಲ್ಲದೆ ಮಾಡೆನು ॥
ಕದ್ದು ತಹೆ ನಧಮ ಧಾನ್ಯವ್ರೀಹಿ ಶಾಕಮಂ
ಪೊದ್ದಲೀಯೆಂ ಶುದ್ಧವಸ್ತುಗಳ ನೊಂದುಮಂ।
ತದ್ದಿನಕೆ ಮರುದಿವಸದೊಳ್ಪೇಳ್ದು ಬಹೆ ನಪಾತ್ರಂ ಗೆಂದೊ ಡಿಂತೆಂದಳು ॥ ॥೨೬॥

ನಾಳೆ ಮಾಡಿಸುವೆನಾಂ ಪೈತೃಕವ ನುತ್ತಮದ|
ಶಾಲಿಧಾನ್ಯ ವ್ರೀಹಿ ಶಾಕಮಂ ಕೊಂಡುಬಹೆ|
ನಾಲಯುವ ನತಿಶುದ್ಧವಾದ ವಸ್ತುಗಳಿ ನಲ್ಲದೆ ಕೂಡೆ ನಭಕ್ತಿಯಿಂದೆ ||
ಪೇಳಿಸುವೆ ನಂದಿನ ದಿನದ ಮೊದಲ ರಾತ್ರಿಯೆ ವಿ|
ಶಾಲಗುಣ ಸಂಪನ್ನ ವೇದಪಾರಂಗತ ಸು|
ಶೀಲರಹ ಸತ್ಪಾತ್ರ ದವನಿ ಯಮರರ್ಗೆನ ಲ್ಕಂಡಿ ಗವಸಿಂತೆಂದನು || ||೨೭||
ಆದೊಡೆ ಕುತುಪಕಾಲಮಂ ಬಿಡುವೆ ನರ್ಚನೆ ಯೊ|
ಳಾದರಿಸೆನಾಂ ಬಂದವಿಪ್ರರಂ ಪಾಕದ ನ|
ವೋದನ ಸುಪಾಯಸ ಗುಡಾಜ್ಯಮಧುತೈಲ ಮೃದುಭಕ್ಷ್ಯಭೋಜ್ಯಾದಿಗಳನು ||
ಸ್ವಾದುಫಲ ಶರ್ಕರೆ ವಿನುತ ಶಾಕ ನಿರ್ಮಲ ಪ|
ಯೋದಧಿಗಳಂ ಸಕುತ್ಸಿತಮಾಗದಂತೆ ಸಂ|
ಪಾದಿಸಿ ಪಿತೃಶ್ರಾದ್ಧಮಂ ಮಾಡಿ ವಸ್ತ್ರದಕ್ಷಿಣೆಗಳಂ ಕೊಡೆನೆಂದನು || ||೨೮||
ಎಂದೊಡೆ ಕುತುಪಕಾಲಮಂ ಮೀರಲೀಯೆ ನಾಂ|
ಬಂದ ವಿಪ್ರರ ನಾದರಿಸಿ ಪೂಜೆಗೈಸದಿರೆ|
ನಿಂದೊಲ್ಲೆನೆಂ ದೊಕ್ಕಣಿಸಿ ದಿನಿತ ನೆಲ್ಲಮಂ ಸಂಪಾದಿಸದೆ ಮಾಣೆನು ||
ತಂದಮಲ ವಸ್ತ್ರ ತಾಂಬೂಲ ವರದಕ್ಷಿಣೆ ಗ|
ಳಿಂದೆ ಸತ್ಕರಿಸಿ ಕಳುಹಿಸದೆ ಬಿಡೆ ನೆನುತೆ ನಲ|
ವಿಂ ದೊದವಿಸಿದ ಳಖಿಲ ಸದ್ದ್ರವ್ಯಮಂ ಬಳಿಕ ಚಂಡಿ ಪಾಕಂಗೈದಳು || ||೨೯||
ಕಂಡನೀತೆರನ ನುದ್ದಾಲಕಂ ಸಂತಸಂ|
ಗೊಂಡು ಮನದೊಳ್ಪ್ರಿಯಗೆ ತಾನೊಪ್ಪದವನಾಗಿ|
ಚಂಡಿ ಪೇಳಿದವೊಲಾ ಶ್ರಾದ್ಧಮಂ ಮಾಡಿ ಸಂಪ್ರೀತಿಯಿಂ ವಿಪರೀತವ ||
ತೊಂಡುತೊಳಸಂ ಮರೆದು ಕರ್ಮಾಂಗವಾಗಿರ್ದ|
ಪಿಂಡಮಂ ತೆಗೆದು ಮಡುವಿನೊಳೆ ಹಾಯ್ಕೆಂದೊಡು|
ದ್ದಂಡದಿಂ ವೆತ್ತಿ ಬೀದಿಗೆ ಬಿಸುಡಲಾದ್ವಿಜಂ ರೋಷಭೀಷಣನಾದನು || ||೩೦||
ಎಲೆಗೆ ನಿನ್ನೊಡನೆ ನಾನೇಂ ಹರಿಯ ಹೋರುವೆಂ|
ಛಲಿತನಕಲಸಿದೆ ನಾನರೆಯಾಗಿ ಹೋಗೆಂದು|
ಸಲೆ ಮುಳಿದು ಶಾಪಮಂ ಕೊಟ್ಟು ಕಾರುಣ್ಯದಿಂದಾದ್ವಿಜಂ ಕೂಡೆ ತಿಳಿದು ||
ಕೆಲವು ಕಾಲಕೆ ನಿನ್ನೊಳಧ್ವರ ಹಯಂ ಬಂದು|
ನಿಲಲರ್ಜುನಂ ಬಿಡಿಸಿದೊಡೆ ಮೋಕ್ಷಮಹುದೆಂದು|
ತೊಲಗಿದಂ ಸನ್ಯಾಸ ಕವನತ್ತ ಲವಳಿಯೊಳ್ಕಲ್ಲಾದ ಳಿವಳಿತ್ತಲು || ||೩೧||
ಮೋಕ್ಷಮಹುದಾಗಿ ಚಂಡಿಗೆ ಶಾಪನಿದಾಗ ಳುಪ|
ಸಾಕ್ಷಿಗೈತಂದು ನಿಂದುದು ಹಯಂ ನೀಂ ಪುಟ್ಟ|
ಲೀ ಕ್ಷಣದೊ ಳಿದ್ದು ಪೋದಪುದು ಪೋಗಿನ್ನು ಮುಂದಣ ನೃಪ ಬಲವಂತರು ||
ರಾಕ್ಷಸಾರಿಯನೆ ಮರೆಯ ದಿರೆಂದು ಸೌಭರಿ ನಿ|
ರೀಕ್ಷಿಸಿ ಕೃಪಾವಲೋಕನದಿಂದೆ ವರ ಸಹ|
ಸ್ರಾಕ್ಷನ ಕುಮಾರನಂ ಕಳುಹೆ ಲಾಸತನಾಗಿ ವಿನಯದಿಂ ಬೀಳ್ಕೊಂಡನು || ||೩೨||

ತದನಂತರದೊ ಳರ್ಜುನಂ ಬಂದು ಕುದುರೆಯಂ |
ಮುದದಿಂದೆ ಮುಟ್ಟ ಲದು ಬಿಟ್ಟು ನಡೆದುದು ಮುಂದ |
ಕೊದರಿಕೊಳು ತಿದ್ದ ನರನಂ ಕಂಡು ಚಂಡಿ ತಪಕಾಗಿ ಕಳುಹಿಸಿಕೊಂಡಳು |
ಒದವಿದ ಸಮಸ್ತ ಜನವಾಗ ವಿಸ್ಮಿತ ವಾದು |
ದುದಿರಿತು ಕುಸುಮವೃಷ್ಟಿ ಬಳಿಕ ದಕ್ಷಿಣಕೆ ನಡೆ |
ದುದು ವಾಜಿ ಚಂಪಕಾಪುರಕಂದು ಹಿಂದೆ ಬಹ ಪಡೆಸಹಿತ ವಹಿಲದಿಂದೆ || ||೩೩||

ಘನಘೋಷದಿಂದೆ ವಾಹಿನಿಗ ಳೈತರುತಿರ |
ಲ್ವನಧಿ ಮೇರೆಯ ನತಿಕ್ರಮಿಸಿ ಬಂದಪುದೆಂದು |
ಮುನಿದು ಭೂಮಂಡಲಮಿರದೆ ನಭಸ್ಥಳಕೆ ಪೋಪಂತೆ ದೂಳೇಳುತಿರಲು ||
ಅನುಸಾಲ್ವ ಸಾತ್ಯಕಿ ಪ್ರದ್ಯುಮ್ನ ಯೌವನಾ |
ಶ್ವ ನರೇಶ ವೃಷಕೇತು ನೀಲಧ್ವಜರ ಸೈನ್ಯ |
ಮನುಪಮಿತವಾಗಿ ನಡೆದುದು ಚಂಪಕಾ ನಗರಿ ಗರ್ಜುನನ ಹಯದಕೂಡೆ ||೩೪||

ತನೆ ಸರ್ವಮಂಗಳಾಸ್ಪದವಾದೊಡಂ ಪರಾ |
ಭವಯುಕ್ತವಾಗಿರ್ಪುದೆಂದು ಕೈಲಾಸಾ ಚ |
ಲದ ನತುಳ ಲಕ್ಷ್ಮೀನಿಳಯ ವಾದೊಡಂ ಭಂಗಸಹಿತವಾಗಿರ್ಪುದೆಂದು ||
ಅವಿರಳ ಪಯೋನಿಧಿಯ ನಟ್ಟಹಾಸಂ ಮಾಡು |
ವ ವೊಲಿರ್ದುದಾ ಪುರಂ ಪ್ರಾಸಾದ ಕೋಟಿಗಳ |
ಧವಳಿಮ ಸುಧಾಕೀರ್ಣ ರುಚಿಗಳಿಂ ಪೊರಗೆ ನೋಡುವ ಜನರ್ಗೇವೇಳ್ವೆನು || ||೩೫||

ಇದು ಪುರಸ್ತ್ರೀಯ ಮಣಿಕಾಂಚೀವಲಯಮೊ ಭೂ |
ಸುದತಿಯ ಕೊರಳ ವಿರಾಜಿಪ ರತ್ನಮಾಲಿಕೆಯೊ |
ತ್ರಿದಶಪತಿ ಗಿರಿಗಳಂ ಕಡಿವಂದು ತೆಗೆದಿಡುವೆನೆಂದು ತಿರಿಪಿದ ಕುಲಿಶದಾ ||
ಪೊದರು ಪೆಳ ಗಿಳೆ ಗಿಳಿದು ವಜ್ರಮಯವಾಗಿ ನಿಂ |
ದುದೊ ವಿಮಲಕೀರ್ತಿ ಚಂದ್ರಿಕೆಯುಂ ಪರಪುವ ನಗ |
ರದ ರಾಜಮಂಡಲದ ಪರಿವೇಷಮೋ ಪೇಳೆನ ಲ್ಕೋಟೆ ಕಣ್ಗೆಸೆದುದು || ||೩೬||

ಆ ನಗರ ದರಸು ಹಂಸಧ್ವಜಂ ಕೇಳ್ದು ನೀ |
ಸೇನೆ ಸಹಿತರ್ಜುನಂ ದರಮುಖ ತುರಂಗ ರ |
ಕ್ಷಾನಿಮಿತ್ತಂ ಬಂದು ಸೀಮೆಯಂ ಪೊಕ್ಕುದಂ ದೂತಮುಖದಿಂದೆ ಬಳಿಕ ||
ಧ್ಯಾನಿಸಿದ ನೊಂದೆರಡುಗಳಿಗೆ ತನ್ನಾಪ್ತ ಪ್ರ |
ಧಾನರೆಲ್ಲರನಾಗ ಕರೆಸಿಕೊಂ ಡವರೊ ಳ್ನಿ |
ದಾನಿಸಿ ನುಡಿದನಂದು ಶ್ರದ್ಧಾಳು ಸುಮತಿ ಪ್ರಮತಿ ಯೆಂಬ ಮಂತ್ರಿಗಳ್ಗೆ || ||೩೭||

ಈ ಧನಂಜಯನ ತುರಗವನೀಗ ಕಟ್ಟಿದೊಡೆ |
ಮಾಧವಂ ತಾನೆ ಮೈದೋರುವ ನೆಮಗೆ ಕೃಷ್ಣ |
ನೇ ಧರೆಯೊಳಿರುತಿರ್ದು ಮಿನ್ನೆಗಂ ಕಂಡುದಿ ಲ್ಲಚ್ಯುತನ ಮೂರುತಿಯನು ||
ಬಾಧಿಸುವುದೀ ದೇಹಮಂ ನರೆ ತೆರೆಗಳಿನ್ನು |
ಸಾಧಿಸುವುದೇ ನಸುರರಿಪು ಬಂದು ತನ್ನೊ ಳ್ವೆ |
ರೋಧಿಸಿದೊ ಡಿನಿತರಿಂ ದಳಿದೊಡೇ ನುಳಿದೊಡೇ ನೆಂದನಾ ನೃಪತಿ ನಗುತೆ ||೩೮||

ಆ ನರಾಧಿಪತಿ ನಿಶ್ಚೈಸಿದಂ ಕದನಮಂ |
ಭೂನಾಥ ಕೇಳವನ ಕಟ್ಟಳೆಯನೆಲ್ಲಮಂ |
ತಾನಾಳ್ವದೇಶದೊ ಳ್ತನ್ನನಗರದೊ ಳೇಕಪತ್ನೀವ್ರತದೊಳಿರದೊಡೆ ||
ದಾನವಾರಿಯ ಪೂಜೆ ಗೆಯ್ಯದೊಡೆ ಸಂತತಂ |
ದಾನಧರ್ಮಂಗಳಂ ಮಾಡದೊಡೆ ಗತಿಗೆಟ್ಟು |
ಹೀನಜಾತಿಗಳೊಡನೆ ಕೂಡಿದೊಡೆ ಸೈರಿಸಂ ಪರಿವಾರದೊ ಳ್ಪ್ರಜೆಯೊಳು || ||೩೯||
ಅಂತು ಮದರಿಂ ದೆಲ್ಲ ರೇಕಪತ್ನೀವ್ರತ ರ |
ನಂತಪೂಜಾ ರತ ಸೌಭಾಗ್ಯಸಂಯುತ |
ಸಂತತ ಮಲಂಕಾರಮಂಡಿತ ನೀತಿಶಾಸ್ತ್ರಸ್ಮೃತಿ ವಿಚಾರರತರು ||
ಕಂತುಶರ ನಿರ್ಜಿತ ಮದವ ಲೋಭ ವರ್ಜಿತ |
ಸಂತೋಷ ಭಾಷಿತ ಸದ್ಗುಣ ವಿಭೂಷಿತ |
ಚಿಂತಿತ ಫಲಾಗತ ಸಕಲ ಭೋಗಾನ್ವಿತ ಸರಿವಾರದೊ ಳ್ಪ್ರಜೆಯೊಳು || ||೪೦||
ಏಕಪತ್ನೀವ್ರತಂ ಪ್ರಾಯುತಂ ಕೋಮಲಂ |
ನಾಕಾಂತ ಕಿಂಕರ ನಲಂಕಾರಪೂಜ್ಯಂ ಶು |
ಭಾಕಾರನಾರೋಗ್ಯಪಟು ಕರಣನಿರ್ಮಲ ಕೈತವಂ ಬಲವಂತನು ||
ಭೀಕರ ಪರಾಕ್ರಮ ವಿಶಾರದಂ ಸಂಗರ ವಿ |
ನೇಕಿ ಯೆಂ ಬಿನಿತುಗುಣ ನೊರ್ವನೊಳಿರ ಲ್ಕವನ |
ನೇ ಕರೆದು ಮನ್ನಿಸುವನಲ್ಲಡರ ನುಳಿವನಂತೆಲ್ಲರೀ ತೆರದ ನರರು || ||೪೧||
ಉಣ ಲುಡ ಲ್ತೊಡಲೀಯ ಲಿರ ಲೆಯ್ದ ಲುಂಟಾಗಿ |
ತಣಿ ದಿಹು ದಲಂಕಾರ ಪೂಜ್ಯದಿಂ ವಸ್ತ್ರ ಭೂ |
ಷಣ ಗಂಧ ಮಾಲ್ಯಾನುಲೇಪನಂಗಳ ಪರಿಮಳಂಗಳಿಂ ಸೊಗಸಿಪ್ಪರಮ ||
ಸೆಣಸುಗಳ ಬಿರುದುಗಳ ವೆಚ್ಚಿರ್ದ ಮುಡುಹುಗಳ |
ಹೊಣಕೆಗಳ ತಡಹುಗಳ ಕಲಿತನದ ಕಡುಹುಗಳ |
ರಣವನಕದಿಂ ಕುದಿಯುತಿಹುದು ಹಂಸಧ್ವಜನ ಪರಿವಾರಮನುದಿನದೊಳು || ||೪೨||
ಮಣಿಮಯ ವರೂಥ ಮೆಪ್ಪತೊಂದು ಸಾಸಿರಂ |
ಗಣನೆ ಗೆಪ್ಪತ್ತೊಂದು ಸಾಸಿರ ಗಜಂ ತುರಗ |
ಮೆಣಿಸುವೊಡೆ ಲಕ್ಕಂ ಪದಾತಿ ಸಾಸಿರ ಮುಳಿಯೆ ಲಕ್ಷವೊರ್ವನ ಬಳಿಯೊಳು ||
ಗಣಿತ ಕಿಹು ದಿನಿತು ಬಲ ಮಿನಿತು ಬಲದಿಂದೆ ನೆಂ |
ಟಣಿಸಿರ್ಪ ದಳಪತಿಗ ಳೆಪ್ಪತ್ತುಮಂದಿ ಸಂ |
ದಣಿಸಿ ಬರುತಿಹುದು ಹಂಸಧ್ವಜ ನೃಪಾಲಕಂ ಪೊರಮಟ್ಟು ನಡೆವೆಡೆಯೊಳು ||೪೩||
ಆತಂಗೆ ಧನಬಲಂ ಚಂದ್ರಸೇನಂ ಚಂದ್ರ |
ಕೇತು ವರಚಂದ್ರದೇವಂ ವಿಡೂರಥ ನತಿ |
ಖ್ಯಾತನಹ ಧರ್ಮವಾಹಂ ನ್ಯಾಯವರ್ತಿಯೆಂಬಿವ ರನುಜರೇಳುಮಂದಿ ||
ಜಾತ ಸುದರ್ಶನ ಸುಧನ್ವ ಸುಮನ ಸ್ಸುರಥ |
ರೀತೆರೆದಿ ನಾಲ್ವ ರಿವರೆಲ್ಲ ಸಮರ್ಥ ಮ |
ಹಾತಿಬಲ ರಮಲ ಧರ್ಮಜ್ಞ ರಪ್ರತಿಮ ಪರಾಕ್ರಮಯುತ ವೀರರು || ||೪೪||

ವರ ಶಂಖಲಿಖಿತ ರೆಂಬವ ರಣ್ಣ ತಮ್ಮಂದಿ |
ರಿರ ಲವರೊಳಾಲಿಖಿತ ನಾಶ್ರಮಕೆ ಶಂಖ ನೈ |
ತರುತೆ ಪೇಳದೆ ಬಿದ್ದಪಣ್ಣ ನಾಸ್ವಾದಿಸ ಲ್ಕರೆದಿವಂ ದೋಷಿಯೆಂದು ||
ಅರಮನೆಗೆ ತಂದೊಪ್ಪಿಸ ಲ್ಕಾನೃಪಂ ಕರವ |
ನರಿಸಲ್ಕೆ ಮತ್ತೆ ಲಿಖಿತನ ತಪೋಬಲದಿಂದೆ |
ಮರಳಿ ಕೈಯಂ ಪಡೆದ ನಾ ಶಂಖ ನವರಿರ್ವರುಂ ಪುರೋಹಿತರವಂಗೆ || ||೪೫||
ಆ ಶಂಖಲಿಖಿತ ರೆಂದವ್ರೊ ಲಾತನಿರ್ದಪ ನಿ |
ಳೇಶ ಕೇಳವನ ದಿನ್ನೊಂದು ಕಟ್ಟಳೆಯಂ ಹು |
ತಾಶನಜ್ವಾಲೆಯಿಂ ಕಾಯ್ದುಕ್ಕುವೆಣ್ಣೆ ಗೊಪ್ಪರಿಗೆಯೊಳ್ತಾಂ ಸಮರಕೆ ||
ಆಶುವಿಂ ಪೊರಮಡುವ ದುಂದುಭಿಯ ಸನ್ನೆಯ ಮ |
ಹಾಶಬ್ದಮಂ ಕೇಳ್ದು ಹಿಂದುಳಿದ ಭಟನಂ ಪ್ರ |
ವೇಶಮಂ ಮಾಡಿಸುವ ನಲ್ಲದೊಡೆ ತನ್ನ ಭಾಷೆಗೆ ಭಂಗಮಪ್ಪುದೆಂದು || ||೪೬||
ಬಳಿ ಕನಿಬರೆಲ್ಲರಂ ಕರೆಸಿ ಹಂಸಧ್ವಜಂ |
ಕೆಲವಿತ್ತು ಫಲುಗುಣನ ತುರಗಮಂ ಪಿಡಿತಂದು |
ಪೊಳಲೊಳಗೆ ಕಟ್ಟಿದೇಕೆಂದು ಸಾರಿಸಿ ಡಂಗುರಂದೊಯ್ಸಿ ಪೊರಮಡುತಿರೆ ||
ಮೊಳಗಿದವು ಮೇಲೆ ನಿಸ್ಸಾಳಂಗಳಾಹವಕೆ |
ಪಳಮುಳಿಸಿತಾಗ ಸುಭಟಪ್ರತತಿ ಜೋಡಿಸಿ ತ |
ಖಿಳ ಕರಿ ರಥಾಶ್ವ ಕುಲಮೊದಗಿತು ಪದಾತಿ ಸನ್ನಾಹದಿಂ ದಾಕ್ಷಣದೊಳು || ||೪೭||
ಸುರಪ ಸುತನೆಂಬವೈರಕೆ ಧನಂಜಯನ ಮೇ |
ಲಿರದೆ ಮುಳಿದೆದ್ದದೊ ಕುಲಾದ್ರಿಗಳ ಬಳಗಮೆನೆ |
ಕರಿಘಟೆಗ ಳೈದಿದುವು ತನ್ನ ಮಗನಂ ಕೊಂದನೆಂದು ನರನೊಳ್ಕನಲ್ದು ||
ತರಣಿ ತಾಳ್ದನೊ ನಿಜಾಕಾರ ಕೋಟಿಗಳನೆನೆ |
ತೆರಳ್ದುವು ಮಣಿಮಯ ವರೂಥಂಗ ಳಿಂದುದೋ |
ಘರೆ ಮಂದಿ ಕುದುರೆಗಳನೆನೆ ನಡೆದುದಾಹವಕೆ ಪರಿವಾರಮಾ ನೃಪತಿಯ || ||೪೮||
ಕಂಸಾರಿ ಬಾರದೆ ನರಂಗೆ ಸೋಲ್ವವನಲ್ಲ |
ಹಂಸಧ್ವಜಂ ಧುರದೊಳಿನ್ನು ಕೃಷ್ಣನ ದರ್ಶ |
ನಂ ಸುಲಭಮೆಲ್ಲರ್ಗೆ ಸಂದೇಹಮಿಲ್ಲ ದೇಹಮನಾಂತು ಜನಿಯಿಸಿದರ್ಗೆ ||
ಸಂಸಾರಕಿದು ಸಫಲಮಹುದೆಂದು ಪರಿತೋಷ |
ದಿಂ ಸಮರಕೈದುತಿರ್ದುದು ಸಕಲ ಪಟುಭಟರ |
ದಂ ಸತಿಯರೀಕ್ಷಿಸಿದ ರುಪ್ಪರಿಗೆಗಳ ಮೇಲಿನಿಯರ ನಾದರಿಸಿ ಕಳುಹಿ || ||೪೯||
ಅಳಿಲಾದ ಸಿರಿಯ ಬಳಲಿದ ಮುಡಿಯ ಸೊಪ್ಪಾದ |
ತಿಲಕದ ಕೆದರ್ದ ಕಾಡಿಗೆಯ ಬೆಮರಿದನೈಯ |
ಪುಳಕ ದನಯುಗದ ಕೆಂಜಾಸುಳೇರುಗಳ ಪರೆದನುಲೇಪನದ ತೊಡಕಿದ ||
ಗಳದ ಹಾರದ ಕೆಂಪುಗಡದ ದಧರದ ನುಡಿಯ |
ತಳವಳದ ಕಡೆಗಣ್ಣ ಕೆಂಬೊಗರ ಕದಪುಗಳ |
ಕಲೆಯ ಕೋಮಲೆಯ ರಿನಿಯರ್ಕಳಂ ಕಳುಹಿ ನೆಲೆವಾಡದ ನಡೆದರಂದು || ||೫೦||

ಇನ್ನು ಮರ್ಜುನ ಕೃಷ್ಣರೊಡನೆ ಸಂಗರಕೆ ಸಂ।
ಪನ್ನ ಪಟುಭಟರೊದಗಿ ಗಾಯವಡೆಯದಮುನ್ನ।
ನಿನ್ನಧರಕೆಂತಾದುದಬಲೆ ಕೃಷ್ಣಕ್ಷತಂ ಪೇಳೆಂದಸಿಯಳೊರ್ವಳು॥
ಕನ್ನೆ ಮತ್ತೊರ್ವಳಂ ಕೇಳ್ದೊಡವಳೆಂದಳೆಲೆ।
ಪನ್ನಗಸುವೇಣಿ ಕೃಷ್ಣಾಂಕಮಿಲ್ಲದ ವದನ।
ಮುನ್ನಿಸ ಲ್ಲಿಲಕೆ ಸರಿಯೆಂಬುದಂ ನೀನರಿಯದಕಟ ಮರುಳಾದೆಯೆಂದು॥ ॥೫೧॥

ಒದಗದಿನ್ನುಂ ಮುರಾರಿಯ ಸಮರಮರ್ಜುನನ।
ಕದನಂ ಪ್ರವರ್ತಿಸದು ಪ್ರದ್ಯುಮ್ನ ನಾಹವಂ।
ನೊಪಲೆ ತಲೆದೋರಿತೆಂದೂರೊಳೆಂದೊರ್ವಳೀ ಪೊಸವಾರ್ತೆಯಂ ಪೇಳಲು॥
ಚದುರೆ ಮತ್ತೊರ್ವಳಿದು ಜಗದೊಳಚ್ಚರಿಯೆ ಹರಿ।
ಯವರ ಕೈ ಮುಂಚುವುದು ವರಸಂಗರಂಜಿತವ।
ಹುದು ವರ್ತಮಾನದೊಳ್ಜನಜನಿತವಿಲ್ಲಿ ನೂತನದ ಮಾತೇನೆಂದಳು॥ ॥೫೨॥

ಇಂದುಮಂಡಲದ ಸಿರಿಯಂ ಸೂರೆಮಾದಿದ।
ರ್ಬಂದು ವಿಷಯದೊಳೂರುಗಳನಿರಿದರೊತ್ತಾಯ।
ದಿಂದೆ ಮರ್ಗಂಗಳಂ ಕೈಕೊಂಡರೊದಗಿದರ್ಸೆಳೆಸೂರೆಗಾತುರದೊಳು॥
ಮುಂದುವರಿದಂಕವೇರಿದರೀಗ ವರಸುಭಟ।
ರೆಂದು ಪೊಸವಾರ್ತೆಯಂ ಪ್ರೌಢೆಯೊರ್ವಳ್ಪೇಳ್ದೊ।
ಡಂದು ಬಾಲೆಯರಾಕೆಯಂ ಜರೆದರರಸನಿಲ್ಲವೆ ಗೆಲ್ವೊಡೆಂದು ನಗುತೆ॥ ॥೫೩॥

ವಿಮಲ ದಧಿ ಲಾಜ ದೂರ್ವಾಕ್ಷತೆಗಳಂ ತಳೆದು।
ಕ್ರಮದೊಳಾರತಿಗಳಂ ತಂದೆತ್ತಿ ಯಕ್ಷ ಕ।
ರ್ದಮ ವಿಲೇಪನ ಕುಸುಮ ತಾಂಬೂಲಮಂ ಕೊಟ್ಟು ಪರಸಿ ಸೇಸೆಗಳನಿಟ್ಟು॥
ರಮಣರಂ ತೆಗೆದು ಬಿಗಿಯಪ್ಪಿ ಶುಭವಾಕ್ಯದಿಂ।
ಸಮರ ಭೂಮಿಗೆ ಕಳುಹಿ ಸತಿಯರ್ಸುರತ್ನ ಕು।
ಟ್ಟಿಮದ ಹರ್ಮ್ಯಂಗಳ ನಡರ್ದ ರ್ನಿವಿಜಪುರದ ಲಕ್ಷ್ಮೀಶನಂ ನೋಡಲು॥ ॥೫೪॥

ಸಂಧಿ ೧೦ ಕ್ಕೆ ಪದ್ಯಗಳು ೫೨೫ ಕ್ಕೆ ಮಂಗಳಮಸ್ತು.

# ಹನ್ನೊಂದನೆಯ ಸಂಧಿ.

ಸೂಚನೆ॥ ಓಂಡುಳಿದನಾಹವಕ್ಕೆಂದು ಹಂಸಧ್ವಜಂ।
ನಂದನನ ನೆಣ್ಣೆಗಾಸಿದ್ದರ್ದ ಕೊಪ್ಪರಿಗೆಯೊ।
ಳ್ತಂದು ಕೆಡಹಿಸ ಲಚ್ಯುತಧ್ಯಾನದಿಂ ಶಂಪ್ರವಡೆದ ನವನಚ್ಚರಿಯೆನೆ॥

ಭೂಷಿತಚರಿತ್ರ ಕೇ[illegible]ಯುವೆ ಸಮಸ್ತಭಟ।
ರಾಹವಕೆ ಪೊರಮಟ್ಟ ಬಳಿಕ ಹಂಸಧ್ವಜನ।
ಮೋಹದ ಕುಮಾರಂ ಸುಧನ್ವನಾಯತವಾಗಿ ಬಂದು ನಿಜಮಾತೆಯಡಿಗೆ॥
ಬಾಹುಯುಗಮಂ ನೀಡಿ ಸಾಷ್ಟಾಂಗ ಮೆರಗೆ ಸಿತ।
ವಾಹನನ ಹರಿಯಂ ಪಿಡಿದು ಕಟ್ಟಿ ಕದನದೊ।
ಳ್ಸಾಹಸಂ ಮಾಳ್ಪೆನೆನ್ನಂ ಪರಸಿ ಕಳುಹೆಂದು ಕೈಮುಗಿದೊಡಿಂತೆಂದಳು॥ ॥೧॥

ಕಂದ ಕೇಳ್ಪಲುಗುಣಂ ಪಾಲಿಪಂ ನಾಲ್ಕಡಿಯ ।
ದೊಂದುಹರಿಯಂ ನಿನಗದರ ಚಿಂತೆ ಬೇಡ ಸಾ ।
ನಂದದಿಂ ಪಾರ್ಥನಂ ರಕ್ಷಿಸುವ ಹರಿಯನೇ ಹಿಡಿವ ಬುದ್ಧಿಯನೆ ಮಾಡು ॥
ಹಿಂದೆ ನಾರದಮುನಿಯ ಮುಖದಿಂದೆ ಕೇಳ್ದಂ ಮು ।
ಕುಂದನ ವಿಶಾಲಲೀಲಾಮಾಲೆಯಂ ಕೃಷ್ಣ ।
ನಿಂದು ಮೈದೋರಿದೊಡೆ ಕಣ್ಣಾರೆ ಕಾಣಬಹುದೆಂದೊ ಡವನಿಂತೆಂದನು ॥ ॥೨॥
ತಾಯೆ ಚಿತ್ತೈಸಾದೊಡೀ ಭಾಷೆಯಂ ಕೃಷ್ಣ ।
ರಾಯನಂ ತನ್ನೆಡೆಗೆ ಬರಿಸಿಕೊಳ್ಪುದಕೊಂದು ।
ಪಾಯಮುಂ ಬಲ್ಲೆನಾಂ ಕಯ್ಯಂ ಪಿಡಿದೊಡೆ ಮೈ ತಾನೆ ಬಹುದಿಂಪ್ರಜನನು ॥
ನೋಯಿಸಿದೊಡಗಧರಂ ಬಾರದಿರ ನಾನತ ರ ।
ಪಾಯಮಂ ಸೈರಿಸಂ ಬಳಿಕ ತೋರುವೆನೆಂಬು ।
ಜಾಯತಾಕ್ಷನ ಮುಂದೆ ತನ್ನ ಪೌರುಷವನೆನಲಾಕೆ ಮಗುಳಿಂತೆಂದಳು ॥ ॥೩॥
ಕರುವ ನೆಳಗಂದಿ ತಾನರಸಿಕೊಂ ಡೈತರ್ಪ್ಪ ।
ತೆರದಿಂದೆ ಬಂದಪಂ ಮುರಹರಂ ಪಾರ್ಥ ನೆಡೆ ।
ಗರಿವೆ ನಿದು ನಿಶ್ಚಯಂ ಮಗನೆ ನೀನಾಹರಿಗೆ ವಿಮುಖನಾದೊಡೆ ತನ್ನನು ॥
ಜರೆವ ರಿಕ್ಕೆಲದ ಬಂಧುಗಳಿನ್ನು ಸಮರದೊ ।
ಳ್ನರೆ ಕೃಷ್ಣನಂ ಗೆಲ್ವರುಂಟೆ ಸಾಕೆನ್ನೊಡಲ ।
ಮರುಕಮಂ ಬಿಟ್ಟೆನವನಂ ಕಂಡಬಳಿಕ ಹಿಮ್ಮೆಟ್ಟದಿರ್ಪೋಗೆಂದಳು ॥ ॥೪॥
ಎಂದೊಡೆಲಿ ತಾಯೆ ಕೇಳ್ಚಕ್ರಿಗೆ ವಿಮುಖನಾಗಿ ।
ಬಂದೆನಾದೊಡೆ ನಿನ್ನ ಗರ್ಭದಿಂದುದಯಿಸಿದ ।
ನಂದನನೆ ಹಂಸಧ್ವಜನ ಕುಮಾರನೆ ಮೇಣು ಹರಿಕಿಂಕರನೆ ವೀರನೆ ॥
ಕೊಂದಪೆಂ ಪಾರ್ಥನ ಪತಾಕಿನಿಯ ನಸ ನಪಟ ।
ನಂದಗೆಡಿಸುವೆ ನೆನ್ನ ವಿಕ್ರಮದ ಸಚ್ಯುತನ ।
ಮುಂದೆ ತೋರಿಸುವೆ ನಿಸಿತಶರ ಮೇಲೆ ಸೋಲಗೆಲ ವದು ಪುಣ್ಯವಶವೆಂದನು ॥ ॥೫॥
ಅನಿತರೊಳ್ಕುವಲ ಯೆಂಬವ ಳೊರ್ವಳಾ ಸುಧ ।
ನ್ವನ ಸಹೋದರಿ ತಂದಳಾರತಿಯ ನನುಜ ಕೇ ।
ಳನುವರದೊ ಳಿಂದು ಶೌರಿಗೆ ವಿಮುಖನಾಗಿ ನೀಂ ಬಂದೆಯಾದೊಡೆ ಮಾವನ ॥
ಮನೆಯೊಳಾಂ ತಲೆಯೆತ್ತಿ ನಡೆವೆನೆಂ ತದರಿಂದೆ ।
ವನಜಾಕ್ಷನಂ ಮೆಚ್ಚಿಸಾಹವದೊಳಿಂದು ಚಂ ।
ದನದ ಸುಣ್ಣೆಟ್ಟು ಕಪ್ಪುರ ವೀಳೆಯಂಗೊಟ್ಟು ಕಳುಹಿದ ಳ್ಪ್ರೀತಿಯಿಂದವಳು ॥ ॥೬॥
ಅರಸ ಕೇಳಾಸುಧನ್ವಂ ಬಳಿಕ ಜನನಿ ಸೋ ।
ದರಿಯರಂ ಬೀಳ್ಕೊಂಡು ಪೊರಮಟ್ಟು ತನ್ನ ಮಂ ।
ದಿರದ ಪೊರೆ ಗೈತರ ಲ್ಕಿದಿರಾಗಿ ಪೊಂಪಟ್ಟೆಯೊ ಳ್ಪಂಪಗೆಯ ಪೂವನು ॥
ಸರಿಸಪರಿಮಳ ಗಂಧ ಕರ್ಪೂರ ವೀಟಿಕೆಯ ।
ನಿರಿಸಿಕೊಂ ಡೊಲವಿಂದೆ ಬಂದ ಳಂಗಜನ ಜಯ ।
ಸಿರಿ ತಾನೆನ ಲ್ಪ್ರಭಾವತಿಯೆನಿ ಪವನರಾಣಿ ಸುಶ್ರೋಣಿ ಸರ್ವವೇಣಿ ॥ ॥೭॥

ಚಂದ್ರಮಂಡಲ ಸದೃಶ ವದನ ದೆಳೆನಗೆಯ ನವ |
ಚಂದ್ರಿಕೆಯೆನಲ್ಮೇಲುದಿನ ದುಕೂಲಂ ಮೆರೆಯೆ |
ಚಂದ್ರತಿಲಕದ ರಾಗಮುಂ ಚಿತ್ತದನುರಾಗಮಂ ಸೂಚಿಸಂತೆ ಸೊಗಸೆ ||
ಇಂದ್ರನೀಲದ ಮಣಿಯ ಮಿರುಗುವ ಲಲಿತಕಾಂತಿ |
ಸಾಂದ್ರಮಾದವೊಲೆಸೆವ ಅಳಕ ಪಾಶದಿಂದೆ ನಯ |
ನೇಂದ್ರಿಯವನುರೆ ಕಟ್ಟಿ ಕೆಡಪದಿರಳೆಂಬಿನಂ ರಂಜಿಸಿದಳಾ ಮೃಗಾಕ್ಷಿ || ||೮||
ಸ್ಫುರಿಸುವೊಳ್ದೊಡೆಯ ಬೆಡಗಿನ ನಡೆಯ ಸಿರಿಯ ಸಿಂ |
ಗರದುಡೆಯ ತಿಕ್ಕಾದಸಿಯ ಪೊಡೆಯ ಚೆಲ್ವುವಳಿ |
ದುರದೆಡೆಯ ಸಿಂಬುಗೊಂಡಿಟ್ಟೆಡೆಯ ಬಲ್ಮೊಲೆಯ ಪೊಳೆವ ಕಣ್ಮಲರ ಕಡೆಯ ||
ತ್ಸುರಿಪ ಭುಜವಲ್ಲರಿಯ ತೊಡವುಗಳ ಮೈಸಿರಿಯ |
ಬಿರಿಮುಗುಳ ಕಬರಿಯ ಕಲೆಗಳಿಡಿದ ಸೌಂದರಿಯ |
ದರಸಿ ನಿಜಪತಿಯ ಮುಂದಚ್ಚರಿಯ ಬಗೆಗೊಂಡಳಂದು ಬೇರೊಂದುಪರಿಯ ||೯||
ಮುಡಿಯ ಪೊಸಮಲ್ಲಿಗೆಯ ಸೂಸುವೆಳನಗೆಯ ಸವಿ |
ನುಡಿಯ ಬಾಯ್ದೆರೆಯ ಹೊಳೆಹೊಳೆವ ದಶನದ ಮಿಸುಪ |
ಕಡೆಗಣ್ಣ ತೊಳಗುವ ನಖಾವಳಿಯ ಥಳಥಳಿಪ ಕಂಠನಾಳಿಯ ಮುತ್ತಿನ ||
ತೊಡವುಗಳ ಘನಸಾರ ದನುಲೇಪನದ ಸಣ್ಣ |
ದುಡಿ ದುಕೂಲದ ಬೆಳ್ಪುಗ ಕೊರ್ಗಿಮುಲಾಂಗದೊ |
ಳ್ಪಡದೆ ಪಸರಿಸೆ ಚಂದ್ರಕಾಂತದಿಂ ನಿರ್ಮಿಸಿದ ಪುತ್ತಳಿವೊಲವಳೆಸೆದಳು || ||೧೦||
ಕರಯುಗದೊಳಾಂತ ಪೊಂದಟ್ಟೆಯನವರ ಮೇಲೆ |
ಪರಸಿರ್ದ ಸಂಪಗೆಯ ಪೂಗಳಂ ತನ್ನ ಮೆ |
ಯ್ಯೊರೆಗೆ ಸರಿಯಾದಪುವೆ ನೋಡೆಂದು ತೋರ್ಪಂತೆ ಕೊಂಡುಬಂದಿದಿರೆ ನಿಂದ ||
ತರಳೆಯಂ ಕಡೆಗಣ್ಣೊಳೊಯ್ಯನೀಕ್ಷಿಸಿ ನಗುತೆ |
ಸರಸಪರಿಮಳ ನವ್ಯ ಕುಸುಮಂಗಳಂ ಕೊಂಡು |
ಭರದಿಂದೆ ಕೊಳುಗುಳಕೆ ಪೊರಮಡುವ ಗಮನದಿಂ ಕಾಂತೆಗವನಿಂತೆಂದನು || ||೧೧||
ಕಾಂತೆ ಕೇಳಿಂದು ಸಮರದೊಳರ್ಜುನಂಗೆ ಮಾ |
ರಾಂತವನ ಬಿಂಕಮಂ ಮುರಿವೆ ನಾ ಹರಿ ಬಕ ಸು |
ರಾಂತಕಂ ಬಂದೊಡಾತನ ಮುಂದೆ ತೋರಿಸುವೆನೆನ್ನ ಭುಜವಿಕ್ರಮವನು ||
ನಾಂ ತಳೆವೆ ನಾರ್ಪಿಂದೆ ವಿಜಯಮಂ ಮಾರ್ದೊಡೆ ಭ |
ವಾಂತರವನೈದಿಸದ ಮುಕ್ತಿಯಂ ಪಡೆವೆನಿಂ |
ನೀಂ ತಳಮಳಿಸದಿರೆಂದಿನಿಯಳಂ ಸಂತೈಸಿ ಪೊರಮಡ ಲ್ತೊಡೆದೆಂದಳು || ||೧೨||
ಯುಕ್ತಮಲ್ಲದು ರಮಣ ನಿನಗೆ ಕೇಳ್ಕಾದು ವಾ |
ಸಕ್ತಿಯಿಂ ಚಕ್ರಿಗಭಿಮುಖನಾದ ಬಳಿಕಲ್ಲಿ |
ಮುಕ್ತಿಯಲ್ಲದೆ ಬೇರೆ ಜಯಮುಂಟೆ ಜನಿಸದು ವಿವೇಕ ಸಂತತಿ ನಿನ್ನೊಳು ||
ವ್ಯಕ್ತದಿಂ ತನಗೊಂ ದಪತ್ಯಮುದಯಿಸಿದೊಡೆ ವಿ |
ರಕ್ತಿಯಿಂ ಕೈವಲ್ಯಮಾದಪುದೆ ಸಮರ ಕು |
ವ್ಯಕ್ತನಪ್ಪಾತಂಗೆ ಸಂತಾನವಿಲ್ಲದಿರಲಪ್ಪುದೇ ಹೇಳೆಂದಳು || ||೧೩||

ಅದರಿಂದ ಮಾತ್ಮಜನಿವೇಕಮಿಲ್ಲದೊಡೆ ಸನ।
ಗಿದುವೆ ಜಲದೋದಯದ ಋತುಸಮಯವಿಾಪದದೊ।
ಳುದುಭವಿಸುವುದು ನಿನ್ನ ಭೂಮಿಯೊಳ್ಬೀಜಮಂ ಬಿತ್ತಿದೊಡೆ ಬೆಳೆ ಬಾಳ್ಕೆಗೆ॥
ಕದನಕೈದುವ ವೇಳೆಯುಲ್ಲಿನ ಲವಂ ಮುಂದೆ।
ಬೆದಗಾಲ ಮುಂಟೆಂದೊ ಡವಳಿಣಿಸಿ ಮಳೆಗಳಂ।
ತುದಿವಿಕಾಷೆಗೆ ಬಂದುದಿನ್ನು ಮೇಲಂಕುರಿಸ ಲರಿಯದೆನ ಲಿಂತೆಂದನು॥ ॥೧೪॥
ರಮಣಿ ನೀನೆಂಬುದನುನಯಮಪ್ಪ ದಾದೊಡಂ।
ಸಮಯಮಲ್ಲಿದು ಮೊಳಗುತಿದೆ ಭೇರಿ ಪೊರಮಟ್ಟು।
ಸಮರಕಯ್ಯಂ ಪೋದ ಸುಳಿವೆನಾದೊಡೆ ತಾತನಾಜ್ಞೆಗೊಳಗಾಗದಿರೆನು॥
ಕ್ರಮದ ನರಿಯದಳೆ ನೀನೆನಗೆ ವೈರಿಸಲಳವೆ।
ಗಮನ ಕನುಕೂಲೆಯಾಗೆನುತೆ ಗಲ್ಲಂ ಪಿಡಿದು।
ಕಮಲಾಕ್ಷಿಯಂ ಮುದ್ದುಗೈದು ಬೀಳ್ಕೊಳ್ವನಂ ಕಾತರಿಸಿ ಮೇಲ್ವಾಯ್ದಳು॥ ॥೧೫॥
ಅಂಗಮಿಲ್ಲದನ ಸಮರಂಗಮಂ ಪುಗಲಂಜಿ।
ತುಂಗವಿಕ್ರಮ ವಿಜಯ ಸಂಗರ ಕೆಳಸುವೆ ನೆಂ।
ಬಂಗವಣೆ ಯೆಂತುಟೆಂ ದಂಗನೆ ಬಲಾತ್ಕಾರದಿಂ ಗುರುಕುಚದ್ವಯವನು॥
ಸಂಗಡಿಸುವಂ ತಾರ್ಪಿನಿಂ ಗಾಢತರದೊ ಳಾ।
ಲಿಂಗನಂಗೈದು ಕುಡಿ ಗಂಗಳಿಂ ದವನ ಮೊಗ।
ದಿಂಗಿತವ ನಾರೈವ ಶೃಂಗಾರಚೇಷ್ಟೆಯ ಬೆಡಂಗ ನದನೇ ವೇಳ್ವೆನು॥ ॥೧೬॥
ಮಿಡಿ ಮೊಡೊಡೆವಂ ತಮೃತ ರಸದಿಂದೆ ಮೆರೆವ ಪೊಂ।
ಗೊಡವೊಲೆಯ ನವನ ವಕ್ಷಃಸ್ಥಳದೊ ಳೊಟ್ಟೊತ್ತಿ।
ದೊಡೆ ಹಿಸಿ ದೊಳಗಣಿ ತನಿಸುಧೆ ಯೊಸರ್ದು ತೊಟ್ಟಿಡುವ ಬಿಂದುಗಳ ಸಾಲಿದೆನಲು॥
ಕಡಿಕಿ ಪರಿ ದುಗುವ ಹಾರದ ಮುತ್ತುಗಳ ಮಣಿ ಗ।
ಳೆಡೆವಿಡದೆ ಸೂಸುತಿರೆ ಸೊಕ್ಕುವಿಕ್ಕೆಯ ಸೊಗಸು।
ವಡೆದ ಳಾಕಾಂತೆ ಪ್ರಿಯ ಸಂಗದೊ ಳ್ಮೋಹನೋತ್ಸಂಗದೊ ಳ್ಬಗೆಗೊಳಿಸುತೆ ॥೧೭॥
ಪ್ರಿಯನ ತನುಚಂದನ ಪರೀಜಮಂ ಸುತ್ತಿದ ಘ।
ರೇಜೊ ವಲ್ಲಭಾಂಗದಾಲಿಸ್ತಂಭಮಂ ತೊಡ।
ರ್ದ ಯುಗಸ್ಮರಕರಿಯ ಸುಂಡಿಲೊ ಕಾಂತಕಾಯ ಬಲಮಂ ಬಂಧಿಸಿದ ಪದನನ॥
ಜಯಪಾಶಮೋ ರಮಣನೆಂಬ ಕಲ್ಪದ್ರುಮಾ।
ಶ್ರಯದ ಕೋಮಲ ಲತೆಯೊ ಪೇಳೆನಲು ದೆಂಬಂತೆ।
ನಿಯನ ನಪ್ಪಿದ ಹರಿಣ ಲೋಚನೆಯ ನಳಿತೋಳ್ಗ ಳೆಸೆದು ವತಿಗಾಢದಿಂದೆ॥ ॥೧೮॥
ಕಣ್ಮಲ ರ್ಕಾತರಿಸೆ ಮುಡಿ ಪೂಗಳಂ ಸೂಸೆ।
ಸುಣ್ಮೊಗಂ ಬೆಳ್ ರೊಂದುಪರಿಯಾಗೆ ನುಡಿ ಪೈಸ್ಯ।
ಮುಣ್ಮೆ ಬೀಸಸ್ವರದೊ ಳೆಸೆಯಿಕ್ಕೆ ಕಲೆಗಳೊಳ್ ಸೊಂಕೆ ಪ್ಯೆ ಪುಳಕದಿಂದೆ॥
ಪೊಣ್ಮೆ ಮದನಾತುರಂ ತಳಿಡೋರೆ ಮೇಲುದಂ।
ಬಿಣ್ಮೊಲೆಗಳೋಸರಿಸೆ ನಿರಿಯ ಬಿಗಿ ಪೈಸರಿಸೆ।
ಪೆಣ್ಮಂಚ ದಂಚೆ ದುಪ್ಪಳ್ವಾಸಿ ಗೆಳೆದೊಯ್ದು ಳನಿಯನಂ ಬಲ್ಪಿನಿಂದೆ॥ ॥೧೯॥

ಮನ್ವಾದಿಋಷಿಗ ಳಭಿಮತಮಿದೆಂ ದರಿಪಾ ಸು |
ಧನ್ವಂ ಋತುಸ್ನಾತೆಯುಂ ಮೀರ ದೊಡಗೂಡಿ |
ತನ್ವಿಯಂ ಬೀಳ್ಕೊಂಡು ಸಮರ ಕನುವಾಗು ತಿರಲಿತ್ತ ಕುರುಕುಲದ ನೃಪರ ||
ಅನ್ವಯಕೆ ತೊಡವಾದ ನರನ ಹಯಮಂ ಕಟ್ಟು |
ವನ್ವೇಷಣದೊ ಳಾಹವಕೆ ನಡೆಯು ತತಿಬಲ ಸ |
ಮನ್ವಿತ ಕುಮಾರನಂ ಸೇನೆಯೊ ಳ್ಕಾಣದೆ ಕೆರಳ್ದಂ ಮರಾಳಕೇತು || ||೨೬||
ಪೊರೆಯೊ ಳಿಹ ಸಚಿವರಂ ನೋಡು ತವರೊ ಳ್ಸುಮತಿ |
ಗರಸಂ ನಿರೂಪಿಸ ಲವಂ ಕಡುಗಡಿಗರಾದ |
ಚರರ ನಟ್ಟಿದೊ ಡವರ್ಬ್ಬರೆ ಸೆಳೆದು ನಗುತಿಹ ಸುಧನ್ವನಂ ತುಡುಕಿ ಪಿಡಿದು ||
ಕರಯುಗಳಮಂ ನೇಣ್ಗಳಿಂ ಬಿಗಿದು ತಂದ ರತಿ |
ಭರದಿಂದೆ ರಾಯನಿದ್ದೆಡೆಗಾಗಿ ಪೌರಜನ |
ಪರಿಜನಂ ಬೆರಗಾಗೆ ಕವ್ದಾತನಂ ಕೊಂಡು ಬರ್ಪ್ಪಂತೆ ನಿಷ್ಠುರದೊಳು || ||೨೭||
ಕಟ್ಟುಸಹಿತಾ ಸುಧನ್ವಂ ತಾತನಡಿಗೆ ಪೊಡ |
ಮಟ್ಟೊಡೆ ಕೆರಳ್ದಲವೊ ಮೂಢಾತ್ಮ ನೀ ನೆನ್ನ |
ಕಟ್ಟಳೆಯ ನರಿದು ಕೃಷ್ಣನ ದೀಕ್ಷೆಯಂ ಮರೆದು ರಣದುತ್ಸವವನೆ ತೊರೆದು ||
ಪಟ್ಟಣದೊಳೇಕೆ ತಳುವಿದೆಯೆಂದು ಕುವರನಂ |
ಧಟ್ಟಿಸಿ ಮರಾಳಧ್ವಜಂ ಕೇಳ್ದೊ ಡಡಿಗಿಟ್ಟು |
ದಿಟ್ಟಿಯಿಂ ದಂಜು ತೊಯ್ಯನೆ ಲಜ್ಜೆವೆರಸಿ ಬಿನ್ನೈಸಿದನವಂ ಪಿತಂಗೆ || ||೨೮||
ಸತಿ ಸಂತತಿಗೆ ಬಯಸಿ ದಿನಗಳೆದುದಿನ್ನಿಲ್ಲ |
ಋತುಸಮಯ ಮೆಂಡೆನಗೆ ಪೇಳ್ದೊ ಡಲ್ಲಿರ್ದೆನೆನೆ |
ಕೃತಕಮಿದು ನೂಕೀತನಂ ಕೃಷ್ಣದರ್ಶನದ ಕಾಲಮೊದಗಿರ ಲಿತ್ತಲು ||
ಇತರ ಧರ್ಮದ ವೇಳೆ ಗಡ ತನಗೆ ಕರೆ ಪುರೋ |
ಹಿತ ಶಂಖಲಿಖಿತರಂ ಬೆಸಗೊಳ್ವೆನಿದಕೆ ನಿ |
ಷ್ಕೃತಿಯನೆನ ಲರಸನಾಜ್ಞೆಯೊ ಳವರ ಪೊರೆಗೆ ಚರರೈತಂದವಂ ಪೇಳ್ದರು || ||೨೯||
ಆಚರರ ನುಡಿಗೇಳ್ದು ಶಂಖಲಿಖಿತರ್ಬಂದು |
ವಾಚಿಸಿದರೆಲೆ ಹಂಸಕೇತು ನೀನೇನ ನಾ |
ಲೋಚಿಸು ನಿನ್ನ ತನಯನ ಮೇಲಣಾಶೆಯಿಂ ಭಾಷೆದಪ್ಪಿದೆ ಯಾದೊಡೆ ||
ಈ ಚಂಪಕಾಪುರದೊಳಿಹುದಿಲ್ಲ ನಾವು ಸ |
ತ್ಯಾಚರಣೆಗಾಗಿ ರುಕ್ಮಾಂಗದ ಹರಿಶ್ಚಂದ್ರ |
ಭೂಚಕ್ರಪಾಲರಾತ್ಮಜರ ಮೊಗನೋಡಿದರೆ ಹೇಳೆಂದು ನುಡಿದರವರು || ||೩೦||
ಬಳಿ ಕರಸನಾ ಸುಮತಿಯಂ ಕರೆದು ಪೇಳ್ದ ನೀ |
ಖಳನಂ ಕಟಾಹಪೂರಿತ ತಪ್ತತೈಲದೊ |
ಳ್ಮುಳುಗಿಸೆನ ಲವನೊಡೆಯ ನಾಜ್ಞೆಯಂ ಮೀರದಾತನ ಕೈಗಳಂ ಕಟ್ಟಿಸಿ ||
ತಳಪಳನೆ ಕುದಿವೆಣ್ಣೆಗೊಪ್ಪರಿಗೆ ಕಾಯ್ವಲ್ಲಿ |
ಗೆಳೆತರಿಸಿ ಪತ್ತಿ ಪೊತ್ತುವೊ ಲುರಿವ ಪೆರ್ಗೊರಡು |
ಗಳನಿಡಿಸಿ ಕಳಕಳಿಸುತಿಹ ಸುಧನ್ವಂಗೆ ಮರುಗುತೆ ಸಚಿವ ನಿಂತೆಂದನು || ||೩೧||

ತಾತ ನಿನಗಿಂತಾಗಬಹುದೆ ಲೋಕೈಕ ವಿ |
ಖ್ಯಾತ ನಭಿಮಾನಿ ಹರಿಸೇವಕಂ ಸುಂದರಂ |
ಮಾತಾಪಿತೃಪ್ರಿಯಂ ಕೋವಿದಂ ಕೋಮಲಂ ಸುಖಿ ಸಕಲ ಸಜ್ಜನ ಸಖಂ ||
ನೀತಿವಿದ ನಾಚಾರಸಂಪನ್ನ ಸುತ್ರಮುಂ |
ಪಾತಕಂ ಬಿನಿಸು ಗುಣಮುಳ್ಳ ಕುವರಂ ನಿನ್ನ |
ನೀ ತಪ್ತತೈಲದೊಳ ಗೆಂತಕಟ ಬೀಳಿಸುವೆ ನೆಂದೊ ಡವನಿಂತೆಂದನು || ||೩೨||

ಅಂಜಬೇಡೆಲೆ ಸುಮತಿ ನೀನೀಗಳಿದಕೆ ಮನ |
ಮಂ ಜರಿವಿಡುವನಲ್ಲ ತಾ ನಿನ್ನೆಗಂ ಧರ್ಮ |
ಮಂ ಜಡಿದು ನಡೆದುದಿಲ್ಲಾಹವದೊ ಳಹಿತರೊ ಳ್ಪೊಯ್ದಾಡಿ ಮಡಿವೊಡಲಿದು ||
ಜಂಜಡಮೊ ಳಳಿವುದೆಂಬೊಂದು ಭಯಮಿಹು ದಾದೊ |
ಡಂ ಜನಾರ್ದನನಂ ಶರಣ್ಬುಗುವೆ ನಳುಕ ದೆ |
ನ್ನಂ ಜನಕನಾಜ್ಞೆದಪ್ಪದೆ ಹಾಯ್ಕಿಸೆನ ಲವಂ ತೆಗೆದೆತ್ತಿ ಬಿಸುಡಿಸಿದನು || ||೩೩||

ಘೋ ಯೆಂದುದಖಿಳ ಪರಿವಾರ ಮಡಿಗಡಿಗೆ ಹಾ |
ಹಾಯೆಂದು ಮರುಗಿದುದು ನೀನಿಂತಳಿವರೆ ತಾ |
ತಾಯೆಂದು ಪೊರಳ್ದು ದೊಡೆತನಕೆ ಬೇಸತ್ತು ಸತ್ತಾಯೆಂದು ಸೈಗೆಡೆದುದು ||
ನಾಯಕಿಂತಕಟ ಸುಕುಮಾರನಂ ಕೊಂದ ನೀ |
ರಾಯನರಿವಂ ನೆರೆ ಸುಡಲಿ ಶಂಖ ಲಿಖಿತರೆಂ |
ಬೀಯಮೋಪ ರೇಕೆ ಜನಿಸಿದರೊ ಭೂಸುರರೊಳೆಂದು ಮೊರೆಯಿಡುತಿರ್ದುದು ||೩೪||

ಹಿಂದೆ ಪ್ರಹ್ಲಾದನಂ ಪಾಲಿಸಿದೆ ಗಡ ದ್ರುಪದ |
ನಂದನೆಯ ಮಾನಮಂ ಕಾದೆಗಡ ಭಕ್ತರ್ಗೆ |
ಬಂದೆಡರ ನಾವಗಂ ಪರಿಹರಿಪೆ ಗಡ ದೇವ ನಿನ್ನಂ ಪೆಸರ್ಗೊಂಡೊಡೆ ||
ಇಂದು ಮೊರೆವುಗುವೊಡಾರಂ ಕಾಣೆ ನಕಟ ಗೋ |
ವಿಂದ ನೀನಲ್ಲದೆ ವಿಚಾರಿಸುವರಿಲ್ಲ ಸಲ |
ಹೆಂದವಂ ಚಿತ್ತದೊಳ್ಕೃಷ್ಣನಂ ಧ್ಯಾನಿಸುತೆ ನಿರ್ಭಯದೊಳಿರುತಿರ್ದನು || ||೩೫||

ಜಯಜಯ ಜನಾರ್ದನ ಮುಕುಂದ ಮುರಮರ್ದನ ವಿ |
ಜಯಮಿತ್ರ ಗೋವಿಂದ ಪಕ್ಷಿವಾಹನ ಕಮಲ |
ನಯನ ಪೀತಾಂಬರ ಘನಶ್ಯಾಮ ಹರಿ ಕೃಷ್ಣ ವೈಕುಂಠ ನಾರಾಯಣ ||
ಕ್ಷಯರಹಿತ ರಾಮ ಲಕ್ಷ್ಮೀರಮಣ ನತಸುರಾ |
ಲಯಧೇನು ಭಕ್ತವತ್ಸಲ ಕೃಪಾಕರ ಮಹಾ |
ಭಯನಿವಾರಣ ನೃಸಿಂಹ ತ್ರಾಹಿ ಯೆನುತಿರ್ದನಾ ಸುಧನ್ವಂ ಮರೆಯದೆ || ||೩೬||

ಅರಸ ಕೇಳಾಶ್ಚರ್ಯಮಂ ನೋಡಲಿವೆ ನೀಂವೊ |
ಉರಿಗೊಂಡು ಕಡುಗಾಯ್ದು ತಳಪಳನೆ ಕುದಿದುಕ್ಕಿ |
ಮೊರೆವ ಘಟಕಟಾಹ ತೈಲಂ ಮೈಗೆ ಸೊಗಯಿಸುವ ಬಾವನ್ನ ದಣ್ಪಾಗಿರೆ ||
ಕೊರಗದಾತನ ರೋಮ ವಡಗದಂಗದ ಸೊಂಪು |
ಕೊರಳ ತುಳಸಿಯ ದಂಡೆ ಬಾಡದು ಮುಡಿದ ಪೂಗ |
ಳರೆಗಂದ ವರಳ್ದುದು ಸುಧನ್ವನ ಮುಖಾಂಬುಜ ಮಿನೋದಯದ ಕಮಲದಂತೆ ||೩೭||

ಕಂಡು ಬೆರಗಾಪುದೆಲ್ಲಾ ಜನಂ ಸ್ತುತಿಸಿದ |
ಪುಂಡರೀಕಾಕ್ಷನಂ ಬಳಿಕ ಲಿಖಿತಂ ಖಾತಿ |
ಗೊಂಡಿವಂ ಬಲ್ಲ ನಗ್ನಿಸ್ತಂಭಮಂ ನಾರಿಕೇಳಂಗಳಂ ತರಿಸೆನೆ ||
ಕೊಂಡು ಬಂದೆಳೆನೀರ್ಗಳಂ ಸುರಿಯ ಲುರಿ ನಭೋ |
ಮಂಡಲವ ನಪ್ಪಳಿಸೆ ಹೊಡೆದುವು ಪುರೋಹಿತರ |
ಗಂಡಸ್ಥಳಂಗಳಂ ಸಿಡಿಪೋಳ್ಗಳಾಗಳುಂ ನಗುತಿರ್ದನಾ ಕುವರನು || ||೩೮||

ನಿಶ್ಚಲಹೃದಯನಾಗಿ ವಿಷ್ಣುನಾಮಂಗಳ ಪು |
ರಶ್ಚರಣೆಯಿಂದವಂ ಸುಖದೊಳಿರುತಿರೆ ಕಂಡು |
ಪಶ್ಚಾದ್ವಿವೇಕದಿಂದುರೆ ನೊಂದು ಹರಿಕಿಂಕರ ದ್ರೋಹಮಂ ಮಾಡಿದ ||
ದುಶ್ಚರಿತ ಕಾವುದಂ ನಿಷ್ಕೃತಿಗ ಳಿಲ್ಲೆಂಬ |
ನಿಶ್ಚಯದೊಳಾಗ ಮರಣಾಂತವೇ ತನಗೆ ಪ್ರಾ |
ಯಶ್ಚಿತ್ತಮೆಂದಾ ಕಟಾಹದೊ ಳ್ಕುದಿವೆಣ್ಣೆಯೊ ಳ್ಬಿಳ್ದನಾ ಲಿಖಿತನು || ||೩೯||

ಆ ತಪ್ತತೈಲದ ಕಟಾಹದೆಡೆ ಲಿಖಿತಂಗೆ |
ಶೀತಳಸ್ಥಳ ಮಾದುದಾ ಸುಧನ್ವನ ಸಂಗ |
ಮೋತರತಿಶಯಮೊ ಹರಿಭಕ್ತರಂ ಸಾರ್ದಂಗೆ ತಾಪವಿರ್ದಪುದೆ ಬಳಿಕ ||
ಆತಗ ಳ್ಕುದಿವೆಣ್ಣೆಯೊ ಳ್ಸುಖದೊಳಿರೆ ಹಂಸ |
ಕೇತು ವಿಸ್ಮಿತನಾಗಿ ಮಂತ್ರಿಗಳೊಡನೆ ಬಂದು |
ಪ್ರೀತಿಯಿಂ ದವ ರಿರ್ವರಂ ತೆಗೆದು ತಕ್ಕೈಸಿದಂ ಸುತಪುರೋಹಿತರನು || ||೪೦||

ಪನ್ನೀರ ಮಿಂದು ದಿವ್ಯಾಂಬರವನುಟ್ಟು ಜಾ |
ವನ್ನದಿಗುರಂ ಗೆಲ್ದು ಕಮ್ಮಲರ್ಗಳಂ ಸೂಡಿ |
ಸನ್ನುತ ಸುಯಕ್ಷ ಕರ್ದಮವ ನನುಕರಿಸಿ ಕಸ್ತೂರಿತಿಲಕವಿಟ್ಟು ಪಣೆಗೆ ||
ರನ್ನ ದೊಡವುಗಳ ನಳವಡಿಸಿ ವೀಳೆಯಗೊಂಡು |
ತನ್ನ ನುಳುಹಿದ ದೇವಪುರದ ಲಕ್ಷ್ಮೀಪತಿಯ |
ನಿನ್ನು ಕಂಡಪೆನೆಂಬ ಹರ್ಷದಿಂ ಕಳಿಯೇರಿ ಮೆರೆದಂ ಸುಧನ್ವನಂದು || ||೪೧||

ಸಂಧಿ ೧೧ ಕ್ಕೆ ಪದ್ಯಗಳು ೫೭೬ ಕ್ಕೆ ಮಂಗಳಮಸ್ತು.

## ಹನ್ನೆರಡನೆಯ ಸಂಧಿ.

ಸೂಚನೆ|| ಅಪರಿಮಿತ ಸೈನ್ಯಸನ್ನಾಹದಿಂದರ್ಜುನನ |
ಚಪಲಹಯಮಂ ಮರಾಳಧ್ವಜಂ ಪಿಡಿಯಲ್ಕೆ |
ತಪನಸುತನಂದನ ಸುಧನ್ವರ್ಗೆ ಕಾಳಗಂ ಪೂಣ್ದುದಾಡಂಬರದೊಳು ||

ಇನ್ನು ಮೇಲಣ ಕಥೆಯ ನಾಲಿಸೆಲೆ ಭರತಕುಲ |
ರನ್ನ ಜನಮೇಜಯ ಸುಧನ್ವಂ ಕಟಾಹ ದುರಿ |
ಮಂ ನಾರಸಿಂಹ ಜಪದಿಂ ಜಯಿಸೆ ಲಿಖಿತ ನೆಸಗಿದ ವೈಷ್ಣವ ದ್ರೋಹಕೆ ||
ತನ್ನ ರಿವನುರೆ ಜರೆದುಕೊಂ ಡಸು ದೊರೆವೆ ನೆಂದು |
ನನ್ನಿಯಿಂ ದಾ ತೈಲದೊಳ್ಬೀಳ ಲವರ್ಗಳಂ |
ಮನ್ನಿಸಿ ನೃಪಂ ತೆಗೆಸಲಾ ಪುರೋಹಿತ ನವನಿಪತಿಗೆ ಬಳಿಕಿಂತೆಂದನು || ||೧||

ಭೂನಾಥ ಕೇಳ್ನಿನ್ನ ಸುತನ ದೆಸೆಯಿಂದೆ ನ |
ಪ್ಮಾನೆಲಂ ಪ್ರಜೆ ನಾಡು ಬೀಡೂರು ಪರಿವಾರ |
ಮಾನೆ ಕುದುರೆಗಳಿರ್ದ್ದ ಪಶುಪಕ್ಷಿಮೃಗ ಕೀಟ ತರು ಗುಲ್ಮ ಲತೆಗಳೆಲ್ಲ ||
ಈ ನಿರುದ್ಧಕೆ ಧನ್ಯವಾದುವೇಂ ಕೃತಿಯೊ ನೀಂ |
ಭಾನುರಶ್ಮಿಗೆ ಕಂದೆರೆಯುವ ಗೂಗೆಯವೊಲ |
ಜ್ಞಾನಿ ದ್ವಿಜಾಧಮಂ ತಾನಾದೆನೀದ್ರೋಹಕೆಂದು ಲಿಖಿತಂ ನುಡಿದನು || ||೨||

ಬಳಿಕಾತನಂ ಸುಮ್ಮನಿರಿಸಿ ನುಡಿದಂ ಶಂಖ |
ನೆಲೆ ಮಹೀಪಾಲ ಹರಿಶರಣರ್ಗೆಡರ್ಗಳೆ |
ತ್ತೊಳವು ಬೆಳ್ದಿಂಗಳ್ಗೆ ಬೆಮರುಂಟೆ ಬೇಸಗೆಯೊ ಳಿವನ ನಿಜಮಂ ಕಾಣದೆ ||
ಬಳಸಿದೆವು ಮೂರ್ಖತೆಯನರಿದು ಮರುಳಾದೆ ವಿ |
ಸ್ನಳಿದ ಮಾತುಗಳೇಕೆ ಸಾಕೀ ಸುಧನ್ವನಂ |
ಕಳುಹು ಕಾಳಗ ಕೆನಲ್ಭೂಪ ನವನಂ ತೆಗೆದು ಬಿಗಿಯಪ್ಪಿದಂ ಮುದದೊಳು || ||೩||

ತಂದೆಯ ಚರಣಕೆರಗಿ ಶಂಖಲಿಖಿತರ ಪದಕೆ |
ವಂದಿಸಿ ಪರಕೆಗೊಂಡು ಸಾರಥಿಯ ನಾದರಿಸಿ |
ಪೊಂದೇರ ನಳವಡಿಸಿ ತುರಗಂಗಳಂ ಪೂಡಿ ಸಿಂಧಮಂ ನಿಡಿದುಮಾಡಿ ||
ಗೊಂದಣದ ಝಲ್ಲಿಗಳ ಕನಕಮಾಲೆಗಳ ಸ್ರ |
ಕ್ಚಂದನ ವಿಭೂಷಣಾವಳಿಗಳಂ ಸಿಂಗರಿಸಿ |
ಬಂ ದಡರ್ದಂ ಜಯರವದೊಳಾ ಸುಧನ್ವಂ ತಿರಸ್ಕೃತ ಕುಸುಮಧನ್ವನು || ||೪||

ಕೇಳ್ಗುಣಮಣಿಯೆ ಧರಣಿಪಾಗ್ರಣಿಯೆ ತನ್ನ ಮಗ |
ನೇಳ್ಗೆಯಂ ಕಂಡುಬ್ಬಿದಂ ಮರಾಳಧ್ವಜಂ |
ಸೂಳ್ಗೈದುವಾಗ ತಂಬಟ ಭೇರಿ ನಿಸ್ಸಾಳ ಕಹಳಾದಿ ವಾದ್ಯಂಗಳು ||
ತೋಳ್ಗುಟ್ಟುತಾರ್ದು ಸುಮ್ಮಾನದಿಂ ಪಟುಭಟ |
ಕೊರ್ವೇಳ್ಗೊಂಡು ಕುದಿಯುತಿರ್ದರು ಸಾರ್ಧಯೋಜನದೊ |
ಳಾಳ್ಗಜ ತುರಂಗ ರಥ ವಿಟ್ಟಣಿಸಿ ನಡೆದು ದುತ್ಸಾಹದಿಂ ನರನ ಮೇಲೆ || ||೫||

ಬೆರೆಬೆರೆಸು ತೊತ್ತಿಡಿದು ಮುಂದೆ ಭರದಿಂದೆ ನಡೆ |
ವರ ಸರಸುಗಳ ಕಂಠಮಾಲೆಗಳ ತೋರ ಮು |
ತ್ತಾರ ಸೊರಸು ಮಿಗೆ ಪರಿದವರ ಸೂಸು ದಂಬುಲದ ಚೆನ್ನೆಲದ ಮೇ ಲೊಕ್ಕಿರೆ ||
ಪೊರೆವ ಸಂಧ್ಯಾರುಣದ ಗಗನಮಂಡಲದೊ ಳಂ |
ಕುರಿಸಿ ದುಡುಗಣದಂತೆ ರಂಜಿಸಿತು ದೆಸೆದೆಸೆಗೆ |
ಪರಿಮಳ ದೆಲ ಪರ್ರಿದು ದಗರು ಚಂದನ ಯಕ್ಷ ಕರ್ದಮದ ಪೊಗವಾಸದ || ||೬||

ಪಡೆಯೊ ಳನ್ಯೋನ್ಯ ಸಂಘರ್ಷಣದೊ ಳುಗುವ ಪೊಂ |
ದೊಡವುಗಳ ರೇಣುಗಳೊ ಮೈಗಳಂ ಸೋಂಕಿ ಪುಡಿ |
ವಡೆದ ಕುಂಕುಮ ಸುಗಂಧಾನುಲೇಪನದ ಚೂರ್ಣಂಗಳೊ ಪದಘಾತಿಗೆ ||
ಪೊಡವಿಯಿಂ ದಿರದೇ ಳ್ವರುಣ ರಜಂಗಳೊ ತಿಳಿದು |
ನುಡಿಯ ಲರಿದೆಂಬಿನಂ ಮೇರುವಿನ ಬಣ್ಣ ವಿಂ |
ಪಿಡಿದ ದಿವಿಭಾಗಮಂ ಜನವ ನೆಚ್ಚರಿಪಂತೆ ಕೆಂಧೂಳಿ ಮಸಗಿತಾಗ || ||೭||

ಮೊಗಗೈಗಳಿಂ ತಮ್ಮೊಡಲ ನೀರ ನಾನೆಗ |
ಕ್ತಿಗೆದು ಚೆಲ್ಲಲ್ಪೊನಲ್ವರಿದ ಮಡುಗಳ ಕೆಸ ರೊ |
ಳೊಗೆದ ನೃಪಮಂಡಲದ ಕನಕಾಭರಣ ಕಿರಣ ತರುಣಾತಪ ದೊಳಲರ್ದ ||
ಮಿಗೆ ಸುಳಿವ ಚಾಮರಂಗಳ ರಾಜಹಂಸಾವ |
ಳಿಗಳ ಸಂಚಾರಮಂ ಕೈಗೊಂಡ ಬೆಳ್ದಾವ |
ರೆಗಳ ಹಂಕಿಗಳಂತೆ ಪಡೆಯೊಳೆಸೆದುವು ತಳ್ತಿಡಿದ ಸತ್ತಿಗೆಯ ಸಾಲ್ಗಳು || ||೮||

ಮುಂಕೊಂಬ ಮಂದಿ ಕುದುರೆಗೆ ಧರಾಮಂಡಲಂ |
ಸಂಕುಲದ ವಾದ್ಯಧ್ವನಿಗೆ ದಿಶಾಮಂಡಲಂ |
ಸಂಖ್ಯೆಯಿಲ್ಲದ ಸಿಂದ ಸೀಗುರಿ ಪತಾಕೆಗೆ ನಭೋಮಂಡಲಂ ನಿಾಂದಿದ ||
ಬಿಂಕದಿಂ ದಿರಿವ ಕಲಿತನಕೆ ರಣಮಂಡಲಂ |
ಸಂಕೋಚಮೆನೆ ಬಂದು ಪಿಡಿದು ಪಾರ್ಥನ ತುರಗ |
ಮಂ ಕಟ್ಟಿ ಬಳಸಿ ಪದ್ಮವ್ಯೂಹಮಾಗಿ ನಿಂದಾರ್ದು ದಾ ಸೇನೆ ನಲಿದು || ||೯||

ಸುತ್ತ ಪದ್ಮವ್ಯೂಹಮಂ ರಚಿಸಿ ನಡುವೆ ನರ |
ನುತ್ತಮ ತುರಂಗಮಂ ಕಟ್ಟಿ ಕಾಳಗಕೆ ಭಟ |
ರೊತ್ತಾಗಿ ನಿಂದ ರರಿವೀರರಂ ಬರಹೇಳೆನು ತ್ತರಸನಾಜ್ಞೆಯಿಂದೆ ||
ಇತ್ತ ಪಾರ್ಥಂಗೆ ಚರರೈತಂದು ನುಡಿದರೀ |
ವೃತ್ತಾಂತಮಂ ಬಳಿಕ ಪ್ರದ್ಯುಮ್ನನಂ ಕರೆದು |
ಮತ್ತೆಬಂದುದು ವಿಘ್ನಮಿದಕಿ ನ್ನುಪಾಯಮೇನೆಂದೊ ಡವನಿಂತೆಂದನು || ||೧೦||

ನಿನ್ನಂ ಕಳುಹುವಂದು ಹಯದ ಮೇಲಾರೈಕೆ |
ಗೆನ್ನ ನಟ್ಟಿದನಲಾ ಪಿತನಾತ ನಾಜ್ಞೆಯಿಂ |
ಮನ್ನಿಸುವ ಕಾಲಮಲ್ಲವೆ ತನಗೆ ನೀನಿದಕ್ಕಣಿಕೆಗೊಳಬಹುದೆ ಬರಿದೆ ||
ತನ್ನ ಭುಜಬಲದಿಂದೆ ಬಿಡಿಸಿ ತಂದಪೆ ನಶ್ವ |
ಮನ್ನೋಡು ಸಾಕೆನುತೆ ಪಾರ್ಥನಂ ಬೀಳ್ಕೊಂಡು |
ಪನ್ನಗಾರಿಧ್ವಜನ ತನಯನೈದಿದ ನಹಿತ ಮೋಹರಕೆ ಸೇನೆಸಹಿತ || ||೧೧||

ಲಟಕಟಿಸುತಾಗ ಸಾತ್ಯಕಿ ಸಾಂಬ ಕೃತವರ್ಮ |
ಶಠ ನಿಶಠ ರನಿರುದ್ಧ ಗದ ಮುಖ್ಯರಾದ ಪಟು |
ಭಟರಖಿಳ ಯಾದವ ಚತುರ್ಬಲಂ ಜೋಡಿಸಿತು ಸಮರ ಸನ್ನಾಹದಿಂದೆ ||
ದಿಟವಿಂ ದಜಾಂಡಘಟ ಮೊಡೆಯದಿರ ದೆಂಬಿನಂ |
ಪಟಹ ಡಿಂಡಿಮ ಡೌಡೆ ಭೇರಿ ನಿಸ್ಸಾಳ ತಂ |
ಬಟ ಮುರಜ ಡಕ್ಕೆ ಡಮರುಗ ಕೊಂಬು ಕಹಳೆಗಳ ಬಹುಳ ರವ ಮಳ್ಳಿರಿದುದು ||೧೨||

ಮೊಗಸಿ ತರಿಬಲವ ನನುಸಾಲ್ವಕನ ಸೇನೆ ಯೊ |
ಬ್ಬೊಗಮೊಳೆರೆಯುಗಿದ ಫಣಿಕುಲದಂತೆ ರಣ ದವಕ |
ಸೊಗ ದೊದಗಿ ತಂಬುಧಿಯತೆರೆಯಂತೆ ಯೌವನಾಶ್ವನ ಸೈನ್ಯಮೊಂದೆಸೆಯೊಳು ||
ಯುಗದಂತ್ಯ ದಭ್ರದಂ ತೆದ್ದು ದುರ ವಣಿಸಿ ಸಂ |
ಯುಗಕೆ ನೀಲಧ್ವಜನ ಸೈನಿಕಂ ಬಳಿಕ ಕರ |
ಯುಗಳಂ ಮುಗಿದು ಕಿರೀಟಿಗೆ ವಿನಯದಿಂದೆ ಬಿನ್ನೈಸಿದಂ ಕರ್ಣಸೂನು || ||೧೩||

ಶಾತ ಚಿತ್ತೈಸು ಗೋಷ್ಪದ ಜಲಕೆ ಹರಿಗೋಲ |
ದೇತಕೆ ವೃಥಾ ಕುದುರೆ ಮಂದಿಯಂ ನೋಯಿಸ ದಿ |
ರೀತಗಳ ನೆಲ್ಲರಂ ತೆಗೆಸೆನಗೆ ಸೆಲವಿಂದಿನಾಹವಂ ಪರಬಲವನು ||
ಘಾತಿಸಿ ತುರಂಗಮಂ ತಾರದೊಡೆ ಬಳಿಕ ರವಿ |
ಜಾತನ ಕುಮಾರಕನೆ ನೋಡು ಸಾಕೆನುತೆ ವೃಷ |
ಕೇತು ಪಾರ್ಥನ ಬೆಸಂಬಡೆದು ರಥವೇರಿದಂ ಮೀರಿದ ಪರಾಕ್ರಮದೊಳು || ||೧೪||
ತಾರಕಾಸುರನ ಪೆರ್ಬಡೆಗೆ ಮೈದೋರುವ ಕು |
ಮಾರನಂ ತಾನಭ್ರಮಾರ್ಗದೊಳ್ಸುಳಿವ ಮುಂ |
ಗಾರ ಮಿಂಚಂ ತನ್ನ ಹೊಂದೇರ ಗಿರಿಗೆರಗು ವಶನಿಯಂ ತನ್ನ ಘಾತೀ ||
ಪೇರಡವಿ ಗೈದುವ ದವಾಗ್ನಿಯಂ ತನ್ನ ಪ್ರ |
ಚಾರಂ ನೆಗಳ್ದ ನಡುವಗಲ ರವಿಯಂ ತನ್ನ |
ವೀರಪ್ರತಾಪಂ ತಿರಸ್ಕರಿಸೆ ವೃಷಕೇತು ರಿಪುಸೈನ್ಯಮಂ ಪೊಕ್ಕನು || ||೧೫||
ದೂರದೊಳ್ಕಂಡಂ ಸುಧನ್ವನಾತನ ಬರವ |
ನಾರಿವಂ ಪಾರ್ಥನಾದೊಡೆ ಕಪಿಧ್ವಜ ಮಿಹುದು ದು |
ದಾರ ವೃಷಭಾಂಕಿತದ ಕೇತುದಂಡದ ಸುಭಟನಾವನೋ ಪಾಂಡವರೊಳು ||
ವೀರ ನಹನೆನುತೆ ಬಂದಿದಿರಾಗಿ ನಿಂದು ಪರಿ |
ವಾರಮಂ ತೆಗೆಸಿ ಬಿಲ್ದಿರುವ ನೊದರಿಸುತೆ ಕೈ |
ವಾರಿಸುತೆ ನಸುನಗುತೆ ಬಾಣಮಂತೂಗು ತಿನಸುತಜನಂ ಬೆಸಗೊಂಡನು || ||೧೬||
ಎಲವೊ ನೀನಾರ್ನಿನ್ನ ಪೆಸರದೇನಾವರ್ಷಿ |
ಕುಲದವಂ ನಿನ್ನ ಪಿತನಾವಾತನೆಂಬುದಂ |
ತಿಳುಹೆನಗೆ ತಾನೀಗ ವೀರಹಂಸಧ್ವಜನೃಪನ ಕುಮಾರಂ ತನ್ನನು ||
ಇಳೆಯೊಳ್ಸುಧನ್ವನೆಂಬ ರ್ಮಧುಚ್ಛಂದ ಮುನಿ |
ತಿಲಕ ನಿಂದಾಯ್ತೆಮ್ಮ ವಂಶಮೆನೆ ಕರ್ಣಜಂ !
ಬಳಿಕ ನಸುನಗೆಯೊಳೆಡಗೈಯ ಕೋದಂಡಮಂ ತಿರುಗಿಸು ತ್ತಿಂತೆಂದನು || ||೧೭||
ಗೂಢಮಾಗಿರ್ದಲರ ಪರಿಮಳಂ ಪ್ರಕಟಿಸದೆ |
ರೂಢಿಸಿದ ವಂಶವಿಸ್ತಾರಮಂ ಪೌರುಷದ |
ಮೋಡಿಯಿಂದರಿಯಬಾರದೆ ಸಮರಸಾಧನ ಮಿದರೊಳಿಹುದೆ ನಿನಗಾದೊಡೆ ||
ಮೂಢ ಕೇಳ್ಕಶ್ಯಪನ ಕುಲವೆಮ್ಮದೆಂಬರಾ |
ರೂಢನಾಗಿಹ ದಿನಮಣಿಯ ತನಯನಾಹವ |
ಪ್ರೌಢಕರ್ಣನ ಸುತಂ ಪೆಸರೆನಗೆ ವೃಷಕೇತು ನೆಂದೊಡವ ನಿಂತೆಂದನು || ||೧೮||
ಕರ್ಣಸುತ ನಾದೊಡೊಳ್ಳಿತು ವೀರನಹುದು ನೀಂ |
ನಿರ್ಣೈಸಬಲ್ಲೆ ರಣರಂಗಮಂ ಮುಂದರಾಂ |
ವರ್ಣಕದ ಮಾತುಗಳನರಿಯೆ ನೆನುತೆಚ್ಚಂ ಸುಧನ್ವನೀತನ ಸರಿಸಕೆ ||
ಸ್ವರ್ಣಪುಂಖದ ಕಣೆಗಳೈದಿದುವು ಮಿಂಚಿನ ಪೊ |
ಗರ್ಣ ಭೋಮಂಡಲವ ನಂಡಲೆಯಲಾಕ್ಷಣಂ |
ದುರ್ನಿರೀಕ್ಷಣ ಮಾಗಲೆಡೆಯೊಳವನೆಲ್ಲವಂ ತರಿದಿವಂ ಕೋಲ್ಗರೆದನು || ||೧೯||

ಬರಸಿಡಿಲ ಭರದಿಂದೆ ಮಿಂಚಿನ ಪೊಳಪಿನಿಂದೆ |
ಬಿರುವಳೆಗಳೊತ್ತಿಂದೆ ಕರ್ಣಜಂ ಕಣೆಗಳಂ |
ಕರೆಯುತಿರೆ ನಡುವೆ ಖಂಡಿಸಿದಂ ಸುಧನ್ವನಾತನ ಸರಳ್ಗಳನೆಡೆಯೊಳು ||
ತರಿದಂ ವೃಷಧ್ವಜಂ ಬಳಿಕವನ ಕೋಲ್ಗಳಂ |
ಬರಿಕೈದ ನಾ ಮರಾಳಧ್ವಜನ ಸುತನಿಂತು |
ತಿರಹು ಗುಡಮೊರ್ವರೊರ್ವರ ಮೇಲೆ ಮುಳಿದುಜರೆ ದೆಚ್ಚಾಡಿದ ರ್ಧುರದೊಳು ||೨೦||
ಕ್ಷೋಣಿಗೆ ಸುಧನ್ವ ನಾನಿರೆ ನೀಂ ಸುಧನ್ವನೇ |
ಮಾಣಿಸುವೆ ನೀ ವೆಸರ ನೀಕ್ಷಣದೊಳೆಂದು ಪೊಸ |
ಸಾಣೆಯಲಗಿನ ಸರಳ್ಗಳ ನೆಚ್ಚು ಕರ್ಣಜಂ ಪೋರ್ಗಳನವನ ಮೈಯೊಳು ||
ಕಾಣಿಸೆ ಕೆರಳ್ದಲಪೊ ಮೇದಿನಿಗೆ ರಿಪುಪಂಚ |
ಬಾಣ ವೃಷಕೇತು ತಾನಿರಲಾಗಿ ವೃಷಕೇತು |
ಮೇಣುಂಟೆ ಹೇಳೆನುತಿವಂ ಕಡೆಗರೆದನವನ ತಮುವನುಚ್ಚಳಿಸುವಂತೆ || ||೨೧||
ಭುಗಿಭುಗಿಸೆ ಕೋಪಾಗ್ನಿ ಮೂಡಿಗೆಯ ಕೋಲ್ಗಳಂ |
ತೆಗೆತೆಗೆದು ಕರ್ಣತನಯಂ ಸುಧನ್ವನ ರಥವ |
ಬಗೆಬಗೆ ಯೊಳಮರ್ದಿಸೆವ ಛತ್ರ ಚಾಮರ ಸಿಂದ ಸೀಗುರಿ ಪತಾಕೆಗಳನು ||
ಮೊಗನೊಗಸಿ ಮುಂಬರಿವ ಕುದುರೆ ಸಾರಥಿಗಳಂ |
ಝುಗಝುಗಿಪ ಕವಚಮಂ ತನ್ನ ಕಣೆಯಂ ನಡುವೆ |
ತಗೆತಗೆವ ಕೋಲ್ಗಳಂ ತರಿದವನ ಬಿಲ್ಲ ನಿಕ್ಕಡಿಗೈದು ಬೊಬ್ಬಿರಿದನು || ||೨೨||
ತಂವರಾಗಳೆ ಸುಧನ್ವಂಗೆ ಮಣಿಮಯದ ಮ |
ತ್ತೊಂದು ರಥಮಂ ಬಳಿಕ ಬಿಲ್ವಿಡಿದು ಜೇಗೈದು |
ನಿಂದು ನಿಡುಗಣೆಗಳಂ ತೆಗೆದೆಚ್ಚು ಕರ್ಣಜನ ಕೈಮೆಗಿಮ್ಮಿಗಿಲಾಗಲು ||
ಸ್ಯಂದನ ತುರಂಗ ಸಾರಥಿಗಳಂ ಕವಚಮಂ |
ಸಿಂದ ಸೀಗುರಿ ಛತ್ರ ಚಾಮರ ಪತಾಕೆಗಳ |
ನಂದು ಕತ್ತರಿಸಿ ವೃಷಕೇತುವಿನ ಕರದ ಕೋದಂಡಮಂ ಖಂಡಿಸಿದನು || ||೨೩||
ವಿರಥನಾದೊಡೆ ಕರ್ಣಸೂನು ಕೈಗೆಡದೆ ಸಂ |
ಗರದೊಳಸಿ ಮುದ್ಗರ ಮುಸುಂಡಿ ತೋಮರ ಖಡ್ಗ |
ಪರಶು ಗದೆ ಚಕ್ರ ಡೊಂಕಣಿ ಕುಂತ ಶೂಲ ಪಟ್ಟಿಸ ಭಿಂಡಿವಾಳ ಶಕ್ತಿ ||
ಸುರಗಿ ಮೊದಲಾಗಿರ್ದ ಕೈದುಗಳ ಪರಿವಿಡಿಯೊ |
ಳುರವಣಿಸಿ ಪೊಯ್ದಂ ಸುಧನ್ವನಂ ಮತ್ತವನ |
ಪೊರೆಯ ಪರಿವಾರಮಂ ನಾನಾ ಪ್ರಹಾರದಿಂದ್ಪೈದೆ ಘಾತಿಸುತಿರ್ದನು || ||೨೪||
ಇತ್ತಲಿಂತಿರ ಲತ್ತಲವನ ಸಾರಥಿ ಬೇಗ |
ಮತ್ತೊಂದು ರಥಮಂ ತರಲ್ಕದನಡರ್ದು ಮಸೆ |
ವೆತ್ತ ಕೂರ್ಗಣೆಗಳಂ ಕರ್ಣಜಂ ತೆಗೆದೆಚ್ಚೊಡಾ ಸುಧನ್ವನ ಮೆಯ್ಯೊಳು ||
ತೆತ್ತಿಸಿದುವಂ ಬೊಡಲೊಳಿಡಿದ ತನಿವೀರರಸ |
ಮೊತ್ತರಿಸಿ ಮೇಲುಕ್ಕುವಂದದಿಂ ಬಸಿವ ಬಿಸಿ |
ನೆತ್ತರೆಸೆದಿರೆ ಕೆರಳ್ದವ ನೆಚ್ಚೊಡಾ ಕೋಲ್ಗಳಂ ತರಿಯು ತಿವನೆಚ್ಚನು || ||೨೫||

ನಭಕುಪ್ಪರಿಸಿ ನೆಲಕೆ ಪಾಯ್ದು ಡಬಲಕೆ ಮುರಿದು |
ರಥದಿಂದಮೋರ್ವರೊರ್ವರಂ ಮಾರ್ಡೋದಗಿ |
ಪಥದಿಂದಮಿಳ ಶಸ್ತ್ರಾಸ್ತ್ರದಿಂ ಸಮ ವಿಷಮ ಸೋಲ ಗೆಲವುಗಳಿಲ್ಲದೆ ||
ತ್ರಿಭುವನಕೆ ರಣರಂಗದೊಳ್ಸುಭಟ ನರ್ತನವ |
ನಭಿನಯಿಸುವಂತೆ ಲಾಘವ ದೃಷ್ಟಿ ಮುಷ್ಟಿಗಳೊ |
ಳುಭಯ ವೀರರ್ಕೀರ್ತಿಯೊಳೆಚ್ಚಾಡಿದ ಕರ್ಣನಂದನ ಸುಧನ್ವರಂದು || ||೨೬||
ಒತ್ತುವರಿಸುವರೆಚ್ಚು ಕಣೆಗಳಂ ಕಣೆಗಳಿಂ |
ಕತ್ತರಿಸಿ ಮುತ್ತುವರೊಡಲೊಳಂಬ ನಂಬಸುರೆ |
ಕಿತ್ತು ಬಿಸುಡುವ ರಸೃಗ್ವಾರಿಯಂ ವಾರಿಯಿಂ ತೊಳೆಯೊಡನೆ ಕವಳಗೊಂಡು ||
ಮತ್ತೆ ಕೈಗೆಡದೆಚ್ಚು ಬೊಬ್ಬಿಡುವ ರೀತೆರದೊ |
ಳಿತ್ತಂಡದಗ್ಗಳಿಕೆ ಸಮವಾಗೆ ಖತಿಯೊಳೊಂ |
ದತ್ತು ನಾರಾಚದಿಂ ದಾ ಸುಧನ್ವಂ ಕರ್ಣತನಯನಂ ಘಾತಿಸಿದನು || ||೨೭||
ರಾಮ ಕೇಳಾಗ ಪ್ರಾಣಾಯಗಾಯದೊಳಸ್ರ |
ತೋಯದಿಂದನಯನಂ ತೋಯ ಲಳವಳಿದು ರಾ |
ಧೇಯಜಂ ಬಹಳ ಬಾಧೆಯನಾಗಲ್ಕವನ ಸಾರಥಿ ರಥವ ತಿರುಗಿಸೆ ||
ಜೇಯನೇರಿಸಿ ಬಿಲ್ಗಜೇಯ ಹರಿಸೂನು ಸಹ |
ನಾಯತಿಕೆಯಿಂದೆ ನಿಜನಾಯಕನ ನುಗಿಯು ತದ |
ಪಾಯದಂ ಕರೆಕೊಳ್ಸಹಾಯಿಗಳನೆನುತೆ ಕಡುಗಲಿ ಸುಧನ್ವನಸಂಪಕೆ || ||೨೮||
ಅರಿದ ನಚ್ಯುತನ ಸುತನೆಂಬುದಂ ಟೆಕ್ಕೆಯದ |
ಕುರುಹಿಂದೆ ನುಡಿದನವನಿಲ್ಲಿ ನಿನಗಬಳಿಯರ |
ಮರೆಯಿಲ್ಲಿ ನಿನ್ನನುಗೆಗಳುಕುವರ ದಾರೆನುತೆ ಕಲಿ ಸುಧನ್ವಂ ಕಣೆಗಳ ||
ಬಿರುಮಳೆ ಗರೆಯಲಿಡೆಯೊಳರಿದೆಲವೊ ಸಂಗರದೊ |
ಳುರುವ ಜಯವಧು ತನ್ನ ಭುಜದೊಳಿಹಳೆನುತೆ ಕೆಂ |
ಗರಿಯ ಬಾಣಂಗಳಂ ಮುಸುಕಿದಂ ಪ್ರದ್ಯುಮ್ನ ನವನ ರಥವೆಣ್ದೆಸೆಯೊಳು || ||೨೯||
ಅಸಮಸಾಯಕನೆಂದು ಬಣ್ಣಿಪರ್ ನಿನ್ನನಿಂ |
ದಸಮ ಸಾಯಕನಾನೊ ನೀನೊ ನೋಡೆನುತೆ ಪೊಸ |
ಮಸೆಯ ಶಿಳಿಮುಖಂಗಳಂ ಸುರಿದಂ ಸುಧನ್ವನಾತನ ಕಣೆಗಳಂ ಖಂಡಿಸಿ ||
ವಸುಮತಿಗೆ ಪಿರಿದ ನೀಂ ನಸಮಸಾಯಕನಾದೊ |
ಡುಸಿರೆನಗೆ ಸಮಸಾಯಕರದಾ ತ್ರೈಲೋಕದೊ |
ಳ್ಪುಸಿಯ ಜೇಡೆನುತೆ ಕೂರಂಬುಗಳ ನಂಬರಕೆ ತುಂಬಿದಂ ಶಂಬರಾರಿ || ||೩೦||
ಬರಿಯ ಪೂ ಗೋಲಿಸುಗೆಯಲ್ಲ ದಾಹವದೊಳಂ |
ಕಿರಿದು ಶರಸಂಧಾನಮುಂಟಲಾ ನಿನಗೆಂ |
ಬರೆ ದೆಂಟುಬಾಣದಿಂದೆಚ್ಚಂ ಸುಧನ್ವನಾತನ ಕೋಲ್ಗಳಂ ತರಿಸಿ ||
ಬಿರುಸರಳ ಸಾರದಿಂದವನ ಸರ್ವಾಂಗಮಂ |
ತುರುಗಿದಂ ಕವಚ ನಿಸಕ ಬಾಹುರಕ್ಷೆಗ |
ಳ್ಪರಿದಿನಂ ಕೆನ್ನೀರ್ಗರೆದಿನಂ ನೊಂದು ಮನ್ಮಥರೆದಿನಂ ಪ್ರದ್ಯುಮ್ನನು || ||೩೧||

ಕೃಷ್ಣಸುತನೆಂಬಿನ್ನೆಗಂ ಸೈರಿಸಿದೊಡೆ ನೀ |
ನುಷ್ಣಮುಳ್ಳವನಾದೆ ತನ್ನ ಬಾಣಾವಳಿಯ |
ತೃಷ್ಣೆಗರುಣಾಂಬುವಂ ನಿನ್ನೊಡಲೊಳೂಡಿಸದೆ ಬಿಡುವೆನೇ ಮೇಣಸುವನು ||
ನುಷ್ಣಮಂ ಮಾಡಿಸದೆ ಮಾಣ್ದಪೆನೆ ಸಾಕಿನ್ನು |
ಜಿಷ್ಣುವಂ ಕರೆಸು ತೊಲಗೆನುತೊಂದು ಸರಳಿಂದೆ |
ವೃಷ್ಣಿಕುಲತಿಲಕನ ಕುಮಾರಕನ ಧನುವ ನೇಳ್ತುಂಡಾಗಿ ಖಂಡಿಸಿದನು || ||೩೨||
ಬಿಲ್ಮುರಿಯೆ ಕಾರ್ಷ್ಣಿ ಕಡುಗೋಪದಿಂದಾಕ್ಷಣಂ |
ಪಲ್ಮೊರೆಯು ತಸಿಪಲಗೆ ವಿಡಿದವನ ಮೇಲೆ ನಡೆ |
ಯಲ್ಮುಂದ ಕಡಹಾಯ್ದುವರಿಯಲಾ ರಿಪುರೌದ್ರಕರ್ಮ ಕೃತವರ್ಮಕನನು ||
ಬಲ್ಮೆಯುಳ್ಳವನಹೆ ವೃಷಧ್ವಜ ಪ್ರದ್ಯುಮ್ನ |
ರೊಲ್ಮಹಾವೀರರಿಲ್ಲವರೊಳ್ಪೊಣರ್ದ ನೀಂ |
ನಿಲ್ಮದೀಯಾಸ್ತ್ರವಿಸ್ತಾರಮಂ ನೋಡೆನುತೆ ತೆಗೆದೆಚ್ಚು ಬೊಬ್ಬಿರಿದನು || ||೩೩||
ಲೇಸಾದು ದಖಿಳ ಯಾದವರೊಳಗೆ ಕೃತವರ್ಮ |
ನೇ ಸಮರ್ಥಂ ಕಾಣಬಹುದು ಕಾಳಗದೊಳಿನು |
ತಾಸುಧನ್ವಂ ತೆಗೆದಿಸಲ್ಕವನ ಕಣೆಗಳಂ ಕಡಿದಿವಂ ಮಗುಳೆಚ್ಚೊಡೆ ||
ಆಸರಳ್ಗಳನವಂ ತರಿದು ಹತ್ತಂಬಿನಿಂ |
ಗಾಸಿ ಮಾಡಿದೊಡಿವಂ ಪದಿನೈದು ಮಾರ್ಗಣದೊ |
ಳೋಸರಿಸದವನ ಸರ್ವಾಂಗಮಂ ಕೀಲಿಸಿದ ನರುಣಜಲ ದೊರತೆ ಮಸಗೆ || ||೩೪||
ಹಾರ್ದಿಕ್ಯ ನಿಸುಗೆಯಿಂದುರ ನೊಂದು ಕೋಪದಿಂ |
ದಾರ್ದ ಸುಧನ್ವ ನಿಪ್ಪತ್ತುನಾಲ್ಕಂಬಿನಿಂ |
ತೇರ್ದೆಗೆವ ಕುದುರೆಗಳ ಕಾಲ್ಗಳಂ ಗಾಲಿಗಳ ಕೀಲ್ಗಳಂ ಮೂಡಿಗೆಯನು ||
ನಿನಾರ್ದಿಸುವ ಚಾಪಮಂ ಸಾರಥಿಯ ಕರಮಂ ಕ್ಷ |
ಣಾರ್ಧದೊಳ್ಕಡಿಯೆ ಕೃತವರ್ಮ ನಳವಳಿದು ಕೆಲ |
ಸಾರ್ದೊಡಾ ಪದದೊಳನುಸಾಲ್ವನಿದಿರಾದ ನತಿವೇಗದಿಂದಿವನ ರಥಕೆ || ||೩೫||
ಸಾಲ್ವಾನುಜಂ ಕಣಾ ತಾ ನೆನ್ನೊಳಾಹವಕೆ |
ಮೇಲ್ವಾಯ್ದೊಡನುಪಮ ಸುರೇಂದ್ರನ ಪರಾಕ್ರಮಕೆ |
ಸೋಲ್ವೆನೇ ತನ್ನೊಳ್ಪೊಣರ್ದು ಸಾಯದೆ ಧರ್ಮರಾಜನವರಂ ಕಾಣ್ಬುದು ||
ತೇಲ್ಪುದು ರಣಾಗ್ರದಿಂ ದಲ್ಲದೊಡುಳುಹೆ ನೆನುತೆ |
ಕೋಲ್ವಳೆ ಗರೆವನವಂ ಪ್ರಳಯಜೀಮೂತಮಂ |
ಪೋಲ್ವಿನಂ ಮುಸುಕಿತು ಸುಧನ್ವನ ವರೂಥಮಂ ಬಹಳ ಶರಯೂಥಮಂದು || ||೩೬||
ಬಲ್ಲೆ ನನುಸಾಲ್ವನೆಂ ದಳವಿಯಂ ಬಿಟ್ಟೊಡಾ |
ಬಿಲ್ಲಾಳೆ ಪೇಳ್ಧರ್ಮರಾಜನವರಂ ಕಾಣ್ಬ |
ನಲ್ಲಿ ಕಾಣಿಸುವೆನೀಗಳೆ ಧರ್ಮರಾಜನವರಂ ತರಹರಿಸು ನಿನ್ನನು ||
ಎಲ್ಲ ತೋರಿಸು ವಜ್ರಿಗಸದಳದ ಬಲ್ಮೆಯಂ |
ಕೊಲ್ಲಬೇಕಾದೊಡಿದ್ದಪೆನೆನುತೆ ಕೋಲ್ಗಳಂ |
ಚೆಲ್ಲಿದಂ ಹಂಸಧ್ವಜನ ಸುತಂ ಕಾಶಿರಾಜನ ಸುತಂ ಗಾಸಿಯಾಗೆ || ||೩೭||

ಘಡಘಡೆಲವೆಲವೊ ತೊಲತೊಲಗೆನುತೆ ರೋಷದಿಂ |
ಘುಡಿಘುಡಿಸಿ ಕೌರಿಡುವ ಕಾಯುದಿಂ ದನುಸಾಲ್ವ |
ನೊಡನೊಡನೆ ಪೊಳೆಪೊಳೆವ ಪೊಸಮಸೆಯ ನಿಡುನಿಡುಸರಳ್ಗಳಂ ತೆಗೆದಿಸುತಿರೆ ||
ಎಡೆಯೆಡೆಯೊಳಡಿಗಡಿಗೆ ಹಂಸಧ್ವಜಾತ್ಮಜಂ |
ಕಡಿಕಡಿದು ನಿವಾರಿದ ಪರಾಕ್ರಮಮೊಳಸುರನಂ |
ಬಿಡಬಿಡದೆ ಘಾತಿಸಿದ ನಿಪ್ಪತ್ತು ಬಾಣದಿಂ ಬಿಸಿಬಿಸಿಯ ನೆತ್ತರೊಸರೆ || ||೩೮||
ಮತ್ತೆ ಕಿಡಿಯಿಡೆ ಕೋಪ ಮನುಸಾಲ್ವನಬ್ಧಿಯಂ |
ತುತ್ತುಗೊಳ್ವರಿಗೆ ಸರಿಯಾದೊಂದು ಬಾಣಮಂ |
ಕಿತ್ತು ಹೂಡಿದನಿದಂ ತರಹರಿಸಿಕೊಳ್ಳೆನುತೆ ತೆಗೆದೆಚ್ಚು ಬೊಬ್ಬಿರಿಯಲು ||
ಕತ್ತರಿಸುವೆಡೆಗಣೆಗಳಂ ನಿವಾರಿ ನಡುವೆದೆಯ |
ನುತ್ತರಿಸಿ ಕೋಲತ್ತಲಡಗಿ ತವನಿಯೊಳಾಗ |
ಪುತ್ತುವುಗು ಪಹಿಯಂತೆ ಬಳಿಕ ಮೈಮರೆದಂ ಸುಧನ್ವನದನೇಂ ಪೇಳ್ವೆನು || ||೩೯||
ಎಲೆಲೆ ಕನಿಕನಿಯೆನು ತವನ ಬಲಂ ಕಂಡು ಸಂ |
ಕಲೆಗಡಿದ ಮುಗಿಲಂತಿವನ ಮೇಲೆ ಕೈದುಗಳ |
ಮಳೆಗರೆಯು ತಿಟ್ಟಣಿಸಿ ನೂಕ ಲನುಸಾಲ್ವಂ ಕನಲ್ದು ಜಗದಳವಿನಂದು ||
ಸುಳಿವ ಬಿರುಗಾಳಿಯಂ ಸೋಲಿಸುವ ನಿಡು ಸರ |
ಳ್ಗಳ ಗರಿಯ ಭರದನಿಲಘಾತದಿಂ ಬಯಲಾದು |
ದಳವಿಯಿಸಿನಲಿಸುಗೆಯಂ ಕೈಕೊಂಡು ಸರ್ಗದಿಂ ಬಂದ ರಿಪುಮೋಹರವನು || ||೪೦||
ಕಂಪಿರೆಮ ಕಂಡಂ ಸುಧನ್ವಂ ಬಳಿಕ ಖಾತಿ |
ಯಿಂಪೆ ಕೋದಂಡಮಂ ಕಂಡೆಲವೊ ಕಲಿಯಾಗಿ |
ನಿಂದಿದಂ ಸೈರಿಸಿದೆಯಾದೊಡಿನ್ನಿಸುವುದಿಲ್ಲಾವು ಪೋಗೆನುತೆ ಹೆದೆಗೆ ||
ಒಂದು ಸರಳಂ ಪೂಡಿ ಕಿವಿವರೆಗೆ ತೆಗೆದೆಚ್ಚೊ |
ಡಂದು ಸಾಲ್ವಾನುಜನ ಪೇರುರವ ನುಚ್ಚಳಿಸೆ |
ನೊಂದಿಳೆಗುರುಳ್ದ ನಾಮದು ಮೂರ್ಛೆ ಪೊಕ್ಕನುರವಣಿಸಿ ಪಾರ್ಥನ ಪಡೆಯನು ||೪೧||
ಪೂಣೆಪೊಕ್ಕವ ನಿಸುವ ಬಾಣಂಗಳರಿಭಟರ |
ಗೋಣ ನರಿಮುಚ್ಚಳಿಸೆ ಮಾಣದೆ ಗಗನಕೇಳ್ವ |
ಶೋಣಿತದ ಧಾರೆಗಳ್ಶೋಣಾದ್ರಿದಂತಿರಲ್ಪ್ರಾಣಿಗಳ ದೃಷ್ಟಿಗಳ್ಗೆ ||
ಕಾಣಿಸಿದುವಾಲಿಸೈ ಕ್ಷೋಣಿಪ ಸುಧನ್ವನ |
ಕ್ಷೀಣವಿಕ್ರಮಶಿಖಿಯ ಚೂಣಿಯ ಮಹಾಜ್ವಾಲೆ |
ಕೇಣಿಗೊಂಡರಿಬಲಶ್ರೇಣಿ ಯೆಂಬೊಂದಡವಿದಾಣಮಂ ಹೊಕ್ಕಂತಿರೆ || ||೪೨||
ಸಂದಣಿಸಿ ದಂತಿಗಳ ಘಟೆಗಳೊತ್ತರಿಸಲ್ಕೆ |
ಸಂದಣಿಸಿದಂ ಸರಳ ಸಾರದಿಂ ಕೆಡಹಿದಂ |
ಕೊಂದನುರುವಣಿಸಿ ಕಾಲಾಳ್ಗಳಂ ಮುಳಿದು ಬಳಿಕೊಂದ ನುಳಿಯದೆ ರಣದೊಳು ||
ಬಂದವಾಜಿಗಳ ನಾನಳವಿಯೊಳ್ಕಾಣೆನೆಂ |
ಬಂದವಾಗಲ್ಕೆ ತಡೆಗಡಿದು ಮೆದೆಗೆಡಹಿದಂ |
ಮುಂದಿಟ್ಟಣಿಸಿ ಬಿದ್ದುದಾಗ ರಥಿಕವ್ರಾತಮುಂ ದಿಟ್ಟನಿಸುಗೆಯಿಂದೆ || ||೪೩||

ಕೆಡೆಮೊಡಲ ಸೀಳಿಂದೆ ಕಡಿವಡೆದ ತೋಳಿಂದೆ |
ತೊಡೆಮುಡದ ತುಂಡಿಂದೆ ನೆಣವಸೆಯ ಜೊಂಡಿಂದೆ |
ಬಿಡುಮಿದುಳ ತುಂಡದಿಂ ತಂಡದಿಂ ರುಂಡದಿಂ ಮುಂಡದಿಂ ಖಂಡದಿಂದೆ ||
ಅಡಗುಗಳ ತಿರುಳಿಂದೆ ನಿಡುನರದ ಕರುಳಿಂದೆ |
ಕಡಲಿಡುವ ನೆತ್ತರಿಂದೆಡೆವಿಡದೆ ಸತ್ತರಿಂ |
ದಿಡಿದಿರ್ದುದಾ ರಣದಲೋರಣದ ಮಾರಣದ ಕಾರಣದ ಪೂರಣದೊಳು || ||೪೪||
ಕಾಕ ಬಕ ಗೃಧ್ರ ಗೋಮಾಯು ಸಂತತಿಗಳಿಂ |
ಡಾಕಿನಿ ಪಿಶಾಚ ವೇತಾಳ ಭೂತಂಗಳಿಂ |
ಛೀಕರದೊಳಂಜಿಸಿದುವಾರ್ದು ರಿಂಗಣ ಗುಣಿವ ಕಲಿಗಳ ಕಪಾಲಂಗಳು ||
ಲೋಕದಖಿಳ ಪ್ರಾಣಿಗಳ ನುಂಡಜೀರ್ತಿಯಿಂ |
ದೋಕರಿಸಿದನೊ ಕಾಲನೆಂಬಿನಂ ಕಣ್ಗೆಸೆದು |
ಪಾಕಳಂ ರೌಕುಳದ ಮಾಂಸಕರ್ದಮ ರುಧಿರ ನೆಣವಸೆಮಿದುಳ್ಗಳಿಂದೆ || ||೪೫||
ನೋಡಿದಂ ಸಾತ್ಯಕಿ ಸುಧನ್ವನಾಟೋಪಮಂ |
ಮಾಡಿದಂ ಬದ್ಧಭ್ರುಕುಟಿಯಿಂದೆ ಕೋಪಮಂ |
ತೀಡಿದಂ ತಿರುವನೇರಿಸಿ ಮಿಡಿದು ಚಾಪಮಂ ತಾಗಿದನವನ ರಥವನು ||
ಆಡಿದಂ ನಿಜನಾಮಧೇಯ ಪ್ರತಾಪಮಂ |
ಪೂಡಿದಂ ತೆಗೆದಂಬನೆಚ್ಚಂ ಯಮೋಪಮಂ |
ತೋಡಿದಂ ಮೂವತ್ತುಬಾಣದಿಂ ತಾಪಮುಂಕುರಿಸುವಂತವನ ನೊಡಲೊಳು || ||೪೬||
ಗಾಯವಡೆ ದೆಕ್ಕಲನ ತೆರದಿಂ ಕೆರಳ್ದತ್ತೈ |
ನೇಯನಂ ಮಗುಳೆ ಮೂವತ್ತೈದುಕೋಲ್ಗಳಿಂ |
ನೋಯಿಸಿದನಾ ಸುಧನ್ವಂ ಬಳಿಕ ಸಾತ್ಯಕಿ ಸಹಸ್ರ ಸಂಖ್ಯಾಕಮಾದ ||
ಸಾಯಕದೊಳಾತನ ವರೂಥಹಯಸಾರಥಿಯು |
ಗಾಯತಧ್ವಜ ಛತ್ರ ಚಮರಮಂ ತರಿದೊಡವ |
ನೀ ಯಾದವನ ತೇರನುರೆ ಮುರಿಯಲಿರ್ವರುಂ ವಿರಥರಾದರ್ಧುರದೊಳು || ||೪೭||
ನಿಂದು ಕಾದಿದರೊಮ್ಮೆ ಕೈದುಕೈದುಗಳೊಳ್ಳೈ |
ತಂದು ಕಾದಿದರೊಮ್ಮೆ ಮತ್ತೆ ಪೊಸತೇರ್ಗಳಿಂ |
ಬಂದು ಕಾದಿದರೊಮ್ಮೆ ಕೂಡೆ ತಮತಮ ಗೊದಗಿ ದೆಡಬಲದ ಪಡಿಬಲವನು ||
ಕೊಂದು ಕಾದಿದರೊಮ್ಮೆ ಶರಶರದ ಹತಿಗಳಿಂ |
ನೊಂದು ಕಾದಿದರೊಮ್ಮೆ ಚಳಚಳಿಕೆಯಿಂದೆ ಸಲೆ |
ಸಂದು ಕಾದಿದರೊಮ್ಮೆ ಸಾತ್ಯಕಿ ಸುಧನ್ವರೋರೊರ್ವರ್ಗೆ ಸರಿಮಿಗಿಲೆನೆ || ||೪೮||
ಬವರ ಮಿರ್ವರ್ಗೆ ಸರಿಯಾಗೆ ಕಡುಗೋಪದಿಂ |
ಪವಗಡಿಸಿದಂ ಸುಧನ್ವಂ ಬಳಿಕ ಸಾತ್ಯಕಿಯ |
ಸವಗ ಸೀಸಕ ಬಾಣ ಬತ್ತಳಿಕೆ ಸಿಂದ ಸೀಗುರಿ ಛತ್ರ ಚಾಮರವನು ||
ಸವರಿ ಸಾರಥಿ ಹಯ ವರೂಥ ಯುಗಚಕ್ರಮಂ |
ಕವಲಂಬುಗಳೊಳೆಚ್ಚು ಕತ್ತರಿಸಿ ಕರದ ಚಾ |
ಪವನೈದು ಕಡಿಯಾಗಿ ಮಾಡಿ ಪೇರುರಕೆ ಮೊನೆಗಣೆಗಳಂ ಮೋಹಿಸಿದನು || ||೪೯||

ಸತ್ಯಕಸುತಂಗೆ ಪರಿಭವಮಾಗೆ ಭುಜಬಲದೊ |
ಳತ್ಯಧಿಕ ಯೌವನಾಶ್ವಾಸಿತಧ್ವಜ ಗದಾ |
ದಿತ್ಯಭವಸೂನು ಶಠ ನಿಶಠ ಕೃತವರ್ಮ ಸಾಂಬಾ ನುಸಾಲ್ವಪ್ರಮುಖರು ||
ಪ್ರತ್ಯೇಕವೀರರಿವರೆಲ್ಲರುಂ ಪಡೆಸಹಿತ |
ಸತ್ಯವಿಕ್ರಮ ಸುಧನ್ವನ ಸಮ್ಮುಖಕೆ ನಡೆವ |
ಕೃತ್ಯಮಂ ಕಂಡರ್ಜುನಂ ಕೋಪದಿಂದೆ ಕಾಳಗಕೆ ತಾನನುವಾದನು || ||೫೦||
ಮುಂಜೆರಗ ನಳವಡಿಸಿ ವೀರಪಳಿಯಂ ಬಿಗಿದು |
ರಂಜಿಸ ತನುತ್ರ ಸೀಸಕವನಾಂತಮರಗಣ |
ಕಂಜಳಿಯನೆತ್ತಿ ಪಳವಿಗೆಯ ಹನುಮಂಗೆರಗಿ ಬಲವಂದು ಮಣಿರಥವನು ||
ಮಂಜುಳ ಹಯಂಗಳಂ ಬೋಳೈಸಿ ಮಣಿದು ತೇ |
ರಂ ಜಯಸಿನಾದದಿಂದೇರಿದಂ ಸಮರಕೆ ಧ |
ನಂಜಯಂ ಧ್ಯಾನಿಸುತೆ ಮನದೊಳಗೆ ದೇವಪುರನಿಲಯ ಲಕ್ಷ್ಮೀಪತಿಯನು || ||೫೧||

ಸಂಧಿ ೧೨ ಕ್ಕೆ ಪದ್ಯಗಳು ೬೧೭ ಕ್ಕೆ ಮಂಗಳಮಸ್ತು.

# ಹದಿಮೂರಯು ಸಂಧಿ.

ಸೂಚನೆ|| ಹಂಸಧ್ವಜನ ಸುತನ ಸಮರಮುಂದಾಗಿ ಬರೆ |
ಕಂಸಾರಿ ಬಂದು ಸಾರಥಿಯಾಗಿ ಸರಸ ಶರ |
ದಿಂ ಸುಧನ್ವನ ಶಿರವನರಿಸಿದಂ ಮೇಲೆ ಸುರಗಣಮೈದೆ ಕೊಂಡಾಡಲು ||

ಕೇಳಿಲೆ ನೃಪಾಲಕುಲಮೌಳಿ ಬಳಿಕಜುರ್ನಂ |
ಕಾಳಗಕೆ ನಡೆವ ಭಟರಂ ಸಿಲಿಸಿ ಮುಂದುವರಿ |
ವಾಳ ಪಡೆಯಂ ತೆಗೆಸಿ ಭರದಿಂದೆ ನೂಕಿದಂ ಕಲಿಸುಧನ್ವನ ಸರಿಸಕೆ ||
ಗಾಳಿಯ ಜವಂ ಪೊಡೆವಸಿಡಿಲ ಗರ್ಜನೆ ರವಿಯ |
ಮೇಳಮುಂ ದಾವಾಗ್ನಿಯಾಟೋಪ ಮಂತಕನ |
ಕೋಲಾಹಳಂ ಕೂಡಿಕೊಂಡೊಂದು ರೂಪಾದ ವೋಲ್ಕಾಣಿಸುವ ರಥವನು || ||೧||
ಕುದುರೆಗಳ ಖುರಪುಟಧ್ವನಿ ನಿಜವರೂಥ ಚ |
ಕ್ರದ ರವಂ ದೇವದತ್ತದ ಘೋಷಮೆಸೆವ ಸಿಂ |
ದದ ತುದಿಯ ಕಪಿಯಬ್ಬರಣೆ ಧನುಜ್ಯಾನಾದ ಮೊಂದಾಗಿ ಘೀಕರದೊಳು ||
ಪದಿನಾಲ್ಕು ಲೋಕಮಂ ಬೆದರಿಸಲ್ಕಿದು ನರನ |
ಕದನದಾರಾವ ಮೆಂದರಿದಂಬುಜಾಸನಂ |
ಮೊದಲಾದನಿರ್ಜರರ್ತಂತಮ್ಮ ವಾಹನವಿಮಾನದಿಂದೈತಂದರು || ||೨||
ವಾನರ ಸಮುನ್ನತ ಧ್ವಜವರೂಥದೊಳೈದು |
ವಾ ನರ ಸಮರ ಭರವ ನರಿದು ಕಾಳಗಕೆ ತಾ |
ವಾನರ ಸಮರ್ಥರೆಂದರ್ಜುನಂ ಬಹನೆಂದು ನಿಜಸಾರಥಿಗೆ ಸೂಚಿಸಿ ||
ದಾನವ ನರಾ ನಿಮಿಷರೊಳ್ಕೀನೆ ಭಟನಹ ನಿ |
ದಾನವ ನನೇಕಮುಖದಿಂ ಕೇಳ್ದು ಸಂಗ್ರಾಮ |
ದಾನವ ನರಸಿ ಬಂದೆನೆಂದೆಚ್ಚನಾ ಸುಧನ್ವಂ ಪಾರ್ಥನಂ ಧುರದೊಳು || ||೩||

ಕ್ರುದ್ಧನಾದಂ ಧನಂಜಯ ನಿದೇಕೆಮ್ಮೊಡನೆ ।
ಯುದ್ಧವ ನಪೇಕ್ಷಿಸುವೆ ಶಿವಶಿವಾ ನೀನಪ್ರ ।
ಬುದ್ಧನಲ್ಲವೆ ದೇವ ದೈತ್ಯ ಮಾನವರೊಳ್ಮದೀಯ ವೈರದೊಳೆ ಬಾಳ್ದ ॥
ಉದ್ಧತ ಪರಾಕ್ರಮಿಗಳುಂಟೆ ಸಂಗರಕೆ ಸ ।
ನ್ನದ್ಧರಾದಿನಸುತ ದ್ರೋಣ ಭೀಷ್ಮಾದಿ ಪ್ರ ।
ಸಿದ್ಧಭಟರೇನಾದರರಿಯಲಾ ಮರುಳೆ ಪೋಗೆನುತೆಚ್ಚನಾ ಪಾರ್ಥನು ॥ ॥೪॥
ಸಾರಥಿಯ ಬಲ್ಪಿಂದೆ ಕೌರವಬಲದ ನಿಖಿಳ ।
ವೀರರಂ ಗೆಲ್ದಿಯಲ್ಲದೆ ನಿನ್ನನೀಧರೆಯೊ ।
ಳಾರರಿಯರಕಟ ನೀಂ ಕೃಷ್ಣನಂ ಕರೆಸಿಕೊಂಡಳವಿಗುಡು ಬಳಿಕೆನ್ನೊಳು ॥
ಸಾರನ್ನೆಗಂ ಬರಿದೆ ಬಳಲಬೇಡಿಮ್ಮಲ್ಲಿ ।
ಹಾರೈಸದಿ ರ್ಜಯವನೆನುತೆಚ್ಚೊಡರ್ಜುನನ ।
ತೇರಿರದೆ ತಿರ್ರನೆ ತಿಗುರಿಯಂತೆ ತಿರುಗಿತದನೇನೆಂಬೆನದ್ಭುತವನು ॥ ॥೫॥
ಪೂತುರೆ ಸುಧನ್ವ ಸತ್ವಾತಿಶಯದಿಂದೆ ವಿ ।
ಖ್ಯಾತನಹೆ ಮದ್ರಥವನೀತೆರದೊಳಿಸುವರಂ ।
ಪಾತಾಳ ಸುರ ನಿಲಯ ಭೂತಳದ ಪಟುಭಟವ್ರಾತದೊಳ್ಕಾಣೆನಿನ್ನು ॥
ನೀಂ ತರಳನಕಟ ಬರಿದೇತಕಳಿದಪೆ ನಿನ್ನ ।
ತಾತನಂ ಬರಹೇಳು ಘಾತಿಸುವರಲ್ಲ ನಾ ।
ವಾ ತುರಂಗಮವ ಬಿಡು ಧಾತುಗೆಡಬೇಡೆನುತ್ತಾತನಂ ನರನೆಚ್ಚನು ॥ ॥೬॥
ಇನ್ನು ಹಯಮಂ ಬಿಡುವನಲ್ಲ ನಿನಗೆಮ್ಮ ತಾ ।
ತಂ ನಳಿನನಾಭನ ಸಹಾಯಮಿಲ್ಲದೆ ಬರಿದೆ ।
ತನ್ನ ನಳುಕಿಸಲರಿಯೆ ಕಕ್ಕುಲಿತೆ ಬೇಡ ನಡೆ ಹಸ್ತಿನಾಪುರಕೆ ಮರಳಿ ॥
ಸನ್ನುತ ತುರಂಗ ಮೇಧಾಧ್ವರಕೆ ದೀಕ್ಷೆಗೊಂ ।
ಬಂ ನರೇಂದ್ರಾಗ್ರಣಿ ಮರಾಳಧ್ವಜಂ ಬಳಿಕ ।
ನಿನ್ನ ವಿಕ್ರಮದಿಂದೆ ಜಯಿಸು ಭೂಮಂಡಲವನೆನುತವಂ ತೆಗೆದೆಚ್ಚನು ॥ ॥೭॥
ಈ ಚಾಪ ವೀಬಾಣ ವೀ ದಿವ್ಯರಥ ವೀವ ।
ನೇಚರಧ್ವಜ ವೀಮಹಾಶ್ವಂಗಳೀ ಸವ್ಯ ।
ಸಾಚಿತ್ವ ವೀದೇವದತ್ತಶಂಖಂ ತನಗಿದೇಕೆ ನಿನ್ನಂ ಜಯಿಸವೆ ॥
ಈ ಚತುರ್ದಶ ಜಗವ ನಣುವೆಂದರಿವೆ ನಕಟ ।
ಗೋಚರವೆ ನೀನೆನಗೆ ಘಡಯಿಸುತೆ ತೆಗೆದು ನಾ ।
ರಾಚನಿಕರನೆಚ್ಚಂ ಸುಧನ್ವನ ಮೇಲೆ ಪಾರ್ಥನೆಣ್ದೆಸೆ ಕಂಪಿಸೆ ॥ ॥೮॥
ದಿವ್ಯರಥ ಹಯ ಚಾಪ ಶರ ಕೇತು ಕಂಬುಗ ।
ಳ್ಸವ್ಯಸಾಚಿತ್ವಮಿವು ನಿನಗೊದಗಿಪುವು ರಣದೊ ।
ಳವ್ಯಯಂ ಸಾರಥ್ಯಮಂ ಮಾಪಲಿನ್ನು ಜಯಮಹುದೆ ಹುಲುಸೂತನಿಂದೆ ॥
ಹವ್ಯವಾಹನಸಖಂ ತೊಲಗಿಸುವ ಬಹಳ ಮೇ ।
ಘವ್ಯೂಹ ಸಂಘಾತ ದೊಡ್ಡವಣೆ ಮುರಿವುದೆ ಕೃ ।
ತವ್ಯಜನ ವಾತದಿಂದೆಲೆ ಮರುಳೆ ಹೋಗೆನುತವಂ ಕಿರೀಟಿಯನೆಚ್ಚನು ॥ ॥೯॥

ಪಾಂಡವಂ ಬಳಿಕ ಬೇಸಗೆಯ ನಡುವಗಲ ಮಾ |
ರ್ತಾಂಡನಂತಿಹ ಕಲಿಸುಧನ್ವನಂ ಕಂಡು ಮಿಗೆ |
ಕಾಂಡವ ದಹನ ಲಬ್ಧವಾಗಿ ಮೂಡಿಗೆಯೊಳಿರ್ದಾಗ್ನೇಯ ಮಾರ್ಗಣವನು ||
ಗಾಂಡೀವ ಕಳವಡಿಸಿ ತೆಗೆವಿನಂ ಕರ್ಬೊಗೆಯ |
ಜಾಂಡಮಂ ತೀವಿದುದು ಕಾದುವ ಕುಲಾದ್ರಿಗ |
ಳ್ಬಾಂಡ ಜಲದಂದದಿಂ ಕುದಿ ದುಕ್ಕಿದುದು ಕಡ ಲ್ಪೇಳ ಲೇನದ್ಭುತವನು || ||೧೦||
ಆವಗಂ ಪೀರ್ವೊಡಾಸಗೊಂಡು ತೀರದ ಮ |
ಹಾವಾರ್ಧಿ ಜಲವ ನೊಂದೇಸಾರಿ ಸುರಿಗೊಂಬ |
ಡಾವರದೊಳಿದ್ದ ವಡಬಾಗ್ನಿಯೋ ವಿಲಯ ರುದ್ರನ ಪಣೆಯ ಕಣ್ಗಿಚ್ಚಿದೋ ||
ಭಾವಿಸುವೊಡರಿದೆಂಬೊಲಾದುದು ಧನಂಜಯನ |
ಪಾವಕಾಸ್ತ್ರಂ ಬಳಿಕ ತೆಗೆದು ಜೊಬ್ಬಿರಿದು ಗಾಂ |
ಡೀವದಿಂ ಪಾರಿಸಿದೊಡಾ ಸುಧನ್ವನ ಸರಿಸ ಕಡರಿ ತುರಿ ಕಡು ಭರದೊಳು || ||೧೧||
ತೆಕ್ಕೆವರಿದೇಳ್ವ ಕರ್ಬೊಗೆಯ ಹೊರಳಿಗಳ ದೆಶ |
ದಿಕ್ಕುಗಳ ನವ್ವಳಿಪ ಕೇಸುರಿಯ ಚೂಣಿಗಳ |
ಮಿಕ್ಕು ಸೂಸುವ ತೂರುಗಿಡಿಗಳ ಕಣಾಳಿಗಳ ಕೌರಿಡುವ ಪೊತ್ತುಗೆಗಳ ||
ಕೊಕ್ಕರಿಸು ತುಗುವ ತನಿಗೆಂಡ ದಿಂಡೆಗಳ ಸಲೆ |
ಮುಕ್ಕುಳಿಸೆ ನೊಗೆವ ಪೆರ್ಗಿಚ್ಚುಗಳ ಪೆಂಕೆ ಮೇ |
ಲಿಕ್ಕಿದುದು ಹಂಸಧ್ವಜನಸೇನೆ ಬೆಂದು ಬೇಗುದಿಗೊಂಡು ದಾಕ್ಷಣದೊಳು | ||೧೨||
ಕಾದವು ಭಟರ ಕೈದುಗ ಳ್ಪಿಡಿಯಲರಿದೆ ನ |
ಲ್ಕಾದವು ಶರಾಗ್ನಿಗಾಹುತಿ ಗಜ ಹಯಾದಿಗ |
ಳ್ಕಾದವು ಧನಂಜಯನ ಮುಂದೆಮ್ಮ ಬಲಗಳೆಂದಾ ಸುಧನ್ವಂ ಕೆರಳ್ದು ||
ಕೋದಂಡ ಕತಿವೇಗ ದೊಳ್ವಾರುಣಾಸ್ತ್ರಮಂ |
ಕೋದಂಡಲೆವ ಶಿಖಿಜ್ವಾಲೆಯ ನಿಲಿಸಲಿದ |
ಕೋ ದಂಡವೆನ್ನೊಳೆನುತಾರ್ದು ತೆಗೆದಚ್ಚನುರಿ ನಂದಿಜಲಮಯವಾಗಲು ||೧೩||
ನಾದವು ಸಮಸ್ತ ಬಲ ಮಖಿಳ ವಾದ್ಯಂಗಳ ನಿ |
ನಾದ ವುಡುಗಿತು ನನೆದು ಗಜ ವಾಜಿ ನಿಕರ ಮೇ |
ನಾದ ವುದಕದೊಳೆಂಬುದಂ ಕಾಣೆನಾ ಸುಧನ್ವನ ವಾರುಣಾಸ್ತ್ರದಿಂದೆ ||
ತೋ ದಳ ವಳಿದರೆಲ್ಲ ರಂಬುಧಾರೆಗಳ ದೆಂ |
ತೋ ದಳವ ನೊರಗಿಸಿದ ವರ್ಜುನಂ ಬೆರಗುವೆ |
ತ್ತೋ ದಳವಡದ ಪಟುವಿನಂತಿರ್ದ ಸಾಹವ ದೊಳರಸ ಕೇಳ್ಕೌತುಕವನು || ||೧೪||
ಬಳಿಕ ವಾಯುವ್ಯಾಸ್ತ್ರದಿಂದೆ ಶೋಷಿಸಿದ ನಾ |
ಜಲವ ನರ್ಜುನ ನದ್ರಿಬಾಣಮಂ ಪೂಡಿದಂ |
ಕಲಿ ಸುಧನ್ವಂ ತೊಟ್ಟ ನೈಂದ್ರಶರಮಂ ಫಲುಗುಣಂ ತಿಮಿರ ಸಾಯಕವನು ||
ಸೆಳೆದಂ ಮರಾಳಧ್ವಜನ ಸುತಂ ತೆಗೆದ ನು |
ಜ್ಜ್ವಲ ರವಿಕಳಂಬಮಂ ಭೀಭತ್ಸು ತುಡುಕಿದಂ |
ಮುಳಿದವಂ ಗರಳ ವಿಶಿಖವ ನುಗಿದನಾ ನರಂ ಗಾರುಡ ಶಿಲೀಮುಖವನು || ||೧೫||

ಈ ತೆರದೊ ಳಖಿಳ ದಿವ್ಯಾಸ್ತ್ರಂಗ ಳಿಸುಗೆಗಳ |
ಚಾತುರ್ಯದಿಂ ದೊರ್ವರೊರ್ವರಂ ಗೆಲ್ವ ಸ |
ತ್ವಾತಿಶಯದಿಂದೆ ಕಾದಿದರಾ ಸುಧನ್ವಾರ್ಜುನ ರ್ಬಳಿಕ ರೋಷದಿಂದೆ ||
ಭೀತಿಗೊಳೆ ಮೂಜಗಂ ತೆಗೆದು ಬ್ರಹ್ಮಾಸ್ತ್ರಮಂ |
ಶ್ವೇತವಾಹನನಾ ರ್ದಿಸಲ್ಕೆ ಹಂಸಧ್ವಜನ |
ಜಾತಂ ಪ್ರತೀಕಾರಕಾ ಪಿತಾಮಹಶರವ ನೆಚ್ಚೊಡನೆ ಬೊಬ್ಬಿರಿದನು || ||೧೬||
ಅವರ ಬ್ರಹ್ಮಾಸ್ತ್ರಮೆರಡುಂ ಪೊಣರ್ದಡಗ |
ಲಾ ವಿಜಯನೆಣಿಕೆಗೊಂ ಡೀತನಂ ಗೆಲ್ವ ಬಗೆ |
ಯಾವುದೆಂ ದುಗಿದು ಹೂಡಿದ ನಕ್ಷಯಾಸ್ತ್ರಮಂ ತನ್ನ ರಥಕವನ ತೀರ್ಗೆ ||
ತೀವಿದುವು ಬಾಣಂಗಳಾಕಾಶಮಂ ಕಾಣೆ |
ನೀ ವಸುಧೆ ಯೆತ್ತಣದು ಶಶಿ ರವಿ ಕುಲಾದ್ರಿ ತಾ |
ರಾವಳಿಗ ಳೇನಾದುವೆ ಣ್ದೆಸೆಯ ನರಿವರಾರೆಂಬಿನಂ ಕೈಗೈದನು || ||೧೭||
ಇಚ್ಚ್ಯಾರಿಗೊಂಡು ನರನೆಚ್ಚ ಕೆಂಗರಿ ಗೋಲ |
ಬಚ್ಚಳೆಯ ಪೊಸಮಸೆಯ ನಿಚ್ಚಳದ ನಿಡುಸರ |
ಳ್ಪೆಚ್ಚಿದವು ನಿಮಿಷದೊಳ್ಮುಚ್ಚಿದವು ಗಗನಮಂ ಕೊಚ್ಚಿದವು ಪರಬಲವನು ||
ಬಿಚ್ಚಿದವು ಕವಚಮಂ ಕಚ್ಚಿದವು ಖಂಡಮಂ |
ಚುಚ್ಚಿದವು ಕೂಡೆ ಘಟ್ಟುಚ್ಚಿದವು ಸೀಳಾಗಿ |
ಪಚ್ಚಿದವು ಮೈಯೊಳಗೆ ಹೊಚ್ಚಿದವು ಹೊಗರಲುಗ ಮುಚ್ಚಿದವು ನೆಣವಸೆಯನು ||೧೮||
ಗೌರಿಯರಸನ ಕೂಡೆ ಕಾದಿದ ಪರಾಕ್ರಮದ |
ಸೌರಂಭಮಿಂತುಟೆ ನಿವಾತಕವಚರನಿರಿದ |
ಗೌರವಮಿದೀಗಲೇ ಭೀಷ್ಮ ಕರ್ಣ ದ್ರೋಣ ಮಾದ್ರಪತಿ ಮೊದಲಾಗಿಹ ||
ಕೌರವಬಲದೊ ಳಖಿಳ ವೀರಭಟರಂ ಗೆಲ್ದ |
ಪೌರುಷಮಿನಿತೆ ಸಾಕು ಬರಿದೆ ಬಳಲಿಸಬೇಡ |
ಶೌರಿಯುಂ ಕರೆಸೆನುತೆ ಕಣೆಗಳಂ ಕಡಿದೆಚ್ಚನಾ ಸುಧನ್ವಂ ನರನನು || ||೧೯||
ಕೇ ಳವನಿಪಾಲಕ ಸುಧನ್ವ ನಿಸುವಿಸುಗೆಯಂ |
ಪೇಳಲರಿಯೆಂ ತಿರುಗುತಿರ್ದುದು ವರೂಥಂ ಕು |
ಲಾಲ ಚಕ್ರದ ವೊ ಲಸವಳಿದಂ ಕಪೀಶ್ವರಂ ಭ್ರಮಣೆಯಿಂ ಧ್ವಜದ ಮೇಲೆ ||
ಕಾಲಾಟ ಪಡಗಿದುವು ಕುದುರೆಗ ಳ್ಸೂತನಂ |
ಕಾಲ ನೊಯ್ದಂ ಧನಂಜಯನೊಡಲೊಳಂಬುಗ |
ಳ್ಕೀಲಿಸಿದು ವಿಕ್ಕೆಲದಸೇನೆಯಂ ಸವರಿದುವು ಹೊಗರುಗುವ ಹೊಸಗಣೆಗಳು ||೨೦||
ವ್ಯಥಿಸಿದಂ ಗಾಯದಿಂ ಸೂತ ನಳಿಯಲ್ಕೆ ಸಾ |
ರಥಿತನವನುಂ ತಾನೆ ಮಾಡುತಿದಿರಾದ ನತಿ |
ರಥರೊಳಗ್ಗಳೆಯ ನರ್ಜುನನಾ ಸುಧನ್ವಂಗೆ ಬಳಿಕೀತನಂ ಘುರದೊಳು ||
ಮಥಿಸದಿರ್ದೊಡೆ ತನ್ನನೇಕೆ ಪಡೆದಳೊ ಬರಿದೆ |
ಪೃಥೆ ನೆಲಕೆ ಪೊರೆಯಾಗಿ ಶಿವಶಿವಾ ಬಂದುದೇ |
ಪೃಥಿವಿಪಸಮುಖಕೆಡ ರಕಟ ಯೆನುತೆ ಮನದೊಳಗೆ ಕೃಷ್ಣನಂ ಧ್ಯಾನಿಸಿದನು ||೨೧||

ಅರಸ ಕೇಳರ್ಜುನಂ ಧ್ಯಾನಿಸಲ್ಕಾಗ ಳಿಭ।
ಪುರದೊಳರಿದಂ ಮುರಧ್ವಂಸಿ ಹಂಸಧ್ವಜನ।
ಧುರಮಂ ಸುಧನ್ವನ ಪರಾಕ್ರಮವ ನೆಚ್ಚರಿಸಿ ಧರ್ಮತನಯಾದಿಗಳ್ಗೆ॥
ತೆರಳದು ಕಿರೀಟಿಗಾಹವಮೆಂದು ಪಹಿಲದಿಂ।
ಗರುಡವಾಹನನಾಗಿ ಬಂದನಾಕ್ಷಣಕಲ್ಲಿ।
ಗರನಿಂದನಾಥ ನಾನತರ ನೆನಹಿಗೆ ನಿತ್ಯನೆಂಬುದಂ ತೋರುವಂತೆ॥ ॥೨೨॥
ಕಶ್ಯಪ ವಸಿಷ್ಠಾದಿ ಪರಮಋಷಿ ಮುಖ್ಯ ರಾ।
ಲಕ್ಷ್ಯವಿಲ್ಲದೆ ಮಾಡುವ ಧ್ಯಾನಕೊಮ್ಮೆಯುಂ।
ದೃಶ್ಯವಿಲ್ಲದ ಚಿನ್ಮಯಾನಂದರೂಪ ನೀ ಕುಂತೀಕುಮಾರಕರ್ಗೆ॥
ವಶ್ಯನಾಗಿಹನೆಂತೊ ಶಿವಶಿವಾ ನೀಲಮೇ।
ಘಶ್ಯಾಮಲನ ಲೀಲೆ ಪೊಸತೆಂದು ಸುರರುಲಿಯೆ।
ಸ್ವಸ್ಯಾಲಕನ ರಥಾಗ್ರಕೆ ಸುಪರ್ಣಸ್ಕಂಧದಿಂದೆ ಮುರಹರನಿಳಿದನು॥ ॥೨೩॥
ಮೊಳಗಿದುವು ನಿಸ್ಸಾಳ ಕೋಟಿಗಳ್ಫಲುಗುಣನ।
ದಳದೊಳಗೆ ತನತನ ಗೆರಗುತಿರ್ದ ದುತ್ಸವದ।
ಲಳಿಮಸಗಿ ಕಳಕಳದ ಬೊಬ್ಬೆಯಿಂ ಬಿಕ್ಕುದು ರಭಸ ಮಬ್ಧಿಘೋಷಣವನು॥
ಬಳಿಕ ನಸುನಗುತೆ ಚರಣಕೆ ಮಣಿದ ಪಾರ್ಥನಂ।
ಸೆಳೆದು ಬಿಗಿಯಪ್ಪಿ ಮೈದಡವಿ ಬೋಳೈಸಿ ರಥ।
ದೊಳಗೆ ಕುಳ್ಳಿರ್ದ ನಲವಿಂದೆ ಮುರರಿಪು ಕುದುರೆಗಳ ವಾಘೆಯಂ ಕೊಂಡನು ॥೨೪॥
ಇನಿತೆಲ್ಲಮಂ ನೋಡುತಿರ್ದಂ ಸುಧನ್ವ ನನು।
ದಿನ ಮಂತರಂಗ ದೊಳ್ಧ್ಯಾನಿಸುವ ನಿರ್ಮಲಾ।
ತ್ಮನ ದಿವ್ಯಮೂರ್ತಿಯಂ ಪಾರ್ಥನರಥಾಗ್ರದೊಳ್ಕಂಡು ಪುಳಕೋದ್ಗಮದೊಳು॥
ತನುವನೀಡಾಡಿ ಸಾಷ್ಟಾಂಗ ಪ್ರಣಾಮದಿಂ।
ಮನದೊಳಗೆ ಹಿಗ್ಗಿ ತನ್ನಾಜ್ಞನಕೆ ಸಾಕಿನ್ನು।
ನೆನೆವೆಣಿಕೆ ಕೈಸಾರ್ದುದೆಂದು ಕಣ್ದಣಿಯ ದಚ್ಯುತನಂ ನಿರೀಕ್ಷಿಸಿದನು॥ ॥೨೫॥
ಅತಸೀ ಕುಸುಮಗಾತ್ರನಂ ಕಮಲನೇತ್ರನಂ।
ಸ್ಮಿತರುಚಿರ ಶುಭರದನನಂ ಚಾರುವದನನಂ।
ಕೃತಮೃಗಮದೋಲ್ಲಸ ತ್ಸುಲಲಾಟನಂ ಮಣಿಕಿರೀಟನಂ ಕಂಬುಗಳದ॥
ಅತುಲ ತುಲಸೀಮಾಲನಂ ರಮಾಲೋಲನಂ।
ಧೃತ ಕೌಸ್ತುಭೋದ್ಭಾಸನಂ ಪೀತವಾಸನಂ।
ನುತ ಸಮಸ್ತಾಭರಣನಂ ಪುಣ್ಯಚರಣನಂ ಕಲಿಸುಧನ್ವಂ ಕಂಡನು॥ ॥೨೬॥
ಜಯ ಚತುರ್ಮುಖಜನಕ ಜಯ ಚಾರುಚಾರಿತ್ರ।
ಜಯ ಚಿದಾನಂದ ಜಯ ಚೀರಾಂಬರಜ್ಞೇಯ।
ಜಯ ಜಯ ಚತುರ್ಮೂರ ಜಯ ಚೂಡಪರ್ಣಶೋಭಿತ ಚೇತನಸ್ವರೂಪ॥
ಜಯ ಚೈದ್ಯಮಥನ ಜಯ ಚೋದಿತಾಖಿಳಲೋಕ।
ಜಯ ಚೌರ್ಯಕೃತಲೀಲ ಚಂಡ ಶತಕಿರಣ।
ಜಯ ಚಕ್ರಧರಯೆಂದು ಕೃಷ್ಣನಂ ಕಲಿಸುಧನ್ವಂ ಪೊಗಳ್ದಂ ಮನದೊಳು॥ ॥೨೭॥

ಜೀಯ ಜಗದಂತರಾತ್ಮಕ ಸರ್ವಚೈತನ್ಯ |
ಜೀಯ ಶುದ್ಧಾದ್ವಯ ನಿರಂಜನ ನಿರಾವರಣ |
ಜೀಯ ನಿನ್ನೊಳಗೀ ಸಮಸ್ತಮಧ್ಯಸ್ತಮಾಗಿದೆ ನೀನೆ ಸತ್ಯರೂಪ ||
ಜೀಯ ನಾರಾಯಣ ಮುಕುಂದ ಮಾಧವ ಕೃಷ್ಣ |
ಜೀಯ ಚಕ್ರಿಯೆ ಪೀತವಾಸ ಲಕ್ಷ್ಮೀಲೋಲ |
ಜೀಯ ಸರ್ವಸ್ವತಂತ್ರನೆ ಬಿಡಿಸು ಸಂಸಾರಪಾಶದಿಂದೆನ್ನನೆಂದು || ||೨೮||
ಭಯಭರಿತಭಕ್ತಿಯಿಂ ಭಾವಿಸಿದ ನಾ ಜಗ |
ನ್ಮಯನಂ ಬಳಿಕ ದೇವ ಕೇಳ್ನಿನ್ನ ಸರ್ವಜ್ಞ |
ತೆಯ ನೆನಗೆ ತೋರಿಸಿದೆ ಲೇಸಾಯ್ತು ನಿನ್ನ ಕೃಪೆಯಿಲ್ಲದೊಡೆ ಪಾಂಡವರ್ಗೆ ||
ಜಯಮೆತ್ತಣದು ಲೋಕಮೊಳ್ಳಾಕದಂತಿರಲಿ |
ಬಯಲ ಭಂಜನೆ ಬೇಡ ಮಾಡಲೊಂದು ಪ್ರತಿ |
ಜ್ಞೆಯ ನರ್ಜುನಂ ನಿನ್ನ ಮುಂದೆನ್ನ ಪೇಳಿಸುತ್ತಾ ಸುಧನ್ವಂ ನುಡಿದನು || ||೨೯||
ಅರ್ಜುನಂ ಕೇಳ್ದನೆಲೆ ಮರುಳೆ ನೋಡಾಮೊಡಿ |
ನ್ನಾರ್ಜಿಸಿದ ಸುಕೃತ ಮೆಳ್ಳಿನಿತಿಲ್ಲದಿಹ ಪುಣ್ಯ |
ವರ್ಜಿತನ ಲೋಕಮಾಗಲಿ ತನಗೆ ನಿನ್ನ ತಲೆಯಂ ಮೂರುಬಾಣದಿಂದೆ ||
ನಿರ್ಜರರ್ಮೆಚ್ಚಲರಿಯದೊಡೆಂದು ನುಡಿಯಲ್ಕೆ |
ದುರ್ಜಯನಿವಂ ನಿನಗೆ ಸಾಧ್ಯನಲ್ಲೆಂದು ಹರಿ |
ಗರ್ಜಿಸಿದ ನಾ ಪಾರ್ಥನಂ ಬಳಿಕ ಹಂಸಧ್ವಜನ ತನಯ ನಿಂತೆಂದನು || ||೩೦||
ಗರ್ವದಿಂ ನುಡಿದೆಲಾ ಪಾರ್ಥ ಕೃಷ್ಣನ ಮುಂದೆ |
ಗೀರ್ವಾಣರೆಲ್ಲರುಂ ನೋಡುತಿರಲೀಗ ನೀಂ |
ಸರ್ವಶಕ್ತಿಯೊಳೆಸುವ ಮೂರು ಬಾಣಂಗಳಂ ನಡುವೆ ಖಂಡಿಸದಿರ್ದೊಡೆ ||
ಉರ್ವಿಯೊಳ್ಪಾತಕಿಗಳಾಗಿರ್ದವರ ಗತಿಗ |
ಪರ್ವೆನೆಂದಾ ಸುಧನ್ವಂ ಬಳಿಕ ಮೇದಿನಿ ಯು |
ದ್ವಿರ್ವಿನಂ ತೆಗೆದೆಚ್ಚ ನರ್ಜುನನ ತೇರೊಂದು ನಲ್ವಮಾತ್ರಂ ತೊಲಗಲು || ||೩೧||
ತೇರ್ಮುಗುಳ್ದಳಸಿಯಿಂ ತೊಲಗಿ ಬೆಂಡಾಗಿ ನಾ |
ನೂರ್ಮೊಳಂ ಪೋಗಲ್ಕೆ ತಲೆದೂಗಿ ಮುರಹರಂ |
ಕಾರ್ಮುಳಗುವಂತಿರೆ ಸುಧನ್ವನಂ ಕೊಂಡಾಡಿ ನೋಡಿ ಪಾರ್ಥನ ಮೊಗವನು ||
ಘೂರ್ಮಿಸಿದ ನಂದಿನ ಜಯಪೃಥನ ಕಥೆ ಬಂದು |
ದಾರ್ಮುಳಿದೊಡಂ ಮಣಿವನಲ್ಲ ಪೇಣಿವನೊಡನೆ |
ನಾರ್ಮಲೆವರಿಲ್ಲ ನೀ ನೆನ್ನೊಳಾಲೋಚಿಸದೆ ನುಡಿದೆ ಭಾಷೆಯ ನೆಂದನು || ||೩೨||
ಇವ ನೇಕಪತ್ನೀ ವ್ರತಸ್ಥನಾ ಗಿಹುದರಿಂ |
ತನ್ನೆ ತಾತನಾಜ್ಞೆಯಂ ಪಾಲಿಸುತೆ ಬಹುದರಿಂ |
ಕವಲಿಲ್ಲ ದೆಮ್ಮನರ್ಚಿಪ ಭಕ್ತ ನಹುದರಿಂ ದಜ ಭವ ಸುರೇಶ್ವರರ್ಗೆ ||
ಬವರ ದೊಳ್ಮಣಿವ ನಲ್ಲಿನ್ನಿವನ ಶೌರ್ಯಮಂ |
ಜವಗೆಡಿಸಿ ನಮ್ಮನುರೆ ಬಳಲಿಸುವ ಧೈರ್ಯಮಂ |
ಭುವನತ್ರಯವ ನಂಜಿಸುವ ವಿಪುಲ ವೀರ್ಯಮಂ ನೋಡೆಂದು ಹರಿ ನುಡಿದನು ||೩೩||

ಅನಿತರೊಳ್ಕಲಿ ಸುಧನ್ವಂ ಕೇಳ್ದು ನುಡಿದನೆಲೆ |
ವನಜಾಕ್ಷ ಬೆಟ್ಟಿಮಂ ಕೊಡೆವಿಡಿದು ಪಟ್ಟಿಯಂ |
ನನೆಯಲೀಯದ ವೊಲೀ ಪಾರ್ಥನಂ ರಕ್ಷಿಸುವೆ ನೀಂ ಕೃಪೆಳಾವು ಬರಿದೆ ||
ತೊನೆದೊಡೇನಹುದಿನ್ನು ರಣದೊಳೀ ದೇಹಮಂ |
ನಿನಗೊಪ್ಪಿಸದೆ ಬಿಡೆಂ ಸಾಕದಂತಿರಲೊಮ್ಮೆ |
ಮುನಿಸು ನೋಡಳುಕಿದೊಡೆ ನಿನ್ನ ಕಿಂಕರನಲ್ಲೆನುತೆ ರಥವನೊಡೆಯೆಚ್ಚನು ||೩೪||
ಸುರ್ರನೆ ಸುಳಿದು ಸುತ್ತಿ ಬೆಂಡಾಗಿ ಕುದುರೆಗ |
ಳ್ಕಿರ್ರನೆ ಕಪೀಶ್ವರಂ ಪಲ್ಗಿರಿದು ಚೀರಲ್ಕೆ |
ಕರ್ರನೆ ಕವಿಯೆ ಕಣ್ಗೆ ಕತ್ತಲೆ ಶಿರೋಭ್ರಮಣೆಯಿಂ ಕೃಷ್ಣ ಫಲುಗುಣರ್ಗೆ ||
ಘರ್ರನೆ ಪೊರಳ್ದು ಗಾಲಿಗಳೇಳೆ ಧರಣಿಯಿಂ |
ತಿರ್ರನೆ ತಿರುಗುವ ಸುಟ್ಟುರೆ ಗಾಳಿಯಂದದಿಂ |
ಸರ್ರನೆ ಸರಿದುದು ಹಿಂಪಕೆ ರಥಂ ಮತ್ತವನ ನಸುರಾರಿ ಬಣ್ಣಿಸಿದನು || ||೩೫||
ಪೊಡವಿಪತಿ ಕೇಳ್ಬಳಿಕ ಕಣ್ಕೆಂಡದಂತಾಗೆ |
ಕುಡಿಹುಬ್ಬು ಧೂಮಲತೆಯೆಂಬೊಲಿರೆ ಹುಂಕಾರ |
ದೊಡನೆ ನಿಶ್ವಾಸಮಂ ಬಿಡುವ ನಾಸಾಪುಟಂ ಜ್ವಾಲೆಯಂದದೊಳೊಪ್ಪಿರೆ ||
ಕಿಡಿಯಿಡುವ ಕೋಪಮಂ ತಾಳ್ದಂ ಧನಂಜಯಂ |
ಕಡೆಗಾಲಪಂದಿನ ಧನಂಜಯಂ ತಾ ನೆನ |
ಲ್ಪಡೆನಡುಗಿ ಬೊಬ್ಬಿರಿದು ಪೂಡಿದಂ ಬಾಣಮಂ ಸೆಳೆದು ನಿಜಕಾರ್ಮುಕವನು|| ||೩೬||
ಖತಿಯಿಂದೆ ಫಲುಗುಣಂ ಪೂಡಿದ ಮಹಾಸ್ತ್ರಮಂ |
ಶತಪತ್ರಲೋಚನಂ ಕಂಡದಕೆ ಮುನ್ನ ತಾ |
ನತುಲ ಗೋವರ್ಧನವನಾಂತು ಗೋಕುಲವ ನೋವಿದ ಸುಕೃತಫಲವನಿತ್ತು ||
ಅತಿಶಯದ ಶಕ್ತಿಯಂ ನೆಲೆಗೊಳಿಸಿ ಬೇಗದಿಂ |
ಪ್ರತಿಭಟನ ಶಿರವ ನಿಳುಹಿನ್ನೆಂದು ಬೆಸಸ ಲು |
ನ್ನತಪರಾಕ್ರಮಿ ಧನಂಜಯನಾರ್ಮು ಕಿವಿವರೆಗೆ ತೆಗೆದೆಚ್ಚನಾಶರವನು || ||೩೭||
ಆಹಹ ಮುರಹರ ಪಾರ್ಥನಿಸುವ ಬಾಣಕೆ ನಿನ್ನ |
ಬಹಳ ಸುಕೃತವನಿತ್ತೆ ಲೇಸಾದುದಿದನರಿಯ |
ಬಹುದೆ ನೋಡಿಲ್ಲಲಾ ನಿನಗೆನುತೆ ತೀವ್ರದಿಂ ಕೊರಳ ಸರಿಸಕೆ ನಭದೊಳು ||
ಬಹ ಸರಳನೆಚ್ಚು ನಿಮಿಷಾರ್ಧದೊಳ್ಕಡಿದು ಗಹ |
ಗಹಿಸುವ ಸುಧನ್ವನಂ ಕಂಡವನ ಸೈನ್ಯದೊ |
ಳ್ಕಹಳೆಗಳ್ಬೊಳ್ಳೆಸಿದವು ಮೆಚ್ಚಿದ ದಿವಿಜ ರಚ್ಯುತಂ ಬೆರಗಾದನು || ||೩೮||
ಮೂರುಬಾಣದೊಳಿವನ ತಲೆಯ ನರಿದಪೆನೆಂದು |
ತೋರಿಯಾಡಿದೆನಾಂ ಪ್ರತಿಜ್ಞೆಯ ನದರೊಳೊಂದು |
ಮೀರಿ ಪೋದುದು ಕೋಲೆರಡರಿಂದೆ ರಿಪುಶಿರವ ನಿಳುಹಬೇಕೆನುತೆ ನರನು ||
ಏರಿಸಿದನಂಬಂ ಶರಾಸನಕೆ ಬಳಿಕವಕೆ |
ಹೇರಿದಂ ಹರಿ ತನ್ನ ಕೃಷ್ಣಾವತಾರದೊ |
ಳ್ಮೀರಿ ಧರೆಯಂ ಪೊರೆದ ಪುಣ್ಯಮಂ ಮೇಲೆ ಫಲುಗುಣನೆಚ್ಚನಾಕಣೆಯನು || ||೩೯||

ಆಗ ಳತಿರೋಷದಿಂದಾಲಿ ಗೆಂಪಡರ ।
ಲೀಗ ಳರ್ಜುನನ ಬಾಣಕೆ ನಿನ್ನ ಪುಣ್ಯಮಂ ।
ನೀಗಿದೆಯಲಾ ದೇವ ನೋಡು ಬಹ ದಿವ್ಯಾಸ್ತ್ರಮಂ ಕತ್ತರಿಸದಿರ್ದೊಡೆ ॥
ಭೋಗಮೊಳರುಂಧತಿಯ ಕೂಡಿಹ ವಶಿಷ್ಠನಂ ।
ಪೋಗಿ ಕೊಂದವನ ದುರ್ಗತಿಗೆ ತಾ ನಿಳಿವೆ ನೆನು ।
ತಾಗಸ ದೊಳರ್ಕನಂ ತೈತಪ್ಪ ಸರಳಂ ಸುಧನ್ವ ನಿಕ್ಕಡಿಗೈದನು ॥ ||೪೦||
ಕೂಡೆ ಮೊಳಗಿದುವು ನಿಸ್ಸಾಳಂಗಳೈವೆ ಕೊಂ ।
ಡಾಡಿದ ರ್ಸುರ ರಥ್ರದೊಳ್ಬಳಿಕ ಕೃಷ್ಣನಂ ।
ನೋಡಿ ನುಡಿದಂ ಪಾರ್ಥನೆರಡಂಬು ಮುರಿದು ದಿನ್ನೊಂದರೊಳಿವನ ಶಿರವನು ॥
ರೂಢಿಯಿಂ ದರಿಯದೊಡೆ ಹರಿಹರ ವಿಭೇದಮಂ ।
ಮಾಡಿ ನಿಂದಿಸಿದವನ ಗತಿಯಾಗಲೆನಗೆನುತೆ ।
ಪೂಡಿದಂ ಮತ್ತೆ ಕೋದಂಡದೊಳ್ಬಾಣಮಂ ನೃಪತಿ ಕೇಳದ್ಭುತವನು ॥ ||೪೧||
ಆ ಹೊಡಿದರ್ಜುನನ ಮಾರ್ಗಣದ ಮೊದಲೊಳಾ ।
ವಾಹನಂಗೈದು ಕಮಲಜನಂ ನಿಲಿಸಿ ವೃಷಭ ।
ವಾಹನಂ ಕೋಲ್ದುದಿಗೆ ತಂದಿರಿಸಿ ಸಾಯಕದ ನಡುವೆ ತಾನೇ ವ್ಯಾಪಿಸಿ ॥
ಕಾಹುಗಳನುರೆ ಬಲಿದು ರಾಮಾವತಾರದೊ ।
ಳ್ದೇಹಮುಳ್ಳನಿತುದಿನ ಮಾರ್ಜಿಸಿದ ಪುಣ್ಯಮಂ ।
ರೂಹುಗಾಣಿಸಿ ಕೊಟ್ಟು ಶಕ್ತಿಯಂ ನೆಲೆಗೊಳಿಸಿ ಮುರಹರಂ ತೋಳ್ಪೊಯ್ದನು ||೪೨||
ಕೋಟಿಸಿಡಿಲೊಮ್ಮೆ ಗರ್ಜಿಸುವೋಲೂದಿದನಾನಿ ।
ಶಾಟ ವಲ್ಲಣ ನತುಳ ಪಾಂಚಜನ್ಯವ ನಾಕಿ ।
ರೀಟಿ ಪಿಡಿದಂ ದೇವದತ್ತಮಂ ಸಪ್ತಾಬ್ಧಿರಭಸ ಮೊಬ್ಬುಳಿಸುವಂತೆ ॥
ಮಿಾಟಾಡಿಸಿತು ಭೂಮಿಯುಂ ಮೇರುಶೈಲಮಂ ।
ದೂಟಾಡಿಸಿತು ರಾಶಿ ತಾರಾಗ್ರಹಂಗಳಂ ।
ತಾಟಾಡಿಸಿತು ಹನುಮನಬ್ಬರಣೆ ಲಗ್ಗೆವರೆ ಮೊಳಗಿದುವು ನಿಜಬಲದೊಳು ॥ ||೪೩||
ಕಂಡ ನೀತೆರನಂ ಸುಧನ್ವನಿಂತೆಂದನೆಲೆ ।
ಪುಂಡರೀಕಾಕ್ಷ ನಿನ್ನಯ ಪುಣ್ಯಮಂ ಸೂರೆ ।
ಗೊಂಡವಂ ತಾನೋ ಧನಂಜಯನೊ ಪುಸಿಯ ದುಸಿರನಗೆ ಸಾಕಿನ್ನು ಬರಿದೆ ॥
ಕೊಂಡಾಡಬೇಡ ಬಿಡಿ ಸಂಬನದ ನೆಡೆಯೊಳಾಂ ।
ಖಂಡಿಸದೊಡೆ ನ್ನಣುಗನೆಂಬಳೇ ಮಾತೆ ಸತಿ ।
ಗಂಡ ನೆಂದೆಣಿಸುವಳೆ ಸುತನೆ ತಾತಂಗೆ ಕೇಳ್ದ್ರುತಿಜ್ಞ್ಯಯನೆಂದನು ॥ ||೪೪||
ಭೂಸುರರ್ಬಂದು ಕಾಶಿಯೊಳಿರ್ಪ ಮಣಿಕರ್ಣಿ ।
ಕಾ ಸಲಿಲದೊಳ್ಮಿಂದು ಶಾಸ್ತ್ರವಿಧಿಯಿಂದ ಮುಪ ।
ವಾಸಮಂ ಮಾಡಿ ಶಿವರಾತ್ರಿಯೊಳ್ವಿರಚಿಸಿದ ವಿಶ್ವೇಶ ಪೂಜೆಗಳನು ॥
ಘೋಷ ಪೆಡಗಾಲಿಂದೆ ನೂಕಿದನ ದೋಷಮೆನ ।
ಗೀ ಸಾಯಕವ ನೆಡೆಯೊ ಳರಿಯದಿರಲಾಗಲೆಂ ।
ದಾಸುಧನ್ವಂ ತನ್ನ ಭುಜಬಲ ದೊಳಾರ್ದು ನಿಜಧನುವ ನೊದರಿಸುತಿರ್ದನು ॥ ||೪೫||

ಅನಿತರೊಳ್ ತ್ರಿಮೂರ್ತಿಗಳ ದಿವ್ಯಶಕ್ತಿಯಿಂ |
ವಿನುತ ರಾಮಾವತಾರದ ಪುಣ್ಯಶಕ್ತಿಯಿಂ |
ವನುಪಮ ಧನುಷ್ಟಂದ ದುರುಮಂತ್ರಶಕ್ತಿಯಿಂ ತೀವಿದ ಮಹಾಶರವನು ||
ತನಗೆ ಭುಜಬಲದೊಳುಂಟಾದ ನಿಜಶಕ್ತಿಯಿಂ |
ಕನಲಿ ಕಿಡಿಗೆದರೆ ತೆಗೆದಾರ್ದು ಫಲುಗುಣ ನೆಚ್ಚ |
ನೆನಿತು ಸತ್ವಾಧಿಕನೊ ಕಲಿಸುಧನ್ವಂ ಧರೆಯೊಳೆಸೆಂಬ ನಮ್ಮ ತವನು || ||೪೬||
ಪೆದರಿತುಭಯದಸೇನೆ ಕೆದರಿತು ಸುರಸ್ತೋಮ |
ನೊದರಿತಿನಮಂಡಲಂ ಬೆದರಿತು ಜಗತ್ತ್ರಯಂ |
ಬಿದಿರಿತು ಕುಲಾದ್ರಿಚಯ ಮುದಿರಿತುಡುಸಂದೋಹ ಮದಿರಿತಿಳೆ ತತ್ಕ್ಷಣದೊಳು ||
ಕವಡಿತು ಮಹಾರ್ಣವಂ ಕವಲಿದಂ ಕಚ್ಛಪಂ |
ಪುಮುಗಿ ತೆಣ್ದೆಸೆಯಾನೆ ಹಮುಗಿದಂ ಭೋಗಿಪಂ |
ಗವಗದಿಸಿ ತಾ ಸಾಯಕದ ಬಿಸಿಗೆ ಬ್ರಹ್ಮಾಂಡ ಮದನೇನ ಬಣ್ಣಿಸುವೆನು || ||೪೭||
ಬೆಚ್ಚಿದನೆ ಬೆದರಿದನೆ ಚಿತ್ತದೊಳ್ಕಲಿತನದ |
ಕೆಚ್ಚು ಕೊರಗಿತೆ ಬಹ ಮಹಾಶರವ ನಾಗಳಾ |
ವೆಚ್ಚಂ ಸುಧನ್ವ ನಿಕ್ಕಡಿಯಾದುದಂಬು ಬಿದ್ದುದು ಹಿಂದಣರ್ಧ ಮಿಳೆಗೆ ||
ಉಚ್ಚಳಿಸಿ ಬಂದ ಕೋಲ್ಮುದಿಯವನ ಕಂಠಮಂ |
ಕೊಚ್ಚಿ ಹಾಯ್ದುತ್ತಳಲ್ದುದು ಮೇದಿನಿಯೊಳಾಗ |
ಅಚ್ಯುತ ಮುರಾರಿಕೇಶವ ರಾಮ ಯೆನುತಿರ್ದುದಾತಲೆ ಜಿಗಿದು ನಭದೊಳು || ||೪೮||
ಕಂದು ಕುಂದಿಲ್ಲದ ಸುವೃತ್ತದಿಂದೆಸೆವ ತನ |
ಗೊಂದು ಬಾರಿಯುಮಿನ್ನು ಪರಪೀಡೆ ಲೇಸಲ್ಲ |
ವೆಂದು ನಿಜವೈರಮಂ ಬಿಟ್ಟು ಕಮಲಂಗಳಂ ಸಂತೈಸೆ ಗಗನದಿಂದೆ ||
ಬಂದಪನೊ ಸಂಪೂರ್ಣ ಕಲೆಗಳಿಂ ದಾರಾಜಿ |
ಪಿಂದುವೆನೆ ಕೃಷ್ಣನ ಪದಾಂಭೋಜಯುಗಳಕ್ಕೆ |
ತಂದು ಬಿದ್ದುದು ಸುಧನ್ವನ ಶಿರಂ ಹರಿಯ ನಾಮಾವಳಿಯನುಚ್ಚರಿಸುತೆ || ||೪೯||
ತಪ್ಪಿದನಲಾ ಚಕ್ರಿ ಹಾ ಯೆಂದು ಸುರರುಲಿಯೆ |
ಉಪ್ಪರಿಸಿ ತಲೆ ಜಿಗಿಯೆ ಲವನಟ್ಟಿ ತೋಳ್ಗಳಂ |
ಚಪ್ಪರಿಸಿ ಕೊಂಡೆದ್ದು ಬಂದು ರಣರಂಗದೊಳ್ತಿರುತಿರುಗಿ ಚಾರಿವರಿದು ||
ಅಪ್ಪಳಿಸಿ ಹೊಯ್ದಳಿದು ಸದೆ ದಿಟ್ಟೊರಸಿ ಮೆಟ್ಟಿ |
ಸೊಪ್ಪಿಸಿ ಪೊರಳ್ದರಿದು ತೆವರಿ ಸದೆವರೆ ಯಟ್ಟಿ |
ಚಿಪ್ಪುಜೀರಾಗಿಸಿತು ಸಕಲ ಪರಿವಾರಮಂ ಮುರಹರಂ ಬೆರಗಾಗಲು || ||೫೦||
ಹೊಳೆವ ಕುಂಡಲದ ಕದಪಿನ ಮುಂದಿಸೆವ ನಿಗಾಸ |
ಗಳ ನಗೆಮೊಗದ ರದನಪಂಕ್ತಿಗಳ ಬಿಟ್ಟಕಂ |
ಗಳ ಬಿಗಿದ ಹುಬ್ಬುಗಳ ಪೆರೆನೊಸಲ ತಿಲಕದ ನವಿರ ಬಿಣಿಲ ಕಾಂತಿಯಿಂದೆ ||
ಕಳಕಳಿಪ ತನಿಪೀರರಸ ದುರುಳಿಯಂತೆ ತೊಳ |
ತೊಳಗುವ ಸುಧನ್ವನ ಶಿರದ ನೆರದು ಕೈಗಳಿಂ |
ನಳಿನದಳ ಲೋಚನಂ ಪಿಡಿದೆತ್ತಿಕೊಂಡು ನೋಡಿದನವನದೇಂ ಸುಕೃತಿಯೊ || ||೫೧||

ಕೈ ದಳ ದೊಳಿಸೆವತಲೆಯಂ ನಾಸಿಕಾಗ್ರದೆಡೆ ।
ಗೊಯ್ದು ಮುರಮಥನ ನಾಘ್ರಾಣಿಸಿದ ನಾತನೇಂ ।
ಗೈದನೆಂಬುದ ನಚ್ಯುತನೆ ಬಲ್ಲ ನಾಗ ಳಾ ಮೊಗದಿಂದೆ ತನ್ನ ಮೊಗಕೆ ॥
ಐದಿ ತವನಾತ್ಮವತಿತೇಜದಿಂ ಬಳಿ ಕಮರ ।
ರೈದೆ ಬಣ್ಣಿಸಿದ ರಾಶಿರವ ನಸುರಾಂತಕಂ ।
ಮೈದುನಂಗುರೆ ತೋರಿ ಹಂಸಧ್ವಜನ ಮುಂದಕಿಡಲಟ್ಟೆ ಬಿದ್ದುದಿಳೆಗೆ ॥ ॥೫೨॥

ಭೂಪಾಲ ಕೇಳ್ನೋಡುತಿರ್ದಂ ಸುಧನ್ವನಾ ।
ಟೋಪಮಂ ತಲೆ ಪಾರ್ಥನಸ್ತ್ರದಿಂ ಪರಿಯೆ ಸಂ ।
ತಾಪದಿಂ ಮರುಗುತಿಳೆಯೊಳ್ಪೊರಳ್ವಿನ ಮಾತಿರಂ ತನ್ನ ಬಳಿಗೆ ಬರಲು ॥
ಹಾ ಪುತ್ರ ಯೆನುತೆತ್ತಿಕೊಂಡು ಮುಂಡಾಡಿ ಪಣೆ ।
ಗಾ ಪಣೆಯನೊಂದಿಸಿ ಪೊಸೆದು ಚೀರ್ದು ಬಹಳ ಪ್ರ ।
ಲಾಪದಿ ನಳಲ್ದಂ ಮರಾಳಧ್ವಜಂ ಪೊರೆಯ ಕಲ್ಮರಂ ಕರಗುವಂತೆ ॥ ॥೫೩॥

ಬೀಳ್ವೆನೋ ಶೈಲಾಗ್ರದಿಂದೆ ಕರ್ಮಡುವಿನೊಳ ।
ಗಾಳ್ವೆನೋ ನಿನ್ನ ನಿಟ್ಟಿಸ ತನ್ನ ಕಂಗಳಂ ।
ಕೀಳ್ವೆನೋ ಪರಸಿ ಪಡೆದೊಡಲಸುರೆ ಸೀಳ್ವೆನೋ ನಿನ್ನ ನುಡಿಗಳನೆಂದಿಗೆ ॥
ಕೇಳ್ವೆನೋ ಜನ್ಮಜನ್ಮಾಂತರದೊಳಾದೊಡಂ ।
ಪೇಳ್ವೆನೋ ನಿನಗೆ ಬಿಸನಂ ಮಗನೆ ಶೋಕಮಂ ।
ತಾಳ್ವೆನೋ ತಾನೆನ್ನೊಳುಸಿರಲಾಗದೆ ಮೌನಮೇಂ ಕಕಟ ನಿನಗೆಂದನು ॥ ॥೫೪॥

ಕೊಳುಗುಳಕೆ ನಡೆತಂದೆ ಬಿಲ್ವಿಡಿಯುತ್ತೈತಂದೆ ।
ಫಲುಗುಣನೊಡನೆ ಹೋರಿ ಜಯಿಸಬೇಡನೆ ಹೋರಿ ।
ಕಲಿತನದೊಳುಕ್ಕಂದಪಾತಕಿಂ ನೇಕಂದ ವಳಿದೆ ರಣದೊಳಗೆ ಕಂದ ॥
ನಿಲಯಕೆಂ ತಾಂ ಪೃಗುವೆ ನುಡಿಮನಿನ್ನಂ ಮಗುವೆ ।
ಸಲಹು ಬಾ ನಮ್ಮಯ್ಯ ಮಾತಾಡು ದಮ್ಮಯ್ಯ ।
ಬಳಲಿಸದಿರೈ ತಮ್ಮ ನೊಮ್ಮೆ ನೋಡೈ ತಮ್ಮಯಿಂ ದಳಜೊ ಳವನಾಳ್ದನು ॥ ॥೫೫॥

ಮೋಹಮುಳ್ಳೊಡೆ ತಪ್ಪತ್ತೈಲಪೂರಿತ ಘನಕ ।
ಟಾಹ ದೊಳ್ಕಡಪಿಸುವನೇ ತಂದೆ ತನಯನಂ ।
ಬಾಹಿರಂಗದ ಶೋಕಮೆಂದು ಜರೆಯದೆ ಲೋಕವಿಗಾಗ ಹಲುಬಲ್ತನ್ನನು ॥
ದ್ರೋಹಮಂ ಮಾಡಿದೆಂ ನಿನಗೆ ನ್ನಮೇಲಿ ಮುಳಿ ।
ದಾಹವದೊಳಳಿದ್ದೈ ಸುಧನ್ವ ಕಾಯ್ದಣ್ಣೆಯೊ ।
ಸ್ನೇಹಮಂ ಕಾದಕೃಷ್ಣಂ ಕಾದಲಹಿತ ನೇಕಾದನೈ ನಿನಗೆಂದನು ॥ ॥೫೬॥

ಅಣ್ಣ ದೇವಂ ಕದನಮಂ ಜಯಿಸಿ ಬಹನೆಂದು ।
ಬಣ್ಣದ ಸೊಡರ್ಗಳಂ ಕೈಗೈಸುವನುಜೆಯಂ ।
ಹುಣ್ಣಿಮೆಯ ಶಶಿಯಂದವಾಸ್ಯದೆಳನಗೆಯೊಳ್ಕೈತವ ನಿನ್ನ ವಲ್ಲಭೆಯನು ॥
ಹಣ್ಣಿದುತ್ಸಾಹಮಂ ಕೇಳ್ದು ತನ್ನೊಡಲೊಳಗೆ ।
ತಣ್ಣಿಸಂ ತಳ್ತು ಬಹ ನಿನ್ನ ನಿಜಮಾತೆಯಂ ।
ಕಣ್ಣಾರೆ ಕಾಣ್ಕೆನೆಂತಕಟ ವಿಪರೀತಮಾದೊಡೆ ತನಯ ಹೇಳೆಂದನು ॥ ॥೫೭॥

ತಾತನಲ್ಲವೆ ನಿನಗೆ ತಾನೆನ್ನೊಳಿಂತಕಟ |
ಮಾತಾಡದಿಹರೆ ನಿನ್ನಂ ಪಡೆದವಳಂ ವೀರ |
ಮಾತೆಯೆಂಬ ಕರ್ಟ್ಟು ನರನಹಯಂ ಕಾದು ನಡೆ ಕೃಷ್ಣ ಫಲ್ಗುಣರೊಳು ||
ಏತಕೆ ಬರಿದೆ ಸುಮ್ಮನಿಪೆ ಕಂಠಮಾಲೆಯೊ |
ಜ್ಞಾತಿನಾಯಕ ರತ್ನಮಂ ತೆಗೆದು ಬಿಸುಟಂತೆ |
ಘಾತುಗೆಟ್ಟವೆ ತಮ್ಮ ಬಲವೆಂದು ಹಲುಬಿದಂ ಧರೆಯೊಳ್ಪೊರಳ್ದು ಮರುಗಿ || ||೫೮||
ಲಂಬಿಸಿದ ನತಿಶೋಕಭಾರದಿಂ ಮೊಗನಿಟ್ಟು |
ಚುಂಬಿಸಿದ ನಡಿಗಡಿಗೆ ನಾನಾಪ್ರಕಾರದಿಂ |
ಸಂಬಲಿಸಿ ಸುತನ ಗುಣ ಶೀಲಂಗಳಂ ನೆನೆದು ಹಳವಳಿಸಿದಂ ಪೆರ್ಚಿದ ||
ಕಂಬನಿಯ ಕಡಲೊಳಗೆ ಡಾವರಿಪ ವಡಬಶಿಖಿ |
ಯೆಂಬಿನಂ ಕಾಣಿಸುವಳ ಲ್ಗಿಚ್ಚಿಗವ ನೊಡಲ |
ನಿಂಬುಗೊಟ್ಟಂ ಮರುಗುತಿರ್ದುದು ಸಮಸ್ತಪರಿವಾರ ಮಾತನ ಸುತ್ತಲು || ||೫೯||
ಕಾಳಗಕೆ ಮುಂಕೊಂಡು ನಡೆವರಾರಿನ್ನು ತಮ |
ಗೂಳಿಗವನಿತ್ತು ಜಿಸಸುವರುಂಟೆ ನೀನೆ ಕ |
ಟ್ಟಾಳೆಂಬ ರೀಗಳಿಂ ತಳಿದಪರೆ ದಾತಾರ ವೀರ ಸುಕುಮಾರ ಧೀರ ||
ಕಾಳಾದು ಪಕಟ ಚಂಪಕನಗರ ದರಸುಗಳ |
ಬಾಳುವೆ ಮಹಾದೇವ ಹಾ ಯೆಂದೊರಲ್ದು ಪಡೆ
ಗೋಳಿಟ್ಟುದಾನೆ ಕುದುರೆ ಗಳೊರೆವ ಕಂಬನಿ ಬಳಲ್ಗಿವಿಗಳಿಂ ಜೋಲ್ದುವು || ||೬೦||
ಬಳಿಕಾ ಸುಧನ್ವನ ಸಹೋದರಂ ಸುರಥಂ ಬ |
ಹಳ ಶೋಕಭಾರಮಂ ತಳೆದಿರ್ದನಂ ಕೂಡೆ |
ತಳಿಮ ಕಡುಗೋಪದಿಂ ಬಿಲ್ಗೊಂಡು ನುಡಿದನೆಲೆ ತಾತ ಕೇಳೀತನಿಂದು ||
ನಳಿನನಾಥನ ಮುಂದೆ ಭಾಷೆಯಂ ಪೂರೈಸಿ |
ಕೊಳುಗುಳ ದೊಳಳಿದ ನಿನಕಿನ್ನು ದುಃಖಿಸಲೇತ |
ಕಳಲದಿ ರ್ಧುರದೊಳಿ ನ್ನಾಟೋಪಮಂ ನೋಡೆನ ಲ್ಕರಸನಿಂತೆಂದನು || ||೬೧||
ಉಂಟು ಕೃಷ್ಣನ ಮುಂದೆ ಭಾಷೆಯಂ ಪೂರೈಸಿ |
ಓಂಟಣಿಸ ದೊಡಲಂ ತೊರೆದು ಮುಕ್ತಿರಾಜ್ಯಮಂ |
ವೆಂಟಣಿಸಿಕೊಂಡಂ ಸುಧನ್ವನಿವಕಾಗಿ ಧೃತಿಗೆಟ್ಟಂತಳಲ್ವುದಿಲ್ಲ ||
ಕಂಠಮಂ ಕತ್ತರಿಸಲಾಶಿರಂ ತನ್ನೆಡೆಗೆ |
ಬಂಟುಗೆಡಸ್ಪೈದಿದೊಡೆ ತೆಗೆದೆತ್ತಿ ಕೊಂಡು ವೈ |
ಕುಂಠನೀಕ್ಷಿಸಿ ಮುತ್ತಿ ಬಿಸುಟನೆಂಬುದಕೆ ಮರುಗುವೆನೆಂದೊಡಿಂತೆಂದನು || ||೬೨||
ತಾತ ಚಿತ್ತೈಸಿದರೊಳೀನಹುದು ತಿರುಗಿ ಬಿಸು |
ಡೀತಲೆಯನಸುರಾಂತಕನ ಚರಣದೆಡೆಗೆ ಸಹ |
ಜಾತನಂ ಕೊಂದಾತನಂ ಕೊಲ್ವೆನೆಂದು ಸುರಥಂ ರಥಕಡರ್ದಬಳಿಕ ||
ವಾತಿಯಿಂದಾ ಶಿರವ ನಾಮರಾಳಧ್ವಜಂ |
ಪೀತಾಂಬರನ ಪೊರೆಗೆ ಹಾಯ್ಕಲಾ ಮುರಹರಂ |
ಪ್ರೀತಿಯಿಂ ತೆಗೆದು ನಭಕಿಡಲದಂ ರುಂಡಮಾಲೆಯೊಳಾಂತನಲ್ಲಿ ಶಿವನು || ||೬೩||

ಅಡಗಿತಾ ಶಿರಮಲ್ಲಿ ಹಂಸಧ್ವಜಂ ತನ್ನ ।
ಪಡೆಸಹಿತ ನಿಂದನಾಹವಕೆ ಸನ್ನಾಹದಿಂ ।
ದೊಡಹುಟ್ಟಿದಂ ಮಡಿದಳಲ್ಗೆ ಸುರಥಂ ರಥಕಡರ್ದು ನಿಜಕಾರ್ಮುಕವನು ॥
ಮಿಡಿದು ಕೃಷ್ಣಾರ್ಜುನರ ಸರಸಕೈತರಲವನ ।
ಕಡುಶೌರ್ಯಮಂ ಕಂಡು ಶಂಕೆಯಿಂ ದೇವಪುರ ।
ದೊಡೆಯ ಲಕ್ಷ್ಮೀವರಂ ಮಾಡಿದಂ ತನ್ನ ಮೈದುನನೊಳಾಲೋಚನೆಯನು ॥ ॥೬೪॥

ಸಂಧಿ ೧೩ ಕ್ಕೆ ಪದ್ಯ ೮೦೬ ಕ್ಕೆ ಮಂಗಳಮಸ್ತು.

## ಹದಿನಾಲ್ಕನೆಯ ಸಂಧಿ.

ಸೂಚನೆ॥ ಚಂಡಸುರಥನ ಶಿರವ ನಸುರಹರನಾಜ್ಞೆಯಿಂ ।
ಕೊಂಡು ಗರುಡಂ ಪ್ರಯಾಗದಸ್ಸೈವಳೀಶ್ವರಂ ।
ಕಂಡು ನೃಪರಾಜನಂ ಕಳುಹಿ ತರಿಸಿದನದಂ ರುಂಡಮಾಲೆಯ ಕೊಡವಿಗೆ ॥

ಕೇಳ್ದು ನೃಪಾಲಕ ಸುಧನ್ವನಗ್ಗಳಿಕೆಯಂ ।
ಪೇಳ್ವೆಂ ನಿನಗಾಲಿಪುದು ಸುರಥನಂಕಮಂ ।
ತಾಳ್ದನತಿರೋಷಮಂ ರಥವೇರಿ ಪಿಡಿದು ಕೋದಂಡಮಂ ಜೇಗೈಯುತೆ ॥
ಬಾಳ್ದಪನೆ ಫಲುಗುಣಂ ಮೇದಿನೀಮಂಡಲವ ।
ನಾಳ್ದಪನೆ ಧರ್ಮಜಂ ಕಾಣಬಹುದಿಂದೆನ್ನ ।
ತೋಳ್ದಿಂಟೆಯಂ ಕಳೆವೆನೆನುತೆ ಕೃಷ್ಣಾರ್ಜುನರ ಸರಿಸಕೈತರುತಿರ್ದನು ॥ ॥೧॥

ಸುರಥನೈತಹ ರಣೋತ್ಸಾಹಮಂ ಕಂಡು ಹರಿ ।
ನರನೊಳಾಲೋಚಿಸಿ ನುಡಿದನಿವಂ ಧರೆಯೊಳಾ ।
ಚರಿಸದಿಹ ಪುಣ್ಯಕರ್ಮಂಗಳೊಂದಿಲ್ಲವಂ ಮರೆಪಾದೊಡಂ ಮಾಡಿದ ॥
ದುರಿತಲವಮಂ ಕಾಣೆ ನಾರ್ಜಯಿಪರೀತನಂ ।
ಸರಿಸದೊಳ್ನಿಂದಿಪಾದೊಡೆ ಬಹುದು ನಮಗೀಗ ।
ಪರಿಭವಂ ಪ್ರದ್ಯುಮ್ನ ಮೊದಲಾದ ಪಟುಭಟರ್ ಕಾದಲಿವನೊಡನೆಂದನು ॥ ॥೨॥

ರಾಜೀವನೇತ್ರನಿಂತೆನುತು ಸಂಘಕ ವೃಷ್ಣಿ ।
ಭೋಜರನಿಪಖಿಳ ಯಾದವಕುಲದ ಪಟುಭಟ ಸ ।
ಮಾಜಮಂ ಪ್ರದ್ಯುಮ್ನನೊಡನೆ ಸುರಥನ ರಥಕ್ಕೆಣೆಯೊತ್ತಿ ನರನ ರಥದ ॥
ವಾಜಿಗಳ ವಾಘೆಯಂ ತಿರುಹಿ ಹಿಂದಕೆ ಮೂರು ।
ಯೋಜನದೊಳಿಟ್ಟಣಿಸಿ ನಿಂದು ಗರ್ಜಿಸುವ ಸೇ ।
ನಾಜಲಧಿ ಮಧ್ಯದೊಳ್ಬಂದು ನಿಂದರನೆಲೆಯ ಸುಯಿದಾನಮಂ ಬಲಿದನು ॥ ॥೩॥

ಇತ್ತಲಾಹವಕೆ ಮುಂಕೊಂಡು ಬಹ ಸುರಥನಂ ।
ತೆತ್ತಿಸಿದನಂಬಿನಿಂ ಪ್ರದ್ಯುಮ್ನನಾತನಂ ।
ಮೆತ್ತಿದನವಂ ಬಾಣದಿಂ ಪಾರ್ಥನೆತ್ತ ಜಾರಿದನೀಗ ಶೌರಿಸಹಿತ ॥
ಮತ್ತಗಜದಗ್ಗಳಿಕೆ ಮಕ್ಷಿಕದೊಳಹುದು ಗಡ ।
ಮುತ್ತಿದುವು ಕರಿ ತುರಗ ರಥ ಪದಾತಿಗಳಲ್ಲಿ ।
ಕೊತ್ತುಗಳೆವೊಡೆ ಸುಧನ್ವನ ಹರಿಬವಲ್ಲೆನುತೆ ತೆಗೆದೆಚ್ಚನಾ ಭಟರನು ॥ ॥೪॥

ತವಕದಿಂ ಪ್ರದ್ಯುಮ್ನನಂ ಗೆಲ್ದು ಸಾತ್ಯಕಿಯ |
ನವಗಡಿಸಿ ಕೃತವರ್ಮ ಸಾಂಬಾನುಸಾಲ್ವರಂ |
ಜವಗೆಡಿಸಿ ಕಲಿಯೌವನಾಶ್ವನಂ ಸದೆದು ನೀಲಧ್ವಜನ ಸುರೆಘಾತಿಸಿ ||
ರವಿಸುತನ ಸೂನುವಂ ಪರಿಭವಿಸಿ ನಿಖಿಳ ಯಾ |
ದವ ಸುಭಟರಂ ಜಯಿಸಿ ಚತುರಂಗ ಸೈನ್ಯಮಂ |
ಸವರಿ ಸಮರಥ ಮಹಾರಥರ ನೊಂದೇರಥ ದೊಳಾಸುರಥ ನೊಡೆದುಳಿದನು || ||೫||

ಸೊಕ್ಕಾನೆ ಪೊಕ್ಕ ಕಾಸಾರಮಂ ಕಲಕುವಂ |
ತಕ್ಕಾಜ ದೊಳೊಕ್ಕಲಿಕ್ಕಿದ ನಖಿಳಸೈನ್ಯಮಂ |
ಮಿಕ್ಕುದೊಂದೆಕ್ಕಲಂ ಬೀದಿವರಿದಟ್ಟುವಂ ತೋಡಿಸಿದ ನತಿಬಲರನು ||
ಕರ್ಕಶ ದೊಳಿಕ್ಕುತುಳಕೈತಂದವೀರರಂ |
ಮುಕ್ಕುರಿಕಿ ತೆಕ್ಕೆ ಗೆಡಿಸಿದ ನಾ ರಣಾಗ್ರದೊ |
ಳ್ಪೊಕ್ಕಳಿಸಿ ದುಕ್ಕಂದ ವಡಟಂದೆ ಸುರಥ ನರಸಿದ ನಚ್ಯುತಾರ್ಜುನರನು || ||೬||

ಘೋರಸಂಸಾರದೊಳ್ಮುಸುಕುವ ಮರವೆಯಂ ನಿ |
ವಾರಿಸಿ ಮಹಾಯೋಗಿ ಜೀವ ಪರಮಾತ್ಮರ ವಿ |
ಚಾರಿಸುವ ತೆರದಿಂದೆ ರಿಪುಮೋಹರದೊಳೊತ್ತಿ ಕವಿವ ಭಟರಂ ಗಣಿಸದೆ ||
ವೀರಸುರಥಂ ಕೃಷ್ಣ ಫಲ್ಗುಣರ ನರಸಿದ ನು |
ದಾರವಿಕ್ರಮ ಪರಿಜ್ಞಾನದಿಂದೆಡ ಬಲನ |
ನಾರಯ್ಯದೇಕಾಗ್ರಚಿತ್ತದಿಂ ವಸುಮತೀಕಾಂತ ಕೇಳದ್ಭುತವನು || ||೭||

ಅದ್ಭುತ ಪರಾಕ್ರಮದೊಳಾ ನಿಖಿಳ ಸೇನೆಗೆ ಮ |
ಹದ್ಭಯ ಬೀರುತೈತಹ ಸುರಥನಂ ಕಾಣು |
ತುದ್ಭವಿಸಿ ತರ್ಜನಂಗತಿರೋಷವೊಂದ ನಸುರಾಂತಕನೊಳಿವನ ಜಯಕೆ ||
ತ್ವದ್ಭಾವದೊಳ್ತೋರಿದೆಣಿಕೆ ಯೇನೆಲೆ ದೇವ |
ಮದ್ಭುಜದೊಳೀಚಾಪದಿರ್ದಮಾವನಸ್ತ್ರ |
ವಿದ್ಭುವನಕವನು ನೋಡುವೆನೆನುತೆ ಬಿಲ್ದಿರುವನೊದರಿ ನರನಿದಿರಾದನು || ||೮||

ಎಲವೊ ಸೋದರನಳಿವಳಲ್ಲಾಗಿ ನಮ್ಮೊಡನೆ |
ಕಲಹಕ್ಕೈದುವ ನಿನ್ನನಿಸುವು ದನುಚಿತಮೆಂದು |
ತೊಲಗಿದೊಡೆ ನೀನರಿದುದಿಲ್ಲಲಾ ತಲೆ ಬಲ್ಲಿತೆಂದು ಕಲ್ಲಂ ಪಾಯ್ವಲಾ ||
ಕಲಿಯಾಗಿ ಸಮರದೊಳ್ಕಾದಿದೊಡೆ ನಿನಗಿಲ್ಲಿ |
ಗೆಲವಹುದೆ ಮರುಳಾಗಬೇಡ ಹಯಮಂ ಬಿಟ್ಟು |
ನಿಲದೆನೀಯ ಧರ್ಮಸುತನಂ ಕಂಡು ಬದುಕುವುದು ಲೇಸೆಂದು ನರನೆಚ್ಚನು || ||೯||

ಗಣ್ಯನೇ ಮತ್ಸಹಭವಂಗೆ ನೀಂ ಹರಿಹರ ಹಿ |
ರಣ್ಯಗರ್ಭಾದಿ ಗಳ್ಮಿಳ್ದೊಡಳಿದಪನೆ ಕಾ |
ರುಣ್ಯದಿಂ ನಿನ್ನನುದ್ಧರಿಸಲೆಂದಚ್ಯುತಂ ಕೊಟ್ಟ ತನ್ನವತಾರದ ||
ಪುಣ್ಯದಿಂ ಮಡಿದು ಮುಕ್ತಿಗೆ ಸಂದಪಿದಕೆ ನೈ |
ರ್ಗುಣ್ಯಮಿದುಮಗಿಲ್ಲ ನಾನಿನ್ನು ಹಯಮಂ ಬಿಡಲ |
ರಣ್ಯವಾಸಿಗಳಲ್ಲ ನೋಡೆಮ್ಮ ಸಾಹಸವ ನೆನುತೆಚ್ಚನಾಸುರಥನು || ||೧೦||

ಇಸಲುಚ್ಚಳಿಸಿ ಹಾಯ್ದು ಸುರಥನಂಬಿನ ಗರಿಯ |
ಬಿಸಿಯುಗಾಳಿಯ ಬಾಧೆಯಿಂದುರಿದು ಭುಗಿಲೆಂದು |
ಮಸಗಿದತಿಶಯದ ಕೋಪಜ್ವಾಲೆಯಿಂ ಧನಂಜಯನಾದ ಪೆಸರನೆನೆ ||
ಪೆಸೆಯಾವು ದಿಳೆಯಾವು ದಿನಬಿಂಬವಾವು ಗ |
ಗನವಾವುದೆಂಬಿನಂ ಪೊಸಮಸೆಯ ಪುಂಖಮುಂ |
ಮುಸುಕಿದಂ ಸಾರಥಿ ಧ್ವಜ ಹಯಗಳಡಗೆಡೆದು ಸುರಥಂ ವಿರಥನಾಗಲು || ||೧೧||
ಕೂಡೆ ಮತ್ತೊಂದು ಪೊಸರಥವ ಸಾವರಿಸಿ ಕೊಂ |
ಡೀಡಿರಿದ ನಂಬಿನಿಂ ಪಾರ್ಥನ ವರೂಥಮಂ |
ಕೂಡೆ ಹಿಂಭಾಗಕ್ಕೈನೂರು ಬಿಲ್ಲಂತರಕೆ ಪೋದುದು ಸಂಗರದೊಳು ||
ಮಾಡಿದಂ ಕೃಷ್ಣನ ಶರೀರಮೊಳ್ಗಾಯಮಂ |
ತೋಡಿದಂ ಕುದುರೆಗಳೊಡಲ್ಗಳಂ ನರನಂ ವಿ |
ಭಾಡಿಸಿದ ನಾ ಸುರಥನೊಂದು ಶಪಥದೊಳಿಸುವುದಿದರೊಳೇನಹುದೆಂದನು || ||೧೨||
ಶಪಥಮೇನಿದಕಿನ್ನು ನಿನ್ನನಾಂ ಕೊಲ್ಲದೊಡೆ |
ವಿಪುಲಪಾತಕರಾಶಿ ತನಗೆ ಸಂಘಟಿಸದಿ |
ರ್ದಪುದೆ ಪೇಳೆನುತೆ ತೆಗೆದೆಚ್ಚಡಾ ಬಾಣಮಂ ಸುರಥಂ ನಡುವೆ ಖಂಡಿಸಿ ||
ಅಪಹಾಸದಿಂದಿಳೆಗೆ ನಿನ್ನ ಸೀರಥವಿಂದೆ |
ನಿಪತನಂ ಗೆಯ್ಯದೊಡೆ ತನಗೆ ಪರಲೋಕಮೊ |
ಕ್ವಿಪರೀತ ಗತಿಯಾಗದಿರ್ದಪುದೆ ಪೇಳೆಂದು ತೆಗೆದೆಚ್ಚು ಬೊಬ್ಬಿರಿದನು || ||೧೩||
ಸುರಥನಿಸುಗೆಯೊಳರ್ಜುನಂ ನೊಂದು ಮುಂಗಾಣ |
ದಿರೆ ಮುರಾಂತಕನಿವನ ತೋಳ್ಗಳಂ ಬೇಗ ಕ |
ತ್ತರಿಸು ದಿವ್ಯಾಸ್ತ್ರಮಂ ಪೂಡೆಂದು ತಾಂ ಪಾಂಚಜನ್ಯಮಂ ಪೂರೈಸಲು ||
ನರನಾಸುಡಿಗೆ ಮುನ್ನ ಮೆಚ್ಚಿ ಕೆಡಪಿದನಾತ |
ನುರುಭುಜವ ನೈವೆಡೆಯ ಭುಜಗೇಂದ್ರನಂದದಿಂ |
ಧರೆಯೊಳ್ಪೊರಳ್ದುರಳ್ದುದು ಪೊಯ್ದುದುರೆ ಕೊಂದುದಾಕ್ಷಣಂ ಪರಬಲವನು ||೧೪||
ಒತ್ತೊಡೆ ಸುತ್ತರಿಸಲೊತ್ತೋಳ ಸತ್ವದಿಂ |
ಮತ್ತಾತ ನುರವಣಿಸಿ ಮತ್ತದಂತಿಯ ತೆರದಿ |
ನೊತ್ತಿ ಭರದಿಂ ಪಾರ್ಥನೊತ್ತಿಗೈತರೆ ಕಂಡು ಹರಿ ವಿಜಯನಂ ಜರೆಯಲು ||
ತತ್ತಳಂಗೊಂಡೆಚ್ಚು ತತ್ತಳವಿಗೆಯ್ದವನ |
ನತ್ತಲ್ಬುಜವನರಿಯೆ ನೆತ್ತರಾಗಸಕೆ ಚಿಂ |
ಮಿತ್ತುರಣದೋಕುಳಿಯ ಮಿತ್ತುವಿನ ಜೀಕೊಳವಿಯುಗುಳ್ವ ಕೆನ್ನೀರೆಂಬೊಲು||೧೫||
ತೋಳ್ಗಳೆರಡುಂ ಕತ್ತರಿಸಿ ಬೀಳೆ ಮತ್ತೆ ಕ |
ಟ್ಟಾಳ್ಗಳ ಶಿರೋಮಣಿ ಸುರಥನಾಕಿರೀಟಿಯಂ |
ಕಾಲ್ಗಳಿಂದೊದೆದು ಕೆಡಹುವೆನೆಂದು ಭರದಿಂದೆ ಬೊಬ್ಬಿರಿಯುತ್ತೈತರಲ್ಕೆ ||
ಕೋಲ್ಗಳಿಂ ತೊಡೆಗಳಂ ಕತ್ತರಿಸೆ ನಾದಿದುವು |
ಪೊಳ್ಗಳರುಣಾಂಬುವಿಂ ಪೆದೆಯೊಳ್ತಿವಳ್ದಿಯು |
ಪೋಲ್ಗೆಂಡುಗಲಿ ಧನಂಜಯನ ಸಮ್ಮುಖಕೆ ಮೇಲ್ವಾಯ್ದನವನೇವೇಳ್ವೆನು || ||೧೬||

ಆಗ ಮುರಹರನಾಜ್ಞೆಯಿಂದೆಚ್ಚು ಫಲುಗುಣಂ |
ಬೇಗ ಸುರಥನ ಶಿರವನರಿಯಲಾತಲೆ ಬಂದು |
ತಾಗಿತತಿಘರದೊಳ್ ನರನ ವಕ್ಷವಂ ಕೆಡಹಿತಾವರೂಥಾಗ್ರದಿಂದೆ ||
ನೀಗಿಪಂ ಮರವೆಯಿಂದರಿವಂ ಧನಂಜಯಂ |
ಮೇಗೆ ಕೃಷ್ಣನ ಚರಣಕ್ಕೈತಂದು ಬಿದ್ದು ಹರಿ |
ರಾಘವ ಜನಾರ್ದನ ಮುಕುಂದ ಯೆನುತಿರ್ದುದಾ ಶಿರ ಮತಿಪಿಕಾಸದಿಂದೆ || ||೧೭||

ಶ್ರೀಕರಾಂಬುಜಯುಗ್ಮದಿಂದೆತ್ತಿಕೊಂಡು ಕಮ |
ಲಾಕಾಂತನಾಶಿರವ ನೀಕ್ಷಿಸಿ ಕರುಣದಿಂದ |
ಮಾಕಾಶದೆಡೆಯೊಳಿಹಗರುಡನಂ ಕರೆದಿತ್ತು ಜವದಿಂ ಪ್ರಯಾಗಕ್ಕೈದಿ ||
ಈಕಪಾಲವನಲ್ಲಿ ಹಾಯ್ಕೆಂದು ಬೆಸಸಲದ |
ನಾಖಗೇಶ್ವರನೊಯ್ಯುತಿರೆ ಗಗನಪಥದೊಳ್ಪಿ |
ನಾಕಿ ಕಂಡಳ್ತಿಯಿಂದಾತಲೆಗೆ ಕಳುಹಿದಂ ಭೃಂಗೀಶನಂ ಮುದದೊಳು || ||೧೮||

ಎಲ್ಲಿಗೊಯ್ದಪ ನೀಸುರಥನ ತಲೆಯಂ ಗರುಡ |
ನಿಲ್ಲಿಹುದು ರುಂಡಮಾಲೆಯೊಳಿವನ ಸೋದರನ |
ಸಲ್ಲಲಿತ ಶಿರಮಿದರ ಸಂಗಡಕೆ ಕೊಂಡು ಬಾರೆಂದು ಮದನಾರಿ ಬೆಸಸೆ ||
ನಿಲ್ಲದೈತಂದು ಭೃಂಗೀಶ್ವರಂ ಬೇಡೆ ಖಗ |
ವಲ್ಲಭಂ ಪತಿನಿರೂಪವ ನೊಮ್ಮೆಯುಂ ಮೀರ್ವ |
ನಲ್ಲೆಂದತಿಕ್ರಮಿಸಿ ನಡೆಯಲಾ ಪಕ್ಷಘಾತ ದೊಳಾತನಳವಳಿದನು || ||೧೯||

ಗರುಡನ ಗರಿಯು ಗಾಳಿಯೊಳ್ಸಿಕ್ಕಿ ಬೆಂಡಾಗಿ |
ತಿರುಗಿ ಬಂದಭವಂಗೆ ಭೃಂಗಿಪಂ ಬಿನ್ನೈಸು |
ತಿರೆ ಕೇಳ್ದು ಗಿರಿಜೆ ನಸುನಗುತಿ ಹರಿವಾಹನನ ಬಲ್ಮೆಯಂ ನೆರೆ ಪೊಗಳ್ದು ||
ಪಿರಿದಾತನಂ ಜರೆಯೆ ತಲೆವಾಗಿ ಲಜ್ಜಿಸ |
ಲ್ಪುರಹರಂ ಕೃಪೆಯೊಳವನಂ ಮತ್ತೆ ಸಂತೈಸಿ |
ಕರೆದು ವೃಷರಾಜಂಗೆ ಬೆಸಸೆ ಬೆಂಬತ್ತಿದಂ ಪಕ್ಷೀಂದ್ರನಂ ನಭದೊಳು || ||೨೦||

ಬೇಗದಿಂದೈದಿ ನಂದೀಶ್ವರಂ ಗರುಡನಂ |
ಪೋಗದಿರ್ತಲೆಯನಾಭರಣಕ್ಕೆ ತಾರೆಂದು |
ನಾಗಭೂಷಣನಟ್ಟಿದಂ ತನ್ನನೀಯದೊಡೆ ನಿನಗೆ ಬಹಮುಪಹತಿಯೆನೆ ||
ಆಗಲಿದಕೇನಸುರಮರ್ದನನ ಬೆಸದಿಂ ಪ್ರ |
ಯಾಗದೊಳ್ಬಿಡುವೆನೀಶಿರಮಂ ಬರಿದೆ ಗಾಸಿ |
ಯಾಗದಿರ್ತಿರುಗು ನೀನೆಂದು ವಿನತಾಸುತಂ ನೈವರಿದನಾಗಸದೊಳು || ||೨೧||

ತ್ರಿಭುವನವನಲ್ಲಾಡಿಸುವ ಗರಿಯ ಗಾಳಿಗಳ |
ರಭಸದಿಂದೈದುವ ಸುಪರ್ಣನಂ ಹಿಂದಣ ವೃ |
ಷಭನ ಮುಖದುಚ್ಛ್ವಾಸನಿಶ್ವಾಸಮಾರುತಂ ತಡೆದತ್ತಲಿತ್ತಲೆಳೆಯೆ ||
ನಭದೊಳೊಯ್ಯೊಯ್ಯನಾಯಾಸದಿಂ ಪೋಗಿ ದು |
ರ್ಲಭವೆನಿಸುವಮಲ ಪ್ರಯಾಗದೊಳ್ಕಲಿಪೊಗರೊ |
ಳಭಿಶೋಭಿಸುವ ಸುರಥಶಿರವನಾ ಗೋಪತಿಗೆ ಕುಡದೆ ಬಿಸುಟಂ ಗರುಡನು || ||೨೨||

ಆಗರುಡನಾ ಶಿರವನಾ ಪ್ರಯಾಗದ ಜಲದೊ |
ಳಾ ಗಗನದಿಂದೆ ಬಿಸುಟಾ ಕೃಷ್ಣನಿದ್ದಬಳಿ |
ಗಾಗಿ ತಿರುಗಿದ ನಾಗಳಾತಳೆಯುಸಲ್ಲಿಂದಮಾವೃಷಭನೆತ್ತಿಕೊಂಡು ||
ಆಗಿರೀಶನ ರಾಜಿಪಾಸಭೆಗೆ ತಂದು ಕುಡ |
ಲಾಗೋಪತಿಯು ಮೆಚ್ಚುತಾರುಂಡಮಾಲೆಗದ |
ನಾಗಾರಿ ಕೊಂಡಾಡಲಾಸಂದದಿಂದೆ ನಲಿದಾ ಶಂಕರಂ ತಾಳ್ದನು || ||೨೩||
ಇತ್ತಲರ್ಜುನ ಕೃಷ್ಣರಿಂದೆ ಸುರಥಂ ಮಡಿದ |
ವೃತ್ತಾಂತಮಂ ಕಂಡು ಹಂಸಧ್ವಜಂ ತನ್ನ |
ಚಿತ್ತದೊಳ್ಕಡುನೊಂದಳಲ್ದು ಮಿಗೆ ಮರಣಮಂ ನಿಶ್ಚೈಸಿ ರೋಷದಿಂದೆ ||
ತತ್ತರಣದೊಳ್ಕಾದಿ ಮುರಹರಂ ಮೆಚ್ಚಲಾ |
ನುತ್ತಮದ ಗತಿವಡೆವೆನೆಂದು ರಥವೇರಿ ಬಾ |
ಗೊತ್ತಿ ನಿಜಚಾಪಮಂ ಜೇಗೈದು ಪಡೆಸಹಿತ ಫಲುಗುಣಂಗಿದಿರಾದನು || ||೨೪||
ಮುಳಿದು ಹಂಸಧ್ವಜಂ ಕಾಳಗಕೆ ನಿಲಲಾಗ |
ನಳಿನಭವನಕ್ಕಿದಂ ಲೋಕಸೃಷ್ಟಿಗೆ ಮತ್ತೆ |
ಬಳಲಬೇಕೆಂದು ರವಿಮಂಡಲಂ ನಡುಗಿತೊಡನೈದುವ ಭಟರ ರಭಸಕೆ ||
ಪ್ರಳಯಮಿಂದಹುದೆಂದು ಕಂಪಿಸಿತು ಧರೆ ಸಗ್ಗ |
ಪೊಳಲೊಳಗೆ ತೆರಪಿಲ್ಲವೆಂದು ಗಜಬಜಿಸಿ ಸುರ |
ಕುಲಮೈದೆ ಕಂಗೆಟ್ಟುದಸುರಾರಿ ಚಿಂತಿಸಿದನರಸ ಕೇಳದ್ಭುತವನು || ||೨೫||
ಹಂಸಧ್ವಜಂ ಕಾದಲೆಂತಹುದೊ ಎನುತುಮಾ |
ಕಂಸಾಂತಕಂ ನಿದಾನಿಸಿಕೊಂಡು ಶಕ್ರಸುತ |
ನಂ ಸೈರಿಸೆನುತೆ ಕುದುರೆಗಳ ವಾಘೆಯ ನಿಲಿಸಿ ಜಗುಳ್ದ ಪೀತಾಂಬರವನು ||
ಅಂಸದೊಳ್ಸಾರ್ಚುತೆ ವರೂಥಮನಿಳಿದು ಸಿಂಹ |
ಮಂ ಸೋಲಿಸುವಗತಿಯೊಳೈತಂದನಾಗ ತ |
ನ್ನಂ ಸೇವಿಪರ್ಗೆ ಸೇವಕನೆಂಬುದಂ ತೋರುತಾತನ ಸಮೀಪಕಾಗಿ || ||೨೬||
ಮಿಸುಪ ಮಕುಟದ ನೊಸಲ ತಿಲಕದಿಂ ದಲಕದಿಂ |
ಪೆಸಳುಗಂಗಳ ತೊಳಪಕದಪಿನಿಂ ಪದಪಿನಿಂ |
ಪಸರಿಸುವ ನಸುನಗೆಯ ವದನದಿಂ ರದನದಿಂ ಪೊಳೆವ ಚುಬುಕಾಗ್ರದಿಂದೆ ||
ತ್ರಿಸರ ಕೌಸ್ತುಭ ಸುಕೇಯೂರದಿಂ ಹಾರದಿಂ |
ಮೊಸೆದುಟ್ಟ ಪೊಂಬಟ್ಟೆ ಯುಡುಗೆಯಿಂ ತುಡುಗೆಯಿಂ |
ಪಸಿಪ ನೀಲೋತ್ಪಲಶ್ಯಾಮಲಂ ಕೋಮಲಂ ಬರುತಿರ್ದ ನವನಿದಿರೊಳು || ||೨೭||
ರಥದಿಂದಮಿಳಿದು ತನಗಿದಿರಾಗಿ ಬಹ ದನುಜ |
ಮಥನನಂ ಕಾಣುತೆ ಮರಾಳಧ್ವಜಂ ಮನೋ |
ವ್ಯಥೆಯೆಲ್ಲಮಂ ಮರೆದು ಹರ್ಷದಿಂ ಪಿಡಿದ ಶರಧನುಗಳಂ ಕೆಲಕೆ ಸಾರ್ಚಿ |
ಪೃಥಿವಿಗೆ ವರೂಥದಿಂ ಧುಮ್ಮಿಕ್ಕಿ ಹರಿಯ ಪದಂ |
ಪಥದೊಳಡಗೆಡೆಯುತೆಲೆ ದೇವ ಬಿಜಯಂಗೈದ |
ಕಥನವ ನೆನಗೆ ನಿರೂಪಿಸ ಬೇಹುದೆಂದಾತನೆದ್ದು ಕೈಗಳ ಮುಗಿದನು || ||೨೮||

ಆನೃಪತಿಯ ನುಡಿಗಸುರಾರಿ ನಗುತೆ ಸಂ |
ಗ್ರಾಮದೊಳ್ಪಾರ್ಥನಂ ಗೆಲ್ವೆನೆಂಬೀಕ್ಷಾತ್ರ |
ತಾಮಸವಿದೇಕೆ ವಿಜಯಂಗಾವು ಮಾಡುವ ಸಹಾಯಮಂ ಕಂಡುಕಂಡು |
ನೀಂ ಮಕ್ಕಳಂ ಬರಿದೆ ಕೊಲಿಸಿ ಕೆಡಿಸಿದೆ ಸಾಕು |
ಬಾ ಮಿತ್ರಭಾವದಿಂದೆಮ್ಮನಾಲಿಂಗಿಸು ವೃ |
ಥಾ ಮನೋವ್ಯಥೆ ಬೇಡ ತುರಗಮಂ ಬಿಡು ಯಜ್ಞಕನುಕೂಲನಾಗೆಂದನು || ||೨೯||
ಕ್ಷತ್ರಿಯಂ ಬಿರುದಿನ ಹಯಂ ಬರಲ್ಕಟ್ಟದೆ ಧ |
ರಿತ್ರಿಯು ನದೆಂತಾಳ್ದಪಂ ಬಳಿಕ ಗೆಲ್ದೊಡಂ |
ಶತ್ರುನಿಂದಳಿದೊಡಂ ಕೇಡಾವುದಾತಂಗೆ ಸಾಕದಂತಿರಲಿ ನಿಮ್ಮ ||
ಮಿತ್ರಭಾವದೊಳಪ್ಪಿದೊಡೆ ಮೇಲೆ ತನಗಿನ್ನು |
ಪುತ್ರಶೋಕಾದಿಗಳ ದುಃಖಂಗಳಿರ್ದಪುವೆ |
ಚಿತ್ರಮಿದು ಜಾಹ್ನವಿಯೊಳಾಳ್ದಂಗೆ ದಾಹಮೆತ್ತಣದೆನಗೆ ಬೆಸಸೆಂದನು || ||೩೦||
ಆದೊಡೆಲೆ ನೃಪ ಸಖ್ಯದಿಂದೆಮ್ಮನೀಗ ನೀ |
ನಾದರಿಸಿ ಪಾರ್ಥನಂ ಕಂಡು ಧರ್ಮಜನ ಹಯ |
ಮೇಧಕೆ ಸಹಾಯಮಾಗಿಹುದೆಂದು ಕೃಷ್ಣನವನಂ ತೆಗೆದು ತಕ್ಕೈಸಲು ||
ಕಾದಿ ಮಡಿದಾತ್ಮಜರ ಶೋಕಮಂ ಮರೆದು ಮಧು |
ಸೂದನಂಗೆರಗಿದೊಡೆ ಮಗುಳಪ್ಪಿ ಸಂತೈಸು |
ತಾ ದಯಾಂಬುಧಿ ವಿಜಯನಂ ಕರೆದು ಮೈತ್ರಿಯಿಂದಾತನಂ ಕೂಡಿಸಿದನು || ||೩೧||
ಅರಸ ಕೇಳ್ಬಳಿಕುಳಿದಸೇನೆಯಂ ಸುತ ಸಹೋ |
ದರ ಬಂಧುವರ್ಗಮಂ ಸಚಿವ ಸಾಮಂತರಂ |
ಗುರು ಪುರೋಹಿತರಂ ಚಮೂಪರಂ ಚತುರಂಗವಗ್ಗಳೆಯ ಪಟುಭಟರನು ||
ಕರೆದು ಹರಿಪಾರ್ಥರಂ ಕಾಣಿಸಿ ನಗರದಿಂದೆ |
ತರಿಸಿದಂ ವಿವಿಧ ಭಂಡಾರದರ್ಥಂಗಳಂ |
ಪರಿಪರಿಯ ವಸ್ತುಗಳ ನಿಧಿ ಹಯ ವರೂಥಮಂ ಗೋಮಹಿಷಿ ಯುವತಿಯರನು||೩೨||
ಕಡೆಯ ಮಾತೇನವಂ ಸಪ್ತಪ್ರಕೃತಿಗಳಂ |
ತಡೆಯದೆಲ್ಲವನಿವಗರ್ಪ್ಪಿಸಿದನಾ ನಗರ |
ಪಡೆಯೊಳೈದಿರುತಿರ್ದ ಹಂಸಧ್ವಜಂ ಸಹಿತ ಪಾರ್ಥನಂ ತುರಗಮೊಡನೆ |
ಪಡೆಯ ಸನ್ನಾಹದಿಂ ಕಳುಹಿ ಮುಂದಕೆ ಹಯಂ |
ನಡೆಯಲಲ್ಲಿಯ ವಸ್ತುಗಳ್ವೆರಸಿ ದೇವಪುರ |
ದೊಡೆಯ ಲಕ್ಷ್ಮೀವರಂ ಗಜನಗರಿಗೈತಂದು ಭೂಪಾಲನಂ ಕಂಡನು || ||೩೩||

ಸಂಧಿ ೧೪ ಕ್ಕೆ ಪದ್ಯಗಳು ೭೧೩ ಕ್ಕೆ ಮಂಗಳಮಸ್ತು.

# ಹದಿನೈದನೆಯ ಸಂಧಿ.

ಸೂಚನೆ|| ತಣ್ಗದಿರನನ್ವಯದ ಪಾರ್ಥನ ತುರಂಗಮದು |
ಪೆಣ್ಗುದುರೆಯಾಗಿ ಪೆರ್ಬುಲಿಯಾಗಿ ಪಳಿಯಿಂತೆ |
ಕಣ್ಗೊಳಿಸುವಮಲಾಶ್ವಮಾಗಿಯಾಶ್ಚರ್ಯದಿಂ ಸ್ತ್ರೀರಾಜ್ಯಮಂ ಪೊಕ್ಕುದು ||

ವಿಸ್ತರಿಪೆನಿನ್ನು ಮೇಲ್ಕತೆಯನಾಲಿಸು ನೃಪತ |
ಮಸ್ತಕದ ಮೌಳಿ ಜನಮೇಜಯ ಧರಾನಾಥ |
ಹಸ್ತಿನಾಪುರಕೆ ಬಂದಸುರಾರಿ ಹಂಸಧ್ವಜನ ದೇಶದಿಂದೆ ತಂದ ||
ವಸ್ತುಗಳ ನವನಿಪತಿಗೊಪ್ಪಿಸಿದ ನಲ್ಲಿಯ ಸ |
ಮಸ್ತ ವೃತ್ತಾಂತಮಂ ವಿವರಿಸಿದ ನಿತ್ತ ಸುಭ |
ಟಸ್ತೋಮ ಸಹಿತರ್ಜುನಂ ಬಡಗ ಮುಖವಾಗಿ ತಿರುಗಿದಂ ತುರಗದೊಡನೆ || ||೧||

ಅಲ್ಲಿಂದ ಮುಂದೆ ನಡೆದುದು ಗ್ರೀಷ್ಮಕಾಲದೊ |
ಳ್ಸಲ್ಲಲಿತವಾಜಿ ಪಾರಿಪ್ಲವಕೆ ಭೂತಳದೊ |
ಳೆಲ್ಲಿಯುಂ ಕೆರೆತೊರೆಗಳೊರತೆ ಬರೆತುವು ನೀರ್ನೆಳಲ್ಗಳನರಸಿ ಪಾಂಥರು ||
ಘಲ್ಲಿಸುವ ಬೇಸಗೆಯ ಬಿಸಲಿಂದೆ ಮೂಜಗಂ |
ತಲ್ಲಣಿಸಿತಿಳೆಯ ಕಾಹಿಳಿದು ಪಾತಾಳ ದಹಿ |
ವಲ್ಲಭನ ಪಡೆವಣಿಯ ರುಚಿಗಳಾತಪದಂತೆ ಕಾಣಿಸದೆ ಮಾಣವೆನಲು || ||೨||

ಒಂದುಕಡೆ ಯೋಳ್ನೀಪಲೊಂದುಕಡೆ ಯೊಳ್ತಮಕೆ |
ನಿಂದು ಮರೆಯಾಗಿಪ್ಪರ್ದಿನ್ನಿದಂ ಕರಗಿಸುವೆ |
ನೆಂದು ಕನಕಾಚಲವನುರಿಪುವನೊ ತರಣಿ ಕಿರಣದೊಳೆನೆ ಬಿಸಿಲ್ಗರೆಯಲು ||
ಬೆಂದು ಬೆಂಡಾಗಿ ಕುಲಶೈಲಂಗಳಾಸರಿಂ |
ಕಂದರದ ಮೊಗದಿಂದೆ ಚಿಡುವಬಿಸುಸುಯ್ಯಲ |
ಬರ್ಂದಪ್ಪುದೆನಲ್ಕೆ ಝಳದಿಂ ಬಿಡದೆ ಬೀಸುತಿರ್ದುದು ಗಾಳಿ ಬೇಸಗೆಯೊಳು || ||೩||

ಅವನಿಯೊಳ್ಸಕಲ ಭೂಭೃತ್ಕುಲದ ಸೀಮೆಗಳ |
ನವಗಡಿಸಿ ಪೊಕ್ಕು ಸಿಬಿಳ ಪ್ರಾಣಿಗಳ್ಗೆ ತಾ |
ಪಪ ನೊವನಿಸುವ ದುರ್ಧರ ಗ್ರೀಷ್ಮರಾಜನ ನೆಗಳ್ದ ಚತುರಂಗಮೆನಲು ||
ರವಿಯ ಕಡುಗಾಯ್ಪುಗಳ್ತೀರ್ಕೈಸಲೊತ್ತರಿಸಿ |
ಕವಿದುವು ಬಿಸಿಲ್ಗುದುರೆಗಳ್ಕಾಯ್ದುರಿಯ ಕರಿ ಗ |
ಳವಧಿಯಿಲ್ಲದೆ ಮುಸುಕಿದುವು ಬಹಳ ತರುಗಳಿತ ದಳದಳಾಳಿಗಳಿಡಿದುವು || ||೪||

ಅರವಟ್ಟಿಗೆಯೊಳಿರ್ದು ನೀರೆರೆವ ತರಳೆಯರ |
ಬರಿವೇಟಕೆಳಸಿ ತಪಿಸುವ ಪಥಿಕರಂ ಬಯ |
ಲ್ದೊರೆಗಾಸೆಯಿಂ ಪರಿದು ಬಳಲುವ ಮೃಗಂಗಳಂ ಕೆರುಪಾಡದೊಳ್ಜೀದೊಳು ||
ಉರುವ ಕಾಂತೆಯರ ಕೊಡದ ಸೊಕ್ಕುದಕ್ಕೆಯೊ |
ಸುರುಗುವಧರಾಮೃತವ ನೀಂಟಿ ಸೊಗಸುವ ಸುಖಿಗ |
ಳಿರೆ ಬರೆವ ತನಿಬೇಸಗೆಯ ದಿನದೊಳಧ್ವರಾಶ್ವದ ಕೂಡೆ ಪಡೆ ನಡೆದುದು || ||೫||

ಅನುಸಾಲ್ವ ಪ್ರದ್ಯುಮ್ನ ವೃಷಕೇತು ಯೌವನಾ |
ಶ್ವನ ತನಯ ನೀಲಧ್ವಜ ಸಾರಂಗವಕ್ತ್ರವ |
ರನುಪತಿಗಳ್ಕಿಕ ಹಂಸಧ್ವಜನ ಸನ್ಯವಾದುದಕೆಮ್ಮಡಿಯೆನೆ ||
ತನತನಗೆ ಮುಂಕೊಂಡು ನಡೆದುದಾ ತುರಗದೊಡ |
ನನಿಬರ ಚತುರ್ಬಲಂ ಬಹಳ ಗಿರಿಪುರ ದೇಶ |
ವನ ಪಕ್ವ ಕೊಳ್ಳಂಗಳಂ ತುಳಿದು ಕಾಲದ ಘಟ್ಟಣೆಯಿಂತೆ ಸಮವಾಗಲು || ||೬||
ಹಯ ಧುತ್ತರಾಭಿಮುಖವಾಗಿ ಪಾರಿಪ್ಲವ ಧ |
ರಿಯೊಳ್ಬದಿ ಹಬ್ಬು ದಕೆಯಾಗಿ ಪ್ರಲಿಯಾಗಿ ನಿ |
ಶ್ರಯದಿಂದೆ ಪಾರ್ಥನಂ ಜೆಪರಿಸಿ ಮುರಾರಿಯ ಮಹಿಮೆಯಿಂದೆ ಮುನ್ನಿನಂತೆ ||
ನಿಯಮಿತ ಮಹಾತ್ಮನಾಪತ್ತಿನ ಲ್ಯಾಗ ಸಂ |
ಶಯದಿಂದೆ ಜನಮೇಜಯಂ ಮುನಿಪ ತಿಳಿಪು ನಿ |
ಶ್ಚಯದ ನೀತುರಗ ಮಿಂತಾದ ಕಥನವನೆಂದು ಬೆಸಗೊಂಡೊಡಿಂತೆಂದನು || ||೭||
ಧರಣಿಪತಿ ಕೇಳಾದೊಡಿನ್ನು ಪೂರ್ವದೊಳಿಂದು |
ಧರನಂ ಮನೋಭಾವದಿಂ ವರ್ಜಿಸುವೆನೆಂದು |
ಗಿರಿತನುಜೆ ತಪಕೆ ಪುಣ್ಯಾರಣ್ಯಮಾವುದೆಂ ದರಸಿಕೊಂಡೈತರಲ್ಕೆ ||
ಪರಿಶೋಭಿಸಿತು ಮುಂದೆ ಹಂಸ ಕಾರಂಡ ಮಧು |
ಕರ ಕೋಕ ಮಧುರ ಮೃದುತರ ಕಲ ಮದೋತ್ಕರ |
ಸ್ವರ ಕಮಲ ಕುವಲಯ ವಿರಾಜಿತಶ್ರೀಕರಂ ಪದ್ಮಾಕರಂ ಚೆಲ್ವಿನೆ || ||೮||
ಲಸದಮಲ ರತ್ನಸೋಪಾನದಿಂ ಮೀನದಿಂ |
ಬಿಸವನಾಸ್ವಾದಿಸುವ ಚಕ್ರದಿಂ ನಕ್ರದಿಂ |
ವೆಸೆವೆಸೆಗೆ ಬೀರ್ವ ತನಿಗಂಪಿನಿಂ ತಂಪಿನಿಂ ತೊಳಪ ಹಿಮಕರ ಕಾಂತದ ||
ಪೊಸ ಸಂಣಿಗೆಪ್ರೊಲಿಡಿದ ಪುಳಿನದಿಂ ನಳಿನದಿಂ |
ಮೊಸೆದು ಬಿನದಿಪ ಹಂಸಕೇಳಿಯಿಂ ದೋಳಿಯಿಂ |
ದೆಸೆವ ನೀರ್ವಕ್ಕಿಗಳ ಸಂಗದಿಂ ಭೃಂಗದಿಂದಾಕೊಳಂ ಕಣ್ಗೆಸೆದುದು || ||೯||
ತಳದೊಳೊಪ್ಪುವ ಪಸುಗೆಸಳ ರೋಚಿಯಿಂ ನಡುವೆ |
ತೊಳಪ ಕೆಂಪಳದ ದೀಧಿತಿಯಿಂದೆ ಮೇಲೆ ಕಂ |
ಗೊಳಿಪ ಹೊಂಗೇಸರದ ಕಾಂತಿಯಿಂದೆರಗುವ ಸಿತಾಳಿಯ ಮರೀಚಿಯಿಂದೆ ||
ಝೊಳಝೊಳಿಪ ಕೋಕನದ ಪಙ್ಕ್ತಿಗಳ ಬಣ್ಣ ಮು |
ಜ್ವಳದಿಂದ್ರಚಾಪ ದಾಕಾರಮಂ ಸಂತತಂ |
ತಳೆವಂತೆ ಕೊಳದೊ ಳಾರಾಜಿಸಿತು ತುಹಿನಗಿರಿರಾಜನಂದನೆಯ ಕಣ್ಗೆ || ||೧೦||
ನಿರುತಂ ಕುಮುದಶೋಭೆ ಸ್ತೈಮಿತ್ಯದಂತೆ ವಾ |
ನರಸೈನ್ಯದಂತೆ ಕಮಲೋದರೋದ್ಭಾಸಿ ಭಾ |
ಸುರ ಶುಕ್ಲಪಕ್ಷದಂ ತಹಿತಲ್ಪದಂತೆ ಕಪಿಸೇವಿತಂ ಗಗನದಂತೆ ||
ಧರಣಿಪಾಲಯದಂತೆ ಸುಮನೋಹರಂ ನಿಶಾ |
ಚರಸಂಘದಂತೆ ಪಾಲಾಕಾರ ಜನದಂತೆ |
ಹರಿಜನ್ಮಭೂಮಿ ಗೋಕುಲದಂತೆ ವನದಂತೆ ತತ್ಸರಂ ಕಂಗೊಳಿಸಿತು || ||೧೧||

ವನಮಾಲಿಯಂದದಿಂ ಪದ್ಮ ಪದ್ಮೆಯುವೋಲ್ಬ ।
ವನಕುಕ್ಷಿ ಭುವನಕುಕ್ಷಿಯ ತೆರದಿ ಹಂಸಲೋ ।
ಜನಕೋಘ ಹಂಸಲೋಚನಕೋಘಿಯಂತೆ ವರಚಕ್ರಿ ವರಚಕ್ರಿಯವೋಲು ॥
ತನಿಮಿಷಾಶ್ರಯಮೂರ್ತಿಯ ನಿಮಿಷಾಶ್ರಯಮೂರ್ತಿ ।
ಯೆನೆ ಕುವಲಯಾಧಾರಿ ಕುವಲಯಾಧಾರಿವೋ ।
ಲ್ವನಮಾಲಿಯೆನಿಸಿ ರಂಜಿಸುವ ಕಾಸಾರಮಂ ಸರ್ವಮಂಗಳೆ ಕಂಡಳು ॥ ॥೧೨॥

ಅಳಿಯುವರ್ಗವನಾದರಿಸುತೆ ಮಿತ್ರಸ್ನೇಹ ।
ಮೊಳೆ ಸಂದು ಸುತರಂಗಲೀಲೆಯಂ ಲಾಲಿಸುತೆ ।
ಕುಲಸದಭ್ಯುದಯಮಂ ನೆಲೆಗೆಯ್ದು ಕಾಂತಾನುಕೂಲರಮಣೀಯಮಾಗಿ ॥
ಲಲಿತ ಲಕ್ಷ್ಮೀನಿವಾಸಸ್ಥಾನಮೆನಿಸಿ ಮಂ ।
ಗಳ ವಿಭವ ಕಡೆಗೊಟ್ಟು ಸಕಲ ಸೌಭಾಗ್ಯಮಂ ।
ತಳೆದ ಸಂಸಾರಿಕನ ತೆರದಿಂದೆ ವಿಮಲಪದ್ಮಾಕರಂ ಕಣ್ಗೆಸೆದುದು ॥ ॥೧೩॥

ಕಳಹಂಸಮಾಕೀರ್ಣಮಾಗಿರ್ದು ಕಾಳಗದ ।
ಕಳನಲ್ಲ ವಿಷಭರಿತಮಾಗಿರ್ದು ಸರ್ಪಸಂ ।
ಕುಳಮಲ್ಲ ಕುಮುದಯುತಮಾಗಿರ್ದು ಖಳರಂತರಂಗದಾಕಾಶಮಲ್ಲ ॥
ತಳಿದುಳಿದು ಭಂಗಮಯಮಾಗಿರ್ದು ಮುರಿದ ನೃಪ ।
ದಳಮಲ್ಲ ಬಹುವಿಚಾರಸ್ಥಾನಮಾಗಿರ್ದು ।
ತಿಳಿಯಲ್ಕಪಪ್ರವ ಸ್ಥಳಮಲ್ಲೆನಿಸಿರ್ದುದಾ ವಿಮಲ ಸರಸಿ ಕಣ್ಗೆ ॥ ॥೧೪॥

ಆ ಸರಸ್ತಟದಲ್ಲಿ ಕಲ್ಪಿಸಿದಳಾಶ್ರಮ ನಿ ।
ವಾಸಮಂ ಭಕ್ತಿಯಿಂ ಭಜಿಸಿದಳಗೇಂದ್ರಜೆ ಸು ।
ಧಾಸೂತಿಮೌಳಿಯಂ ಮುಕ್ತಿದಂ ಶಂಭು ವರಮಂ ಕೊಟ್ಟನಿಲ್ಲಿನ್ನ ॥
ಮಾಸಲ ತಪಕ್ಕೆ ದಬ್ಬಾರೆನಿರಲೆಂದು ಬಳಿ ।
ಕೋಸರಿಸದಲ್ಲಿ ಚಿರಕಾಲಮಿರುತಿರ್ದಳು ।
ಲ್ಲಾಸದಿಂ ಧೂರ್ಜಟಿಯನಾರಾಧಿಸಿದಳೊ ತಾನೆಂಬ ತೆರದಿಂ ಬನದೊಳು ॥ ॥೧೫॥

ಇಂದುಮೌಳಿಯ ಪದಧ್ಯಾನಮಂ ಮಾಡುವಾ ।
ನಂದ ಮಿನ್ನೇತರತಿಶಯವೊ ಶಿವನಸೆವ್ಯಯೊ ।
ಳೊಂದಿರ್ದ ಸೌಖ್ಯಮಂ ಮರೆದು ಪಾರ್ವತಿ ತಪಸ್ವಿನಿಯಾಗಿ ತಿಳಿಗೊಳದೊಳು ॥
ನಿಂದನುದಿನಂ ಜಪ ತಪೋನಿಯಮ ಯೋಗಂಗ ।
ಳಿಂದೆ ಭಜಿಸಿದ ಳಂತರಾತ್ಮನಂ ಸಕಲ ಸುರ ।
ವೃಂದ ವಂದಿತ ಪಾದಪದ್ಮನಂ ಸುಜ್ಞಾನ ಸದ್ಮನಂ ಕಾನನದೊಳು ॥ ॥೧೬॥

ಬೀಸದು ಬಿರುಸುಗಾಳಿ ಬಿಸಿಯ ಬಿಸಿಲವನಿಯಂ ।
ಕಾಸದು ದವಾಗ್ನಿ ಪುಲ್ಗಳೊಳೊಂದನಾದೊಡಂ ।
ಜೀಸದು ಮುಗಿಲ್ಗಳತಿಭರದಿಂ ಸಿಡಿಲ್ಮಿಂಚುಗಳ ಕೂಡೆ ಪೆರ್ಮಳೆಯನು ॥
ಸೂಸದು ವಳೆದ ಪೂತಳಿರ್ಗಳಿಂಪಿನಸೊಂಪು ।
ಮಾಸದು ತರುಗಳಲ್ಲಿ ಪಣ್ಗಾಯ್ಗಳಂ ಬೀಯ ।
ಲೀಸದು ಸಮಸ್ತ ಋತುಸಮಯಂಗಳ್ ಚಲೇಂದ್ರತನುಜೆ ತಪಮಿರೆ ಬನದೊಳು ॥ ॥೧೭॥

ಅಂಚೆಗ ಳುಡುಗವು ಮಳೆಗಾಲದೊ ಳ್ಕೋಗಿಲೆ ಗ |
ಳಿಂಚರವ ನುಳಿದಿರವು ಮಾಗಿಯೊ ಳ್ಬೇಸಗೆಯೊ |
ಳುಂ ಚಿಗುರಿಡೆಳವು ಲ್ಮೃಗಂಗಳ್ಗೆ ಬೀಯುವಗಲದು ಚಕ್ರಮಿಥುನಮಿರುಳು ||
ಹೊಂಚದು ಪಗಲ್ಗೂಗೆ ಸಂಪಗೆ ಯಲರ್ಗಳಂ |
ಚಂಚರೀಕಂಗ ಳಡರದೆ ಮಾಣವೆಸೆವ ಕಮ |
ಲಂ ಚಂದ್ರನುದಯಕುತ್ಪಲ ಮಿನಕಿರಣಕೆಬಾಡದುಬನದೊಳುಮಿಯಿರಲ್ಕೆ || ||೧೮||
ಕಾಡಾನೆಗ ಳ್ಕೇಸರಿಗಳ ಮರಿಗಳ್ಗೆ ಮೊಲೆ |
ಯೂಡುವುವು ಪುಲ್ಲೆಗ ಳ್ಪೆರ್ಬುಲಿಗಳೊ ಳ್ಸರಸ |
ವಾಡುವುವು ಪಾವು ಮುಂಗುಲಿ ಗಳೊಡಗೂಡುವುವು ಮೂಷಕಂ ಮೇಲೆಬಿದ್ದು ||
ಕಾಡುವುವು ಮಾರ್ಜಾಲಮಂ ಮೊಲಂ ತೋಳನಂ |
ಬೇಡುವುವು ಮೇವುಗಳ ನೊಂದುಬಳಿಯೊ ಳ್ಗೂಡು |
ಮಾಡುವುವು ಪದ್ದು ಕಾಗೆಗಳಿಂತೊ ಸಾತ್ವಿಕ ಮಪರ್ಣೆಯ ತಪೋವನದೊಳು || ||೧೯||
ಪರಿಚರ್ಯೆಯಂ ಮಾಡುವುವು ಕೋಡಗಂಗಳಿ |
ರ್ದರ ಗಿಳಿಗಳಾಡುವುವು ಕೂಡೆ ಸರಸೋಕ್ತಿಯಂ |
ಬರಿಕೈಗಳಂ ನೀಡಿ ಪಣ್ಗಾಯಲರ್ಗಳಂ ದಂತಿಗಳ್ಕುಡುತಿರ್ಪುವು ||
ಪಿರಿದು ಬಯಸಿದ ವಸ್ತುಗಳ ನಿತ್ತಪುವು ಕಲ್ಪ |
ತರುಗ ಳಿಡೆಯಾಟ ದಾಸರ್ಗಳಂ ಕಳೆದಪುವು |
ಪರಿಮಳ ದಲರ್ಗ ಳಗಜೆಯ ತಪೋವನದೊಳಾವಾಸಮಾಗಿರ್ಪವರ್ಗೆ || ||೨೦||
ಅಷ್ಟಯೋಗಿನಿಯ ರಣಿಮಾದಿಗ ಳ್ವಿನುತ ಚೌ |
ಷಷ್ಟಿಕಲೆಗ ಳ್ಸಪ್ತಮಾತೃಗ ಳ್ಜಗದೊ ಳು |
ತ್ಕೃಷ್ಟ ನದಿಗ ಳ್ದಿವಾರಾತ್ರಿಗ ಳ್ತಿಥಿ ತಾರ ಕಾಪ್ಸರೋ ವಿಸರಂಗಳು ||
ತುಷ್ಟಿ ದಯೆ ಪುಷ್ಟಿ ಧೃತಿ ಮತಿ ಶಾಂತಿ ದಾಂತಿ ಕೃತಿ |
ನಿಷ್ಠೆ ನುತಿ ಗಳ್ಸಕಲ ವರಮಂತ್ರ ಶಕ್ತಿಗ |
ಳ್ಸೃಷ್ಟಿಯ ಸಮಸ್ತಾಭಿಮಾನ ದೇವತೆಯರಿರ್ದರು ದೇವಿಯಂ ಸೇವಿಸಿ || ||೨೧||
ಆ ವನದೊಳೆಸಗಿದ ಳ್ಪಾವನ ಚರಿತ್ರನ ಕೃ |
ಪಾವನಧಿಯಂ ವಿಶ್ವಭಾವನನ ಭಕ್ತ ಸಂ |
ಜೀವನನ ತ್ರಿಜಗಮಂ ಕಾವನ ಸುವಾಂಛಿತವ ನೀವನ ಹಿಮಾಂಶುಧರನ ||
ದೇವ ನರ ನಾಗ ದೈತ್ಯಾವನತ ಪಾದ ರಾ |
ಜೀವನ ಭವಾಂಭೋಧಿನಾವನ ದುರಿತ ವಿಪಿನ |
ದಾವನ ಕಲಿತ ವಿಷಗ್ರೀವನ ಶಿವನ ಮಹಾದೇವನ ಭಜನೆಯ ನಗಜೆ || ||೨೨||
ನಿಜನಿರ್ಮಲಿತ ರೂಪನಂ ಪೂರ್ವಪೂರ್ವ ನಂ |
ಗಜ ದಾನವಧ್ವಂಸಿಯಂ ಕಾಲಕಾಲನಂ |
ರಜನೀಶಕೋಟೀರನಂ ಭಕ್ತಭಕ್ತನಂ ಬಹಳ ತೇಜೋಮಯನನು ||
ಅಜಿನಾಂಬರನ ನಖಿಳ ದಿಕ್ಪಾಲ ಪಾಲನಂ |
ಭುಜಗ ಧರನಂ ಸಖೀಕೃತ ರಾಜ ರಾಜನಂ |
ಸುಜನ ರಕ್ಷಾಶೀಲನಂ ದೇವದೇವನಂ ಭಜಿಸಿದಳಗಜೆ ಬನದೊಳು || ||೨೩||

ಅಗರು ಚಂದನ ಸುಗಂಧಾಕ್ಷತೆಯ ಪರಿಮಳದ।
ಬಗೆಬಗೆಯ ಬಿರಿಮುಗುಳ ಮಂಜರಿಯ ಗುಗ್ಗುಳದ।
ಪೊಗೆಯ ಧೂಪದ ಬಹಳ ವರ್ತಿಗಳ ಕರ್ಪೂರ ನೀರಾಜನದ ಕಂಪಿನ॥
ಒಗುಮಿಗೆಯ ವಿವಿಧೋಪಹಾರದ ಸುವಾಸಿತದ।
ಮೊಗವಾಸ ದಮಲ ತಾಂಬೂಲದ ಪರಿಕ್ರಮದ।
ಸೊಗಸಿನ ಕೃತೋಪಚಾರಂಗಳಿಂ ದರ್ಚಿಸಿದ ಳಭವನಂ ಕಾತ್ಯಾಯನಿ॥ ॥೨೪॥
ಮೋಕ್ಷದಾಯಕಿ ಸಕಲ ಮಂತ್ರನಾಯಕಿ ಮಾಯೆ।
ಸಾಕ್ಷಾಜ್ಜಗನ್ಮಾತೆ ನಿಜಶಕ್ತಿ ತಾನೆಂಬ।
ದಾಕ್ಷಾಯಣಿಗೆ ತಪಮಿದೇಕೆಂದು ಪಂಕಜ ಭವಾದಿ ನಿರ್ಜರಮುಖ್ಯರು॥
ಆಕ್ಷೇಪಿಸಲ್ಕೆ ವಿಪಿನಮೊಳಿಂತು ಬಿಡದೆ ಫಾ।
ಲಾಕ್ಷನಂ ಧ್ಯಾನಿಸುತೆ ಗಿರಿಜೆಯಿರುತಿರ ಲೊರ್ವ।
ರಾಕ್ಷಸಂ ಕಾಂತಾರಮಂ ತಿರುಗುತೈತಂದು ಕಂಡನಾ ಪಾರ್ವತಿಯನು॥ ॥೨೫॥
ಹೈಮವತಿಯಂ ಕಾಣುತಭಿವಂದಿಸದೆ ಖಳಂ।
ಕೈಮಾಡುವಂಗಜನ ಪೂಗೋಲ ಗಾಯದಿಂ।
ಮೈಮರೆದು ಕಾತರಿಸಿ ಮುಂದುಗೆಟ್ಟಿದೆಯಾರಿ ಬೇಟದ ಕಟಕಿಗಳಿಂದೆ॥
ಐಮೊಗನ ರಾಣಿಯಂ ನುಡಿಸಿದೊಡೆ ಭೂಪ ಕೇ।
ಳ್ಮೈ ಮುಳಿದು ನೋಡಿದ ಳ್ಭುವನ ಮಾತೆಯ ಖತಿಯ।
ನ್ಮೈಮನಸ್ಯದೊಳುಳಿವ ರಾರಸುರ ನುರಿದು ಪೋದಂ ಕೂಡೆ ಬೂದಿಯಾಗಿ॥ ॥೨೬॥
ಬೆಂದು ಪೋದಂ ದಾನವಂ ಬಳಿಕ ದೇವಿ ಖತಿ।
ಯಿಂದೆ ನುಡಿದ ಳ್ಶಾಪರೂಪದಿಂ ದೀ ವನ।
ಕ್ಕಿಂದು ಮೊದಲಾಗಿ ಪುರುಷಪ್ರಾಣಿಗಳ್ಪೊಕ್ಕೊಡಾಗಳೇ ಸ್ತ್ರೀತ್ವಮವಕೆ॥
ಬಂದು ಸಮನಿಸಲಿ ತನ್ನಾಜ್ಞೆ ತಪ್ಪದೆ ನಡೆಯ।
ಲೆಂದು ಸಕಲ ಸ್ಥಾವರಾಧಿದೇವತೆಯ ರೊಡ।
ನಂದು ಸಾರಿದಳಲ್ಲಿ ಚಿರಕಾಲಮಿರ್ದು ಪೂರೈಸಿದ ಳ್ಕಲ್ಪಿತಪನು॥ ॥೨೭॥
ತನ್ನ ನರ್ಚಿಸಿದ ಗರ್ಭೇಪ್ಸಮಂ ಕುಡುವ ಸಂ।
ಪನ್ನೆ ವರಗೌರಿ ತಪದಿಂದೊಲಿಸ ಲೀಶಂ ಪ್ರ।
ಸನ್ನನಾದಂ ಕೆಲವುಕಾಲದಿಂ ಮೇಲೆ ಬಿಜಯಂಗೈದಳುತ್ಸವದೊಳು॥
ಉನ್ನತದ ಕೈಲಾಸಗಿರಿ ಶಿಖರಕಂದು ಮೊದ।
ಲಿನ್ನು ಮಾವನಕೆ ಪೊಕ್ಕೊಡೆ ಗಂಡು ಪೆಣ್ಣಹುದು।
ಪನ್ನಗ ಮೃಗಾದಿ ಪಶು ಪಕ್ಷಿಗ ಳ್ಮೊದಲಾದ ಜಂತು ಜಾಲಂಗಳೆಲ್ಲ॥ ॥೨೮॥
ರಾಜೇಂದ್ರ ಕೇಳಾಗ ಳಾವನಕೆ ಪೊಕ್ಕಲ್ಲಿ।
ರಾಜಿಸುವ ತಿಳಿಗೊಳದ ನೀರ್ಗುಡಿದು ಫಲುಗುಣನ।
ವಾಜಿ ಪೊರಮಟ್ಟು ಬಂದಾ ಗಳದು ಪೆಣ್ಗುದುರೆಯಾಗಿರ್ದುದೇವೇಳ್ವೆನು॥
ಸೋಜಗ ಮಿದೆಂದು ಸೈ ವೆರಗಾಗುತಿರ್ದುದೆ।
ಲ್ಲಾ ಜನಂ ಪಾಂಡವಂ ಕಂಡು ಶಿವಶಿವ ಪೊಸತ।
ಲಾ ಜಗದೊಳೀಕಥನಮೆಂದು ವಿಸ್ಮಿತನಾಗಿ ಕೃಷ್ಣನಂ ಧ್ಯಾನಿಸಿದನು॥ ॥೨೯॥

ಎಣಿಕೆಗೊಳುತಿರ್ದ ನಾ ಪಾರ್ಥನಂ ದಿತ್ತ ಹಿಂ |
ದಣ ಕೃತಯುಗದ ಮೊದಲ ಕಾಲದೊಳ್ಸಕಲ ಧಾ |
ರಿಣಿಯ ತೀರ್ಥಂಗಳಂ ಬಳಸಿ ಬರುತ ಕೃತ ವ್ರಣಾಖ್ಯಭೂಸುರ ನೊರ್ವನು ||
ಪ್ರಣುತ ಸಲಿಲ ಸ್ನಾನಕೊಂದು ಸರಕಿಳಿದು ವಾ |
ರುಣಮಂತ್ರಮಂ ವಾರಿಯೊಳ್ಜಪಿಸುತಿರ್ದ ನಾ |
ಕ್ಷಣದೊಳವನಂಘ್ರಿಯಂ ಬಂದು ಪಿಡಿದುದು ನೆಗಳ್ಬಿಗಿದು ದಂತಂಗಳಿಂದೆ || ||೩೦||
ತನ್ನ ಕಾಲ್ಪಿಡಿದು ಸಡುನೀರ್ಗೆಳೆವ ಜಂತುವಿದು |
ಪನ್ನಗನೊ ಮೀಣಸುರವಾಯೆಯೋ ಜಲದೊಳು |
ತ್ಪನ್ನ ಮತ್ಸ್ಯವೊ ಮಹಾಗ್ರಾಹವೋ ಶಿವಶಿವಾ ದುಷ್ಟಭಾವಿತಮಾಯ್ತಲಾ ||
ಇನ್ನಿದಕುಪಾಯಮೇನೆಂದು ಚಿಂತಿಸಿ ವಿಪ್ರ |
ನುನ್ನತ ತಪೋಬಲ ದೊಳಂಘ್ರಿಯಂ ಬಿದಿರಲ್ಕೆ |
ಛಿನ್ನಿಸದೆ ಬಿಗಿದಿರ್ದ ಬಲ್ಮೆಗಳ ದಂತಂಗಳುಡಿದು ವದನೇ ನೆಂಬೆನು || ||೩೧||
ಪುಡುವಿನೊಳು ಮಡವಿಡಿದ ನೆಗಳಂ ಬಲಾತ್ಕರಿಸಿ |
ಬಿಡಿಸಿಕೊಂಡೊಡೆ ಮುರಿದು ತಡಿಗಡರಿ ಕೋಪದಿಂ |
ನುಡಿದ ನುವಕಸ್ಥವಾಗಿರ್ದ ದೇವತೆಗಳ್ಗೆ ದುಷ್ಟಭಾವದ ಜಲಮಿದು ||
ಕಡು ಭಯಂಕರದಿಂದೆನಗೆ ತೋರಿ ತದರಿಂದೆ |
ಪೊಡವಿಗತಿ ಭೀತಿಯಂ ಮಾಡುವಂತಿಲ್ಲಿ ನೀ |
ರ್ಗುಡಿವ ಜೀವಿಗಳಿನ್ನು ಪುಲಿಯಾಗಲಿಂದು ಮೊದಲೆಂದು ಮುನಿ ಶಾಪಿಸಿದನು ||೩೨||
ಎಂದಾದುದ ಕೃತವ್ರಣನ ಶಾಪ ಮಾ ಸರಸಿ |
ಗಂದು ಮೊದಲಾಗಿ ಭೀಕರ ಮೆನಿಸುತಿರ್ಪುದಿಳೆ |
ಗೊಂದು ಜೀವಿಗಳು ಮುದಕವು ನೊಲ್ಲವದರೊಳುಗ್ರವ್ಯಾಘ್ರಮಪ್ಪಭಯಕೆ ||
ಅಂದು ಪೆಣ್ಗುದುರೆಯಾಗಿರ್ದ ವಿಜಯನ ವಾಜಿ |
ಬಂದು ಕೊಳನಂ ಪೊಕ್ಕು ನೀರ್ಗುಡಿದು ಪುಲಿಯಾಗಿ |
ಮುಂದುಗೆಡಿಸಿತು ಮತ್ತೆ ಫಲುಗುಣಂ ಕಂಡು ವಿಸ್ಮಿತನಾಗಿ ಚಿಂತಿಸಿದನು || ||೩೩||
ನೃಪನ ಹಯಮೇಧವಿನ್ನೆಂತಹುದೊ ಮೂಜಗದೊ |
ಳಪಹಾಸಕೆಡೆಯಾದುದಾರ ಶಾಪದ ಫಲವೊ |
ವಿಪರೀತಮಿದು ಶಿವಶಿವಾಯೆನುತೆ ನಡನಡುಗಿ ಪಾರ್ಥ ನತಿಭೀತಿಯಿಂದೆ ||
ಕಪಟದೊ ಳ್ಪಿಂತೆ ದುರ್ಯೋಧನಾದಿಗ ಳೆಸಗಿ |
ದುಪಹತಿಗಳಂ ತೆಗೆಸಿ ತಲೆಗಾಯ್ದ ಶ್ರೀ ಕೃಷ್ಣ |
ಕೃಪೆಮಾಡಬೇಹು ದೆನಗೆಂದು ಮುರವೈರಿಯುಂ ನೆನೆದು ಚಿಂತಿಸುತಿರ್ದನು || ||೩೪||
ಭಯನಿವಾರಣ ಸಕಲ ಸೃಷ್ಟಿಕಾರಣ ಜಗ |
ನ್ಮಯ ಜನಾರ್ದನ ದುಷ್ಟದೈತ್ಯಮರ್ದನ ನತಾ |
ತ್ರಯ ಧರಾಧರ ಕಮಲಸಂಭವಪ್ರೋದರ ಘನಶ್ಯಾಮ ಯದುಕುಲ ಲಲಾಮ ||
ಲಯವಿವರ್ಜಿತ ಪುಣ್ಯನಾಮ ನಿರ್ಜಿತ ದುರಿತ |
ಜಯ ಪರಾಜಿತ ಸರ್ವಲೋಕ ಪೂಜಿತ ಪದ |
ದ್ವಯ ಕೃಪಾಕರ ಕೃಷ್ಣ ಬಿಡಿಸು ಭೀಕರವನೆಂದರ್ಜುನಂ ಘೋಷಿಸಿದನು || ||೩೫||

ಪುಷ್ಕರ ಗದಾ ಶಂಖ ಚಕ್ರ ಶೋಭಿತ ಕರ ಚ ।
ತುಷ್ಕದಿಂ ಶ್ರೀವತ್ಸಕೌಸ್ತುಭಾಭರಣದಿಂ ।
ನಿಷ್ಕಳಂಕೇಂದುಮಂಡಲ ಸದೃಶವದನದಿಂ ನವ ಪೀತವಾಸದಿಂದೆ ॥
ಪುಷ್ಕಲಶ್ಯಾಮ ಕೋಮಲ ರಾಮಣೀಯಕ ವ ।
ಪುಷ್ಕಾಂತಿಯಿಂದೆಸೆವ ನಿನ್ನ ರೂಪೆರ್ದೆಯೊಳಿರೆ ।
ದುಷ್ಕಂಟಕದ ಭೀತಿಯೆನಗದೇಕೆಲೆ ದೇವ ಸಲಹೆಂದನಾ ಪಾರ್ಥನು ॥ ॥೩೬॥

ನಿನ್ನೊಂದು ಪೆಸರ ಪೋಲ್ವೆಯೊಳಂ ವಜಾಮಿಳಂ ।
ತನ್ನ ಪಾತಕಕೋಟಿಯಂ ಪರಿಹರಿಸಿಕೊಂಡ ।
ನಿನ್ನ ನೀನೆಂದು ನಂಬಿರ್ದ ನಿಜ ಶರಣರ್ಗೆ ಭಯಮುಂಟೆ ಮೂಜಗದೊಳು ॥
ಎನ್ನ ಭೀತಿಯನೀಗ ಬಿಡಿಸುವೊಡೆ ಕೃಪೆಯೊಳ್ಳು ।
ಸನ್ನಸಾಗಚ್ಯುತ ಮುಕುಂದ ಕೇಶವ ಕೃಷ್ಣ ।
ಪನ್ನಗಾರಿಧ್ವಜನೆ ಯೆನುತೆ ನರಹರಿಯ ನಾಮಂಗಳಂ ವಾಚಿಸಿದನು ॥ ॥೩೭॥

ಅದ್ಭುತ ವ್ಯಾಘ್ರಮಾ ದಶ್ವಮಂ ಕಾಣುತೆ ಮ ।
ಹದ್ಭಯದೊ ಳಸುರಾರಿಯಂ ಪಾರ್ಥ ನಿಂತೆಂದು ।
ಸದ್ಭಾವದಿಂ ಪ್ರಾರ್ಥಿ ಪನ್ನೆಗಂ ದೈವವಶದಿಂ ತನ್ನ ತಾನೆ ಬಳಿಕ ॥
ಉದ್ಭವಿಸಿ ತಾಹಯಕೆ ಮುನ್ನಿ ನಾಕಾರ ಮಾ ।
ಪದ್ಭೀತಿ ಪಾಂಡವ ಗೆತ್ತಣದು ಮುರರಿಪು ಸು ।
ಹೃದ್ಭಂಗಮಂ ಸೈರಿಸುವನ ಲ್ಲೆನುತ್ತೆ ಕಟಕದ ಮಂದಿ ಕೊಂಡಾಡಲು ॥ ॥೩೮॥

ಆಟವಿಕ ನೊಂದೊಂದು ಬಹುರೂಪಮಂ ತಾಳ್ದು ।
ನಾಟಕಪಸಾಡಿ ಮುನ್ನಿನ ತನ್ನ ರೂಪದಿಂ ।
ನೋಟಕರ ಕಣ್ಗೆ ಕಾಣಿಸುವಂತೆ ಪೆಣ್ಗುದುರೆಯಾಗಿ ಪುಲಿಯಾಗಿ ಮತ್ತೆ ॥
ಘೋಟಕೋತ್ತಮ ಮಾದುದೆಂದಿ ನಂದದೊಳಾ ನಿ ।
ಶಾಟ ಪಲ್ಲಣನಂ ಪೊಗಳ್ದ ದೆಲ್ಲಾ ಜನಂ ।
ಕೋಟಿ ಸಂಖ್ಯೆಯೊಳೊದರಿದುವು ನಿಖಿಲ ವಾದ್ಯಂಗಳುತ್ಸವದೆ ಪಾಳೆಯದೊಳು ॥೩೯॥

ಸೇವ್ಯಮಾಗಿರ್ದ ದೆಂದಿನ ಪೋಲ್ತುರಂಗಂ ಮ ।
ಹಾವ್ಯಾಘ್ರರೂಪಡಗಿ ತಸುರಾರಿ ಭಕ್ತರ ।
ಕ್ಲಾವ್ಯಸನ ಯೆಂಬುದಂ ಕಾಣಿಸಿದ ನಡಿಗಡಿಗೆ ಕಟಕದ ಸಮಸ್ತ ಜನರು ॥
ಈ ವ್ಯಾಳರಾಜಶಾಯಿಗೆ ಬಂದ ಬಂದ ನಾ ।
ನಾವ್ಯಥೆಯ ನಪಹರಿಸಿ ಪಾಂಡುಸುತರಂ ಪೊರೆವು ।
ದೇ ವ್ರತಹರಣೆಯೆಂದು ಕೃಷ್ಣನಂ ಕೊಂಡಾಡ ಲುಬ್ಬೇರಿದಂ ಪಾರ್ಥನು ॥ ॥೪೦॥

ಬಳಿಕ ಪಾರಿಪ್ಲವ ಚರಿತ್ರ ಯಿಂದಾಹಯಂ ।
ತಳರ್ದು ದತಿವೇಗದಿಂ ಬಹಳ ದೇಶಂಗಳಂ ।
ಕಳಿಕಳಿದು ಬರಿಯ ವನಿತಾಮಯದ ರಾಜ್ಯ ದೊಳಸೀಮೆ ಗುತ್ಸಾಹದಿಂದೆ ॥
ಫಲುಗುಣನ ಸೇನೆ ನಡೆದುದು ಕೂಡೆ ಭಾರದಿಂ ।
ದಿಳೆ ಮುಂದ ಕೊರ್ಗುಡಿಸಿ ಮುಗ್ಗಿಜೊಂ ದೆಸೆಯೊ ಳಿಜೊ ।
ಬ್ಬುಳಿಸಿದುವು ಮಂದಿ ಕುದುರೆಗಳೆಂಬತೆರದಿಂದೆ ಸಂಪಣಿಸಿ ತೇ ವೇಳ್ವೆನು ॥ ॥೪೧॥

ರಾಯ ಕೇಳಾ ರಾಜ್ಯದೊಳ್ಬರಿಯ ನಾರಿಯ |
ರ್ಪ್ರಾಯುತೆಯರಾಗಿ ಮಧುಪಾನಮತ್ತೆಯರಾಗಿ |
ಕಾಮಜ ಕಲಾಕೋವಿದೆಯರಾಗಿ ರೂಪ ಲಾವಣ್ಯ ವಿಲಸಿತೆಯರಾಗಿ ||
ಗೇಯ ನರ್ತನ ವೇಣು ವೀಣಾ ವಿನೋದ ರಮ |
ಣೀಯ ಭೋಗಾನ್ವಿತೆಯರಾಗಿ ಮತ್ತದರೊಳಾ |
ಸ್ತ್ರೀಯರೊರ್ವಳರಸಾಗಿರಲ್ಕವಳ ಕೆಳಗಾಗಿ ಬದುಕುವ ಭಾಗ್ಯದಿಂದೆ || ||೪೨||
ಅಲ್ಲಿಗೈದಿದ ಪುರುಷರೊರ್ವರುಂ ಜೀವಿಸುವ |
ದಿಲ್ಲ ಬಂದಾತನಂ ಕಂಡು ಲಲಿತಾಂಗಿಯ |
ರ್ಚಲ್ಲಿಗಂಗಳ ನೋಟಮಂ ಬೀರಿ ಸವಿನೋಟಮಂ ತೋರಿ ಮಿಗೆ ಸೊಗಸುವ ||
ಸೆಳ್ಳುಗುರ್ಗಳ ನೂರಿ ಮೆಲ್ಲಮೆಲ್ಲನೆ ಕೀರಿ |
ಉಲ್ಲಿಗ್ಗಯುತೆ ಮೀರಿ ಬಲ್ಮೊಲೆಗಳಂ ಸೇರಿ |
ಪುಲ್ಲಶರ ಕೇಳಿಯೊಳ್ಮದವೇರಿಸುವರವರ್ದುರುಳಹೆ ಪೊಲರಿವು ಜಾರಿ || ||೪೩||
ಸಮರತಿಯೊಳೊಮ್ಮೆ ಬೆರೆಸಿದ ಬಳಿಕ ವಿಷಯದಾ |
ಭ್ರಮೆಯಿಂದೆ ಮಗ್ನರಾಗಿಹ ರಾ ಪುರುಷರಲ್ಲಿ |
ರಮಿಸುವ ರಸರ ಕೂಡೆ ನಾನಾ ಪ್ರಕಾರದಿಂದಾ ಪಂಕರುಹಮುಖಿಯರು ||
ಕ್ರಮದೊಳೇತೆರದೆ ಸುಖಿಸುವರೊಂದು ತಿಂಗಳು |
ತ್ತಮ ಸುಗಂಧಾನುಲೇಪನದಿಂದೆ ಮೊಗವಾಸ |
ದಮಲ ತಾಂಬೂಲದಿಂ ಮಧುರ ಮಧುಪಾನದಿಂದೆಸೆವ ಸಂಯೋಗದಿಂದೆ || ||೪೪||
ವಿಧವಿಧ ದೊಳೆಸೆವ ಕುಸುಮೋತ್ಕರದ ಪರಿಮಳದ |
ಮಧುರಾಸವಕೆ ತನ್ಮ ಮುಖವಾಸ ದೊಳ್ಗಂಪಿ |
ನಧರ ದಿನಿದಂ ಬೆರೆಸುವಂತೆ ಮೊಗವಿಟ್ಟು ಪೊಂಬಟ್ಟಲೊಳ್ಸವಿದು ಮಿಕ್ಕ ||
ಮಧುವಂ ಮದಿರನೇತ್ರದಿಂ ನೋಡಿ ನಸುನಗೆಯ |
ಸುಧೆಯ ನೊಯ್ಯನೆ ಸೂಸಿ ಸರಸದಿಂ ದಾವರಿಸಿ |
ವಿಧುಬಿಂಬ ವದನೆಯ ಕೊರ್ಟ್ಟರೀಂಟುವ ಸೊಗಸಿಗೆಳಸದವರಾರಿಳೆಯೊಳು || ||೪೫||
ಪೊಂಬಟ್ಟಲೊಳ್ಕ್ಷೀವಿ ದಾಸವದ ರುಚಿ ಗಿರ್ವ |
ರುಂ ಬಿಡದೆ ಮೊಗವಿಟ್ಟಿರಲ್ಕದರೊಳೆಸೆವ ಪಡಿ |
ಬಿಂಬ ದಾಸನದ ಭಾವಂಗಳಿಂ ಕಾಣು ತನ್ಯೋನ್ಯ ಸಂ ಪ್ರೀತಿಯಿಂದೆ ||
ತುಂಬಿರ್ದ ಚಷಕ ಮಧು ತೀರಲ್ಕೆ ಬಯಲಪ್ಪು |
ದೆಂಬ ಶಂಕೆಯೊಳೊಯ್ಯನೊಯ್ಯ ನಾಸ್ವಾದಿಸಿ ವಿ |
ಳಂಬನಂ ಮಾಡುವ ರಮಂತೊ ಪುರುಷ ಸ್ತ್ರೀಯರೊಂದಾಗಿ ಸವಿವಸೊಗಸು|| ||೪೬||
ಕನಿಸುವ ಮೋದನವ ನೆಸೆವ ರತಿಕೇಳಿಯೊ |
ಳ್ದನಿಸುವ ಜೀಂಮಟಿಯ ತನಿರಸವ ನಾಸರಂ |
ತನಿಸುವ ಬರ್ಲ್ಮೊಲೆಯೊಳೊತ್ತಿ ಬಿಗಿಯಪ್ಪಿ ದನಿಗೈವ ಪಾರಿವ ದಂತಿರೆ ||
ರಮಿಸುವ ಕಂಠದೊಳ್ಬಂಧಗಳ ಬಗೆಯ ನನು |
ಭವಿಸುವ ಕೂಟದೊಳ್ಮನಮುಳುಗಿ ಸೌಖ್ಯದಿಂ |
ಪ್ರವಿಸುವ ಕಾಮಕಲೆ ಯರಿದಂಗನೆಯರಲ್ಲಿ ದೊರೆಕೊಂಡಪುರುಷರೊಡನೆ || ||೪೭||

ಮರಣ ಮಹುದೆಂ ದರಿದು ನಡುವೆ ಮುರಿ ದೊಲ್ಲದನ|
ಚರಣ ಕೆರಗುವ ಟೊಡಂಬಡಿಸುವ ದೈರ್ನ್ಯದಿಂ |
ಕರುಣಭಾವಂಗಳಂ ತೋರುವ ನಿರ್ಗರಿದೊಡೆ ಚೀರುವ ಘಾರ್ತಿಸುವರು ||
ಅರುಣಾಧರದ ಚುಂಬನವನಿತ್ತು ಕರಜ ಪ್ರ|
ಹರಣದಿಂ ಕಲೆಗಳಂ ತುಡುಕಿ ಸೊಗಸಂ ಬಲಿದು |
ಪರಣ ಮಳಿವಲ್ಲಿ ಪರಿಯಂತರಂ ಬಿಡರವನ ಸಲ್ಲಿಯ ವಿಷಾಂಗನೆಯರು || ||೪೮||
ಅಚ್ಚಸಂಪಗೆಯಲ ಗ್ಗೆರಗಿ ದಾರಡಿಯಂತೆ |
ಮೆಚ್ಚಿಪುಡಿವಂ ಮಾಸಮಾತ್ರ ಮಾಗ ಲ್ಕವಂ |
ಕಿಚ್ಚಿನೊಳ್ಪುಗುವ ಳವಳಲ್ಲದೊಡೆ ಗರ್ಭಮಂ ಧರಿಸಿ ಪೆಣ್ಣಂ ಪಡೆವಳು ||
ಪೆಚ್ಚಿರ್ಪರಂತಲ್ಲ ನಾರಿಯ ರ್ಬ್ಬಳಿಕ ಬಂ|
ದಚ್ಚರಿಯ ನರ್ಜುನಂ ಕೇಳ್ದಾಗ ತನ್ನ ಪಡೆ|
ಗೆಚ್ಚರಿಕೆಯಾಗಿರ್ಪುದೆಂದೊರೆದು ಕೂಡೆ ಪಾಳಿಯದೊಳಗೆ ಸಾರಿಸಿದನು || ||೪೯||
ವಿಷಕನ್ನಿಕೆಯ ರಿವ ರ್ಕಂಡಮಾತ್ರದೊ ಳಾ ಕ|
ರುಷಣಮಂ ಮಾಡುವ ರ್ಕೈ ರೆಸಿದೊಡೆ ಪುರುಷ ನಾ|
ಯುಷವ ನಪಹರಿಪ ರಿದು ನಿಚ್ಚಯಂ ನೀವಿಲ್ಲಿ ಮರೆದಾದೊಡಂ ಮನದೊಳು ||
ವಿಷಯಕೆಳಸದೆ ಬುದ್ಧಿವಂತರಾಗಿಹುದೆಂದು |
ವೃಷಕೇತು ಮೊದಲಾದ ವೀರರ್ಗೆ ಪೇಳು ತ ನಿ|
ಮಿಷ ನಗರದೊಡೆಯ ಲಕ್ಷ್ಮೀಪತಿಯ ಮೈದುನಂ ಕಟಕ ದೊಳ್ಸಾರಿಸಿದನು || ||೫೦||

ಸಂಧಿ ೧೫ ಕ್ಕೆ ಪದ್ಯಗಳು ೭೬೩ ಕ್ಕೆ ಮಂಗಳಮಸ್ತು.

# ಹದಿನಾರನೆಯ ಸಂಧಿ.

ಸೂಚನೆ|| ಸ್ತ್ರೀರಾಜ್ಯದೊಳ್ಪ್ರಮಿಳೆಯ ನೊಡಂಬಡಿಸಿ ವಿ|
ಸ್ತಾರಮಾಗಿರ್ದ ಬಹುದೇಶಂಗಳಂ ತೊಳಲಿ |
ಘೋರ ಭೀಷಣ ದೈತ್ಯನಂ ಮುರಿದು ಫಲುಗುಣಂ ಮಣಿಪುರಕೆ ನಡೆತಂದನು ||

ಕೇಳವನಿಪಾಲ ಕುಲತಿಲಕ ತುರಗದ ಕೂಡೆ |
ಪಾಳಿಯಂ ತೆರಳಿ ಬಂದಲ್ಲಿ ಬಿಟ್ಟರ್ಜುನಂ |
ಪೇಳಿದಂತಿರುತಿರ್ದುಪನ್ನಗಂ ಕುಮರ ತನ್ನಿಚ್ಛೆಯಿಂ ಪೈದೆ ಕಂಡು ||
ಫಾಳಪಟ್ಟದ ಲೇಖನವನೋದಿಕೊಂಡು ನೀ|
ಲಾಳಕೆಯರಾಗ ನಡೆತಂದು ಕೈಮುಗಿದು ಪ್ರ|
ಮಿಳೆ ಯೆಂಬರಸಾಗಿಹ ಸ್ತ್ರೀಶಿರೋಮಣಿಗೆ ಸಂಭ್ರಮದೊಳಿಂತೆಂದರು || ||೧||
ಶಶಿಕುಲೋದ್ಭವ ಯುಧಿಷ್ಠಿರ ನೃಪನ ಕುದುರೆ ಗಡ|
ವಸುಧೆಯೊಳಿದಂ ಬಲ್ಲಿದ ರ್ಕಟ್ಟಿದೀಕು ಗಡ|
ವಿಸೆಯೊಳಿದ ಕರ್ಜುನನ ಕಾಪಿನಾರೈಕೆ ಗಡ ಪಿಡಿದೊಡೆ ಬಿಡಿಸುವರ್ಗಡ ||
[illegible]|
[illegible]|
[illegible] || ||೨||

ಕಣ್ಣ ಹೊಳಹಿನ ಚಪಳೆಯರ ಕುರುಳಿ ಲಕ್ಷದಿಂ |
ತಣ್ಣನೊಳೆ ಯಲಸ ಗಮನೆಯ ರಾನೆಲಕ್ಷದಿಂ |
ಹುಣ್ಣಿಮೆಯ ಶಶಿಯಂ ತೆಸೆವ ಬಟ್ಟಮೊಗದ ಸೀರೆಯರ ರಥಲಕ್ಷದಿಂದೆ |
ಸಣ್ಣ ನಡುವಿನ ಸೊಕ್ಕುಜೌವನದ ಪೊಸ ಮಿಸುನಿ |
ವಣ್ಣ ದಂಗದ ಬಾಲೆಯರ ಮೂರುಲಕ್ಷದಿಂ |
ಸೆಣ್ಣ ಪಳವ್ಯದೆ ಜೋಡಿಸಿತು ಪಾರ್ಥನ ಸಮರಕಾ ಪ್ರಮೀಳೆಯ ಸುತ್ತಲು || ||೩||
ತೆಗೆದುಟ್ಟ ಚಲ್ಲಣದ ಬಿಗಿದ ಮೊಲೆ ಗಟ್ಟುಗಳ |
ಪೊಗರುಗುವ ವೇಣಿಗಳ ಮೃಗಮದದ ಬೊಟ್ಟುಗಳ |
ತಿಗುರಿ ದನುಲೇಪನದ ಮಗಮಗಿಪ ಕಂಪುಗಳ ಝಗಝಗಿಸು ವಾಭರಣದ ||
ನಗೆಮೊಗದ ಮಿಂಚುಗಳ ದೃಗುಯುಗದ ಕಾಂತಿಗಳ |
ಮಿಗೆತೊಳಗುವಂಘ್ರಿಗಳ ಸೊಗಯಿಸುವ ಬಾಹುಗಳ |
ಬಗೆಬಗೆಯ ಕೈದುಗಳ ವಿಗಡೆಯ ರ್ನೆರೆದು ಕಾಳಗಕೆ ಮುಂಕೊಳುತಿರ್ದರು || ||೪||
ಮಂದಗತಿಯಿಂದೆ ನಳಿತೋಳಿಂದೆ ಕುಂಭ ಕುಚ |
ದಿಂದೆ ಜೌವನದ ಮದದಿಂದೆ ಛದ್ಮಾಕಾರ |
ದಿಂದೆ ನವ ಕನಕಮಣಿ ಬಂಧನಿಗಳಂಗಳಿಂ ಭೃಂಗಾಳಕಂಗಳಿಂದೆ ||
ಸಿಂದೂರದಿಂದ ವಿರಾಜಿಸುವ ಸೀಮಂತ |
ದಿಂದೆ ಮಂಜುಳ ಕಿಂಕಿಣಿಗಳ ಕಾಂಚೀದಾಮ |
ದಿಂ ದೆಸೆವ ಪೆಣ್ಗಳಾನೆಗಳ ಮೇಲ್ವೈತಂದ ರವರಾಯುತಂಗಳಿಂದೆ || ||೫||
ಸ್ಫುರದುತ್ಕಟಾಕ್ಷದಿಂ ಲಲಿತೋರು ಯುಗದಿಂದೆ |
ಗುರು ಪಯೋಧರ ವಿಜಿತ ಚಕ್ರಶೋಭಿತದಿಂದೆ |
ಪರಿಲುಳಿತ ಚಾಪಲತೆಯಿಂ ಪ್ರಣಯ ಕಲಹ ದೊ ಳಗಲ್ದಿನಿಯರಂ ಜಯಿಸುವ ||
ವರ ಮನೋರಥದೊ ಳೈದುವ ಕಾಮಿನಿಯ ರೀಗ |
ನರನ ಸಂಗರಕೆ ಪೊಂದೇರ್ಗಳ ನಡರ್ದು ಬರು |
ತಿರೆ ಚಿತ್ರಮೆಂದು ಸಲೆ ನೋಡುತಿರ್ದರು ಸಕಲ ಪರಿವಾರ ದೊಳ್ವೀರರು || ||೬||
ಚಂಚಲಾಕ್ಷಿಯರ ತಳತಳಿಪ ಕಡೆಗಣ್ಣ ಕುಡಿ |
ಮಿಂ ಚವರಡರ್ದ ತೇಜಿಗಳ ದೂವಾಳಿಯಂ |
ಮುಂಚಿದುವು ನಳಿತೋಳ್ಗಳಿಂ ಜಡಿದು ಝಳಪಿಸುವ ಕೈದುಗಳ ದೀಧಿತಿಗಳು ||
ಹೊಂಚಿದುವು ವಜ್ರಮಣಿ ಭೂಷಣದ ಕಾಂತಿಯಂ |
ಪಂಚಬಾಣ ಪ್ರಯೋಗ ದೊ ಳನೇಕಾಸ್ತ್ರ ಪ್ರ |
ಪಂ ಚಡಗಿ ತೆಸೆವ ಸಿಂಗಾಡಿಗಳ ಸವರ ಪುರ್ಬಿನ ಗಾಡಿಗಳ್ಮಿಕ್ಕುವು || ||೭||
ಲೀಲೆ ಮಿಗೆ ಪೆಣ್ದಳಂ ಬಂದು ವಿಜಯನ ಪಡೆಯ |
ಮೇಲೆ ಬಿದ್ದುದು ಕರಿ ತುರಗ ರಥ ಪದಾತಿ ಗಳ |
ಸಾ ಲೆಸೆಯೆ ಸಂದಣಿಸಿ ನಾನಾಪ್ರಕಾರದಿಂ ಕೈದುಗಳ ಮಳೆಗರೆಯುತೆ ||
ಬಾಲಾರ್ಕ ಬಿಂಬಮುಂ ಶಶಿಮಂಡಲಮು ಮೇಕ |
ಕಾಲದೊ ಳ್ಮೂಡಿ ಬರ್ಪಂತೆ ಪೊಂದೇರೊ ಳ್ಪ್ರ |
ಮೀಳೆ ಮುಖಕಾಂತಿ ಕಳಕಳಿಸೆ ನಡೆತರುತಿರ್ದ ಳರಸು ಮೋಹರದ ನಡುವೆ || ||೮||

ಜಳಿಕಾ ಪ್ರಮೀಳೆ ಪಾರ್ಥನ ಮೋಹರಕೆ ತನ್ನ |
ವಳಸಹಿತ ನಡೆತಂದು ಕಂಡ ಳುನ್ನತ ಕಪಿಯ |
ಪಳವಿಗೆಯ ಮಣಿರಥದೊ ಳೊಪ್ಪುವ ಕಿರೀಟಿಯಂ ನಗುತೆ ಮಾತಾಡಿಸಿದಳು ||
ಫಲುಗುಣಂ ನೀನೆ ನಿನ್ನಶ್ವಮಂ ತಡೆದೆ ನಾಂ |
ಛಲವೊ ವಿನಯವೊ ಬಿಡಿಸಿಕೊಳ್ವ ಬಗೆಯಾವು ದಿ |
ನ್ನಳವಿ ಯೊಳ್ಕಾಣಬಹು ದೆನುತೆ ಬಿಲ್ದೆಗೆಯ ಜೇಗೆಯ್ಯೆ ನರ ನಿಂತೆಂದನು || ||೯||

ನಾರಿಯೊಳ್ಕಾಳಗವೆ ತನಗಕಟ ಕಡುಗಿ ಮದ |
ನಾರಿಯೊಳ್ಕಾದಿ ಮುಗ್ಗಡದ ನಿಜ ಕಾರ್ಮುಕದ |
ನಾರಿಯೊ ಳ್ಕಣೆಯಂ ತುಡುವೆನೆಂತೊ ಶಿವಶಿವಾ ಪರ್ಯಂಕಮಂ ಸಾರ್ದೊಡೆ |
ನೀರಜ ಶರಾಹವ ದೊಳೊದಗುವೊಡೆ ಕಡುಚದುರೆ |
ನೀ ರಣದೊಳಾಳ್ತನವ ನೆನ್ನೊಡನೆ ತೋರಿದೊಡೆ |
ನೀರಸವೆನಿಸದೆ ಪೇಳೆಂದು ಕುಂತೀಸುತಂ ನುಡಿದೊಡವಳಿಂತೆಂದಳು || ||೧೦||

ಪರಿಯಂಕಮಂ ಸಾರ್ದ ಡಂಗಜಾಹವದೊಳ ಗ |
ಪರಿಮಿತ ಸುಖಾವಹದ ಸುರತ ತಂತ್ರದ ಕಲೆಯ |
ಪರಿವಿಡಿಗಳಂ ತೋರಿಸುವೆ ನೀಗಳೆನ್ನಂ ವರಿಸುವು ದಲ್ಲದೊಡೆ ನಿನ್ನ ||
ತುರಗಮಂ ಬಿಡುವುದಿ ಲ್ಲದಟಿಂದೆ ಕಾದು ವಾ |
ತುರಮುಳ್ಳೊ ಡಿದಿರಾಗಿ ನೋಡು ಸಾ ಕೆನ್ನೊ ಳೆನು |
ತುರವಣಿಸು ತವಳೆಚ್ಚೊ ಡರ್ಜುನಂ ಸೈರಿಸು ತ್ತೆಳೆನಗೆಯೊ ಳಿಂತೆಂದನು || ||೧೧||

ವಿಷಯೋಪಭೋಗಮಂ ಬಯಸಿ ನಿನಗಾ ನೊಲಿಯೆ |
ವಿಷಯೋಗಮಾಗದಿರ್ಪುದೆ ಪೇ ಳ್ಪುರುಷ ರೀ |
ವಿಷಯೋದ್ಭವ ಸ್ತ್ರೀಯರಂ ಜೆರೆಸಿ ಬಾಳ್ದಪರೆ ಸಾ ಕದಂತಿರಲಿ ನಿನಗೆ ||
ರುಷಭಾಯಿತ ದೊಳಾಂತ ಭಟರೊ ಳ್ಪಳಂಚುವ ಪ |
ರುಷಭಾಷಿತವ ನಬಲೆ ನನ್ನೊಳಾಡುವುದು ಪೌ |
ರುಷ ಭಾವಮಲ್ಲ ಬಿಡು ವಾಜಿಯಂ ಪೆಣ್ಗೊಲಿ ಗಳುಕುವೆನೆಂದಂ ಪಾರ್ಥನು ||೧೨||

ಕಾದ ಲಂಬಿಂದೆ ಕೊಂದಪೆ ನೀಗ ಳಲ್ಲದೊಡೆ |
ಕಾದಲಂ ನೀನಾಗೆ ಸುರತ ಮೋಹನಕೆ ಪ |
ಕ್ಕಾ ದಲಂಪಿನ ಸೌಖ್ಯಮಂ ತಳೆವ ಬಳಿ ಕಹುದು ಮೃತಿ ತಪ್ಪದೆಂತು ಮಳಿವು ||
ಸಾದರದೊ ಳೆನ್ನೊಡನೆ ರಮಿಸುವುದು ನಿನಗೆ ಸೊಗ |
ಸಾದರವ ಲನುಕರಿಸು ಮೇ ಣ್ಕಲಹ ಕೃತವೆ ಲೇ |
ಸಾದ ರವಟಿಂ ತೋರಿಸೆಂ ದಾ ಪ್ರಮೀಳೆ ಪಾರ್ಥನ ಮೇಲೆ ಕಣೆಗರೆದಳು || ||೧೩||

ಹಿಂದೆ ಶೂರ್ಪಣಖಿ ಲಕ್ಷ್ಮಣನ ಸಂಡಲೆದು ಪಡೆ |
ದಂಡಮಂ ನೆನೆ ದವಳ ನೀಕ್ಷಣವೆ ಭಂಗಿಸುವೆ |
ನೆಂದು ಸಮ್ಮೋಹನಾಸ್ತ್ರವ ನುಗಿದು ಗಾಂಡೀವದೊ ಳ್ಪೂಡಿ ಪಾರ್ಥಸಿಸಲು ||
ಮಂದಸ್ಮಿತದೊಳದಂ ಕಡಿದು ಬಿಲ್ದಿರುವ ನೆ |
ಜ್ಜೆಂದುಮುಖಿ ಶಕ್ರಸುತನಂ ನೋಯಿಸಲ್ಕೆ ಮ |
ತ್ತೊಂದು ಕೆಡೆಯಂ ಚಾಪಕೇರಿಸಿ ನರಂ ಪೂಡಿದಂ ದಿವ್ಯ ಮಾರ್ಗಣವನು || ||೧೪||

ಆ ಸಮಯದೊಳ್ನುಡಿದು ದಶರೀರವಾಕ್ಯ ಮಾ।
ಕಾಶ ದೊಳ್ಬೇಡಬೇಡೆಲೆ ಪಾರ್ಥ ಹೆಂಗೊಲೆಗೆ।
ಹೇಸದೆ ಮಹಾಸ್ತ್ರಮಂ ತುಡುವೆ ನೀಂ ಮುಳಿ ದಯುತ ವರ್ಷಮಿ ನ್ನಿವಳಕೂಡೆ ॥
ಬೇಸರದೆ ಕಾದಿದೊಡೆ ತೀರ ಲರಿಯದು ಮನದ।
ವಾಸಿಯಂ ಬಿಟ್ಟು ವರಿಸೀಕೆಯಂ ಸತಿಯಾಗೆ।
ಲೇಸಹುದು ಮುಂದೆ ನಿನಗೆಂದು ನಿಡುಸರದಿಂದೆ ಸಕಲ ಜನಮುಂ ಕೇಳ್ವೊಲು ॥೧೫॥

ಆಲಿಸಿದ ನಶರೀರವಾಣಿಯಂ ಪ್ರಾಡಿರ್ಪ।
ಕೋಲ ನೊಯ್ಯನೆ ಶರಾಸನದಿಂದ ನಿಳಿಪಿದಂ।
ಮೇಲಣ ವಿಚಾರಮಂ ಚಿತ್ತದೊ ಳ್ತಿಳಿದ ನಾಳೋಚಿಸಿದ ನಾಪ್ತರೊಡನೆ ॥
ಆ ಲಲನೆಯಂ ತನ್ನೆಡೆಗೆ ಬರಿಸಿಕೊಂಡು ತ।
ತ್ಕಾಲೋಚಿತದೊ ಳೊಡಂಬಡಿಸಿ ಕೈವಿಡಿದ ನಸು।
ಕೂಲೆಯಾಗಿರೆ ಬಳಿಕ ನಸುನಗುತೆ ವಿನಯದಿಂ ಕಲಿಪಾರ್ಥನಿಂತೆಂದನು ॥ ॥೧೬॥

ಕಣ್ಣಳವಿದ ಲ್ಲಬಲೆ ಕೇ ಳ್ದೀಕ್ಷೆಗೊಂಡಿರ್ಪ।
ಸಣ್ಣದೇವಂ ತಾನು ಮನ್ನೆಗಂ ವ್ರತಿಯಾಗಿ।
ಪೆಣ್ಣೊ ಳ್ಬೆರೆಯೆನೆಂದು ಪೊರಮಟ್ಟೆ ನಬ್ದರಕ್ಕೆಗೆ ಮುಂದೆ ಗಜಪುರದೊಳು ॥
ಪಣ್ಣುವಬ್ದರಕೆ ನೀಂ ಬಂದು ಕನ್ನೈದಿಲೆಯ।
ಬಣ್ಣದ ಮುರಾರಿಯಂ ಕಂಡು ವಿಷವಧುತನದ।
ತಿಣ್ಣಮಂ ಕಳೆ ದೆನ್ನೊಳೊಡಗೂಡು ಸೌಖ್ಯ ಮಹುದಲ್ಲಿ ಗೈತಹುದೆಂದನು ॥ ॥೧೭॥

ಎನಲಾ ಪ್ರಮಿಳೆ ಪಾರ್ಥನ ಮಾತಿಗೊಪ್ಪಿ ಕರ।
ವನಜಮಂ ನೀಡಿ ಸಂಬುಗೆಗೊಂಡು ಕುಮರಿಯಂ।
ಮನೆಯಿಂ ತರಿಸಿ ಕೊಟ್ಟು ತನ್ನಾಲಯದೊಳಿರ್ದ ವಿವಿಧರತ್ನಾಳಿಗಳನು ॥
ಜನಪದದೊಳಿರ್ದ ವಸ್ತುಗಳೆಲ್ಲಮಂ ಕೊಂಡು।
ವನಿತೆಯರ ಮೋಹರಂ ಬೆರೆಸಿ ಪೊರಮಟ್ಟು ಯಮ।
ತನಯನಂ ಕಾಣ್ಬ ಕಡುತವಕದಿಂ ಬಂದ ಳಿಭನಗರಿ ಗತಿ ಸಂಭ್ರಮದೊಳು ॥೧೮॥

ಗಜನಗರಿಗಾಕೆಯಿಂ ಕಳುಹಿ ಕುಮರಿಯ ಕೂಡೆ।
ವಿಜಯನೈತರೆ ಮುಂದೆ ದೇಶಂಗ ಳಜ ಮನುಜ।
ಗಜ ಗೋ ಶ್ವ ಮಹಿಷಾದಿ ನಿಕರಂಗಳಿಂದೆ ಪೂರಿತನಾಗಿ ಕಂಗೊಳಿಸಲು ॥
ಕುಜಕುಜಂಗಳ ಪ್ರೊಸದೊ ಳತಿಸೂಕ್ಷ್ಮ ಜೀವ ರಂ।
ಬುಜಸುತ್ರ ನುದಯ ಕುದ್ಭ ಸಿಸಿ ಸುಸ್ವಾಸ್ತ್ಯ ದೊ।
ಸ್ನಿಜದ ಜೌವನದಿಂದೆ ಬಾ ಳ್ದಸ್ತ್ರಮಯ ಕಳಿವೃತಿಕೆ ಕಂಡು ಬೆರಗಾದನು ॥ ॥೧೯॥

ಮತ್ತೆ ಮುಂದೈದುವ ತುರಂಗಮದ ಕೂಡೆ ನಡೆ।
ಯುತ್ತೆ ಬರೆ ಮೊಸಬುಡಿಗೆಯವರ ಸಕ್ತ್ರಂಗಿಗಳ।
ನೊ ತ್ತಿ ಬಂದವರ ನೊಂದು ಕಾಲವರ ನೊಂದು ಕಣ್ಣವರ ಮೂರಡಿಗಳವರ ॥
ಉತ್ತುಂಗ ನಾಸಿಕದವರ ಮೂರು ಕಣ್ಣವರ।
ನೆತ್ತಿಗೊ ಬೆರತುಕ್ಕವರ ನೊಂದು ಕೋಡವರ।
ಕತ್ತೆ ಮೊಗ ಕುದುರೆ ಮೊಗದವರ ದೇಶಂಗಳಂ ಕಂಡನಾ ಕಲಿಪಾರ್ಥನು ॥ ॥೨೦॥

ರಾಕ್ಷಸೋತ್ತಮರೊಳಾ ಪಿರಿಂತೆ ನರಮೇಧ ಮಖ |
ದೀಕ್ಷೆಯಂ ಕೈಕೊಂಡ ರಿದಕೆ ಋತ್ವಿಜ ರಾ ರ
ಪೇಕ್ಷಿತವಪೇ ನಾರ್ಗೆ ಸಂತುಷ್ಟಿ ಪೇಳೆಂದು ಭೀಷಣಂ ಬೆಸಗೊಳಲ್ಕೆ ||
ರೂಕ್ಷವಪಸವ ನವಂ ತೆರೆ ದಟ್ಟಹಾಸದಿಂ |
ದಾಕ್ಷೇಪಿಸುತೆ ನುಡಿದನೆಲೆ ಮರುಳೆ ರಾವಣಂ |
ಸಾಕ್ಷಿಯಲ್ಲಪೆ ತ ತ್ಕ್ರತುವ ನೆಸಗಿ ಮೂಜಗವ ನೈದೆ ಗೆಲ್ದುದಕೆಂದನು || ||೨೭||
ಸುರೆ ನೆತ್ತರಿಂದೆ ಚಾತುರ್ಮಾಸ್ಯಮಂ ಕಳೆದ |
ಪಿರಿಯ ರಿದೆ ಮಾಸೋಪವಾಸಿಗಳ ತಲೆ ಮಿದುಳ |
ನುರುತರ ಶ್ರಾವಣ ಕೂಪಗಿಪ ರಿದೆ ಯುತಿ ಮಾಂಸಮಂ ಭಾದ್ರಪದಕೆ ಬಿಡದೆ ||
ದೊರೆಯಿಸುವ ರಿದೆ ಪರಾಶ್ವಿಜಕೆ ಜಡೆಮುಡಿಯವರ |
ಕರುಳ ನಾರ್ಜಿಸುವ ರಿದೆ ಕಾರ್ತಿಕಕ್ಕೆಳವೆಣ್ಣ |
ಉರದ ಗುಂಡಿಗೆಯ ನರಸುವ ಮಹಾವ್ರತಿಗಳಿದೆ ಬೊಮ್ಮರಕ್ಕಸರೆಂದನು || ||೨೮||
ಇನ್ನುಮಿವರಲ್ಲದೆ ಮಹಾಬ್ರಹ್ಮರಾಕ್ಷಸ |
ರ್ಮುನ್ನಿನ ಯುಗಂಗ ಳವರಿರ್ದಪ ಪಿರಿಯ ರ್ಗ |
ಮುನ್ನತ ವಟದ್ರುಮ ನಿವಾಸಿಗ ಳನೇಕ ಪುರುಷಾದಕ ದುರ್ದರ್ಶರು ||
ನಿನ್ನ ನರಮೇಧಕಾ ರ್ತ್ವಿಜ್ಯಮಂ ಮಾಳ್ಪ ರಿದ |
ಕೆನ್ನ ನಾಚಾರ್ಯನಾಗಿಯೆ ವರಿಸು ತದ್ಯಾಗ |
ಮಂ ನೆಗಳ್ಚೆ ಸುರರ್ಗೆ ತುಷ್ಟಿಯುಪ್ಪುದು ಜಯಂ ನಿನಗೆ ಸಮನಿಪುದೆಂದನು || ||೨೯||
ದಾನವರ ದಂಪತಿ ಸಹಸ್ರಮಂ ಪ್ರತಿದಿನಂ |
ಮಾನವರ ಮಾಂಸಭೋಜನದಿಂದೆ ತಣಿಸ ಬೇ |
ಕಾ ನವರ ನುಪಚರಿಪೆ ನಧ್ವರವ ನೆಸಗು ನೀಂ ಮಂಟಪವ ನಿಲ್ಲಿ ರಚಿಸು ||
ಸೇನೆ ಸಹಿತಾಪಾರ್ಥನಂ ಪಿಡಿದು ತಂದೊಡೆ ಸ |
ಮಾನಮಿ ಲ್ಲಸುರರೊ ಕ್ಕಿನಗೆ ನಡೆದಪುದು ಮಖ |
ಮೇನೆಂಬೆ ನಿದರುತ್ಸವಮ ನೆನೆ ಪುರೋಹಿತಂಗಾ ದೈತ್ಯ ನಿಂತೆಂದನು || ||೩೦||
ಪೊಕ್ಕು ಪಡೆಯೊಳ್ವಿಜಯನಂ ಪಿಡಿದು ನರಮೇಧ |
ಕಿಕ್ಕುವೆಂ ಬೇಗ ಕಟ್ಟಿಸು ಮಂಟಪವನೆಂದು |
ಪೆಕ್ಕಳದೊ ಳಾತನಂ ಬೀಳ್ಕೊಂಡು ಭೀಷಣಂ ಮುಳಿದೆದ್ದು ನಡೆಯುತಿರಲು ||
ಮುಕ್ಕೋಟಿ ರಕ್ಕಸ ಪ್ರೋರಮುಟ್ಟರಪನ ಕೂ |
ಡಕ್ಕರಿಂ ಜಗವ ನೊಂದೇಬಾರಿ ಕೊಳ್ಳೆ ತವ |
ಕಕ್ಕೆ ಬಹು ರೂಪಮಂ ತಾಳ್ದನೋ ಕಾಲಭೈರವನೆಂಬ ತೆರನಾಗಲು || ||೩೧||
ಭೀಷಣನೊಡನೆ ಮೂರುಕೋಟಿ ದೈತ್ಯೇಯ ರತಿ |
ರೋಷದಿಂ ನೈದುತಿರ್ದರು ಕಾಳಗಕೆ ಘೋರ |
ವೇಷದ ಮಹಾ ರಾಕ್ಷಸಿಯರಂ ದೊಪಲ್ಗಳಿಂ ರುಧಿರ ಮಾಂಸಂಗಳಿಂದೆ ||
ಪೋಷಿಸುವ ತವಕದಿಂ ಘೋರಮಟ್ಟು ಒಂದು ಸಂ |
ತೋಷದಿಂ ಬಿಟ್ಟುಮುದಿಗಳ ನಡರೆ ಕಂಡ ರು |
ದ್ಘೋಷದಿಂ ದಬ್ಬಿಯುಂ ಜರೆವಂತೆ ನಡೆದು ಬಹ ಪಾರ್ಥನ ಪತಾಕಿನಿಯನು ||೩೨||

ಆ ರಾಕ್ಷಸಿಯರೊಳೊರ್ವ ಳ್ಧನಂಜಯನ ಪೊಂ |
ದೇರ ಪಳವಿಗೆ ಮುದಿಯ ಹನುಮಂತನಂ ಕಂಡು |
ದೂರಕೋಡಿದ ಳಂದು ಲಂಕಿಣಿಯ ನೊದೆದಕೋಡಗ ಮೆಂದು ಮತ್ತೊರ್ವಳು ||
ಊರಂ ಸುಡುವುದೆಂದು ತನ್ನ ಸದನದ ಸರಕ |
ನಾರೈವುದಕ್ಕೆ ಪೋದ ಳ್ದನುಜೆ ಮತ್ತೊರ್ವ |
ಳೋರಂ ತೆಣಿಸಿಕೊಂಡ ಳೀಕಪಿ ನೆಳಲ್ಗೆ ಸೈರಿಸದೆಂದು ಸೈವರಿದಳು || ||೩೩||
ಆಗಸಕೆ ಚಿಗಿದು ರವಿಯಂ ತುಡುಕಿ ಧೀಂಕಿಟ್ಟು |
ಸಾಗರಕೆ ಸೀತೆಯಂ ಕಂಡು ಬನಮಂ ಕಿಳ್ತು |
ತಾಗಿದ ನಿಶಾಟರಂ ಸವೆದು ಲಂಕೆಯ ಸುರಿಪಿ ದಶವದನನಂ ಭಂಗಿಸಿ ||
ಪೋಗಿ ಪಾತಾಳ ದಸುರರ ನೊಕ್ಕಲಿಕ್ಕಿ ಪಿರಿ |
ದಾಗಿ ಬೆಟ್ಟಂಗಳಂ ಪೊತ್ತು ವಾರಿದ ಕಪಿಯ |
ನೀಗ ನಿಟ್ಟಿಸಿ ಬೆದರದಿರ್ದಪೆ ನವೆಂತುಟೆಂ ದೊರ್ವ ರಕ್ಕಸಿ ನುಡಿದಳು || ||೩೪||
ಬೆದರದಿರಿ ಬರಿದೆ ನೀವೀ ಕೋತಿಯಂ ತನ್ನ |
ತುದಿಮೊಲೆಗಳಿಂ ದಪ್ಪಳಿಸಿ ನರನ ಸೈನ್ಯಮಂ |
ಸವೆದು ಕೆಡಪುವೆ ನೆಂದು ಯೋಜನ ಸ್ತನಿ ಯೆಂಬ ರಕ್ಕಸಿ ನುಡಿಯೆ ಲಾಲಿಸಿ ||
ಗದಗದಿಸಬೇಡ ಪೇಳೊಡಲೊ ಳಡಸುವೆ ನಿನಿತು |
ಸದರಮಂ ನೋಡುತಿರಿ ಸಾಕೆಂದು ರೋಷದಿಂ |
ದೊದರಿದ ಳ್ಮತ್ತೊರ್ವ ಳಸುರಿ ಲಂಬೋದರಿ ನಿಶಾಚರಿ ಮಹಾ ಭಯಂಕರಕರಿ ||೩೫||
ಬಳಿಕುಳಿದ ರಕ್ಕಸಿಯ ರೆಲ್ಲರುಂ ಫಲುಗುಣನ |
ಬಲಮಂ ಪೊಡೆದು ನುಂಗಲೆಂದು ಬಾ ಯ್ದೆರೆದು ಕಿಡಿ |
ಗಳ ನುಗುಳುತಾರ್ಭಟಿಸುತೈದಿದ ರ್ಕೊಡೆ ಲಂಬೋದರಿ ನರನ ಪಡೆಯನು ||
ಸೆಳೆ ದಣಲ್ಗಡಸಿ ಕೊಳುತಿರ್ದ ಳೊಡನೊಡನೆ ಬಾಂ |
ದಳ ಕಡಪೇಳ್ವ ಸಿಡುಮೊಲೆಗಳಿಂ ಬಲಿಸ ನ |
ಪ್ಪಳಿಸಿದ ಳ್ತಿರುತಿರುಗಿ ಬೀಸುತ್ತೆ ಯೋಜನ ಸ್ತನಿ ಕನ ಲ್ದಾಕ್ಷಣದೊಳು || ||೩೬||
ಅಸುರಕೋಟಿತ್ರಯ ಮೊಡನೆ ಬಂದು ಭೀಷಣಂ |
ಮುಸುಕಿದಂ ಕೈದುಗಳ ಮಳೆಗಳಂ ಕರೆಯುತ್ತೆ |
ಮುಸಗಿ ದುರಿ ಪೊಗೆ ಸಿಡಿಲ್ಮಿಂಚು ಕತ್ತಲೆ ಗಾಳಿ ಮುಗಿಲೊಡ್ಡು ದೂಳ್ಗಳಿಂದೆ ||
ದೆಸೆ ಗೆಡಿಸುತಹಿ ಸಿಂಹ ಶರಭ ಗಜ ಭೇರುಂಡ |
ಪಸಿದ ಪುಲಿ ಪಂದಿ ವೃಕ ವೃಷಭಂಗಳಾಗಿ ಗ |
ರ್ಜಿಸು ತುಗ್ರಭೂತಂಗಳಾಗಿ ಬಾಯ್ದೆರೆ ದಬ್ಬರಿಸುತೆ ಪಾರ್ಥನ ಪಡೆಯನು || ||೩೭||
ಮುಸಗಿದಂ ಬಳಿಕ ರಣಭೀಷಣಂ ಭೀಷಣಂ |
ವಸುಮತಿಗೆ ಕಾಲಾಂತಕೋಪಮಂ ಕೋಪಮಂ |
ಪಸರಿಸಿದ ನರಿದಂ ನಿದಾನವಂ ದಾನವಂ ಫಲುಗುಣನ ಮುಂದೆ ನಿಂದು ||
ಒಸೆದೆನ್ನನೈದೆ ಪೆತ್ತಾತನಂ ತಾತನಂ |
ಕುಸುರಿ ದರಿ ದನಿಲಜನ ತಮ್ಮನೇ ತಮ್ಮನೇ |
ಳಿಸುತೆ ಬಹೆ ನಿನ್ನ ಹದನಾವುದೈ ನಾವು ದೈತ್ಯ ರ್ಕೊಲ್ಲದಿರೆನೆಂದವನು || ||೩೮||

ಈಗಳಿವರಿಂದೆ ನಿನ್ನಂ ಪಿಡಿದು ನರಮೇಧ |
ಯಾಗಕ್ಕೆ ಪಶುವಪ್ಪೆನೆಂದು ಫಲುಗುಣನ ರಥ |
ಕಾಗಿ ಭೀಷಣ ನೆರಗಲರ್ಜುನಂ ನಗುತೆ ರಕ್ಷೋಘ್ನ ಬಾಣವನೆ ಪೂಡಿ ||
ವೇಗದಿಂ ದಿಸಲಸುರ ನಳವಳಿದ ನವನ ಪಡೆ |
ಸಾಗಿದುದು ಬಿರುಗಾಳಿ ಬೀಸಿದೊಡೆ ಬೆಚ್ಚಿಡಿದ |
ಮೇಘಸಂಕುಲವಿರದೆ ಪರಿವಂತೆ ಶರಘಾತಿಗೊಗ್ಗೊಡೆದು ಕಂಡಕಡೆಗೆ || ||೩೯||
ಮಡಿದವರ್ಕೆಲ ರಂಗಭಂಗದಿಂ ಕೈಕಾಲ್ಗ |
ಳುಡಿದವರ್ಕೆಲ ರಿಚ್ಚಕೂರ್ಗಣೆಗ ಳವಯವ ದೊ |
ಳಿಡಿದವರ್ಕೆಲ ರೀರ್ಗಳಿಂದೆ ವೇದನೆಗಳಂ ಸೈರಿಸದೆ ಗಳ ದಸುವನು ||
ಪಿಡಿದವರ್ಕೆಲರಲ್ಲಿ ಗಿಡು ಮರನ ನೆಡೆಗೊಂಡು ||
ಸಿಡಿದವರ್ಕೆಲರೋಡಿ ಬರ್ದುಕಿದೆವು ತಾವೆಂದು |
ನುಡಿದವರ್ಕೆಲರಾದ ರರ್ಜುನನ ನಿಸುಗೆಯಿಂದ ಮಾಕ್ಷಣಂ ರಾಕ್ಷಸರೊಳು || ||೪೦||
ಓಡಿಸಿ ಬಲೌಘಮಂ ಬೀಸಿ ಬಿರು ಮೊಲೆಗಳಿಂ |
ತಾಡಿಸುವ ಯೋಜನ ಸ್ತನಿಯ ಸುರೆ ಬಾಯ್ದೆರೆದು |
ನಾಡೆ ಪಡೆಯಂ ತುತ್ತುಗೊಂಬ ಲಂಬೋದರಿಯ ನುಳಿ ದಸುರಿಯರ ಕೃತ್ಯವ ||
ನೋಡಿ ವಿಸ್ಮಿತನಾಗಿ ಪೂರ್ವಮಂ ನೆನೆದು ಕೊಂ |
ಡಾಡಿ ನಸುನಗುತೆ ದೆಸೆದೆಸೆಗೆ ವಾಲಾಗ್ರಮಂ |
ನೀಡಿ ತೆಗೆತೆಗೆದಿಳೆ ಯೊಳಪ್ಪಳಿಸಿ ಕೊಂದ ನವರೆಲ್ಲರಂ ಕಲಿಹನುಮನು || ||೪೧||
ನರನ ಶರಜಾಲದಿಂ ಕಡಿವಡೆದು ವೀರ ವಾ |
ನರನ ಲಾಂಗೂಲದಿಂ ಬಡಿವಡೆದು ರಕ್ಕಸರ |
ನೆರವಿ ಹೇರಾಳದಿಂ ಪುಡಿವಡೆದು ಬಯಲಾಗೆ ಭೀಷಣಂ ಭೀತಿಗೊಂಡು ||
ವಿರಚಿಸಿದ ನೊಂದುಪಾಯಾಂತರವ ನಲ್ಲಿ ಪೈ |
ಗರೆದ ನಾಗಳೆ ಮಾಯದಿಂದೆ ಮುನಿಜಾದ ನಡು |
ಸುರನದಿಯ ತೀರವಾದುದು ಕಣ್ಗೆ ಕಾಣಿಸಿತು ಪುಣ್ಯಾಶ್ರಮಂ ಪೊಸತೆನೆ || ||೪೨||
ಎಲ್ಲಿ ನೋಡಿದೊಡೆ ಗಂಗಾಪ್ರವಾಹದ ಸಲಿಲ |
ವೆಲ್ಲಿ ನೋಡಿದೊಡೆ ಪುಣ್ಯಾಶ್ರಮ ಕುಟೀರಂ ಗ |
ಳೆಲ್ಲಿ ನೋಡಿದೊಡೆ ನಿಬಿಡ ದ್ರುಮಚ್ಛಾಯೆಗ ಳ್ಕುಸುಮ ಫಲಮೂಲಂಗಳು ||
ಎಲ್ಲಿ ನೋಡಿದೊಡೆ ಶುಕ ಪಿಕ ಮಯೂರಧ್ವನಿ ಗ |
ಳೆಲ್ಲಿ ನೋಡಿದೊಡೆ ಸಾತ್ವಿಕವಾದ ಮೃಗ ನಿಕರ |
ವೆಲ್ಲಿ ನೋಡಿದೊಡೆ ಸಂಚರಿಪ ತಾಪಸ ವಟುಗ ಳೆಸೆದ ರರ್ಜುನನ ಕಣ್ಗೆ || ||೪೩||
ಆ ದಿವ್ಯ ಋಷಿಗಳಾಶ್ರಮದಿಂದ ಮೊರ್ದ ಮುನಿ |
ಸಾದರದೊಳೈತಂದು ಫಲುಗುಣನ ಮುಂದೆ ನಿಂ |
ದೀ ದನುಜರಂ ಕೊಂದೊಡೇನಹುದು ಪರಹಿಂಸೆ ಲೇಸಲ್ಲ ಬಲ್ಲವರ್ಗೆ ||
ಮಾಧವ ಮಹೇಶ್ವರಾರ್ಚನೆಗಳಂ ಜಪತಪ ಸ |
ಮಾಧಿಗಳ ಸತ್ತ್ರಮ ಸ್ವಾಧ್ಯಾಯ ಗತಿಗಳಂ |
ಸಾಧಿಸುವೊಡಿದೆ ಪುಣ್ಯನದಿ ಗಂಗೆ ಶುದ್ಧಪ್ರದೇಶವಿದು ನಿನಗೆಂದನು || ||೪೪||

ಬೆರಗಾದನರ್ಜುನಂ ದಾನವನ ಕೃತಕ ನೆಂ ।
ದರಿದು ಮುನಿಯಾಗಿರ್ದವನ ತುಡುಕಲಾ ಮಾಯೆ ।
ಬರೆತು ಮುನ್ನಿನ ರಾಕ್ಷಸಾಕೃತಿಗೆ ನಿಲಲಾಗಿ ಪಿಡಿ ದಾಕ್ರಮಿಸಿ ಮನೆಯೊಳು ॥
ತುರುಗಿರ್ದ ಸಕಲ ಭೂಷಣ ವಿವಿಧ ಮಣಿಗಳಂ ।
ತರತರದ ವಸ್ತುಗಳ ನುತ್ತಮ ಗಜಂಗಳಂ ।
ನಿರುಪಮ ಹಯರತ್ನಂಗಳಂ ಕೊಂಡು ದೈತ್ಯರಂ ದೆಸೆಗೆಡಿಸಿದಂ ಪಾರ್ಥನು ॥ ॥೪೫॥
ಕೋಳೊಡನೆ ಮುಂತಾಗಿ ತಿರುಗಿದಂ ಫಲುಗುಣಂ ।
ಮೇಲೆ ನಡೆದುದು ಕುದುರೆ ತೆಂಕದೆಸೆಗೊಡನೆ ಕೆಂ ।
ದೂಳಿಡುತೆ ಬಹ ಬಹಳಬಲಸಹಿತ ಮಣಿನಗರವೆಂಬ ಪಟ್ಟಣದ ಬಳಿಗೆ ॥
ಪೇಳಲೇ ನರ್ಜುನ ಸುತಂ ಬಭ್ರುವಾಹನಂ ।
ಪಾಲಿಸುವ ನಾಪೊಳಲ ನೀ ನರಂ ಬಂದುದಂ ।
ಕೇಳಲೇ ನೃಪನೊ ದೇವಪುರನಿಲಯ ಲಕ್ಷ್ಮೀಪತಿಯ ಮೈದುನಂಗೆ ॥ ॥೪೬॥

ಸಂಧಿ ೧೬ ಕ್ಕೆ ಪದ್ಯ ೮೯೯ ಕ್ಕೆ ಮಂಗಳಮಸ್ತು.

## ಹದಿನೇಳನೆಯ ಸಂಧಿ.

ಸೂಚನೆ॥ ವಿನಯದಿಂದೈತಂದು ಕಾಣಲ್ಕೆ ಬಭ್ರುವಾ ।
ಹನನಂ ಜರೆದು ನರಂ ನೂಕಿದೊಡೆ ಬಳಿಕವಂ ।
ಕನಲಿ ಪಾರ್ಥನ ಚಾತುರಂಗದೊಳ್ಪಲ್ಕೆ ಸೇನೆಸಹಿತಿರ್ದಾವನು ॥

ಭೂ ಭುಜಲಲಾಮ ಕೇಳಿಂದ್ರತನಯನ ತುರಗ ।
ಮಾ ಭೀಷಣನ ಸೀಮೆಯಂ ಕಳೆದು ಬರೆ ಮುಂದೆ ।
ಶೋಭಿಸಿತು ವರ್ಷಾಗಮಂ ಧರೆಯ ಬೇಸಗೆಯ ಬೇಸರಂ ತವೆ ತವಿಸುತೆ ॥
ಲಾಭಿಸುವ ಚಾತಕಪ್ರೀತಿಯಂ ಕಂ ಡಸೂ ।
ಯಾಭರದ ಸಂಜೆಗ ಳ್ತಾಳಲಾರದೆ ಘನ ।
ಕ್ಷೋಭದಿಂ ದೋಡಿದುವು ಪರರ ಸಿರಿಯಂ ಸೈರಿಸರು ವಿಜಾತಿಯ ಜನರೆನೆ ॥ ॥೧॥
ಎದ್ದುವು ಮುಗಿಲ್ಗಳೆಣ್ದೆಸೆಗ ಳೊ ಳ್ತರತರ ದೊ ।
ಳೆದ್ದುವು ಗಿರಿಗಳಂತೆ ಮಿಂಚಿದುವು ದಿಗ್ಭಾಗ ।
ಳುದ್ದಂಡದಿಂದೆ ಪರ್ಜನ್ಯನಂ ಸೆಣಸಿ ನೋಡು ವಚಲಾಪಾಂಗದಂತೆ ॥
ಸದ್ದತ್ತ್ವವಾಗಿ ತನ್ನವೊಲಿರದ ಲೋಭಿಯಂ ।
ಗದ್ದಿಸುವ ತೆರದಿಂದೆ ಮೊಳಗಿದುವು ಧರಣಿಯೊ ।
ಳ್ಬಿದ್ದ ಮುಂಬನಿಯ ಕಂಪಿಗೆ ಸೊಗಸ ಲಾನೆಗಳ್ ಕೃಷಕ ತತಿ ನಲಿಯ ಲೊಡನೆ ॥೨॥
ವರಸೀಲಕಂತಸ್ತೃತ್ಯದಿ ಸಂಘಕಾಸುರ ಸ ।
ಮರಧರಣಿಯಂ ಕುವಲಯಾನಂದಕರದ ಘನ ।
ಪರಿಶೋಭೆಯಿಂದೆ ಚಂದ್ರೋದಯದ ನಾಲೋಕ ಚಂಚಲೋದ್ಭಾಸದಿಂದೆ ॥
ತರುಣಿಯ ಕಟಾಕ್ಷಮಂ ರಾಜಹಂಸ ಪ್ರಭಾ ।
ಹರಣದಿಂ ಪರಶುರಾಮ ಪ್ರತಾಪದ ನಧಿಕ ।
ತರ ವಾಹಿನೀಘೋಷದಿಂದೆ ನೃಪಯಾತ್ರೆಯಂ ಪೋಲ್ತು ಕಾರೆಸದಿರ್ದುದು ॥ ॥೩॥

ಜಾತ ನವಶಾಡ್ವಲದ ಸೊಂಪಿಡಿ ದೆಸೆವ ನೆಲದ |
ಪ್ರೀತಿಸವ ಜಾಜಿಗಳ ವರ ಕುಟಜ ರಾಜಿಗಳ |
ಕೇತಕಿಯ ಧೂಳಿಗಳ ಕೆದರುತಿಹ ಗಾಳಿಗಳ ಲಸದಿಂದ್ರಗೋಪ ಚಯದ ||
ಕಾ ತೆಳೆಯ ಮಾವುಗಳ ಬನಬನದ ತಾವುಗಳ |
ನೂತನ ಸುವಾಱಿಗಳ ನಡೆಗುಡದ ದಾರಿಗಳ |
ಭೂತಳವ ಸಿರಿ ಮೆರೆಯೆ ಮುಗಿಲ್ಕೈದೆ ಮಳೆಗರೆಯೆ ವರ್ಷರ್ತು ಚೆಲ್ವಾದುದು || ||೪||
ತುಂಗ ನವಚಿತ್ರಮಯ ಸುಪ್ರಭಾಸುರ ಕಾರ್ಮು |
ಕಂಗಳಿಂ ಸುರಕಾರ್ಮುಕಂಗಳಿಂ ವಿವಿಧ ವಾ |
ದ್ಯಂಗಳ ಗಭೀರ ಘನಘೋಷಂಗಳಿಂದೆ ಘನಘೋಷಂಗಳುಂ ನೆಗಳ್ದ ||
ಸಂಗತ ನೃಪಾಲ ವಾಹಿನಿಗಳಿಂ ವಾಹಿನಿ ಗ |
ಳಂ ಗೆಲ್ದು ವೀರಪಾಂಡವ ಸೈನ್ಯಸಾಗರಂ |
ಕಂಗೊಳಿಪ ಕಾರ್ಗಾಲದಂತೆಸೆಯೆ ವಾಜಿ ಮಣಿಪುರಕಾಗಿ ನಡೆತಂದುದು || ||೫||
ಕ್ಷೋಣೀಂದ್ರ ಕೇಳರ್ಜುನನ ಕಣ್ಗೆ ಮಣಿಪುರಂ |
ಕಾಣಿಸಿತು ಕನಕ ರಜತದ ಕೋಂಟೆ ಕೊತ್ತಳದ |
ಮಾಣಿಕದ ವಜ್ರವೈಡೂರ್ಯಗೋಮೇಧಿಕದ ಮುಗಿ ಲಟ್ಟಳೆಯ ಸಾಲ್ಗಳ ||
ಶೋಣಪ್ರವಾಳತೋರದ ಸೂಸಕದ ಕ |
ಟ್ಟಾಣಿ ಮುತ್ತುಗಳ ಲೋವೆಗಳ ಗೋಪುರದ ಬಿ |
ನ್ನಾಣದ ಸುಚಿತ್ರಪತ್ರದ ಕುಸುಕ ದೆಸಕದಿಂ ಮೆರೆವ ಬಾಗಿಲ್ಗಳಿಂದೆ || ||೬||
ಪಗಲ ದೆಸೆಗಳುಕಿ ಪರೆದಿರ್ದ ಬೆಳ್ದಿಂಗಳೀ |
ನಗರಮಂ ಪೊಕ್ಕು ವೆಂಟಣಿಸಿ ಮಾರ್ಪುಲೆತಿರಲ್ |
ಮಿಗೆ ಮೋಹರಿಸಿ ಬಂದು ಮುತ್ತಿಗೆಯ ನಿಕ್ಕಿಕೊಂಡಿ ಪೆರ್ಳ ವಿಸಿಲ್ಗಳೆನಲು ||
ಗಗನವ ನಡರ್ದ ಸೌಧಂಗಳ ಮರೀಚಿಯಿಂ |
ಪೊಗರುಗುವ ಪೊಚ್ಚ ಪೊಸಪೊನ್ನ ಕೋಂಟೆಗಳ ಕಾಂ |
ತಿಗಳ್ಕೈದೆ ಮುಸುಕಿಕೊಂಡೆಸೆದಿರ್ದು ವರ್ಜುನನ ಕಣ್ಗೆ ಕೌತುಕಮಾಗಲು || ||೭||
ಮೇರುಗಿರಿಯುಂ ಜರೆವ ಕಾಂಚನದ ಗೋಪುರಂ |
ತೋರಮೊಲೆ ರಾಜಮಾರ್ಗಂ ಬಾಹುಲತೆ ನೃಪಾ |
ಗಾರಂ ಮುಖಾಂಬುಜಂ ಚಿತ್ರಿತ ಪತಾಕೆಗ ಳ್ಚಲಿಸುವಳಕಾವಳಿಗಳು ||
ತೋರಣಂ ಮಣಿಹಾರ ಮೆಸೆವ ಕೋಟಾವಲಯ |
ನಾರಾಜೆ ಪಂಬರಂ ಪರಿಖೆ ಮೇಖಲೆ ಗೃಹ ಸು |
ಧಾರೋಚಿ ದರಹಾಸ ಮಾಗಲಾ ನಗರಿ ಚೆಲ್ವಿನ ನಾರಿಯಂತಿರ್ದುದು || ||೮||
ಕೋಟೆಗಾವಲ ಭಟರ ವಿವಿಧಾಯುಧಂಗಳ ಕ |
ವಾಟರಕ್ಷೆಯ ಬಲದ ಸನ್ನಾಹ ಸಾಧನದ |
ಕೂಟ ದತಿಭೀಕರದ ದುರ್ಗ ದಭಿಮಾನದೇವತೆ ಸಕಲ ಭೂವಲಯಕೆ ||
ನಿಾ ಟಿಸಿಸುವಾತನೀ ಪೊಳಲಾಣ್ಮ ನೊರ್ವನೆ ಸ |
ಘಾಟಿಕೆಯೊಳೆಂದು ಬೆರಲೆತ್ತಿ ತೋರಿಸುವಂತೆ |
ನೋಟಕರ ಕಣ್ಗೆ ಕಾಣಿಸಿದು ವೆಣ್ದೆಸೆಯ ಡೆಂಕಣಿಯ ಪಳವಿಗೆ ಗಯ್ಗಳು || ||೯||

ತಂಡತಂಡಮೊ ಳಾಪೊಳಲ ಪುಗುವ ಪೊರಮಡುವ |
ಬಂಡಾಳಿ ಸಾಹಿಗಳ ಪುರಜನದ ಪರಿಜನದ |
ಮಂಡಲಾಧಿಪ ರೆನಿಪ ಹಂಸಧ್ವಜಾದಿ ಭೂಭುಜ ರನುದಿನಂ ತಪ್ಪದೆ ||
ಕೊಂಡುಬಂದೀವ ಕಟ್ಟಳೆಯ ಕಪ್ಪದ ಪೊನ್ನ |
ಬಂಡಿಗಳ ಸಾಸಿರದ ಸಂದಣಿಯ ಕಾಣ ಬಹ |
ಕಂಡು ಮರಳುವ ಮನ್ನೆಯರ ಮಹಾ ವಿಭವಂಗಳೆಸೆದು ವಾಪುರದ ಪೊರಗೆ || ||೧೦||
ನೆಟ್ಟನೆ ಹಯಂ ಪೋಗಿ ವಹಿಲದಿಂ ಪೊಕ್ಕು ದಾ |
ಪಟ್ಟಣವ ನದರೊಡನೆ ನಡೆತಂದು ಪಾಳಯಂ |
ಬಿಟ್ಟುದು ಪುರೋದ್ಯಾನ ವೀಥಿಗಳೊಳರ್ಜುನಂ ನಗರಮಂ ನೋಡಿ ನಗುತೆ ||
ಕಟ್ಟೆಸಕದಿಂದೆ ಕಂಗೊಳಿಸುತಿದೆ ಪೊಳಲಿದಂ |
ಮುಟ್ಟಿ ಪಾಲಿಪ ವೀರನಾರವಂ ಕುದುರೆಯಂ |
ಕಟ್ಟುವನೆ ಪೇಳೆಂದು ಹಂಸಧ್ವಜ ಕ್ಷಿತಿಪನಂ ಕೇಳ್ದೊಡಿಂತೆಂದನು || ||೧೧||
ನೀ ನರಿದುದಿಲ್ಲಲಾ ಪಾರ್ಥ ಮಣಿಪುರಮೆಂಬ |
ದೀ ನಗರಮಂ ಬಭ್ರುವಾಹನಂ ಪ್ರಖ್ಯಾತ |
ಭೂನಾಥ ನಿಲ್ಲಿಗರ ಸವನಿಪರೊಳಗ್ಗಳೆಯ ನಿವನ ಸಿಪ್ಥಾಯಕಾಗಿ ||
ಏನೆಂಬೆ ನೊಂದುಸಾಸಿರ ಬಂಡಿ ಕನಕಮಂ |
ನ್ಯೂನವಿಲ್ಲದೆ ತೆತ್ತು ಬಹೆವು ನಾವೆಲ್ಲರುಂ |
ಹೀನವಾದೊಡೆ ದಂಡಿಸುವ ನೆಂಬ ಭೀತಿಯಿಂ ಪ್ರತಿದಿನದೊಳಂ ತಪ್ಪದೆ || ||೧೨||
ಈತಂಗೆ ಸಚಿವಂ ಸುಬುದ್ಧಿಯೆಂಬವ ನೊರ್ವ |
ನಾತನೇ ಪಾಲಿಸುವ ನಿವನ ಭೂತಳಮಂ ನಿ |
ಜಾತಿಶಯ ಧರ್ಮದಿಂ ದೆಳ್ಳನಿತು ದೋಷವಿಲ್ಲದೆ ಸಾವಧಾನನಾಗಿ ||
ನೀತಿಪಥಮಂ ಬಿಡದೆ ವಿವಿಧ ವರ್ಣಾಶ್ರಮದ |
ಜಾತಿಭೇದವ ನರಿದು ಸಂತತಂ ಪ್ರಜೆಗಳಂ |
ಪ್ರೀತಿಯಿಂ ಪೊರೆದು ಪರಿಜನಕೆ ಪದುಳಿಗನಾಗಿ ಭೂಪನಂ ಪೋಷಿಸುವನು || ||೧೩||
ಒಂಪು ಕೊಡೆಕೆಯ ಕಪ್ಪಿನಿಂ ದೆಸೆವ ತೇಜಿಗಳ್ |
ಕುಂದೇಂದು ಧವಳಾಂಗ ವಾಜಿಗಳ್ ಮಣಿಮಯದ |
ಪೊಂದೇರ್ಗಳಿನಿತೆಂದರಿಯ ರಿವನ ಕರಣಿಕರ್ಗಕ್ಕು ರಥ ಕರಿ ಘಟೆಗಳ ||
ಮಂದಿ ಕುದುರೆಯ ಪವಣ ನರಿಪ ರಾ ಭೂಪಾಲ |
ವೃಂದದೊಳ್ಪಡಿಯುಂಟೆ ಬಭ್ರುವಾಹಂಗೆ ಕಡು |
ಪೊಂದಿ ದತಿಶಯವೀರ ನೀ ತುರಗಮಂ ಕಟ್ಟಿದಿರ್ದಪನೆ ಪೇಳೆಂದನು || ||೧೪||
ಈ ಪುರದೊಳಿರ್ಪ ಮಾನವರೆಲ್ಲರುಂ ಸದಾ |
ಶ್ರೀಪತಿಯ ಭಜನೆಯಲ್ಲದೆ ಪೆರ ತರಿಯ ರತಿ ದ |
ಯಾಪರ ವೇದಾರ್ಥಕೋವಿದ ಸತ್ಯವ್ರತಾಚಾರ ಸಂಪನ್ನರು ||
ಕೋಪವರ್ಜಿತ ರಹಿಂಸಾಮತಿಗ ಳಾತ್ಮಸ್ಥ |
ರೂಪಜ್ಞ ರತಿಬಲ ವಾಗ್ಮಿಗ ಳ್ಯಾಜಿಗ ಳ್ಕ್ರ |
ತಾಧಿಗ ಳ್ಶೂರ ರತಿನಿಪುಣ ರನಸೂಯ ರಸ್ತ್ರ ಶಸ್ತ್ರಪ್ರೌಢರು || ||೧೫||

ಯೋಗಿಜನದಂತೆ ಮುಕ್ತಾಹಾರದಿಂ ಪೂಜ್ಯ |
ಮಾಗಿಹುದು ಪಾತಾಳನಿಳಯದಂ ತಾವಗಂ |
ಭೋಗಿಪ ವಿಲಾಸಮಂ ತಳೆದಿಹುದು ಸಂತತಂ ಗಾಂಧರ್ವ ಶಾಸ್ತ್ರದಂತೆ ||
ರಾಗಾನುಬಂಧ ಮೋಹನ ಮಧುರಕಾಲಿಂಬ |
ಮಾಗಿಹುದು ಪಾರ್ಥ ಕೇಳೀಪುರದ ಸಕಲ ನಾ |
ರೀಗಣಂ ಮೀರಣಂತುಮಲ್ಲದೆ ಪತಿವ್ರತಾ ಶೀಲಮಂ ತಾಳ್ದಿಸಿಪ್ಪುದು || ||೧೬||
ಇಲ್ಲಿ ಪುರುಷ ಸ್ತ್ರೀಯರೊರ್ವರುಂ ಪಾತಕಿಗ |
ಳಿಲ್ಲದಿಹ ಕಾರಣಂ ಸಾನ್ನಿಧ್ಯದಿಂ ರಮಾ |
ವಲ್ಲಭಂ ಪೊರೆವ ನೀ ನಗರಮಂ ತನಗೆರಡನೆಯ ವೈಕುಂಠಮೆಂದು ||
ನಿಲ್ಲವೆ ತುರಂಗಮಂ ಪೋಗಿ ಪೊಕ್ಕುದು ಬಿಡಿಸ |
ಬಲ್ಲರಂ ಕಾಣೆನಾಂ ಫಲುಗುಣ ಮುರಾಂತಕನ |
ಮೆಲ್ಲಡಿಯ ಕರುಣ ಮೆಂತಿಹುದೆಂದರಿಯೆ ನೆಂದನಾ ಹಂಸಕೇತು ನೃಪನು || ||೧೭||
ಭೂಲೋಲ ಕೇಳ್ ಮರಾಳಧ್ವಜನ ಮಾತನಿಂ |
ತಾಲಿಸುವ ಪಾರ್ಥನ ಕಿರೀಟಾಗ್ರದೊಳ್ಬಂದು |
ಕಾಲೂರಿ ನಿಂದಿರ್ದುದೊಂದು ಪರ್ದಿನೆಂಜಿ ಸುತ್ಪಾತ ದಪ್ಪತವನು ||
ನೀಲಧ್ವಜಾದಿ ನೃಪರೆಲ್ಲರುಂ ತಮ ತಮಗೆ |
ಮೇಲಿಸಜಸುವ ಸೂಚಕಮಿದು ನರಂಗಕಟ |
ಕಾಲಗತಿ ಯೆಂತಿಹುದೊ ಶಿವಶಿವಾ ಯೆನುತೆ ಮನಮಳುಕಿ ಚಿಂತಿಸುತಿರ್ದರು ||೧೮||
ಇತ್ತಲೀ ತೆರದೊಳಿರುತಿರಲತ್ತಲಾ ಪುರದೊ |
ಳುತ್ತಮ ಹಯಾಗಮವ ನೊಡನೆ ಬಂದಿಹ ನೃಪರ |
ವೃತ್ತಾಂತಮಂ ಬಭ್ರುವಾಹನಂ ಕೇಳ್ದು ಭಟರಂ ಕಳುಹಿ ತೊಳತೊಳಗುವ ||
ಮುತ್ತುಗಳ ವಲಿಗಳಿಂ ಕನಕದಾಭರಣದಿಂ |
ಬಿತ್ತರದ ಗಂಧಮಾಲ್ಯಾಕ್ಷತೆಗಳಿಂ ಪೂಜೆ |
ವೆತ್ತೆಸೆವ ತುರಗಮಂ ತರಿಸಿ ಕಟ್ಟಿದ ನೋಡಿಕೊಂಡು ಪಟ್ಟದ ಲಿಖಿಯನು ||೧[illegible]||
ಅರಸ ಕೇಳಾದು ದನಿತರೊಳಸ್ತಮಯ ಸಮಯ |
ಮರವಿಂದದಲಗರ್ಳೊಳ್ಸೆರೆಯಾದು ವಾರಡಿಗ |
ಳೆರವೆ ಸಂದುವು ಬಿಸಿಲ ಬೀಡುಗಳ್ಗೂಡುಗೊಂಡುವು ಕೂಡೆ ಪಕ್ಷಿಜಾತಿ ||
ಪಿರಿದೆಸೆವ ಕತ್ತಲೆಯ ರಾಶಿಯಂ ಪೊತ್ತಿಕೊಂ |
ಡುರಿವ ಪಂಕೆಯ ಕಡೆಯೊಳುಳಿದ ಕೆಂಗೆಂಡೆ ಮೆನೆ |
ತರಣಿಮಂಡಲ ಮೆಸೆದು ಪಸರಿಸಿಗಾಗ ದೊಳ್ಕ್ರಾರಗಿದುವು ಕೋಕಂಗಳು || ||೨೦||
ಸಿತಸಿತಾಂಬರ ಮಣಿವಿಭೂಷಣದ ಸುಕವಮಂ |
ಗಳರಾಗಮುಂ ತಾಳ್ದು ತಾರಾಭರಣದ ನಾಂ |
ತರೆ ಸಂಧೆಯೆಂಬ ತೆರವಿಂದೆ ಕೆಂಪಿನಿ ಮುಡುಗ ಳೆಸೆದು ನಾಗಸದೊಳು ||
ನಕೆನಾನ ನಾನೆ ನಕೆಕುಲಿ ಕೆರಲಿ ಸರಸ ನ |
ಮುಳಸಾರ ಮಧುವೆಂದು ಬಾಗಿಲ್ಗಳಂ ಪ್ರೂಬಿ |
ಕೊಳುತಿರ್ಪ ರೆಂಬಂತೆ ಮುಗಿಯುತಿರ್ದುವು ಕೂಡೆ ತಾವರೆಯ ಕತ್ತಲೆಗಳು ||೨೧||

ಏನೆಂಬೆ ನರ್ಜುನನ ಕಟಕವಿರ್ಪುದು ಮಹಾಂ |
ಭೋನಿಧಿಯ ಮಸಕದಿಂ ಪೊಳಲ ಪೊರವಳಯ ದು |
ದ್ಯಾನವೀಥಿಗಳೊಳ್ ಕತ್ತಲೆ ಬಭ್ರುವಾಹನಂ ನಗರದೊಳಣಿಕೆಗೊಳ್ಳದೆ ||
ತಾ ನಮಲ ಸಂಧ್ಯಾವಿಧಿಗಳಂ ನಾಚರಿಸಿ ಸು |
ಮ್ಮಾನದಿಂ ಪತ್ತುಸಾಸಿರ ಕಂಭ ಮೆಸಕ ದಾ |
ಸ್ಥಾನಮಂಟಪಕೆ ಬಂದೋಲಗಂ ಗೊಟ್ಟ ನತಿ ಸಂಭ್ರಮದೊಳಂದಿಸಿದನು ||೨೨||

ಪಳುಕುಗಳ ನೆಲಗಟ್ಟು ಮರಕತಂಗಳ ಜಗುಲಿ |
ಪೊಳೆವ ನೀಲದ ಭಿತ್ತಿ ಬಜ್ಜರದ ಕಂಭ ಮಿರೆ |
ತೊಳಪ ವೈಡೂರಿಯದ ಮರನಕ್ಕೆ ಮಿರುಪ ಗೋಮೇಧಿಕದ ಜೋದಿಗೆಗಳು ||
ಸೆಳೆ ಪುಷ್ಯರಾಗದ ತೊಲೆಗಳೆಸೆವ ಮಾಣಿಕಂ |
ಗಳ ಲೋವೆ ಮುತ್ತುಗಳ ಸೂಸಕಂ ಮಿಸುಪ ಪ |
ವಳದ ಪುತ್ತಳಿ ಪೊನ್ನ ಪೊದಕೆ ರಂಜಿಸಿತು ಚಾವಡಿಯ ಚೌತಸದೆಡೆಯೊಳು ||೨೩||

ಸಜ್ಜುಕಂ ಮುಡಿವ ತಿಲಕವ ನಿಡುವ ಮೊಗಮುರಿವ |
ಕಜ್ಜಳಂ ಬರೆವ ಕನ್ನಡಿಯ ನಿಟ್ಟಿಪ ಪಾಡು |
ವಜ್ಜುಗದ ನರ್ತನದ ಕೋಪುಗಳ ವೀಣಾದಿ ವಾದ್ಯಮಂ ಬಿತ್ತರಿಸುವ ||
ಕಜ್ಜದ ಪಲವು ಕಳೆಗಳಂ ತೋರು ವಭಿನವದ |
ಸಜ್ಜೀವವಾಗಿರ್ದ ಪುತ್ತಳಿಗಳವಯವದ |
ಪಜ್ಜಳಿಪ ನವರತ್ನ ಭೂಷಣದ ಕಾಂತಿಗಳ್ಕಣ್ಗೆಸೆದುವಾ ಸಭೆಯೊಳು ||೨೪||

ಅಂಚೆಗಳ್ಕ್ರೌರ್ವಕ್ಕಿಗಳ್ಪೊನ್ನ ಪಕ್ಕಿಗ |
ಳ್ಪಿಂಚೆಗಳ್ಗಿಳಿಗಳಣಿವಕ್ಕಿಗಳ್ಪುರಮೆಗ |
ಳ್ಕ್ರೌಂಚೆಗಳ್ಕೋಗಿಲೆಗಳಲ್ಲಲ್ಲಿ ಗೊಪ್ಪಿದುವು ಸಜ್ಜೀವ ಭಾವದಿಂದೆ ||
ಪಂಚಾನನಾದಿ ಮೃಗತತಿ ಗಜ ಹಯಾಳಿ ವಿ |
ರಿಂಚಿ ಸೃಷ್ಟಿಯೊಳುಳ್ಳ ಮೂಜಗದ ನಾನಾ ಪ್ರ |
ಪಂಚುಗಳ ಚಿತ್ರಪತ್ರಂಗಳೆಸೆದಿರ್ದ ವಾ ಸಭೆಯೊಳ್ಮನೋಹರಮೆನೆ ||೨೫||

ನೀಲಮಣಿ ಕಾಂತಿಗಳ ಕತ್ತಲೆಯ ಮುತ್ತುಗಳ |
ಜಾಳಗಳ ಕೌಮುದಿಯ ಮಾಣಿಕದ ರಶ್ಮಿಗಳ |
ಬಾಲಾತಪದ ವಿದ್ರುಮಚ್ಛವಿಯ ಸಂಜೆಗೆಂಪಿನ ಪಗಲಿರುಳ್ಗಳಲ್ಲಿ ||
ತೇಲದಿಹು ವಲ್ಲದೆ ದಿವಾರಾತ್ರಿ ಯುಂಟೆಂಬ |
ಕಾಲಭೇದವ ನರಿಯದಾ ಮಹಾಸಭೆ ಸುರಪ |
ನೋಲಗದ ಮಂಟಪದ ಸೌಭಾಗ್ಯ ಕೆಂಟುಮಡಿ ಯಾಗಿರ್ದ ದಚ್ಚರಿಯೆನೆ ||೨೬||

ಕಸ್ತೂರಿ ಜವಾದಿಗಳ ಸಾರಣೆಯ ಕುಂಕುಮ ಪ |
ರಿಸ್ತರಣ ದಗರು ಚಂದನ ಧೂಪವಾಸಿತದ |
ವಿಸ್ತರದ ಕರ್ಪೂರ ತೈಲದಿಂ ದಲ್ಲಲ್ಲಿ ಗುರಿವ ಜೊಂಪಾಳಂಗಳ್ ||
ಶಸ್ತರತ್ನಪ್ರದೀಪ ಜ್ವಾಲೆಗಳ ಸಭೆ ಸ |
ಮಸ್ತ ಸೌಭಾಗ್ಯದಿಂ ದೊಪ್ಪುತಿರಲಾಗ ಭೂ |
ಪಸ್ತೋಮ ಸಹಿತ ಬಂದಾ ಬಭ್ರುವಾಹನಂ ಕುಳ್ಳಿರ್ದ ನೋಲಗದೊಳು ||೨೭||

ಓಲಗಕೆ ಬಂದ ನೃಪಕೋಟಿ ಕೋಟೀರ ಪ್ರ।
ಭಾಲಹರಿ ಹರಿದು ಮುಸುಕಿತು ತ ತ್ಸಭಾಮಣಿ।
ಜ್ವಾಲೆಗಳ ನಿಕರಮುಂ ಕರಮುಂ ಮುಗಿವ ಭಟರ ಸಂಘ ಸಂಘರ್ಷಣದೊಳು॥
ತೇಲಿ ಕಡಿಕಿದ ಕಂಠಮಾಲೆಗಳ ಗಳಿತ ಮು।
ಕ್ತಾಳಿಗ ಳಗಲಕೆ ಪರಿದೆಸೆವ ಮುತ್ತಿನ ರಂಗ।
ವಾಲಿಗಳ ನಿಕ್ಕಿದರು ದರ್ಶನೋತ್ಸವಕೆಂಬ ತೆರನಾದು ದಾಸ್ಥಳದೊಳು॥ ॥೨೮॥
ವಿಭ್ರಾಜಿಸುವ ರಾಜಮಂಡಲ ದಿರವನೆ ಕಂ।
ಡಭ್ರದಲ್ಲಿಯ ರಾಜಮಂಡಲಂ ತನಗಿನ್ನು।
ವಿಭ್ರಮದ ವೃತ್ತಿಮೇಕೆಂದು ಲಜ್ಜಿಸಿ ನೀಳ್ದ ತೆರದಿಂದೆ ಕಂಗೊಳಿಸುವ॥
ಶುಭ್ರಚಾಮರಮಂ ನಿಮಿರ್ದು ಚಿಮ್ಮಿಸಿದ ಚರ್ಚ।
ಲಭ್ರಮರ ಕುಂತಲದ ಕಮಲದಳ ನೇತ್ರೆಯ।
ರ್ಬಭ್ರುವಾಹನ ಮಹೀಪಾಲಕನ ಕೆಲಬಲದೊಳಂದಿ ನಿರು ಳೋಲಗದೊಳು ॥೨೯॥
ಬಳಿಕಾ ಮಹಾಸ್ಥಾನದೊಳ್ಬಭ್ರುವಾಹನಂ।
ನಲವಿಂದೆ ಕುಳ್ಳಿರ್ದು ನಗುತೆ ಪರಮಂಡಲ।
ಸ್ಥಳದಿಂದೆ ಬಂದ ರಾಯರ ಯಜ್ಞ ತುರಗಮಂ ಕಟ್ಟಿಕೊಂಡೆವು ಮನೆಯೊಳು॥
ಕೊಳುಗುಳಕೆ ಮಿಡುಕುಳ್ಳವರ್ ನಾವು ನಾಳೆ ಹಿಂ।
ದುಳಿಯ ಬಾರದು ಕದನ ಕನುವಾಗಿರಲಿ ಪಾಯ।
ದಳಮೆಂದು ನುಡಿದಂ ಸುಬುದ್ಧಿ ಮೊದಲಾಗಿಹ ಶಿರಃ ಪ್ರಧಾನಿಗಳ ಕೂಡೆ॥ ॥೩೦॥
ಇಂತಿಲ್ಲಿ ನಡೆ ದಖಿಲ ವೃತ್ತಾಂತಮಂ ಕೇಳ್ದ।
ಳಂತಃಪುರದೊಳರ್ಜುನನ ಗುಣಾವಳಿಗಳಂ।
ಸಂತತಂ ನೆನೆದು ಚಿಂತಿಪ ಬಭ್ರುವಾಹನನ ನಿಜಮಾತೆ ಚಿತ್ರಾಂಗದೆ॥
ಸಂತೋಷಮಂ ತಾಳ್ದು ತನಯನೋಲಗಕೆ ಭರ।
ದಿಂ ತಳರ್ದಿದಿರೇಳ್ವ ಕುವರನಂ ತೆಗೆದಪ್ಪಿ।
ಕುಂತೀಸುತನ ವಾಜಿಯಂ ಕಟ್ಟಿದೈ ಮಗನೆ ಲೇಸುಮಾಡಿದೆ ಯೆಂದಳು॥ ॥೩೧॥
ಕ್ಷುದ್ರಬುದ್ಧಿಯನೆಲ್ಲಿ ಕಲಿತೆ ನೀನೀಪರಿ ಗು।
ರುದ್ರೋಹಕೆಂತು ತೊಡರ್ದುದು ನಿನ್ನ ಮನ ಮಕಟ।
ಮದ್ರಮಣ ನಾಗಮಂ ನಿನಗೆ ವಿರಹಿತಮಾದು ದಾತ ನುದರದೊಳೆ ಜನಿಸಿ॥
ಉದ್ರೇಕದಿಂದೆ ಕಟ್ಟಿದೆಯಲಾ ತುರಗಮಂ।
ಭದ್ರಮಾಪುದು ರಾಜಕಾರ್ಯಮಿಂ ದಮ್ಮತ್ತಕೆ ಸ।
ಮುದ್ರಮಂ ಮಥಿಸೆ ವಿಷ ಮುದಯಿಸಿದೊಲಾಯ್ತು ನಿನ್ನುದ್ಭವಂ ತನಗೆಂದಳು ॥೩೨॥
ಮಾತೆಯ ನುಡಿಗೆ ನಡನಡುಗಿ ಬಭ್ರುವಾಹನಂ।
ಭೀತಿಯಿಂ ದಡಿಗೆರಗಿ ಕ್ಷತ್ರಿಯರ ಪಂತದಿಂ।
ದಾತನ ತುರಂಗಮಂ ಕಟ್ಟಿದೆಂ ನಿಮ್ಮ ಚಿತ್ತಕೆ ಬಾರದಿರ್ದ ಬಳಿಕ॥
ನೀತಿಯಾವಪುದೆ ತನಗಿನ್ನು ನಿಮ್ಮಡಿಗೆ ಸಂ।
ಪ್ರೀತಿ ಯೆಂತಾದಪುದದಂ ಬೆಸಸಿದೊಡೆ ಮಾಳ್ಪೆ।
ನಾತ ಕಾತುರಮೆಂದು ಕೈ ಮುಗಿದೊಡಾಗ ಚಿತ್ರಾಂಗದೆ ನಿರೂಪಿಸಿದಳು॥ ॥೩೩॥

ಮಗನೆ ಕೇಳಿನ್ನ ನೆಂ ದರ್ಜುನಂ ಬಿಟ್ಟು ನಿಜ।
ನಗರಿಗೈದಿದ ನಂದು ಮೊದಲಾಗಿ ತಾ ನವನ।
ನಗಲ್ದ ಸಂತಾಪದಿಂ ತಪಿಸುತಿರ್ದೆಂ ಪುಣ್ಯವಶದಿಂದೆ ಬಂದನಿಂದು ॥
ಬಗೆಯದಿರ್ದಪೆ ನೆಂತು ಕಾಂತನಂ ನೀಂ ನಿಂದು।
ಮೊಗದೋರಿ ನಿನ್ನ ಸರ್ವಸ್ವವಂ ತಾತ ನಂ।
ಘ್ರಿಗೆ ಸಮರ್ಪಿಸಿದೊಡಾಂ ಮಾಡಿದ ತಪೋನಿಷ್ಠೆ ಸಫಲಮಾದಪುದೆಂದಳು ॥೩೪॥
ಕಂದ ನೀನಿಂದು ನಿನ್ನಖಿಳ ಪ್ರಕೃತಿಗಳಂ।
ತಂದೆಗೊಪ್ಪಿಸಿ ಯುಧಿಷ್ಠಿರ ನೃಪನ ವೈರಿಗಳ।
ಮುಂದೆ ತೋರಿಸು ನಿನ್ನ ಶೌರ್ಯಮಂ ತನು ಧನ ಪ್ರಾಣಂಗಳವರದಾಗೆ ॥
ನಿಂದೆ ಗೊಳಗಾಗದಿ ದುಃಪುತ್ರಸಂತಾನದಂ।
ತೊಂದಿಸದಿ ರಗತಿಯುಂ ತನ್ನ ಪಾತಿವ್ರತ್ಯ।
ಕೆಂದು ಸೂನುಗೆ ಬುದ್ಧಿಗಲಿಸಿ ಪಾರ್ಥನ ಬರವಿ ಗುಬ್ಬಿದ ಳ್ಚಿತ್ರಾಂಗದೆ ॥ ॥೩೫॥
ಜನನಿಯಂ ಮನೆಗೆ ಮನ್ನಿಸಿ ಕಳುಹಿ ಬಭ್ರುವಾ।
ಹನ ನಾ ಸುಬುದ್ಧಿಯಂ ನೋಡಿ ಪಿತನಂ ಕಾಣ್ಬು।
ದನುಚಿತವೊ ಮೇಣುಚಿತಮಾದಪುದೊ ಪೇಳಿದರ ನಿಶ್ಚಯವ ನೀಗಳೆನಲು ॥
ನಿನಗೆಣಿಕೆ ಬೇಡ ಮೊದಲರಿಯದಾದೆವು ಧರ್ಮ।
ತನಯಂಗೆ ಸಿಮ್ಮಯ್ಯ ನನುಜ ನಾತನ ರಕ್ಷೆ।
ವಿನುತ ಹಯಕಿದ ನಿನ್ನು ಕಲಿತನದೆ ಕಟ್ಟುವುದು ನೀತಿಪಥ ಮಲ್ಲೆಂದನು ॥ ॥೩೬॥
ಇನ್ನು ಕಟ್ಟಿಸು ಗುಡಿಗಳಂ ಬೇಗ ಪಟ್ಟಣಕೆ।
ನಿನ್ನಖಿಳ ರಾಜ್ಯಪದವಿಯು ನೊಪ್ಪಿ ಸಯ್ಯಂಗೆ।
ಮುನ್ನೆಯ ಚಾತುರಂಗದ ಸೇನೆ ನಾಗರಿಕ ಜನ ಮಲಂಕರಿಸಿ ಕೊಳಲಿ ॥
ಕನ್ನೆಯರ್ಲಾಜ ದಧಿ ದೂರ್ವಾಕ್ಷತೆಗಳಿಂದೆ।
ಕನ್ನಡಿ ಕಳಸ ವಿಡಿದು ಬರಲಿ ಸಂದರ್ಶನಕೆ।
ಸನ್ನುತ ಸುವಸ್ತುಗಳ ನೆಲ್ಲಮಂ ತೆಗೆಸು ತಡ ವೇಕೆಂದ ನಾ ಸುಬುದ್ಧಿ ॥ ॥೩೭॥
ವರ ಸುಬುದ್ಧಿಯ ಬುದ್ಧಿಯಂ ಕೇಳ್ದು ನಾ ಪಾರ್ಥ।
ಮೊರೆಮೊರೆಗಳೆಲ್ಲರಂ ಕಳಿಪಿದಂ ಮನೆಗಳ್ಗೆ।
ಪುರದೊಳಗೆ ಡಂಗುರಂ ಪೊಯ್ಸಿದಂ ತೆಗೆಸಿದಂ ಕೋಶದ ಸುವಸ್ತುಗಳನು ॥
ತರಿಸಿದಂ ಕನಕಪೂರಿತ ಶಕಟ ನಿಕರಮುಂ।
ತರುಣಿ ಗೋ ಮಹಿಷಿ ಮದಕುಂಜರ ಕುಲಾಶ್ವಮಣಿ।
ವಿರಚಿತ ರಥಂಗಳಂ ರಜತ ಕಾಂಚನಮಯದ ಪಲವು ಕೊಪ್ಪರಿಗೆಗಳನು ॥ ॥೩೮॥
ನವ್ಯ ಚಿತ್ರಾಂಬರಾಭರಣಂಗಳಂ ವಿವಿಧ।
ದಿವ್ಯರತ್ನಂಗಳಂ ಪರಿಪರಿಯ ಪರಿಮಳ।
ದ್ರವ್ಯಂಗಳಂ ಕನಕ ಖಟ್ವಸುತ ಹಂಸತೂಲದ ಮೃದುಲ ತಲ್ಪಗಳನು ॥
ಸು ವ್ಯಜನ ಚಾಮರ ಸಿತಾತಪತ್ರಂಗಳಂ।
ಸವ್ಯಸಾಚಿಯ ಕಾಣಿಕೆಗೆ ತರುವುದೆಂದು ಕ।
ರ್ತವ್ಯದಿಂ ಜೋಡಿಸಿದ ನಾ ಬಭ್ರುವಾಹಂಮೂತರಿಗಖಿಳ ವಸ್ತುಗಳನು ॥ ॥೩೯॥

ಸ್ವರಗೈದುದನಿತರೊ ಳ್ಚರಣಾಯುಧಂ ಜಾರೆ |
ಯುರ ಮನಂ ಬೆಚ್ಚಿದುದು ಮೂಡದೆಸೆ ಬೆಳತುದು ಪ |
ಸರಿಸಿದುದು ತಂಗಾಳಿ ಖಗನಿಕರ ಮುಲಿದೆದ್ದು ವರಳಿದುವು ತಾವರೆಗಳು ||
ಮೊರೆದು ದಾರಡಿ ನೆರೆದು ವೆಣೆವಕ್ಕಿ ಶಾರಿಗ |
ಳ್ಪರಿದು ವಿಡಿದಿರ್ದ ಕತ್ತಲೆ ತೊಲಗಿ ತುತ್ಪಲಂ |
ಕೊರಗಿದುದು ಜನದ ಕ ಣ್ಣೆವೆದೆರೆದು ದೊದರಿದುವು ವೇಗುಲದ ವಾದ್ಯಂಗಳು ||೪೦||
ಅರಳ್ದ ಶೋಣಾಂಬುಜ ಚ್ಛಾಯೆಗ ಳಡರ್ದುವೆನೆ |
ಭರದಿಂದೆ ಕತ್ತಲೆಯ ಮೇಲೆ ಬಹ ರವಿಯ ರಥ |
ತುರಗ ಖುರಪುಟದಿಂದ ಮೇಳ್ವ ಕೆಂದೂಳ್ಗಳೆನೆ ಪ್ರಾಚೀ ನಿತಂಬವತಿಗೆ ||
ಸರಸದಿಂ ತರಣಿಯೊ ಳ್ನೆರೆವ ಸಮಯದೊಳಾದ |
ಕರರುಹ ಕ್ಷತದ ಕಿಸುಬಾಸುಳ್ಗಳೆನೆ ಸವಿ |
ಸ್ತರದ ಸಂಧ್ಯಾರಾಗವೈದೆ ರಂಜಿಸುತಿರ್ದು ದಂದು ಮೂಡಣ ದೆಸೆಯೊಳು || ||೪೧||
ಜಿತತಮಂ ಭುವನಮಧ್ಯಪ್ರಕಾಶಂ ವಿರಾ |
ಜಿತವರಾಹ ಶ್ರೀಧರಂ ಪಂಚಮುಖಮೂರ್ತಿ |
ನುತಕಾಶ್ಯಪಂ ರಾಜತೇಜೋಹರಂ ದೂಷಣಾರಿ ಗೋಕುಲಜಾತನು ||
ಅತಿಕಾಂತಿ ಶೋಭಿತ ದಿಗಂಬರಂ ಕಲಿತಾಪ |
ಹೃತಕುವಲಯಂ ಚಕ್ರಿ ಯವತಾರ ದಶಕ ದು |
ನ್ನತಿಗಳಂ ತಳೆದೆಸೆವ ದಿನಪ ನುದಯಂಗೈದ ನಂದು ಪೂರ್ವಾಚಲದೊಳು || ||೪೨||
ಒಂದುಮಾರ್ಗದೊಳೆ ನಡೆಯದೆ ಸದಾ ದ್ವಿಜನಿಕರ |
ವಂದವಂ ಕಿಡಿಸಿ ಗುರುಬುಧ ಮಂಗಳೋನ್ನತಿಗೆ |
ಕುಂದ ನಿತ್ತುದರಿಂದೆ ಸಾರಥಿ ಹೆಳವನಾದ ನಾತ್ಮಜಂ ಲೋಕಮರಿಯೆ ||
ಮಂದನಾದಂ ನಿನ್ನ ಪತಿಗೆಂದು ಪದ್ಮಿನಿಯ |
ಮುಂದೆ ನಗುವ ಸಿರೋತ್ಪಲಂಗ ಳಿನ ನುದಯ ದೊ |
ಳ್ಕಂದಿದುವು ಪರನಿಂದೆಗೈದರ್ಗೆ ಪರಿಭವಂ ಕೆಯ್ಯೊಡನೆ ತೋರದಿಹುದೆ || ||೪೩||
ಆದಿತ್ಯ ನುದಯದೊ ಳ್ಫಲುಗುಣನ ಸೂನು ಸಂ |
ಧ್ಯಾದಿಗಳ ನಾಚರಿಸಿ ವಸ್ತುಗಳ ನೈದೆ ಸಂ |
ಪಾದಿಸಿ ಕಿರೀಟಿಯಂ ಕಾಣ ಲನುವಾದ ನರ್ಜುನ ನಿತ್ತ ಪಾಳೆಯದೊಳು ||
ಸಾಧಿಸಿ ಸಕಲ ನಿತ್ಯಕೃತ್ಯಮಂ ಮಾಡಿ ಮಧು |
ಸೂದನನ ಚರಣಮಂ ನೆನೆದು ವೃಷಕೇತು ವೊದ |
ಲಾದ ವೀರರ್ಕಳಂ ಕರೆಸಿದಂ ಹಯಮಂ ಬಿಡಿಸಿಕೊಂಬ ತವಕದಿಂದೆ || ||೪೪||
ಅನುಸಾಲ್ವಕನ ಸೇನೆ ಯಾದವರ ಚತುರಂಗ |
ಮಿನಸುತನ ಸೂನುವಿನ ನೋಹರಂ ಯೌವನಾ |
ಶ್ವನ ಪಾಯದಳ ಮೆತುಲ ಹಂಸಕೇತುವಿನ ಪಡೆ ನೀಲಧ್ವಜನ ವಾಹಿನಿ ||
ದನುಜಾರಿನಂದನನ ನೇಮದಿಂ ಸಂಗ್ರಾಮ |
ಕನುವಾಗಿ ಪೊರಮಟ್ಟುದಾಗ ಸನ್ನಾಹದಿಂ |
ಘನ ವಾದ್ಯರಭಸದಿಂ ದರ್ಜುನಂ ಬಂದು ನಿಂದಂ ಮುಂದೆ ದೊರೆಗಳೊಡನೆ || ||೪೫||

ಆ ಸಮಯದೊಳ್ ಬಭ್ರುವಾಹನಂ ಪೊರಮಟ್ಟ।
ನಾ ಸುಬುದ್ಧಿಪ್ರಮುಖ ಮಂತ್ರಿಗಳ ಗಡಣದಿಂ।
ದಾ ಸಕಲವಸ್ತು ಸಹಿತಾ ಕುದುರೆಯುಂ ಕೊಂಡು ನಿಖಿಳ ಚತುರಂಗದೊಡನೆ॥
ಭಾಸುರದ ಕಳಸ ಕನ್ನಡಿವಿಡಿದು ನಡೆತಹ ವಿ।
ಲಾಸಿನಿಯರೊಗ್ಗಿನಿಂ ಸಂದಣಿಯ ಪುರಜನದ।
ಘೂಸುರಸ್ತೋಮದಿಂ ಗುಡಿ ತೋರಣಾವಳಿಯ ಸಿಂಗರದ ಪದಪಿನಿಂದೆ॥ ॥೪೬॥
ಎಲ್ಲಿ ಕೌಂತೇಯನಿರ್ದಪ ನಲ್ಲಗಾಗಿ ನಿಂ।
ದಲ್ಲಿ ನಿಲ್ಲದೆ ಸಂಭ್ರಮದೊಳೆ ನಡೆತಂದು ಮೈ।
ಘುಲ್ಲವಿಸೆ ಹರ್ಷದಿಂ ಪಾರ್ಥನಂ ಕಂಡು ನಿಜಮೌಳಿಯಂ ತೆಗೆದು ಸರನ॥
ನೆಲ್ಲಡಿ ಗನರ್ಘ್ಯರತ್ನಂಗಳಂ ಸುರಿದು ಕರ।
ಪಲ್ಲವ ದ್ವಿತಯಮಂ ಮುಗಿದು ಭಯಭಕ್ತಿಯಿಂ।
ಚೆಲ್ಲಿದನೊಡಲ ನಿಳೆಯೊಳಾ ಬಭ್ರುವಾಹನಂ ನೀಡಿ ಸಾಷ್ಟಾಂಗದಿಂದೆ॥ ॥೪೭॥
ಅರಸ ಕೇಳಾ ಬಭ್ರುವಾಹನನೊಡನೆ ಬಂದ।
ಪರಿವಾರಮಾ ಪುರಜನಂಗಳಾ ಕಾಮಿನಿಯ।
ರರಳ ಮಳೆ ಮುಕ್ತಾಫಲಂಗಳಂ ಸುರಿದ ರರ್ಜುನನ ಮಸ್ತಕದ ಮೇಲೆ॥
ವರ ಸುಬುದ್ಧಿ ಪ್ರಮುಖ ಮಂತ್ರಿಗಳ್ ಬಂದ ರೊ।
ತ್ತರಿಸಿ ಕಾಣಿಕೆಗೊಂಡು ಬಳಿಕ ವಿಸ್ಮಿತನಾಗಿ।
ಸರನೆಲೆ ನೃಪಾಲ ನೀ ನಾರೆನಲ್ಕವ ನೆದ್ದು ಕೈಮುಗಿಯುತಿಂತೆಂದನು॥ ॥೪೮॥
ತಾತ ಚಿತ್ತೈಸು ನಿನ್ನಾತ್ಮಜಂ ತಾ ನೆನ್ನ।
ಮಾತೆ ಚಿತ್ರಾಂಗದೆ ಸಲಹಿದವ ಳುಲೂಪಿ ಸಂ।
ಪ್ರೀತಿಯಿಂ ದಿವರಾದ ರರಸಿಯರ್ನೀನಂದು ತೀರ್ಥಯಾತ್ರೆಗೆ ಬಂದಿರೆ॥
ಜಾತನಾದೆಂ ಬಭ್ರುವಾಹನಂ ತಾ ನೀಗ।
ಳೀ ತುರಗಮಂ ಪಿಡಿದು ಕಟ್ಟಿ ತಪ್ಪಿದೆ ಗುಣಾ।
ತೀತಮಂ ಕ್ಷಮಿಸೆಂದು ಮಗು ಳೆರಗಿದಂ ಪಾರ್ಥನಡಿ ಗವಂ ಭೀತಿಯಿಂದೆ॥ ॥೪೯॥
ಮಗುಳೆ ಮಗು ಳಡಿಗೆರಗಿ ಭಯಭರಿತ ಭಕ್ತಿಯಿಂ।
ಮಿಗೆ ಬೇಡಿಕೊಳುತೆ ಕಾಲ್ವಿಡಿದಿರ್ಪ ತನಯನಂ।
ಮೊಗನೋಡಿ ಮಾತಾಡಿಸದೆ ಜಿರಗುವಡೆದಂತೆ ಕೆತ್ತುಗೊಂಡಿಹ ವಿಜಯನ॥
ಬಗೆಯನೀಕ್ಷಿಸಿ ಹಂಸಕೇತು ನೀಲಧ್ವಜಾ।
ದಿಗಳೆಲ್ಲರುಂ ಸವಿಸ್ಮಯರಾಗಿ ಚಿಂತಿಸಿ ಕ।
ರಗಿದ ರತಿಕರುಣರಸ ಭಾವದಿಂ ದೇನೆಂಜೆ ನಪಕೃತದ ಸೂಚಕವನು॥ ॥೫೦॥
ಪ್ರದ್ಯುಮ್ನ ಹಂಸಧ್ವಜಾದಿಗಳ್ಬಳಿ ಕಿದೇ।
ನುದ್ಯೋಗಮೆಲೆ ಪಾರ್ಥ ನಿನ್ನ ತನುಭವ ನೀತ।
ನುವೃತ್ಪರಾಕ್ರಮಿ ಮಹಾವೈಭವ ಶ್ಲಾಘ್ಯ ನಭಿಮಾನಿ ಮಾನ್ಯ ನಿಳೆಗೆ॥
ಖದ್ಯೋತಸನ್ನಿಭಂ ನಿನ್ನ ಹೋಲುವೆಯು ನಿರ।
ವದ್ಯರೂಪಂ ಪದಾವನತನಾಗಿರ್ದಪಂ।
ಹೃದ್ಯನಿವನ ಪರಿಗ್ರಹಿಸಿ ಮನ್ನಿಸದೇಕೆ ಸುಮ್ಮನಿರ್ದಪೆ ಯೆಂದರು॥ ॥೫೧॥

ಭೂಪ ಕೇಳವರಿಂತೆನಲ್ಕೆ ಬಳಿ ಕರ್ಜುನಂ ।
ಕೋಪದಿಂ ದವನ ನಿಟ್ಟಿಸು ತೆಂದನಾಗ ತಲೆ ।
ಪೋಪುದಕೆ ತನ್ನ ಕಾಲ್ಪೊಣೆಯೆಂಬ ಧರೆಯು ನಾಳ್ನುಡಿ ತಪ್ಪದಾದುದೆನಲು ॥
ಆ ಪುತ್ರನಹ ಬಭ್ರುವಾಹನನ ನೊದೆ ದೆಲವೊ ।
ನೀ ತಂದೆ ಲೋಕದೊ ಳ್ತನಗೆ ಸಂಭವಿಸಿದವ ।
ನೀಪರಿಯೊ ಳಂಜುವನೆ ಮೊದಲಶ್ವಮಂ ಕಟ್ಟಿ ಮತ್ತೆ ಬಿಡುವನೆ ಕಾದದೆ ॥ ॥೫೨॥
ಚಿತ್ರಾಂಗದೆಗೆ ವೈಶ್ಯನಿಂದೆ ಸಂಭವಿಸಿರ್ದ ।
ಪುತ್ರನಲ್ಲದೆ ತನಗೆ ಜನಿಸಿದೊಡೆ ಬಿಡುವೆಯಾ ।
ಕ್ಷತ್ರಿಯರ ಮತಮಂ ಸುಭದ್ರೆಗೆನ್ನಿಂ ಜನಿಸಿ ದಭಿಮನ್ಯು ತಾನೊರ್ವನೆ ॥
ಶತ್ರುಗಳ ಿಗಡ ಚಕ್ರವ್ಯೂಹದಲ್ಲಿಗೆ ಧ ।
ರಿತ್ರೀಶನಂ ಮೀರಿ ನಡೆದು ಸಂಗ್ರಾಮದೊ ಳ ।
ಮಿತ್ರಭಟರಂಗೆ ಲ್ದಳಿದನಾತ ನಲ್ಲದಾತ್ಮಜರುಂಟೆ ತನಗೆಂದನು ॥ ॥೫೩॥
ಜಂಬುಕಂ ಜನಿಸುವುದೆ ಸಿಂಗ ದುದರ ದೊ ಳಕಟ ।
ಹೆಂಬೇಡಿ ನೀನೆಲವೊ ಕುಲಗೇಡಿ ತನ್ನ ಬಸಿ ।
ರಿಂ ಬಂದವನೆ ಖೂಳ ಕುದುರೆಯಂ ಕಾದದೇತಕೆ ತಂದೆ ಪಂದೆ ನಿನಗೆ ॥
ಡೊಂಬಿನ ಚತುರ್ಬಲಮಿದೇಕೆ ಭೂಪಾಲ ರಾ ।
ಡಂಬರದ ಛತ್ರ ಚಮರಂಗಳೇತಕೆ ಬಯಲ ।
ಡಂಬಕದ ಕೃಮಗಳಿವೇಕೆ ಸುಡುಬಿಡು ಜೀವದಾಸೆಯಂ ಪೋಗೆಂದನು ॥ ॥೫೪॥
ಅಹಹ ನರ್ತಕಿಯಲಾ ಗಂಧರ್ವನಾಯಕನ ।
ಮುಹಿತ್ರವಲಾ ನಿನ್ನ ಮಾತೆ ಚಿತ್ರಾಂಗದೆ ವಿ ।
ರಹಿತಮಲ್ಲಿದು ನಿನಗೆ ಭೂಮಿಪರ ವೇಷಮಂ ತಳೆದ ನಾಟಕದ ರಚನೆ ॥
ಬಹಳ ಪೌರುಷಮಾದು ದಿಂದು ಹಯಮಂ ತಡೆದ ।
ರಹಣಿ ರಾಯರ ಮುಂದೆ ಹೋಗೆಂದು ದುಷ್ಕೃತಿಯು ।
ಕುಹಕದಿಂ ಬೈದು ಭಂಗಿಸಿ ಜರೆದ ನಾತ್ಮಜನ ನರ್ಜುನಂ ಕೋಪದಿಂದೆ ॥ ॥೫೫॥
ಬಿರುನುಡಿಗಳಿಂ ತನ್ನ ಮೊಗನೋಡ ದರ್ಜುನಂ ।
ಜರೆದೊಡಾತನ ಬಗೆಯ ನಾ ಸುಬುದ್ಧಿಗೆ ತೋರು ।
ತುರ ಕನ ಲ್ದಿರದೆದ್ದು ಪಳಿದೆಲಾ ಮಾತೆಯಂ ನನಗೆ ಸೀವರಿಸಿದೆ ಯಲಾ ॥
ಅರಿಯುಬಹುದಿನ್ನು ಕೇಳ್ನಿನ್ನ ತಲೆ ಗೆಡಹ ದೊಡೆ ।
ಕುರುಹಿಟ್ಟು ನೀನಾಡಿ ದಿನಿತೆಲ್ಲಮುಂ ದಿಟಂ ।
ಮರೆಯುದಿ ರ್ಸಾಕೆಂದು ತಿರುಗಿದಂ ಬಭ್ರುವಾಹನ ನಂದು ಕುದುರೆ ಸಹಿತ ॥ ॥೫೬॥
ತೆಗೆಸಿದಂ ತಂ ದಖಿಳ ವಸ್ತುವಂ ಕುದುರೆಯಂ ।
ಬಿಗಿಸಿದಂ ಲಾಯದೊ ಳ್ಪುರಜನ ಸ್ತ್ರೀಯರಂ ।
ಪುಗಿಸಿದಂ ಪಟ್ಟಣಕೆ ಕರೆಸಿದಂ ಸಚಿವರಂ ಸೇನಾಧಿ ನಾಯಕರನು ॥
ಜಗಿಸಿದಂ ಚತುರಂಗಮಂ ನೆರಹಿ ಧಾತ್ರಿಯಂ ।
ಮಿಗಿಸಿದಂ ವಾದ್ಯರವದಿಂ ದಬ್ಧಿಘೋಷಮಂ ।
ಮುಗಿಸಿದಂ ತಾವರೆಯ ನಾ ಬಭ್ರುವಾಹನಂ ಧೂಳ್ಗ ೀನನಂ ಮುಸುಕಲು ॥ ॥೫೭॥

ಕೇಳೆಲೆ ನೃಪಾಲಕುಲತಿಲಕ ಮುಂ ದದ್ಭುತ ಕ।
ಥಾಳಾಪಮಂ ಬಳಿಕ ಪೂಡಿದುದು ಕರ್ಕಶದ।
ಕಾಳಗಂ ಸವ್ಯಸಾಚಿಗೆ ಬಭ್ರುವಾಹನನ ಕೂಡೆ ಮಹದಾಹವದೊಳು॥
ಹೇಳಲೇನೆಂದು ಸುರಪಂಗೆ ಪಾರ್ಥನೊ ಳಾದ।
ಕೋಳಾಹಳದ ಕದನದಂತೆ ಮು ನ್ನಧ್ವರದ।
ಬೇಳಂಬದಿಂಡೆ ರಾಮಂಗೆ ಕುಶಲವರೊಡನೆ ಬಂದ ಸಂಗ್ರಾಮದಂತೆ॥ ॥೫೮॥

ಆಲಿಸಿದ ನಲ್ಲಿಪರಿಯಂತ ಜನಮೇಜಯಂ।
ಮೇಲಣ ಕಥೆಯ ನೊಲ್ದು ಬೆಸಗೊಂಡ ನೆಲೆ ಮುನಿಪ।
ಹೋಲಿಸಿ ನುಡಿದೆ ಸುರಪ ಫಲ್ಗುಣರ ಸಮರಮಂ ಕೇಳ್ದೆ ನದ ನಾಂ ನಿನ್ನೊಳು॥
ಹೇಳಬೇಹುದು ರಾಘವಂಗೆ ಸುತರೊಡನಾದ।
ಕಾಳಗದ ಸಂಗತಿಯ ನೆನಗೆಂ ದೆನಲ್ಕೆ ಭೂ।
ಪಾಲಂಗೆ ವಿರಚಿಸಿದ ನೀ ತೆರದೊಳಾ ತಪೋನಿಧಿ ಬಳಿಕ ಸಂತಸದೊಳು॥ ॥೫೯॥

ಪ್ರೇಮದಿಂದ್ಯೆದೆ ವಿಸ್ತರಿಸಿದಂ ನೃಪಕುಲೋ।
ದ್ದಾಮ ಜನಮೇಜಯಂ ಬೆಸಗೊಳ ಲ್ಜೈಮಿನಿ ಮ।
ಹಾ ಮುನೀಂದ್ರಂ ಕೂರ್ತು ಕೇಳ್ವರ್ಗೆ ರೋಮಾಂಚನಂ ಪೊಣ್ಮೆ ಹರುಷಮುಣ್ಮೆ॥
ರಾಮಾವತಾರ ದೊ ಳ್ದೇವಪುರನಿಲಯ ಲ।
ಕ್ಷ್ಮೀ ಮನೋವಲ್ಲಭಂ ತನ್ನ ಸುತರೊಡನೆ ಸಂ।
ಗ್ರಾಮದೊ ಳ್ಮಾಡಿದ ಕಥಾಮೃತವ ನದರ ಕಾರಣ ಸಹಿತ ತುದಿನೊವಲ್ಗೆ॥ ॥೬೦॥

ಸಂಧಿ ೧೭ ಕ್ಕೆ ಪದ್ಯಗಳು ೮೬೯ ಕ್ಕೆ ಮಂಗಳಮಸ್ತು.

## ಹದಿನೆಂಟನೆಯ ಸಂಧಿ.

ಸೂಚನೆ॥ ಸಾಮ್ರಾಜ್ಯಮಂ ತಾ ಳ್ದಿಸಿದ ರಾಘವೇಂದ್ರನಿಂ।
ದಾಮ ಪ್ರವಾಳದಂತಿರೆ ವಿರಾಜಿಸುತಿರ್ಪ।
ತಾಮ್ರಾಧರೆಯರ ಸೀಮಂತಮಣಿ ಸೀತಾರಮಣಿ ಗರ್ಭಮಂ ತಾಳ್ದಳು॥

ಭೂಪಾಲ ಕೇ ಳಾದೊಡಿನ್ನು ಪೂರ್ವದೊ ಳವನಿ।
ಜಾಪತಿಯ ಕುಶಲವರ ಸಂಗರದ ಕೌತುಕವ।
ನಾ ಪನಿತನೊರೆವೆ ನಿಕ್ಷ್ವಾಕು ಮೊದಲಾದ ರವಿಕುಲದ ನೃಪರೇಳ್ಗೆಗಳನು॥
ವ್ಯಾಪಿಸಿದ ಸಂಪದಕೆ ನೆಲೆವನೆ ಯೆನಿ ಪ್ಪಯೋ।
ಧ್ಯಾಪುರದೊ ಳವತರಿಸಿದಂ ಮಹಾವಿಷ್ಣು ಸುತ।
ರೂಪದಿಂ ರಾಮಾಭಿ ಧಾನ ದೊ ಳ್ಪುತ್ರಕಾಮೇಷ್ಟಿಯಿಂ ದಶರಥಂಗೆ॥ ॥೧॥

ತೊಳೆದು ಜನನಿಯ ಜಠರಮಂ ಜನಿಸಿ ಭವನ ದೊ।
ಳ್ಬಳೆದು ಲಕ್ಷ್ಮಣ ಭರತ ಶತ್ರುಘ್ನ ರೊಡಗೂಡಿ।
ತಳೆದು ಕೌಸಿಕನ ಮಖಮಂ ಕಾದು ತಾಟಕೆಯನೊರಸಿ ಮುನಿಸತಿ ಯಘವನು॥
ಕಳೆದು ಮಿಥಿಲೆಗೆ ಪೋಗಿ ಭಾರ್ಗವನ ಗರ್ವಮಂ।
ಸೆಳೆದು ಹರಚಾಪಮಂ ಮುರಿದೊಲಿಸಿ ಸೀತೆಯಂ।
ದಳೆ ದುತ್ಸವದೊ ಳಯೋಧ್ಯಾಪುರಿಗೆ ದಶರಥನೊಡನೆ ರಾಘವಂ ಬಂದನು॥ ॥೨॥

ವರ್ಧಿಪ ಕುಮಾರಂಗೆ ಭೂಮಿಶ್ವರಂ ಬಳಿಕ |
ಮೂರ್ಧಾಭಿಷೇಚನಂ ಮಾಡ ಲನುಗೈಯ್ಯೆ ನೃಪ |
ನರ್ಧಾಂಗಿ ತಡೆಯೆ ಪೊರಮಟ್ಟು ಬನಕೈದೆ ನರಪತಿ ಪುತ್ರಶೋಕದಿಂದೆ ||
ಸ್ಪರ್ಧಾಮುಕಡರೆ ಕೇಳುತೆ ಭರತನಂ ಕಳುಹಿ |
ದುರ್ಧರ ದರಣ್ಯ ಪ್ರವೇಶನುಂ ಮಾಡಿದಂ |
ಸ್ಪರ್ಧಿಸುವ ದನುಜರಂ ಮುರಿದು ಮುನಿಗಳ ನೋವಿ ಸತಿಸಹಿತ ಕಾಕುತ್ಸ್ಥನು ||೩||
ದಂಡಕಾರಣ್ಯದೊಳಿರಲ್ಕೆ ಶೂರ್ಪಣಖಿ ಬಂ |
ದಂಡಲೆಯ ಲಾಕೆಯಂ ಭಂಗಿಸಿ ಖರಾದ್ಯರಂ |
ಖಂಡಿಸಿ ಕನಕ ಮೃಗ ವ್ಯಾಜದಿಂದೈದೆ ಲಕ್ಷ್ಮಣನಗಲೆ ಕಪಟದಿಂದೆ ||
ಕೊಂಡೊಯ್ಯೆ ರಾವಣಂ ಸೀತೆಯುಂ ಕಾಣ ದುರೆ |
ಬೆಂಡಾಗಿ ವಿರಹದಿಂ ಬಿದ್ದಿಹ ಜಟಾಯುವಂ |
ಕಂಡು ಪೊಲಬಂ ಕೇಳ್ದು ಸೌಮಿತ್ರಿ ಸಹಿತ ನಡೆದಂ ಮುಂದೆ ರಘುನಾಥನು || ||೪||
ಪಥದೊ ಳ್ಕಬಂಧನಂ ಕೊಂದು ಶಬರಿಯ ಮನೋ |
ರಥಮಂ ಸಲಿಸಿ ಕರುಣದಿಂ ದಾಂಜನೇಯನಂ |
ಪ್ರಥಮದೊ ಳ್ಕಂಡು ಸುಗ್ರೀವಂಗೆ ಕೈಗೊಟ್ಟು ವಾಲಿಯುಂ ಬಾಣದಿಂದೆ ||
ಮಥಿಸಿ ರಾವಣನ ಮೇಲಣ ರಾಜಕಾರಿಯದ |
ಕಥನಕಾಳೋಚಿಸಿ ಕರಡಿ ಕಪಿಗಳಂ ನೆರಪಿ |
ಪೃಥಿವಿಜೆಯ ನರಸಲ್ಕೆ ವೀರ ಹನುಮಂತನಂ ಕಳುಹಿದಂ ಕಾಕುತ್ಸ್ಥನು || ||೫||
ಧಿಂಕಿಟ್ಟು ಶರಧಿಯುಂ ದಾಂಟಿ ಮೇದಿನಿಯ ಸುತೆ |
ಗಂಕಿತದ ಮುದ್ರಿಕೆಯನಿತ್ತು ಬೀಳ್ಕೊಂಡು ನಿ |
ಶ್ಯಂಕೆಯೊ ಳ ಶೋಕವನಮಂ ಕಿತ್ತು ದನುಜರಂ ಸದೆ ದಕ್ಷನಂ ಮರ್ದಿಸಿ ||
ಅಂಕದೊ ಳ್ಪಳಿಕಿಂದ್ರಜಿತುವಿ ನುರು ಬ್ರಹ್ಮಾಸ್ತ್ರ |
ದಂಕೆಯಿಂ ನಿಂದು ವಾಲಧಿ ಗಿಕ್ಕಿ ದುರಿಯಿಂದೆ |
ಲಂಕೆಯಂ ಸುಟ್ಟು ಬಂ ದೊಸಗೆ ವೇ ಳ್ದನಿಲಜನ ನಸುರಾರಿ ಮನ್ನಿಸಿದನು || ||೬||
ಗಣನೆ ಯಿಲ್ಲದ ಕಪಿಗಳಂ ಕೂಡಿಕೊಂಡು ತೆಂ |
ಕಣ ಕಡಲ ತೀರದೊಳ್ಬಿಟ್ಟು ಬಂದೊಡೆ ವಿಭೀ |
ಷಣನಂ ಪರಿಗ್ರಹಿಸಿ ಲಂಕಾಧಿಪತ್ಯಮಂ ಕೊಟ್ಟು ಜಲಧಿಯನೆ ಕಟ್ಟಿ ||
ರಣದೊ ಳಸುರರ ಕುಲದ ಹೆಸ ರುಳಿಯದಂತೆ ರಾ |
ವಣ ಕುಂಭಕರ್ಣ ಮೊದಲಾದ ರಕ್ಕಸರ ಸಿರಿ |
ಹಣಿದ ವಾಡಿದ ನುರವಣಿಸಿ ಧೂಳಿಗೋಟೆಯುಂ ಕೊಂಡ ರಘುವೀರನಂದು || ||೭||
ರಾವಣನ ಪದಮಂ ವಿಭೀಷಣಂ ಗೊಲಿ ದಿತ್ತು |
ದೇವರ್ಕಳಂ ಪೊರೆದು ಸೆರೆಯಿರ್ದ ಸೀತೆಯಂ |
ಪಾವಕನ ಮುಖದಿಂ ಪರಿಗ್ರಹಿಸಿ ಮೂಜಗಂ ಮೆಚ್ಚೆ ವಿಜಯೋತ್ಸವದೊಳು ||
ಭೂಪನಂ ಸೌಮಿತ್ರಿ ದಶಮುಖಾವರಜ ನು |
ಗ್ರೀವಾದಿಗಳ ಗಡಣದಿಂ ದಯೋಧ್ಯಾಪುರಿಗೆ |
ಮೂವಾಳಿಸಿದ ನಮಲಮಣಿ ಪುಷ್ಪಕದ ಮೇಲೆ ಭರತನಂ ಪಾಲಿಸಲ್ಕೆ || ||೮||

ವರಪುಷ್ಪಕವನಿಳಿದು ಭರತ ಶತ್ರುಘ್ನರಂ |
ಕರುಣದಿಂ ತೆಗೆದಪ್ಪಿ ಕೌಶಿಕ ವಶಿಷ್ಠಾದಿ |
ಗುರುಗಳಂ ಸತ್ಕರಿಸಿ ಕೈಕೆ ಮೊದಲಾಗಿರ್ದ ಮಾತೃಜನಕ್ಕೈದೆ ನಮಿಸಿ ||
ಅರಮನೆಯ ಸತಿಯರಂ ಸಚಿವರಂ ಪ್ರಜೆಗಳಂ |
ಪರಿಜನ ಪ್ರಕೃತಿಗಳ ನಿರವಂ ಕಾಣಿಸಿಕೊಂಡು |
ಬರವನೇ ಹಾರೈಸಿ ಕೃಶೆಯಾದ ಕೌಸಲೆಗೆ ರಾಮ ನಭಿವಂದಿಸಿದನು || ||೯||

ಕಯ್ದುಳದೊಳೊಯ್ಯನೊಯ್ಯನೆ ಘನ ಸ್ನೇಹದಿಂ |
ಮೆಯ್ದಡವಿ ತನಯನಂ ತಕ್ಕೈಸಿ ಮುಂಡಾಡಿ |
ಕಯ್ದುಗಳ ಗಾಯಮಂ ಕಂಡು ಕರಗುತೆ ಮಗನೆ ನಿನ್ನ ಕೋಮಲ ತನುವನು ||
ಪೊಯ್ದವರ ಪಾ ರಕಟ ಜೆಂಮುದೆ ನ್ನೊಡಲೆಂದು |
ಸುಯ್ದು ಮುಗ್ಧಾಭಾವದಿಂ ತನ್ನ ಸವತಿಯಂ |
ಬಯ್ದು ಮರುಗುವ ಮಾತೆಯಂ ನೋಡಿ ನಗುತೆ ಸಂತೈಸಿದಂ ರಾವಣಾರಿ || ||೧೦||

ಮೇಲೆ ತಾಳ್ದಂ ಶುಭ ಮುಹೂರ್ತ ದೊಳ್ವಾರಿನಿಧಿ |
ಮೇರೆಯಾ ದವನಿಯಂ ಪಟ್ಟಾಭಿಷೇಚನದ |
ಕಾಲದೊಳ್ಕಂಡರು ಸಮಸ್ತ ಮುನಿ ಗೀರ್ವಾಣ ವಾನರ ದನುಜ ಮನುಜರು ||
ಮೂಲೋಕವೈದೆ ಕೊಂಡಾಡೆ ಬಳಿ ಕುರ್ವಿಯಂ |
ಪಾಲಿಸುತ್ತಿರ್ದ ನೊಂಬತ್ತು ಸಾಸಿರ ವರುಷ |
ಮೋಲೈಸಿದುದು ರಾಘವೇಂದ್ರನಂ ನಿಖಿಳ ಭೂಪತಿಚಯಂ ಪ್ರೀತಿಯಿಂದೆ || ||೧೧||

ಯೂಪಮಯಮಾಯ್ತು ಧರೆಯೆಲ್ಲಮಂ ವರಜಾತ |
ರೂಪಮಯವಾಯ್ತು ಮನೆಯೆಲ್ಲಮಂ ಶುಕಪಿಕಾ |
ಲಾಪಮಯಮಾಯ್ತು ವನಮೆಲ್ಲಮುಂ ವರ್ಧಿಪ ಪ್ರಜೆಗಳಿಂ ಸಂಚರಿಸುವ ||
ಗೋಪಮಯಮಾಯ್ತು ಗಿರಿಯೆಲ್ಲಮುಂ ರತ್ನ ಪ್ರ |
ದೀಪಮಯಮಾಯ್ತು ತಮಮೆಲ್ಲಮುಂ ರಘುಜ ಪ್ರ |
ತಾಪಮಯಮಾಯ್ತು ಮೂಜಗಮೆಲ್ಲಮುಂ ದಾಶರಥಿ ರಾಜ್ಯಮಂ ಪಾಲಿಸೆ || ||೧೨||

ಪಣ್ಗಾಯಿ ಪೂ ತಳಿರ್ಗಳಿಂ ತರು ಲತೆ ಯಿಲ್ಲ |
ತಣ್ಗೊಳಂ ಕೆರೆ ಕಾಲ್ವೆಗಳಿಲ್ಲ ದಿಳೆಯಿಲ್ಲ |
ಪೆಣ್ಗಂಡುಗಳೊಳೊರ್ವರುಂ ನಿಜಚಾರ ವಿರಹಿತರಾಗಿ ನಡೆವರಿಲ್ಲ ||
ಪಣ್ಣ ಚ್ಚಲಿಕ್ಕಿ ಕೊಡಪಾ ಲ್ಗರೆಯ ದಾನಿಲ್ಲ |
ಸುಣ್ಗಾಡಿ ಪತ್ತಿರದ ಪಸು ಪಕ್ಷಿ ಮೃಗ ಮಿಲ್ಲ |
ಕಣ್ಗೊಳಿಪ ರಾಮರಾಜ್ಯದೊಳಕಾಲದ ಮರಣಮಿಲ್ಲಖಿಳ ಜೀವಿಗಳ್ಗೆ || ||೧೩||

ಕಾಳಿಂದಿ ಸುರನದಿಗೆ ಕೃಷ್ಣನಮೃತಾಬ್ಧಿಗಳ |
ಕಾಳಿ ವಾಣಿಗೆ ಕಳಂ ಕಿಂದುಮಂಡಲಕೆ ವರ ||
ಕಾಳಿ ಕಾಪಾಲಿಗೆ ಮದಂ ದೇವಗಜಕೆ ನಂ ಜಹಿಪತಿಗೆ ತೊಡವಾಗಿರೆ ||
ಕಾಳಿಮದ ಕೂಟಮೆನಗಿಲ್ಲೆಂಬ ಮುಳಿ ಸತಿವಿ |
ಕಾಳಿಸ ಲಮಲ ಕೀರ್ತಿ ಕಾಂತೆ ಪೊರಮಟ್ಟು ಲೋ |
ಕಾಳಿಯಂ ತಿರುಗುವ ಳೆನಲ್ಕೆ ರಾಮನ ಯಶೋ ವಿಸ್ತರವ ನೇ ಪೊಗಳ್ವೆನು || ||೧೪||

ಸರ್ವ ಸಂಪತ್ಸಮೃದ್ಧಿಗಳಿಂ ಸ್ವಧರ್ಮದಿಂ |
ನಿರ್ವಿಘ್ನಮಾಗಿ ಸಕಲ ಪ್ರಕೃತಿ ಜಾತಿ ಜಾ |
ತುರ್ವರ್ಣ್ಯಮಂ ಬಿಡದೆ ಪೊರೆವಲ್ಲಿ ನೀತಿಶಾಸ್ತ್ರಂಗಳ್ಗೆ ಪಳಿವೊರಿಸದೆ ||
ಉರ್ವಿಯಂ ನವ ಸಹಸ್ರಾಬ್ದಮುರೆ ಪಾಲಿಸಿದ |
ನುರ್ವಸಂತಾನಮಂ ಕಾಣ ದಿಕ್ಷ್ವಾಕು ಕುಲ |
ನಿರ್ವಾಹಮಂ ನೆನೆದು ರಘುವರಂ ನುಡಿದ ನೇಕಾಂತದಿಂ ಜಾನಕಿಯೊಳು || ||೧೫||

ಕಾಂತೆ ಕೇಳಿಕ್ಷ್ವಾಕುವಂಶ ಮೆನ್ನಲ್ಲಿ ಬಂ |
ದಾಂತು ದಿಲ್ಲಿಂದೆ ಸಂತತಿ ನಡೆಯದಿರ್ದೊಡೆ ಕು |
ಲಾಂತಕಂ ತಾನಾದಪೆಂ ಸಾ ಕದಂ ತಿರಲಿ ಮನುಜರ್ಗೆ ಸಂಸಾರದ ||
ಭ್ರಾಂತಿಯಂ ಬಿಡಿಸುವೊ ಡಪತ್ಯದೇಳ್ಗೆಗಳಿ ವಿ |
ಶ್ರಾಂತಿಯಲ್ಲದೆ ಪೆರ ತದೇನುಂಟು ಮುಂದೆ ಪು |
ತ್ರಾಂತರವ ನೈದದಿರ್ದಪೆ ನೆಂತೊ ಪೇಳೆಂದು ದಾಶರಥಿ ಬಿಸುಸುಯ್ದನು || ||೧೬||

ಸಂತಾನ ಮಂದಾರ ದೊಳ್ಪಡೆ ದತುಳ ವಿಭವ |
ಮಂ ತಳೆದು ನಂದನೋತ್ಸವ ದಮೃತ ಪಾನ ದ |
ತ್ಯಂತ ಸೌಖ್ಯವನೈದಿ ದೇವೇಂದ್ರನಂತೆ ಸುಮ್ಮಾನಮಾಗಿರದೆ ಬರಿದೆ ||
ಸಂತತಂ ಜಾತರೂಪವನೆ ಕಾಣದೆ ತಾಪ |
ದಿಂ ತೊಳಲಿ ಬಳಲುವ ದರಿದ್ರನಂದ ದೊಳ್ಪೆದೆ |
ಚಿಂತಿಸುವ ಸಂಸಾರಮೇಕೆ ಮಾನವ ಜನ್ಮಕೆಂದು ರಘುಪತಿ ನುಡಿದನು || ||೧೭||

ನೀರಿರ್ದ ಕಾಸಾರ ಕರವಿಂದ ಮಿಲ್ಲದೊಡೆ |
ತಾರಕೆಗಳಿರ್ದ ಗಗನಕೆ ಚಂದ್ರನಿಲ್ಲದೊಡೆ |
ಚಾರು ಯೌವನನಿರ್ದ ಪೆಣ್ಗೆನಿಯ ನಿಲ್ಲದೊಡೆ ಸನ್ನುತ ಪ್ರಜೆಗಳಿರ್ದ ||
ಧಾರಿಣಿಗೆ ಧರ್ಮ ದರಸಿಲ್ಲದೊಡೆ ಸಿರಿಯಿರ್ದ
ದಾರವಂಶಕೆ ಕುವರ ನಿಲ್ಲದೊಡೆ ಮೆರೆದಪುದೆ |
ನಾರಿ ಪೇಳಿನೆ ಲಜ್ಜೆಯಿಂದೆ ತಲೆವಾಗಿ ನಿಜಪತಿಗೆ ಜಾನಕಿ ನುಡಿದಳು || ||೧೮||

ಕಾಂತ ನೀಂ ಪೇಳ್ದೊಡೇಂ ಪುತ್ರನತಿಯುಹುದು ಜ |
ನ್ಮಾಂತರದ ಪುಣ್ಯಸ್ಸೆಸಲೆ ಪೆಣ್ಗೆ ಮುನ್ನೆ ತಾಂ |
ನೋಂತುದಲ್ಲದೆ ಬಂದಪುದೆ ಬರಿದೆ ಬಯಸಿದೊಡೆ ಸುಕುಮಾರನಂ ಪೊಡೆಯೊಳು ||
ಅಂ ತೋಗಗೆ ಪುದುಗಿರ್ದ ಪರಿಮಳದೊ ಳೊಪ್ಪುವ ಲ |
ತಾಂತ ಕುಟ್ಮಲದಂತೆ ಪರಗರ್ಭ ಲಾಂಛನದ |
ಕಾಂತಿಯಂ ತಳೆವ ವಂಗನೆಯ ರೆಲ್ಲರ್ಗೆ ದೊರೆವುದೆ ಮೇದಿನಿಯೊಳೆಂದಳು || ||೧೯||

ಕಂದನಾಡುವ ಬಾಲಲೀಲೆಯಂ ನೋಡಿ ತೊದ |
ಲೊಂದಿ ದನಿವಾತನುರೆ ಕೇಳ್ದು ಮುದ್ದಿನ ಮುದ್ದೆ |
ಯಂದ ದಂಗವನೆತ್ತಿಕೊಂಡು ನಳಿತೋಳ್ಗಳಿಂದಪ್ಪಿ ಕೆಂಗುರುಳ್ಗಳೊಲೆವ ||
ಮುಂದಲೆಯ ಕಂಪ ನಾಘ್ರಾಣಿಸಿ ತೊದಲ ಜೊಲ್ಲ |
ಚೆಂದುಟಿಯ ಬಾಯ್ದೆರೆಯನೈದೆ ಚುಂಬಿಸಿ ಸೊಗಸು |
ಗುಂದ ದಾಯೆಂದು ಪಂಚೇಂದ್ರಿಯ ಪ್ರೀತಿಯಂ ಪಡೆವ ದನ್ಯಾವ ಕೃತಕರೋ || ||೨೦||

ತೋಳ್ದೋಸರಿಸಿ ಮೇಲುದಂ ಸೆಳೆವ ಕಮಲಮಂ |
ಪೋಲ್ದ ಕಣ್ಗೊನೆಯಿಂದೆ ತಾಯ ಮೊಗಮಂ ನೋಳ್ಪ |
ಕಾಲ್ದುದಿಗಳಂ ಬಿದಿರಿ ತಡವರಿಸಿ ಕೈಯಿಡುವ ಬಾಲಂಗೆ ಮೋಹದಿಂದೆ ||
ಜೋಲ್ದೊಲೆವ ಹಾರಮಂ ಸರಿದು ಮುಯ್ಪಿಗೆ ಸಾರ್ಚಿ |
ಪಾಲ್ದೊರೆವ ಮೊಲೆಯೂಡಿ ಕೂಡೆ ತೊಟ್ಟಿಲೊಳಿಟ್ಟು |
ಸಾಲ್ದಸ್ವಪಿಂದೆ ಜೋಗುಳವಾಡಿ ತೂಗುವಳವೇಂ ಸುಕೃತಿಯೋ ಧರೆಯೊಳು ||೨೧||
ಇಂತು ಸುತರಿಲ್ಲ ದಾಸರೊಳವರ್ಗಳಿರ್ವರುಂ |
ಚಿಂತಿಸುವ ಸಮಯಕೆ ವಶಿಷ್ಠಮುನಿಪತಿ ಬಂದು |
ಸಂತಾನ ದಭ್ಯುದಯ ಮಾದಪುದು ಮುಂದೆ ನಿಮಗೆಂದು ಸಂಪ್ರೀತಿಯಿಂದೆ ||
ಸಂತೈಸೆ ಬಳಿಕ ರಘುಕುಲ ಸಾರ್ವಭೌಮ ನ |
ತ್ಯಂತ ಹರ್ಷಿತನಾಗಿರಲ್ಕೆ ತಲೆದೋರಿತು ವ |
ಸಂತಕಾಲಂ ವಿರಾಜಿತ ರಸಾಲಂ ವಿರಹಿ ಹೃದಯಶೂಲಂ ತಾನೆನೆ || ||೨೨||
ಅರಸಂಚೆ ಸರಸಿಯಂ ಕಲ ಪಿಕಂ ತಳಿತ ಮಾ |
ಮರನಂ ಚಕೋರತತಿ ಚಂದ್ರಿಕೆಯ ನಳಿಕುಲಂ |
ಬಿರಿಮುಗುಳ ಸರಗಿಳಿ ಬನಂಗಳಂ ವಿರಹಿಗಳ್ಕೂರ್ಪರಂ ಸಾರ್ದೆಸೆಯಲು ||
ಧರೆಯೊ ಳೆಳೆಗಾಳಿಯಂ ಶೀತಳದ ವಾರಿಯಂ |
ತರುಗಳ ನೆಳಲ್ಗಳಂ ಸೇರ ತೊಡಗಿತು ಜನಂ |
ಪರಿವೃತ ವಸಂತ ಕಾಲದೊ ಳಿಂತಿರ ಲ್ಬಳಿಕ ಸೀತೆ ಋತುಮತಿಯಾದಳು || ||೨೩||
ಮಲ್ಲಿಕಾಸ್ಮಿತರುಚಿರೆ ಕುಂದಕುಟ್ಮಲರದನೆ |
ಪಲ್ಲವಾಧರೆ ಭೃಂಗಕುಂತಳೆ ಕುಸುಮಗಂಧಿ |
ಸಲ್ಲಲಿತ ಕೋಕಿಲಾಲಾಪೆ ಚಂಪಕವರ್ಣೆ ಮೃದು ಮಧುರ ಕೀರವಾಣಿ ||
ಫುಲ್ಲಲೋಚನೆ ಚಾರು ಚಂದ್ರಬಿಂಬಾನನೆಯು |
ಸಲ್ಲಲಿತಗಾತ್ರಿ ಜಾನಕಿ ವಿರಾಜಿಸಿದ ಳ್ಸ |
ಮುಲ್ಲಾಸದಿಂ ಪುಷ್ಪವತಿಯಾಗಿ ವಿಕಸಿತ ವಸಂತಲಕ್ಷ್ಮಿಯ ತೆರದೊಳು || ||೨೪||
ಮೊಡವಿ ಮೂಡಿದಮೊಗಂ ಸೊಗಡುಗಂ ಪೊಗೆದ ಮೈ |
ತೊಡವುಗಳ ತೊಡಕಿಲ್ಲ ದವಯವಂ ಪೂಗಳಂ |
ಮುಡಿಯದ ಬಳಲ್ದುರುಬು ನಿಚ್ಚಳದ ಕಣ್ಮಲಿ ತೋರ್ಗಳಪ ಪಣೆ ಮಿರುಪ ಕದಪು ||
ಕಡುಬಿಣ್ಪಿಡಿದ ಕುಚಂ ಮಾಧವೀಲತೆಯ ಸೆಳೆ |
ಪಿಡಿದ ಕೈ ನಿರಿಯುಳಿದ ವಸು ಮಾಸಿ ದಂಬರಂ |
ಕುಡಿವರಿವ ಲಜ್ಜೆ ಸಿಂಗರಕೆ ಮಿಗಿಲಾ ಯ್ತುವಸಿ ಸುತೆಗೆ ಋತುಮತಿಯಾಗಲು || ||೨೫||
ಸಮುಚಿತ ಸ್ತ್ರೀಧರ್ಮದಿಂದೆ ನಾಲ್ಕನೆಯ ದಿನ |
ದಮಲ ಮಜ್ಜನ ದಲಂಕಾರಮೊ ಳೆಸೆದ ಳಂದು |
ನಿಮಿಷದೊಳ್ತ್ರಿಜಗಮಂ ಗೆಲ್ವೆನೆಂ ದಂಗಜಂ ಮಸೆದದಾಯುಧವೊ ಮೇಣು ||
ಕ್ರಮದಿಂದೆ ಮನ್ಮಥಂ ಕಲುಷಮಂ ಶೋಧಿಸಿದ |
ರಮಣೀಯ ಸೌಂದರ್ಯಸಾರಮೋ ಸ್ಮರನ ನಿರು |
ಪಮ ಯುಕ್ತಿಯ ಸಾಕಾರಮೋ ಪೇಳೆನ ಲ್ಸೀತೆ ರಾಘವನ ಕಣ್ಗೆ || ||೨೬||

ಸ್ಫುರದುತ್ಕಟಾಕ್ಷಚಂಚಲದಿಂದೆ ಚಾರು ಪೀ |
ವರ ಪಯೋಧರದಿಂದೆ ಪರಿವೃತ ಸುಮೇಖಲಾ |
ತರಳ ಸತ್ಕಲ ಕಿಂಕಿಣೀ ಘನಸ್ವನದಿಂದೆಸೆವ ಕಂಕಣಂಗಳಿಂದೆ ||
ಸರಸ ತರ ಲಾವಣ್ಯಪೂರ ಪ್ರವಾಹದಿಂ |
ಭರಿತ ಕಬರೀ ಬರ್ಹಿ ಲೀಲೆಯಿಂ ಮಳೆಗಾಲ |
ದಿರವ ನೆಚ್ಚರಿಪರಸಿಯಂ ಕಂಡು ರಾಮನ ಮನಶ್ಚಾತಕಂ ನಲಿದುದು || ||೨೭||
ಮಂದಗಮನೆಯ ಮಂದಹಾಸವ ವಿಲಾಸಮಂ |
ಕುಂದರದನೆಯ ಕುಂದ ದವಯವದ ಸೌಂದರ್ಯ |
ವಂದಮಂ ವಕ್ರಕುಂತಳೆಯ ವಕ್ರಾವಲೋಕನದ ಭಾವವ ಬಗೆಯುವ ||
ಚಂದನ ಸುಗಂಧಿನಿಯ ಚಂದ್ರಾಸ್ಯ ದೆಸಕಮಂ |
ಬಂದುಗೆ ದುಟಿಯಳ ಬಂಧುರದ ಸಿಂಗರವ ನೇ |
ನೆಂದು ಬಣ್ಣಿಸಬಹುದು ರಾಮಣೀಯಕವಾದ ರಾಮನ ಮಡದಿಯೋಲವನು || ||೨೮||
ನೊಸಲೊಳಾರಾಜಿಸುವ ತಿಲಕದಿಂ ತಿಲಕದಿಂ ದಲಕದಿಂ |
ಮಿಸುಪ ಮೈ ನಸುದೋರ್ಪ ವಸನದಿಂ ದಶನದಿಂ |
ಪಸರಿವೆಳನಗೆಯ ತೆಳ್ಗದಪಿನಿಂ ಪದಪಿನಿಂ ದಮರ್ದ ಪೊಂದೊಡಿಗೆ ಯಿಂದೆ ||
ಅಸಿವೆರಲ್ಗಳೊಳೊಪ್ಪುವುಗುರ್ಗಳಿಂ ತಿಗುರ್ಗಳಿಂ |
ಪೊಸತೆಸಿಪ ಕುಂಕುಮದ ಕಂಪಿನಿಂ ದಿಂಪಿನಿಂ |
ತ್ರಿಸರದೊಳ್ಮೆರೆವ ಗುರುಕುಚದಿಂದೆ ಕಚದಿಂದೆ ಕಾಂತೆ ಕಣ್ಗೆಸೆದಿರ್ದಳು || ||೨೯||
ಪಜ್ಜಳಿಪ ರತ್ನಪ್ರದೀಪಂಗಳಿಂದೆ ಪೊಸ |
ಬಜ್ಜರದ ಮಣಿಮಂಚದಿಂಪಂಚೆ ದುಪ್ಪಳಿನ |
ಸಜ್ಜುಕದಲರ್ಗಳಿಂದೆಸೆವ ಮೆಲ್ವಾಸಿನಿಂ ರಾಜೋಪಭೋಗ್ಯವಾದ ||
ಸಜ್ಜವನೆಯೊಳ್ವಿರಾಜಿಪ ಕಾಂತನೆಡೆಗೆ ನಸು |
ಲಜ್ಜೆ ಮಂದಸ್ಮಿತಂ ಕಿರು ಬೆಮರ್ಕಾತರಂ |
ಪಜ್ಜೆದೋರಲ್ಮೊಗದೊಳ್ಬಂದು ಸಾರ್ದಳೊಯ್ಯನೆ ಮತ್ತಗಜಗಾಮಿನಿ || ||೩೦||
ಸಾಗರದ ನಡುವೆ ಫಣಿತಲ್ಪದೊಳ್ಸಿರಿಯೊಡನೆ |
ಭೋಗಿಸುವ ತೆರದಿಂದೆ ಮಿಥಿಳೇಂದ್ರಸುತೆಯ ಸಂ |
ಭೋಗದಿಂ ರಘುಕುಲ ಲಲಾಮನೆಸೆದಂ ಮನುಜಲೀಲೆಗಿದು ಸಾರ್ಥಮೆನಲು ||
ರಾಗರಸದಿಂದೆ ಪುಳಕಂ ಪೊಣ್ಮೆ ನಲಿದು ಮದ |
ನಾಗಮ ಪ್ರೌಢಿಯಿಂ ಸಕಲ ರತಿಕಲೆಗಳಿಂ |
ಪಾಗಲ್ಪರಸ್ಪರ ವಿಚಾರಮಂ ಮರೆದೈಕ್ಯಭಾವದಿಂ ಸೊಗಸುಗೊಳಿಸಿ || ||೩೧||
ಬೆಂಗೊಡದೆ ಮೋಸವೋಗದೆ ತವಕಮುಡುಗಿ ಪೆರ |
ಪಿಂಗದೆ ವಿಘಾತಿಗಳುಕದೆ ಕೈಮರೆಯದೆ ಚಮು |
ರಿಂಗದೆ ನೆಗಳ್ದ ಪುಳಕಂ ಬಿಡದೆ ತಳ್ತು ಕ್ಕರಡಗ ದಲಸಿಕೆಮೋರದೆ ||
ಅಂಗಜಶ್ರಮವ ನಿಟ್ಟೆಸದೆ ಸಲೆ ರಂಜಿಸುವ |
ಸಂಗರಸದಾಳಾಪದಿಂ ದೆಸೆವ ರೊಂದಿನಿಸು |
ಭಂಗವಿಲ್ಲದೆ ವೀರಭಟರೊದಗುವಂತೆಸೆಸಮರತಿಯೊಳಾದಂಪತಿಗಳು || ||೩೨||

ಇಂತೆಸೆವ ಸಮರತಿಯ ಸೊಬಗಿಂದ ಮವರಿರ್ವ |
ರುಂ ತೊಳಗುತಿರೆ ಬಳಿಕ ವರ ವಿಷ್ಣು ನಕ್ಷತ್ರ |
ದಂತದೊಳ್ವೈದೇಹಿಗಾಯ್ತು ಗರ್ಭಾಧಾನಮವರ ಫಲದುಂ ನೋಡಲು ||
ಎಂತಾದೊಡಂ ತನ್ನ ಕಾಂತನ ನಗಲ್ವು ಸೀ |
ಮಂತಿನಿ ಪರಸ್ಥಳದೊಳಣುಗರಂ ಪಡೆವವಳ |
ದಂ ತಿಳಿಯದುತ್ಸವದೊಳಿರ್ದಳಾಕಾಂತೆ ಬಸಿರಾದ ಲಾಂಛನವನಾಂತು || ||೩೩||
ಸಣ್ಣನಡು ಬಳೆಯೆ ತಿವಳಿಗಳಡಗೆ ತೆಳ್ವಾಸೆ |
ನುಣ್ಣನೆ ಪೊಗರ್ವಡೆಯೆ ಚೂಚುಕದ ಕಪ್ಪೇರ್ದ್ದು |
ತಿಣ್ಣಮೊಲೆ ಬಿಣ್ಪಡರೆ ಕಾಲ್ಮಂದಗತಿಗಲಸೆ ನಗೆಮೊಗಂ ಬೆಳ್ಪುದೋರೆ ||
ಕಣ್ಣವೆಯ ಪುರ್ಬಿನ ನವಿರ್ಮಿಂಚುದಳೆಯೆ ತನು |
ತಣ್ಣಸದೊಳೆಸೆಯೆ ಪೊಸಗಾಡಿವೆತ್ತಿರ್ದಳೇಂ |
ವಣ್ಣಿಸುವೆನುಲ್ಲಸತ್ಕಾಂಚನ ಲತಾಂಗಿ ಸುತಲಾಂಛನದ ಗರ್ಭದಿಂದೆ || ||೩೪||
ಬೆಳ್ದಾವರೆಯೊಳೆರಗಿ ದಳಿಕುಲಂ ಗಗನಾಗ್ರ |
ದೊಳ್ದಿನದಿನಕೆ ಬೆಳೆವ ಚಂದ್ರಕಲೆ ಕನಕಾದ್ರಿ |
ಯೊಳ್ದಿಟ್ಟಿಗೊಳಿಸುವ ಸಿತಾಂಬುದಂ ರಾರಾಜಿಸುವ ತೆರದೊಳಾಕಾಂತೆಯ ||
ಒಳ್ದಳೆದ ಚೆಲ್ವಿನಾನನದೊಳುರೆ ಮಿರುಗುವ ಕು |
ರುಳ್ದಿಂಗಲಸಿ ನಡುವಿನೊಳ್ಪೊಳೆವ ಗರ್ಭಂ ನೆ |
ಗಳ್ದ ಕುಚದೊಳ್ಮಸುಪ ಚೂಚುಕದ ಕಪ್ಪು ಚೆಲ್ವಿಂದೆ ಕಣ್ಗೆಸೆದಿರ್ದುದು || ||೩೫||
ಚಂದ್ರಮುಖಿಯಾದ ವೈದೇಹಿಯ ಜಠರಮೆಂಬ |
ಚಂದ್ರಕಾಂತದ ಮಣಿಯು ಮಧ್ಯದೊಳ್ತವೆ ರಾಮ |
ಚಂದ್ರನೆಂ ಬಖಿಳ ಲೋಕಾನಂದಕರಮಾದ ಸಂಪೂರ್ಣಕಲೆಗಳುಳ್ಳ ||
ಚಂದ್ರನ ವಿರಾಜಿಪ ಪ್ರತಿಬಿಂಬಮಾಗಿರ್ದ |
ಚಂದ್ರನೆನೆ ಶಿಶು ಗರ್ಭದೊಳ್ತೊಳಗಿ ಕೂಡಿರ್ದ |
ಚಂದ್ರಿಕೆ ಪೊಲಂಗರುಚಿ ಬೆಳ್ಪಡರಲೊಳ್ಪಿನಿಂದೊಪ್ಪಿರ್ದ ಳುತ್ಪಲಾಕ್ಷಿ || ||೩೬||
ಕಾಂಚನ ಲತಾ ಕೋಮಲಾಂಗಿ ಗರ್ಭಿಣಿಯಾದ |
ಲಾಂಛನವ ನಿನಕುಲಾಧೀಶ್ವರಂ ಕಂಡು ರೋ |
ಮಾಂಚನದ ಹರ್ಷದಿಂ ನಾಲ್ಕನೆಯ ತಿಂಗಳೊಳ್ವೈಭವದಿಂ ಭೂಸುರರ್ಗೆ ||
ವಾಂಛಿತವನಿತ್ತು ಪುಂಸವನ ಸೀಮಂತಮಂ |
ತಾಂ ಚಾರುಲೋಚನೆಗೆ ವಿಸ್ತರಿಸಿದಂ ಚಿತ್ತ |
ಚಾಂಚಲ್ಯಮಿಲ್ಲದೆ ವಶಿಷ್ಠ ವಿಶ್ವಾಮಿತ್ರರುಕ್ತದಿಂ ಮಾಡಿಸಲ್ಕೆ || ||೩೭||
ಯೋಜನತ್ರಯವಗಲದುತ್ಸವದ ಶಾಲೆಯಂ |
ರಾಜಿಸಲ್ವೈಸಿ ಬಳಿಕಲ್ಲಿ ನೆರೆದ ನಾ |
ನಾಜನಕೆ ದ್ವಿಜರ್ಗೆ ಸುಗ್ರೀವ ಮೊದಲಾದ ಕಪಿಗಳ್ಗೆ ಭೂಸುರರ್ಗೆ ||
ರಾಜವರ್ಗಕೆ ವಿಭೀಷಣ ಮುಖ್ಯದೈತ್ಯರ್ಗೆ |
ಭೋಜನ ಸುಗಂಧ ತಾಂಬೂಲ ಪುಷ್ಪಾಕ್ಷತೆಯ |
ಪೂಜೆ ವಸ್ತ್ರಾಭರಣ ದುಡುಗೊರೆಗಳಂ ಕೊಟ್ಟು ರಾಘವಂ ಮನ್ನಿಸಿದನು || ||೩೮||

ಉತ್ಸವಕೆ ಬಂ ದನಿಬರೆಲ್ಲರಂ ಶರಣ ಜನ |
ವತ್ಸಲಂ ಸತ್ಕರಿಸಿ ಬೀಳ್ಕೊಟ್ಟು ರಾಜ ಸಂ |
ಪತ್ಸುಖದೊಳಿರ್ಪನಿತರೊಳ್ಬಳಿಕ ಸೀತೆ ನಿಜಕಾಂತ ನೇಕಾಂತಕೈದಿ ||
ಕುತ್ಸಿತಂ ಪೊದ್ದದಾಶ್ರಮದ ಋಷಿಪತ್ನಿಯರ |
ಸತ್ಸಂಗದೊಳೆನ್ನ ಬೇಸರಂ ತವಿಸುವೆ ನಿ |
ಮತ್ಸಕಂ ತನ ಗದರಿ ನಿನ್ನೊಮ್ಮೆ ಬನಕೆ ತನ್ನಂ ಕಳುಹಬೇಕೆಂದಳು || ||೩೯||
ಆ ಕ್ಷಿತಿಜೆ ಬಯಕೆಯಂ ಬಿನ್ನೈಸೆ ಕೇಳ್ದು ನಗು |
ತಾಕ್ಷೇಪದಿಂದೆ ಕಳುಹುವನಾಗಿ ಸಂತೈಸಿ |
ರಾಕ್ಷಸಾಂತಕ ನಿರಲ್ಕೊಂದಿರುಳ್ಕನಸುಗಂಡೇಳುತೆ ವಶಿಷ್ಠನೊಡನೆ |
ಈ ಕ್ಷೋಣಿಸುತೆ ಗಂಗೆಯಂ ಕಳೆದು ಕಾಡೊಳ್ಮ |
ಹಾಕ್ಷೀಣೆಯಾಗಿ ದೇಸಿಗರಂತೆ ದೆಸೆದೆಸೆಯ |
ನೀಕ್ಷಿಸುತೆ ಮರುಗು ತಳುತಿರ್ದುದಂ ಕಂಡೆನಿದು ಲೇಸಹುದೆ ಪೇಳೆಂದನು || ||೪೦||
ಎನೆ ಕನಸಿದೊಳ್ಳಿತಲ್ಲಿಂ ದದಕೆ ಶಾಂತಿಯಂ |
ಮುನಿವರ ವಶಿಷ್ಠಂ ನೆಗಳ್ಚಿದಂ ಬಳಿಕ ಮನ |
ದನುತಾಪದಿಂ ಪ್ರಜೆಯ ನಾರೈವುದಂ ಮರೆ ದೆರಡು ಮೂರು ದಿವಸಮಿರ್ದು ||
ಜನ ಮಲಸಿ ದಪುದೆಂದು ರಾತ್ರಿಯೊಳ್ಪೊರಮಟ್ಟು |
ದಿನಪಕುಲ ತಿಲಕ ನೇಕಾಂತದೊಳ್ನಗರ ಶೋ |
ಧನೆಯ ಜಾರರೊಳೊರ್ವನಂ ಕರೆಸಿ ಕೇಳ್ದನಿಂತೆಂದು ವಿನಯೋಕ್ತಿಯಿಂದೆ || ||೪೧||
ನಿಂದಿಸರಲೇ ಪ್ರಜೆಗಳಿನ್ನೆಗಂ ತನ್ನ ಗುಣ |
ಕೊಂದಿಸರಲೇ ಪಳಿವ ನಮಲತರ ಕೀರ್ತಿಯಂ |
ಕಂದಿಸರಲೇ ದೂಸರಿಂದೆ ಭುಜವಿಜಯ ಪ್ರತಾಪ ತೇಜವ ನಿಳೆಯೊಳು ||
ನಂದಿಸರಲೇ ಜರೆದು ನಿಜವಂಶ ದೇಳ್ಗೆಯಂ |
ಕುಂದಿಸರಲೇ ಖೋಡಿಗಳೆದು ವಹಮಾನದೊ |
ಳ್ಸಂಧಿಸರಲೇ ಕೊಂಕು ಕೊರತೆಗಳ ನೆಂದವನ ನಸುರಾರಿ ಬೆಸಗೊಂಡನು || ||೪೨||
ದೇವ ನಿನ್ನಂ ಪೆಸರಿಸಿದ ನೀಶನಾದಪಂ |
ಸೇವಿಸಿದವಂ ಚತುರ್ಮುಖನಾಗಲುಳ್ಳವಂ |
ಕಾವುದೆಂದೈದೆ ಮರೆವೊಕ್ಕವಂ ಜಗದೊಳಾಚಂದ್ರಾರ್ಕಮಾಗಿ ಬಾಳ್ವ ||
ಶ್ರೀವಿಭವದಿಂ ಶಕ್ರಪದವಿಯಂ ಜರೆದಪಂ |
ಭೂವಲಯದೊಳ್ನಿಂದಿಸುವರುಂಟೆ ತರಣಿಯಂ |
ಕಾವಳಂ ಮುಸುಕಿರ್ದೊಡೇನಪ್ಪುದೆಂದವಂ ಬಿನ್ನೈಸಿ ಕೈಮುಗಿದನು || ||೪೩||
ಏನಾದೊಡಂ ಕಟಕಿಯಾಗಿರ್ಪು ದೀಮಾತು |
ಭಾನುವಂ ಕಾವಳಂ ಮುಸುಕಲೇನೆನಲೆನ್ನ |
ಹೀನವಾ ದರಸುತನ ಕಾವುದೂಣೆಯ ಮೆಂಬರೆಂದು ರಘುಪತಿ ಕೇಳಲು ||
ನೀನೆ ಪಾವನರೂಪನೆಂಬುದಂ ಮುನಿಯ ವಧು |
ತಾನೆ ತೋರಿಸಳೆ ಲೋಕದ ಜನಕೆ ಜಗದೊಳ್ |
ಜ್ಞಾನಿಗಳ್ನುಡಿದ ನಿಂದೆಯ ನುಸಿರಲಮ್ಮನೆಂ ದವ ನೆರೆಗಿದಂ ಪದದೊಳು || ||೪೪||

ಏ ಳಂಜಬೇಡಿನ್ನು ಮಾಜದಿ ರ್ತನ್ನಾಣೆ।
ಹೇಳೆಂದು ರಘುಕುಲ ಲಲಾಮ ನೊತ್ತಾಯದಿಂ।
ಕೇಳ ಲವನೆಂದ ನವಧರಿಸೊರ್ವ ಮಡಿವಳಂ ಮಲಿನಮಂ ತೊಳೆವನಾಗಿ ॥
ಕಾಳುಗೆಡೆದಂ ಜೀಯ ಸದ್ಗುಣಚರಿತ್ರ ನಾ।
ನಾಳಿಯಿಂ ಜಗಮಂ ಪುನೀತಮಂ ಮಾಳ್ಪ ನಿ।
ನ್ನೀಳಿಗೆಯ ನವನೆತ್ತ ಬಲ್ಲ ನೆನ ಲೇನೆಂದನೆನ ಲಾತನಿಂತೆಂದನು ॥ ॥೪೫॥
ಪೆಂಡತಿ ತವರ್ಮನೆಗೆ ಮುಳಿದು ಪೇಳದೆ ಪೋದ।
ಚಂಡಿತನ ಕವಳ ತಾಯ್ತುಂದೆಗಳ್ಕಳುಹ ಬಂ।
ದಂಡಲೆದೊಡಿನ್ನೊಲ್ಲೆ ನಗಲಿರ್ದ ಮಡದಿಯಂ ಮತ್ತೆ ರಘುನಾಥನಂತೆ ॥
ಕೊಂಡಾಳುವವನಲ್ಲ ತಾನೆಂದು ರಜಕ ನು।
ದ್ದಂಡದೊಳ್ನುಡಿಯೆ ಕಿವಿಮುಚ್ಚಿ ಕೊಳುತೆಯ್ದಿದೆ ನ।
ಖಂಡಿತದ ಮಂತ್ರಪೂತದ ಹವಿಯ ನರಿದೆಂಜಲಿಪುದೆ ವಾಯಸನೆಂದನು ॥ ॥೪೬॥
ಎಂದು ಬಿನ್ನೈಸೆ ಕೇಳ್ದಾತನಂ ಕಳುಹಿ ರಘು।
ನಂದನಂ ಬಂಧನಕ್ಕೊಳಗಾದ ಮತ್ತಗಜ।
ದಂದದಿಂ ನಿಜಶಿರವ ನೊಲೆದು ಮೂಗಿನಮೇಲೆ ಬೆರಳಿಟ್ಟು ಮೌನದಿಂದೆ ॥
ನಿಂದು ಸೈವೆರಗಾಗಿ ನೆನೆ ನೆನೆದು ಚಿತ್ತದೊ।
ಳ್ನೊಂದು ಬಿಸುಸುಯ್ದು ಕಡುಸರ್ಇದು ಕಾತರಿಸಿ ಕಳೆ।
ಗುಂದಿ ದುಮ್ಮಾನದಿಂ ಪೊಕ್ಕ ನಂತಃಪುರಕೆ ಪುತ್ತವುಗು ವಹಿಪನಂತೆ ॥ ॥೪೭॥
ಓಲಗಂ ಗುಡದೆ ಬಾಗಿಲ್ಗೆ ಬಂದಖಿಳ ಭೂ।
ಪಾಲರಂ ಕರೆಸಿ ಕಾಣಿಸಿಕೊಳ್ಳದೊಳಗೆ ಚಿಂ।
ತಾ ಲತಾಂಗಿಯ ಕೇಳಿಗೆಡೆಗೊಟ್ಟು ರಾಜೇಂದ್ರನಿರೆ ಕೇಳ್ದು ಭೀತಿಯಿಂದೆ ॥
ಆ ಲಕ್ಷ್ಮಣಾದಿಗ ಳ್ಪೊಕ್ಕರಂತಃಪುರವ।
ನಾಲಿಂಗಿಸಿದ ಜಾಡ್ಯದಿಂದೆ ಜಡಿ ವವಯವದ।
ನೀಲಾಂಗನಂ ಕಂಡು ಕಾಲ್ಗೆರಗಿ ನುಡಿಸ ಲಮ್ಮದೆ ಸುಮ್ಮನಿರುತಿರ್ದರು ॥ ॥೪೮॥
ಎದ್ದು ಕುಳ್ಳಿರ್ದು ಕರುಣಾಳುಗಳ ಬಲ್ಲಹಂ।
ಮುದ್ದುಗೈ ದನುಜರಂ ಕರೆ ದಿಳೆಯೊಳೆಂದೆನಗೆ।
ಪೊದ್ದಿ ದಪವಾದಮಂ ನೀವರಿದುದಿ ಲ್ಲಕಟ ಸಾಕಿನ್ನು ನೆರವಿಗಳೊಳು ॥
ಕದ್ದು ಕಳ್ಳನವೊ ಲಾಡಿಸಿಕೊಳ ಲ್ಯಾರೆ ನೊಡ।
ಲಿದ್ದಲ್ಲಿ ನಿಂದೆಗೊಳಗಾಗಿ ಬದುಕುವನಲ್ಲ।
ತಿದ್ದಿ ತೀರದ ವಿಲಗ ಕಂಜುವೆಂ ಸೀತೆಯಂ ಬಿಟ್ಟಲ್ಲದಿರೆ ನೆಂದನು ॥ ॥೪೯॥
ಇವಳಯೋನಿಜೆ ರೂಪ ಗುಣ ಶೀಲ ಸಂಪನ್ನೆ।
ಭುವನ ಪಾವನೆ ಪುಣ್ಯಚರಿತೆ ಮಂಗಳ ಮಹೋ।
ತ್ಸವೆ ಪತಿವ್ರತೆಯೆಂಬುದಂ ಬಲ್ಲೆನಾದೊಡಂ ನಿಂದೆಗೊಳಗಾದ ಬಳಿಕ ॥
ಅವನಿಸುತೆಯಂ ತನಗೆ ಬಿಡುವುದೇ ನಿಶ್ಚಯಂ।
ರವಿಕುಲದ ರಾಯ ರಪಕೀರ್ತಿಯಂ ತಾಳ್ದಪರೆ।
ಕುವರನಾಗಿರ್ದ ತನ್ನಂ ತಾತ ನುಳಿದುದಿಲ್ಲವೆ ಸತ್ಯಭಾಷೆಗಾಗಿ ॥ ॥೫೦॥

ಕಲಿಯುಗದ ವಿಪ್ರರಾಚಾರಮಂ ಬಿಡುವಂತೆ ।
ಪಲವು ಮಾತೇನಿನ್ನು ಸೀತೆಯಂ ಬಿಟ್ಟೆನೆನೆ !
ಬಲುಗರಮಿದೆತ್ತಣದೊ ಕಾರುಣ್ಯನಿಧಿಗೆನುತೆ ನಡನಡುಗಿ ಭೀತಿಯಿಂದೆ ॥
ನೆಲೆಗೊಂಡ ವೇದಮಂ ಧರೆಯ ಪಾಷಂಡಿಗ ।
ಳ್ಗಲೆ ನಿಂದಿಸಿದೊಡದಂ ಮಾಣ್ಬರೇ ದ್ವಿಜ ರಕಟ ।
ಕುಲವರ್ಧಿನಿಯ ನೆಂತು ಬಿಡುವೆ ನೀಂ ಪೇಳೆಂದ ರನುಜಾತ ರಗ್ರಜಂಗೆ ॥ ॥೫೧॥
ಭಯಶೋಕದಿಂದೆ ಗದ್ಗದಿಸೆ ಕಂಠಮೊ ಳಶ್ರು ।
ನಯನದೊಳ್ತುಳುಕೆ ಭರತಂ ಕರೆವ ಕಪಿಲೆಯಂ ।
ನಯವಿದ ಪೋ ಡೆ ದಡವಿಗಟ್ಟುವರೆ ಪಾವಕನೊಳರಸಿಯಂ ಪುಗಿಸಿದಂದು ॥
ಪ್ರಿಯೆ ನಿನಗೆ ಪರಿಶುದ್ಧೆ ಕುಲಕೆ ಮಂಗಳೆ ಸುತೋ ।
ದಯಕೆ ನಿರ್ಮಲೆ ತನಗೆ ಗತಿಗುಡುವ ಸೊಸೆಯೆಂದು ।
ಬಯಸಿದೊಡೆ ಬಂದಯ್ಯನಾಡನೆ ಸುರಾಸುರರ ಮುಂದೆ ಕಪಿಕಟಕ ಮರಿಯೆ ॥೫೨॥
ಅದನೆಲ್ಲಮಂ ಮರೆದು ಹುಲುಮನುಜ ರಜಕ ನಾ ।
ಡಿದ ದೂಸರಂ ನೆನೆದು ಕುಲಪತ್ನಿಯಂ ಬಿಡುವ ।
ಹದನಾವುದಕಟ ಗುರುಲಘುವಿ ನಂತರವ ನೆಣಿಸದೆ ಬರಿದೆ ಮೂಢರಂತೆ ॥
ಎದೆಗೆಟ್ಟು ದೇವಿಯಂ ದೋಷಿಯೆಂಬರೆ ಜೀಯ ।
ಪದುಳ ವಿಹುದೆಂದು ವಿನಯದೊ ಳಗ್ರಜಾತನಂ ।
ಕದುಬಿ ನುಡಿದಂ ಭರತ ನಾತನಂ ನೋಡು ತೊಯ್ಯನೆ ಭೂಪನಿಂತೆಂದನು ॥ ॥೫೩॥
ತಮ್ಮ ನೀನಾಡಿದಂ ತವನಿಸುತೆ ನಿರಜೆಯುಸು ।
ದುಮ್ಮಳಿಸಬೇಡ ಸೈರಿಸಲಾರೆ ನೀ ದೂಸ ।
ರಂ ಮಹಿಯೊ ಳುಳಿದರೇ ಪೃಥು ಪುರೂರವ ಹರಿಶ್ಚಂದ್ರಾದಿ ನರಪತಿಗಳು ॥
ಸುಮ್ಮ ನಪಕೀರ್ತಿ ಗೊಳಗಾಗ ಲೇತಕೆ ಮಮತೆ ।
ಯಂ ಮಹಾಯೋಗಿ ಬಿಡುವಂ ತಿವಳ ನುಳಿವೆ ನೆನೆ ।
ಹಮ್ಮೈಸಿ ಲಕ್ಷ್ಮಣಂ ಕಂಪಿಸುತೆ ಕಿವಿಮುಚ್ಚು ತಗ್ರಜಂಗಿಂತೆಂದನು ॥ ॥೫೪॥
ಕಾಯ ಸುಖಗೋಸುಗಂ ಧರ್ಮಕೃತಮಂ ಬಿಡುವೊ ।
ಲಾಯತಾಕ್ಷಿಯ ಭಾವಶುದ್ಧಿಯಂ ತಿಳಿದಿರ್ದ ।
ವಾಯ ದಪವಾದ ಕಿಂ ತರಸಿದುಂ ತೊರೆಯಬೇಕೆಂಬರೇ ನಿಷ್ಕರುಣದೆ ॥
ಜೀಯ ತುಂಬಿದ ಬಸಿ ರ್ದೆಸಲಾದ ದೇವಿಯಂ ।
ಪ್ರೀಯದಿಂ ದಾರೈದು ಸಲಹಬೇಕೆಂದು ರಘು ।
ರಾಯಂಗೆ ಲಕ್ಷ್ಮಣಂ ಬಿನ್ನೈಸೆ ಮೇಲ್ವಾಯ್ದು ಶತ್ರುಘ್ನನಿಂತೆಂದನು ॥ ॥೫೫॥
ಬಿಡುವರೆಂ ತಿಕ್ಷ್ವಾಕುವಂಶದವ ರರಸಿಯಂ ।
ನುಡಿವರೆಂ ತಿಳಿದೊ ಳಾರಾದೊಡಂ ದೂಸರಂ ।
ಪಡೆವರೆಂ ತವರ ಸತ್ಕೀರ್ತಿಯಂ ಬುದ್ಧಿ ಪೇಳ್ವದ ಕೊಡೆಯಂಲ್ಲವಾಗಿ ॥
ಕಡಿವರೆಂ ತೇಳ್ಗೆಯಂ ಪೆಣ್ಣಳ ಲ್ವಿಂಕಿಯಿಂ ।
ಸುಡುವರೆಂ ತಸ್ವಯದ ಬಾಳ್ಗೆಯ ಸಿವಕ್ಕೆ ಕಿವಿ ।
ಗುಡುವರೆಂ ತಿಂಗ ಳಿನ್ನೊಡಹುಟ್ಟಿದವರೆನುತೆ ಶತ್ರುಘ್ನನುರಿದೆದ್ದನು ॥ ॥೫೬॥

ಅರಸ ಕೇಳನುಜರಾಡಿದ ನುಡಿಗೆ ತಲೆವಾಗಿ ।
ತರಣಿಕುಲ ತಿಲಕ ನೊಯ್ಯನೆ ದೈನ್ಯಭಾವದಿಂ ।
ತರಹರಿಸಬಾರ ದಪವಾದ ಹೃಚ್ಛೂಲಮಂ ತನಗೆ ಜಾನಕಿಯ ನುಳಿದು ॥
ಪೆರೆಯುರ್ಚಿ ದುರಗನಂತಿರ್ದಪೆಂ ಸಾಕು ನಿಮ ।
ಗೊರೆದೊಡೇನಹುದೆಂದು ಬೇಸರೊಳ್ಮನೆಗಳೆ ।
ಭರತ ಶತ್ರುಘ್ನರಂ ಕಳುಹುತೇಕಾಂತದೊಳ್ಸೌಮಿತ್ರಿಗಿಂತೆಂದನು ॥ ॥೫೭॥
ತಮ್ಮ ಬಾ ನೀನಿಂದುವರೆಗೆ ತಾನೆಂದ ಮಾ ।
ತನ್ಮೀರಿದವನಲ್ಲ ಕೆಲಬಲವ ನಾರಯ್ಯು ।
ತಮ್ಮರುಗದಿರು ತನ್ನ ಕೊರಳಿಗಿದೆ ಖಡ್ಗ ಮಲ್ಲದೊಡೀಗ ಜಾನಕಿಯನು ॥
ಉಮ್ಮಳಿಸ ದೊಯ್ದು ಗಂಗೆಯ ತಡಿ ಯರಣ್ಯದೊ ।
ಳ್ಸುಮ್ಮನೆ ಕಳುಹಿ ಬರ್ಪುದವಳೆನ್ನೊಳಾಡಿರ್ಪ ।
ಳೊಮ್ಮೆ ಕಾನನಕೈದ ಬೇಕೆಂದು ಬಯಕೆಯಿಂ ದದೆ ನೆವಂ ನಿನಗೆಂದನು ॥ ॥೫೮॥
ಎನೆ ರಾಘವೇಂದ್ರ ನಿನ್ನಾಜ್ಞೆಯಂ ಮೀರಲ್ಕೆ ।
ತನಗೆ ರೌರವಮಪ್ಪುದೆಂದುದಂ ಮಾಡಲ್ಕೆ ।
ಜನನಿಯಂ ಕೊಂದುಗ್ರಗತಿ ಯಪ್ಪ ದೇಗೈವೆನೆಂದು ಕಡುಶೋಕದಿಂದೆ ॥
ತನು ಝೊಂಪಿಸಲ್ಕೆ ಸೆರೆಬಿಗಿದು ಕಂಬನಿಯಿಂದೆ ।
ನನೆ ದಳಲ್ದೊರೆಯೊಳಾಳ್ದನುಜನಂ ಘೂರ್ಮಿಸುತೆ ।
ನಿನಗೆ ದೋಷವೆ ತಾನಿರಲ್ಕೆ ನಡೆ ಕಳುಹೆಂದ ನರಸನೇಂ ದಯೆದೊರೆದನೋ ॥ ॥೫೯॥
ಅಣ್ಣದೇವನೊಳಿಡಿದ ವಾತ್ಸಲ್ಯಮೆಂಬ ಬ ।
ಲ್ಗಣಿಯೊಳ್ಕಟ್ಟುವಡೆದ ಲ್ಲಿನ ಲರಿಯದೆ ನಿ ।
ರ್ವಿಣ್ಣಭಾವದೊಳಂದು ಲಕ್ಷ್ಮಣಂ ತುರಗ ಸಾರಥಿ ಕೇತನಂಗಳಿಂದೆ ॥
ಹಣ್ಣಿದ ವರೂಥಮಂ ತರಿಸಿ ಪೊರಗಿರಿಸಿ ನೆಲ ।
ವೆಣ್ಣು ಮಗಳಿರುತಿರ್ದ ರಾಜಮಂದಿರಕೈದಿ ।
ಕಣ್ಣೊಳೀಕ್ಷಿಸದೆ ತಲೆವಾಗಿ ದೂರದೊಳ್ ನಿಂದಾ ಸೀತೆಗಿಂತೆಂದನು ॥ ॥೬೦॥
ತಾಯೆ ನೀನೇತಕೆಳಸಿದೆ ನಿನ್ನನೀಗ ರಘು ।
ರಾಯಂ ತಪೋವನಕೆ ಕಳುಹಿ ಬರಹೇಳಿದಂ ।
ಪ್ರಿಯಮುಳ್ಳೊಡೆ ರಥಂ ಪಣ್ಣಿ ಬಂದಿದೆಕೊ ಬಿಜಯಂಗೈವುದೆಂದು ಮರುಗಿ ॥
ಛಾಯೆಗಾಣಿಸಿ ಸುಮಿತ್ರಾತ್ಮಜಂ ನುಡಿ ದಘ ।
ಪ್ರಾಯಮಂ ತಿಳಿಯ ದತಿಸಂಭ್ರಮಾನ್ವಿತೆಯಾದ ।
ಳಾಯತಾಂಬಕಿ ತನ್ನಭೀಷ್ಟಮಂ ಸಲಿಸುವಂ ಕಾಂತನೆಂ ಬುತ್ಸವದೊಳು ॥ ॥೬೧॥
ಅಂಬುಜಾನನೆ ಬಳಿಕ ಪಯಣಮಂ ನಿಶ್ಚೈಸಿ ।
ನಂಬಿದರಭೀಷ್ಟಮಂ ಸಲಿಸುವ ಕೃಪಾಳು ತಾ ।
ನೆಂಬುದಂ ಕಾಣಿಸಿದ ನಿಂದೆನ್ನ ಕಾಂತ ನೆನಗೆಂದು ಕೌಸಲೆಗೆ ಪೇಳ್ದು ॥
ಮುಂಬರಿ ದೊಡಂಬಡಿಸಿ ಬಲವಂದು ಕಾಲ್ಗೆರಗಿ ।
ತುಂಬಿದ ಪರಕೆವೆತ್ತು ಕೈಕಯೀ ದೇವಿಗೆ ಶಿ ।
ರಂಬಾಗಿ ವರಸುಮಿತ್ರೆಗೆ ನಮಿಸಿ ಸಖಿಯರಂ ಸಂತೈಸಿ ಬೀಳ್ಕೊಂಡಳು ॥ ॥೬೨॥

ಮಿಗೆ ತಪೋವನದ ಋಷಿಗಳ್ಗೆ ಮುನಿಪತ್ನಿಯ |
ರ್ಗಗರು ಚಂದನ ಕುಂಕುಮಾ ನುಲೇಪನಗಳಂ |
ಬಗೆಬಗೆಯ ದಿವ್ಯಾಂಬರಂಗಳಂ ವಿವಿಧ ಮಣಿಭೂಷಣ ಸುವಸ್ತುಗಳನು ||
ತೆಗೆದು ಕಟ್ಟಿಸಿ ರಥದೊಳಿಂಬಿಟ್ಟು ರಾಮನಂ |
ಘ್ರಿಗಳ ಚೆಂಬೊನ್ನ ಪಾವುಗೆಗಳಂ ತರಿಸಿಕೊಂ |
ಡೊಗು ಮಿಗೆಯ ಹರುಷದೊಳಡರ್ದಳಂಗನೆ ಮಣಿವರೂಥಮಂ ನಿಜಮಿದೆಂದು ||೬೩||
ಅಗ್ರಜಂ ತರಿಸಂದು ತನ್ನೊಳಾಡಿದ ಕಜ್ಜ |
ದುಗ್ರಮಂ ಬನಕೆ ಪೋದಪೆನೆಂಬ ದೇವಿಯ ಸ |
ಮಗ್ರಸಂತೋಷಮಂ ಕಂಡು ಸೌಮಿತ್ರಿ ಮನದೊಳ್ಮರುಗಿ ಕಂಬನಿಯನು ||
ನಿಗ್ರಹಿಸಿಕೊಂಡು ಸಾರಥಿಗೆ ಸೂಚನೆಗೈದು |
ವ್ಯಗ್ರದಿಂದೈದಿಸಿದ ನಾರಥವ ನಾಗ ದೇ |
ಪಗ್ರಾಮ ನಿಲಯ ಲಕ್ಷ್ಮೀಶನುಂಗುಟಿದೊಳೊಗೆ ದಮಲ ಜಾಹ್ನವಿಯ ತಡಿಗೆ ||೬೪||
ಸಂಧಿ ೧೮ ಕ್ಕೆ ಪದ್ಯಗಳು ೯೩೩ ಕ್ಕೆ ಮಂಗಳಮಸ್ತು.

## ಹತ್ತೊಂಬತ್ತನೆಯ ಸಂಧಿ.

ಸೂಚನೆ॥ ರಮಣಂ ತೊರೆದಿವನೆಂಬುದಂ ಕೇಳ್ದು ಶೋಕದಿಂ
ಭ್ರಮಿಸು ತಡವಿಯೊಳಿರಲ್ಕಂಡು ವಾಲ್ಮೀಕಿ ಯಾ |
ಶ್ರಮಕೊಯ್ದೊಡಲ್ಲಿ ಮಿಥಿಳೇಂದ್ರಸುತೆ ತನಯರಂಪಡೆದು ಪದುಳದೊಳಿರ್ದಳು ||

ಅರಸಕೇಳ್ ಸೌಮಿತ್ರಿ ವೈದೇಹಿಯನೆ ಕೊಂಡು |
ತೆರಳುವ ರಥಾಗ್ರದೊಳ್ಜಲಿಸುವ ಪತಾಕೆ ರಘು |
ವರಸಂಗನೆಯ ನುಳಿಪನಹಹ ಯೆಂದಡಿಗಗೆ ತಲೆಗೊಡಹುವಂತಿರಲ್ಕೆ ||
ಪರಮ ದಾರುಣ ಮಾಯ್ತಿದೆಂ ದಯೋಧ್ಯಾಪುರದ |
ನೆರನಿಯ ಜನಂ ಗುಜುಗುಜಿಸಿ ಮನದೆ ಕರಗಿ ಕಾ |
ತರಿಸುತಿರೆ ಪರಿಸಿದಂ ಕಾಳ್ಗಟ್ಟಿಗೊಂ ಡಸಿಲವೇಗದಿಂ ದಾ ರಥವನು || ||೧||
ಧುರದೊಳಾಂತರ ನಿರಿದು ಮೆರೆಯ ಲೇರುವ ರಥಂ |
ತರಳೆಯಂ ಕಾನನಕೆ ಕಳುಹ ಲಡರ್ವಂ ತಾಯ್ತು |
ಧರೆಯೊಳಾರ್ತರನೈದೆ ರಕ್ಷಿಸುವ ಬುದ್ಧಿ ಕೋಮಲೆಯ ಕೊಲೆಕೆಲಸಕಾಯ್ತು ||
ಕರುಣಮಿಲ್ಲದೆ ಹೊರೆವ ಹರಣಮಂ ಸುಡಲಿ ನಿ |
ಷ್ಠುರಮೊ ಳಿಂತೀ ಕೃತ್ಯ ಮೆಸಗುವೆನೊ ರಾಘವೇ |
ಶ್ವರನೆಂ ತಿದಕ್ಕೆ ಬೆಸಸಿದನೊ ತನಗೆನುತೆ ಸೌಮಿತ್ರಿ ಮರುಗುತೆ ನಡೆದನು|| ||೨||
ಬಳ್ಳೊರಲ್ದುದು ಮುಂದೆ ಮಾರ್ಗಮಂ ದಾಂಟಿದುದು |
ಕುಳ್ಳಿರ್ದ ಮೃಗಮೆದ್ದು ಬಲದ ಕಣ್ಣದಿರೆ ಕಂ |
ಡಳ್ಳೆದೇಂದೊ ಜನಿಸುತಿರೆ ನೋಡು ಲಕ್ಷ್ಮಣ ದುರ್ನಿಮಿತ್ತಂಗಳಂ ಪಥದೊಳು |
ಬಿಳ್ಳಸಾದಪ್ಪುದೀಗ ಕಿನ್ನ ಮನಸಿಪದಕೆ ಮುಂ |
ಜೊಳ್ಳುತಾಗಲಿ ರಾಮನಾಯುಷ್ಯಕ್ಕೆ ಸ್ವಸ್ತಿ |
ಕುಳ್ಳ ಭುಜಬಲ ಕಸುರರಂ ಗೆಲ್ದ ರಾಘವಂ ನಮ್ಮಂ ಸಲಹಲೆಂದಳು || ||೩||

ಅನ್ನೆಗಂ ಜಾನಕಿಯ ಕಣ್ಗೆ ತೋರಿತು ಮುಂದೆ |
ಸನ್ನುತ ರಘೂದ್ವಹನ ಕೀರ್ತಿಯೆನೆ ಮೂವಟ್ಟೆ |
ಯನ್ನಡೆದು ಮುಕ್ಕಣ್ಣನಂ ಸಾರ್ದು ಮೂಜಗದ ಪಾಪಮಂ ಮುರಿದು ಮುಕ್ಕಿ ||
ಮುನ್ನೀರು ಮುಂತಾಗಿ ಮೂದೇವರೊಳಗಾದ |
ಮುನ್ನುಳ್ಳ ಮೂವತ್ತುಮೂಕೋಟಿ ವಿಬುಧರಂ |
ತನ್ನೊಳ್ಮುಳುಗಿದ ರಣಕಿಪ ಪೆಂಪೊದವಿ ಪರಿವ ಬೆಳ್ವೊನಲ್ದಿವಿಜನದಿಯು || ||೪||
ತರತರದ ಕಲ್ಲೋಲಮಾಲೆಗಳ ಲೀಲೆಗಳ |
ಜೆರಜೆರೆವ ರಾಜಹಂಸಾಳಿಗಳ ಕೇಳಿಗಳ |
ಪರಿಪರಿಯ ನೀರ್ವನಿಗಳಾಕರದ ಶೀಕರದ ನೊರೆಯ ಬೊಬ್ಬುಳಿಯ ಸುಳಿಯ ||
ಮೊರೆಮೊರೆದು ಘೂರ್ಮಿಸುವ ಪರಿವುಗಳ ಮುರಿವುಗಳ |
ತಿರುತಿರುಗಿ ಸುಳಿವ ಜಲಜಂತುಗಳ ಗೊಂತುಗಳ |
ನೆರೆನೆರೆದು ಮುನಿಜನಂ ಸೇವಿಸುವ ಭಾವಿಸುವ ಗಂಗೆ ಗವಸಿಜೆ ಬಂವಳು || ||೫||
ತೆಂಗೆಳ ಗವುಂಗು ಪನಸಂ ದ್ರಾಕ್ಷೆ ಜಂಬು ನಾ |
ರಂಗ ಜಂಬೀರ ಖರ್ಜೂರ ಕಿತ್ತಳೆ ಮಾತು |
ಳಂಗ ತಿಂತ್ರಿಣಿ ಚೂತ ನೆಲ್ಲಿ ಬಿಲ್ವ ಕಪಿತ್ಥಮೆಂಬ ನಾನಾತರುಗಳು ||
ತೊಂಗುವ ಫಲಾವಳಿಯ ಭಾರಂಗ ಳಾವಗಂ |
ಪಿಂಗ ವಿವನಿಳೆ ಗಿಳಿಪಬೇಕೆಂದು ಬಾಗಿ ದೊಂ |
ದಂಗವೆನೆ ಕಣ್ಗೆಸೆದು ವಿಕ್ಕೆಲದೊಳಾ ಜಾಹ್ನವಿಯ ತಡಿಯ ಬನವೆಡೆಯೊಳು ||೬||
ಇಳಿದು ರಥದಿಂದೆ ಮಂದಾಕಿನಿಗೆ ಪೊಡಮಟ್ಟು |
ಬಳಿಕ ನಾವಿಕರೊಡನೆ ನಾವದೊಳ್ಗಂಗೆಯಂ |
ಕಳೆದು ನಿರ್ಮಲ ತೀರ್ಥದೊಳ್ಮಿಂದು ಸೌಮಿತ್ರಿ ಮತ್ತೆ ಭೂಜಾತೆ ಸಹಿತ ||
ಒಳಗೊಳಗೆ ಮರುಗಿ ಬಿಸುಸುಯ್ದು ಚಿಂತಿಸುತೆ ಮುಂ |
ವಳಿ ದುಗ್ರಮೃಗ ಪಕ್ಷಿಗಣದಿಂದೆ ಘೂರ್ಮಿಸುವ |
ಹಳುವಮಂ ಪೊಕ್ಕು ನಡಿಯಿಡುವೊ ಡಸವಳಮೆಂಬ ಕರ್ಕಶವ ಮಾರ್ಗದಿಂದೆ ||೭||
ಶಕುನಿ ಚೀತ್ಕಾರ ಘೋಷಣಮಯಂ ತೃಣಮಯಂ |
ವಿಕಿರದುಪಲಾಳಿ ಕರ್ಕಶಮಯಂ ಶಶಮಯಂ |
ಪ್ರಕಟ ಕಂಟಕ ಕೀರ್ಣತರುಮಯಂ ರುರುಮಯಂ ವಿವಿಧೋಗ್ರ ಜಂತುಮಯವು ||
ನಕುಲ ಮೂಷಕ ಸರೀಸೃಪಮಯಂ ದ್ವಿಪಮಯಂ |
ಸಕಲ ಭೂವಿಷಮ ಸಂಕುಲಮಯಂ ಬಿಲಮಯಂ |
ವೃಕ ಸೂಕರ ವ್ಯಾಘ್ರಚಯ ಮಯಂ ಭಯಮಯಂ ತಾನೆನಿಸಿ ಕಾಡಿರ್ದುದು ||೮||
ಇರುಳಂತೆ ಪಗಲಂತೆ ಮುಖದಂತೆ ದಿವದಂತೆ |
ವರ ಪಯೋನಿಧಿಯಂತೆ ಕೈಲಾಸಗಿರಿಯಂತೆ |
ನಿರುತಮುಂ ಸೋಮಾರ್ಕ ಶಿಖಿ ಸಹಸ್ರಾಕ್ಷ ಹರಿನುತ ಶಿವಾವಾಸಮಾಗಿ ||
ಘುರದಂತೆ ಕೋಳದಂತೆ ಕಡಲಂತೆ ನಭದಂತೆ |
ಶರ ಪುಂಡರೀಕ ವಿದ್ರುಮ ಖಕ್ಷಮಯದೊಳಿಡಿ |
ದಿರುತಿರ್ದುದಾಮಹಾಟವಿ ಜಾನಕಿಯ ಕಣ್ಗೆ ಘೋರತರಮಾಗಿ ಮುಂದೆ || ||೯||

ಅಟವಿಯ ಮಹಾಘೋರ ಗಹ್ವರಂ ಮುಂದೆ ದು |
ರ್ಘಟಮಾಗೆ ನಡನಡುಗಿ ಭೀತಿಯಿಂ ಸೀತೆ ಸಂ |
ಕಟದಿಂದೆ ರಾಮನಾಮಂಗಳಂ ಜಪಿಸುತೆಲೆ ಸೌಮಿತ್ರಿ ಕಾನನಮಿದು ||
ಅಟನ ಕಸದಳ ಮಪ್ಪುದಿಲ್ಲಿ ಪುಣ್ಯಾಶ್ರಮದ |
ಜಟೆಗಳಂ ವಲ್ಕಲವನುಟ್ಟ ಮುನಿವಧುಗಳಂ |
ವಟುಗಳಂ ಶ್ರುತಿ ಘೋಷ ಹೋಮ ಧೂಮಂಗಳಂ ಕಾಣೆನೆಂ ದಳವಳಿದಳು ||೧೦||

ಎಲ್ಲಿ ಮುನಿಪೋತ್ತಮರ ಪಾವನದ ವನದೆಡೆಗ |
ಳೆಲ್ಲಿ ಸಿದ್ಧಾಶ್ರಮಂಗಳ ಮಂಗಳ ಸ್ಥಳಗ |
ಳೆಲ್ಲಿ ಸುಹವಿಗಳ ಕಂಪೊಗೆದ ಪೊಗೆದಳೆ ದಗ್ನಿಹೋತ್ರದ ಕುಟೀರಂಗಳು ||
ಎಲ್ಲಿ ಪರಿಚಿತವಾದ ವಾದವೇದ ಧ್ವನಿಗ |
ಳಲ್ಲಿಗುಯ್ಯದೆ ದಾರುದಾರುಣದ ಕಟ್ಟಡವಿ |
ಗಿಲ್ಲಿ ಗೇಕೈತಂದೆ ತಂದೆ ಸೌಮಿತ್ರಿ ಹೇಳೆಂದು ಜಾನಕಿ ಸುಯ್ದಳು || ||೧೧||

ಪಾವನಕೆ ಪಾವನಂ ಮಂಗಳಕೆ ಮಂಗಳ ಮ |
ಪಾವನ ಚರಿತ್ರನಾಮಂಗ ಳಾ ರಾಘವನೆ |
ಜೀವೇಶನಾಗಿರಲ್ಕಾತನಂಘ್ರಿಯ ನಗಲ್ದೀಗ ನಾಂ ಬಂದ ಬಳಿಕ ||
ಈ ವನದೊಳಿನ್ನು ಪುಣ್ಯಾಶ್ರಮಂ ಗೋಚರಿಪು |
ದೇ ವನಜದರಳ ನುಳಿದಾರಡಿಗೆ ಬೊಬ್ಬುಳಿಯ |
ಪೂವಿನೊ ಳ್ಮಧುವುಂಟೆ ಸೌಮಿತ್ರಿ ಹೇಳೆಂದು ಸೀತೆ ಪೊದಕುಳಿಗೊಂಡಳು || ||೧೨||

ನರನಾಥ ಕೇ ಳವನಿಸುತೆ ನುಡಿದ ಮಾತಿ ಗು |
ತ್ತರವನಾಡದೆ ಮನದೊಳುರೆ ನೊಂದು ರಾಘವೇ |
ಶ್ವರನೆಂದ ಕಷ್ಟಮಂ ಪೇಳ್ದಪೆನೊ ಮೇಣುಸಿರ ದಿರ್ದಪೆನೊ ನಿಷ್ಠುರದೊಳು ||
ತರಣಿಕುಲ ಸಾರ್ವಭೌಮನ ರಾಣಿಯಂ ಬನ ದೊ |
ಳಿರಿಸಿ ಪೋದಪೆನೆಂತೊ ಪೋಗದಿರ್ದೊಡೆ ಸಹೋ |
ದರ ನದೇನೆಂದಪನೊ ಹಾ ಯೆಂದು ಲಕ್ಷ್ಮಣಂ ಬೆಂದು ಬೇಗುದಿಗೊಂಡನು ||೧೩||

ಉಕ್ಕಿದುವು ಕಂಬನಿಗಳ ಧರೋಷ್ಠ ಮದಿರಿ ತಲ |
ಗಿಕ್ಕಿ ತಿರುಪಿದ ವೊಲಾಯ್ತೊ ಡಲೊ ಳೆಡೆ ವರಿಯ ದುಸಿ |
ರೊಕ್ಕುದುರೆ ಕಂಪಿಸಿದು ದವಯುವಂ ಕರಗಿತೆರ್ದೆ ಸೈರಣೆ ಸಮತೆ ಗೆಟ್ಟುವು ||
ಸಿಕ್ಕಿದುವು ಕಂಠದೊ ಳ್ಮಾತುಗ ಳ್ಸೆರೆ ಬಿಗಿದು |
ಮಿಕ್ಕು ಮೀರುವ ಶೋಕದಿಂದೆ ಬೆಂಡಾಗಿ ಕಡು |
ಗಕ್ಕಸದ ಕೆಲಸಮ ನುಸಿರ ಲರಿಯ ದವನೊಯ್ಯ ನವನಿಸುತೆ ಗಿಂತೆಂದನು || ||೧೪||

ದೇವಿ ನಿನಗಿನ್ನೆಗಂ ಪೇಳ್ವುದಿ ಲ್ಲಪವಾದ |
ಮಾವರಿಸೆ ನಿನ್ನನೊಲ್ಲದೆ ರಘುಕುಲೋದ್ವಹಂ |
ಸೀವರಿಸಿ ಬಿಟ್ಟು ಕಾಂತಾರಕ್ಕೆ ಕಳುಹಿ ಬಾಯೆಂದೆನಗೆ ನೇಮಿಸಿದೊಡೆ ||
ಆ ವಿಭುವಿನಾಜ್ಞೆಯಂ ಮೀರಲರಿಯದೆ ನಿಮ್ಮ |
ನೀ ವಿಪಿನಕೊಡಗೊಂಡು ಬಂದೆ ನಿನ್ನೊಯ್ಯೊಯ್ಯ |
ನಾವಲ್ಲಿಗಾದೊಡಂ ಪೋಗೆಂದು ಲಕ್ಷ್ಮಣಂ ಬಾಷ್ಪಲೋಚನನಾವನು || ||೧೫||

ಬಿರುಗಾಳಿ ಪೊಡೆಯಲ್ಕೆ ಕಂಪಿಸಿ ಫಲಿತ ಕವಳಿ |
ಮುರಿದಿಳೆ ಗೊರಗುವಂತೆ ಲಕ್ಷ್ಮಣನ ಮಾತು ಕಿವಿ |
ವೆರೆಗೆ ಬೀಳದ ಮುನ್ನ ಹಮ್ಮೈಸಿ ಬಿದ್ದಳಂಗನೆ ಧರೆಗೆ ನಡನಡುಗುತೆ ||
ಮರೆದಳಂಗೋಪಾಂಗಮಂ ಬಳಿಕ ಸೌಮಿತ್ರಿ |
ಮರುಗಿ ತಣ್ಣೀರ್ದಳಿದು ಪತ್ರಮೊಳ್ನೊಡೆವಿಡಿದು |
ಸೆರಗಿಂದೆ ಬೀಸಿ ರಾಮನ ಸೇವೆ ಸಂದುದೇ ತನಗೆಂದು ರೋದಿಸಿದನು || ||೧೬||

ಒಯ್ಯ ನರೆಗಳಿಗೆಯೊಳ್ಕಣ್ದೆರೆದು ದೈನ್ಯದಿಂ |
ಸುಯ್ಯಲರ ನುರೆ ಸೂಸಿ ಸೌಮಿತ್ರಿಯಂ ನೋಡಿ |
ಕೊಯ್ಯಲೊಲ್ಲದೆ ಕೊರಳನಿಂತು ತನ್ನಂ ಬಿಡಲ್ ಮಾಡಿ ದಪರಾಧಮುಂಟೆ ||
ಕಯ್ಯಾರೆ ಖಡ್ಗಮಂ ಕೊಟ್ಟು ತನ್ನರಸಿಯಂ |
ಹೊಯ್ಯೆಂದು ಪೇಳದಡವಿಗೆ ಕಳುಹಿ ಬಾ ಯೆಂದ |
ನಯ್ಯಯ್ಯೋ ರಾಘವಂ ಕಾರುಣ್ಯನಿಧಿಯೆಂ ದಳಲ್ದಳಂಭೋಜನೇತ್ರೆ || ||೧೭||

ಬಿಟ್ಟನೆ ರಘುಶ್ರೇಷ್ಠನೆನ್ನ ನಕಟಕಟ ತಾಂ |
ಮುಟ್ಟನೆ ನೆಗಳ್ದ ಬಾಳ್ಕೆಗೆ ಸಂಚಕಾರಮಂ |
ಕೊಟ್ಟನೆ ಸುಮಿತ್ರಾತನುಜ ಕಟ್ಟರಣ್ಯ ಮೊಳ್ಕಳುಹಿ ಬಾಯೆಂದು ನಿನಗೆ ||
ಕೊಟ್ಟನೆ ನಿರೂಪಮಂ ತಾನೆನ್ನ ಕಣ್ಬಟ್ಟಿ |
ಗೆಟ್ಟನೆ ಮನೋವಲ್ಲಭನ ನಗಲ್ದಡವಿಯೊ |
ಳ್ಬಿಟ್ಟನೆ ಪಿಶಾಚದ ವೊಲೆಂತಿಹೆನೊ ಕೆಟ್ಟೆನಲ್ಲಾ ಯೆಂದೊರಲ್ದಳಬಲೆ || ||೧೮||

ಎಂದು ಕೌಶಿಕಮುನಿಪನೊಡನೆ ಮಿಥಿಳಾಪುರಕೆ |
ಬಂದು ಹರಧನುವ ಮುರಿದೆನ್ನಂ ಮದುವೆಯಾದ |
ನಂದು ಮೊದಲಾಗಿ ರಮಿಸಿದನೆನ್ನೊಳಾ ನಗಲ್ದೊಡೆ ತಾಂ ನವೆವನಲ್ಲವೆ ||
ಒಂದಿದನೆ ಸೌಖ್ಯಮಂ ರಾಮನೆನಗಾಗಿ ಕಪಿ |
ವೃಂದಮಂ ನೆರಪಿ ಕಡಲಂ ಕಟ್ಟಿ ದೈತ್ಯರಂ |
ಕೊಂದಗ್ನಿ ಮುಖದೊಳ್ಪರೀಕ್ಷಿಸಿದ ನೆನ್ನೊಳಪರಾಧಮಂ ಕಾಣಿಸಿದನೆ || ||೧೯||

ಕಲ್ಮೃಳ್ಪಿಡಿದ ಕಾಡೊಳಂದೆನ್ನನುಪಚರಿಸಿ |
ಪಲ್ಮೊರೆದು ಗರ್ಜಿಪ ವಿರಾಧನಂ ಮರ್ದಿಸಿದೆ |
ಬಲ್ಮೆಯಿಂ ನಾಂ ಕಳುಹಿದೊಡೆ ಜನಸ್ಥಾನದಿಂ ಹೋದೆ ರಾಘವನ ಬಳಿಗೆ ||
ನಲ್ಮೆಯಂ ಮರೆದಪೆನೆ ಸೌಮಿತ್ರಿ ನೀನೆಲ್ಲ |
ರೊಲ್ಮೈದುನನೆ ತನಗೆ ಕಾನನದೊಳಿನ್ನ ನಿಲಿ |
ಸಲ್ಮೆನಂ ಬಂದಪುದೆ ತಂದೆ ನಿನಗೆಂದು ಕಂಬನಿ ಮಿಡಿದಳಂಬುಜಾಕ್ಷಿ || ||೨೦||

ತೊಳಪ ನಾಸಿಕದ ನುಣ್ಗದಪುಗಳ ಪೊಳೆವ ಕಂ |
ಗಳ ತುರುಗಿದೆವೆಯ ಸಿಡುಪುರ್ಬುಗಳ ಪೆರೆನೊಸಲ |
ಫಳಫಳಿಪ ಮುಕುಟದ ಕಿವಿಯ ಮಕರ ಕುಂಡಲದ ಕೋಮಲಿತ ಚುಬುಕಾಗ್ರದ ||
ಲಲಿತಾರುಣಾಧರದ ಮಿರುಗುವ ರದನ ಪಙ್ಕ್ತಿ |
ಗಳ ಸೂಸುನೆಳನಗೆಯ ಮೋಹನದ ಚೆಲ್ವಿನೊ |
ಬ್ಬುಳಿಯೆನಿಪ ರಾಘವನ ಸಿರಿಮೊಗವನೆಂತು ನೋಡದೆ ಮಾಣ್ದೆ ನಕಟೆಂದಳು ||೨೧||

ರಾಮನಂ ಭುವನಾಭಿರಾಮನಂ ಗುಣರತ್ನ |
ಧಾಮನಂ ರಘುಕುಲೋದ್ದಾಮನಂ ರೂಪಜಿತ |
ಕಾಮನಂ ಸತ್ಕೀರ್ತಿಕಾಮನಂ ಶರಣಜನ ವಾರ್ಧಿಯಂ ಮಿಗೆ ಪೆರ್ಚಿಪ ||
ಸೋಮನಂ ಸೌಭಾಗ್ಯ ಸೋಮನಂ ಕುವಲಯ |
ಶ್ಯಾಮನಂ ನಿಜ ತನುಶ್ಯಾಮನಂ ಘನಪುಣ್ಯ |
ನಾಮನಂ ಸಂತತಂ ನಾ ಮನಂದಣಿಯೆ ರಮಿಸದೆ ಬಾಳ್ವೆನೆಂತೆಂದಳು || ||೨೨||

ರಾಯ ಕೇಳಿಂತಿಂತು ರಾಘವೇಶ್ವರನ ರಮ |
ಣೀಯ ಗುಣಮಾಲೆಯಂ ನೆನೆನೆನೆದು ಹಂಬಲಿಸು |
ತಾಯತಾಂಬಕಿ ಮತ್ತೆ ನೈಮರೆಯು ತೆಚ್ಚರುತೆ ಪಾವಗಿದ ಪಸುಳೆವೊಲಿರೆ ||
ತಾಯೆ ನಿನ್ನಂ ಬಿಟ್ಟು ಪೋಗಲಾರೆಂ ಪೋಗ |
ದೀಯವಸ್ಥೆಯೊಳಿರ್ದೊಡಣ್ಣ ನೇಗೈದಪನೊ |
ಹಾಯೆಂದು ಲಕ್ಷ್ಮಣಂ ಶೋಕ ಗದ್ಗದನಾಗೆ ಸೀತೆ ಮಗುಳಿಂತೆಂದಳು || ||೨೩||

ತಂದೆ ಲಕ್ಷ್ಮಣ ನಿನ್ನೊಳೆಂದೊಡಿನ್ನೇನಹುದು |
ಹಿಂದಣ ಜನಸ್ಥಾನದಂದದೊಳ್ಪೋಗು ನೀಂ |
ಕೊಂದು ಕೊಂಬೊಡೆ ತನ್ನ ಬೆಂದೊಡಲೊಳಿದೆ ಬಸಿರದಂದುಗಂ ಕಾನನದೊಳು ||
ಬಂಧುದಂ ಕಾಣ್ಬೆನಾನಿಂದು ಕೌಸಲೆಯಡಿಗೆ |
ವಂದಿಸಿದೆ ನಪರಾಧವೊಂದು ಮಿಲ್ಲದೆ ತನ್ನ |
ಕಂದನೆನ್ನಂ ತೊರೆದುದಂ ದೇವಿಗೊರೆವುದೆನುತಂ ದಳಲ್ದ ಳ್ಮೃಗಾಕ್ಷಿ | ||೨೪||

ಏಕೆ ನಿಂದಿಹೆ ಪೋಗು ಸೌಮಿತ್ರಿ ಕೋಪಿಸನೆ |
ಕಾಕುತ್ಸ್ಥನಿಲ್ಲಿ ತಳುವಿದೊಡೆ ನೆರವುಂಟೆ ತನ |
ಗೀಕಾಡೊಳುಗ್ರಜಂತುಗಳಲ್ಲಿ ರಘುನಾಥನೇಕಾಕಿಯಾಗಿರ್ಪನು ||
ಲೋಕವರಸೇಗೈವೊಡಂ ತನ್ನ ಕಿಂಕರ |
ರ್ಬೇಕು ಬೇಡೆಂದು ಪೇಳರೆ ಭರತ ಶತ್ರುಘ್ನ |
ರೀ ಕೆಲಸಕೊಪ್ಪಿದರೆ ಹನುಮಂತ ನಿರ್ದಪನೆ ಪೇಳೆಂ ದಳಲ್ದಳಬಲೆ || ||೨೫||

ಆರಿರ್ದೊಡೇಗೈವರಿದು ತನ್ನ ಮರುಳಾಟ |
ಮಾರಾವಣನ ತಮ್ಮನೈಸಲೆ ವಿಭೀಷಣಂ |
ಭೀರುಗಳನರಿದಪನೆ ಸೋದರಂಗುರೆ ಮುಳಿದ ಸುಗ್ರೀವನೆಂಬವಂಗೆ ||
ಕಾರುಣ್ಯಮಿರ್ದಪುದೆ ಮತ್ತುಳಿದ ಮಂತ್ರಿಗಳ |
ದಾರುಂಟು ಪೇಳುವ ರ್ದೇವಂಗೆ ನೀನೊಪ್ಪಿ |
ಘೋರಾಟವಿಗೆ ಕೊಂಡುಬಂದೆ ಕಳುಪುವೊಡಿನ್ನೊರಲ್ದೊಡೇನಹುದೆಂದಳು || ||೨೬||

ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ |
ಕಡುಪಾತಕಂಗೈದು ಪೆಣ್ಣಾಗಿ ಸಂಭವಿಸಿ |
ದೊಡಲಂ ಪೊರೆವುದೆನ್ನೊಳಪರಾಧಮುಂಟು ಸಾಕಿಲ್ಲಿರಲ್ಬೇಡ ನೀನು ||
ನಡೆ ಪೋಗು ನಿಲ್ಲದಿರ್ನಿನಗೆ ಮಾರ್ಗದೊಳಾಗ |
ಲಡಿಗಡಿಗೆ ಸುಖಮೆಂದು ಸೀತೆ ಕಂಬನಿಗಳಂ |
ಮಿಡಿದಾರ್ತೆಯಾಗಿರಲ್ಸೌಮಿತ್ರಿ ನುಡಿದನಾ ವಿಪಿನ ದಭಿಮಾನಿಗಳ್ಗೆ || ||೨೭||

ಎಲೆ ವನಸ್ಥಳಗಳಿರ ವೃಕ್ಷಂಗಳಿರ ಮೃಗಂ।
ಗಳಿರ ಕ್ರಿಮಿಕೀಟಂಗಳಿರ ಪಕ್ಷಿಗಳಿರ ಲತೆ।
ಗಳಿರ ತೃಣಗುಲ್ಮಂಗಳಿರ ಪಂಚಭೂತಂಗಳಿರ ದೆಸೆಗಳಿರ ಕಾವುದು ॥
ಎಲೆ ಧರ್ಮದೇವತೆ ಜಗಜ್ಜನನಿ ಜಾಹ್ನವಿಯೆ।
ಸಲಹಿಕೊಳ್ವುದು ತನ್ನ ಮಾತೆಯಂ ಜಾನಕಿಯ।
ನೆಲೆ ತಾಯೆ ಭೂದೇವಿ ನಿನ್ನ ಮಗಳಿಹಳೆಂದು ಸೌಮಿತ್ರಿ ಕೈಮುಗಿದನು ॥ ॥೨೮॥

ಮಾಳ್ಕೆಯಿನ್ನಾವು ದಿಬ್ಬಗಿಯಾಗಿ ತನ್ನೊಡಲ।
ಸೀಳ್ಕಿಡಹಬೇಡವೆ ಧರಿತ್ರಿಯೊಳ್ನಿಷ್ಠುರದ।
ಬಾಳ್ಕೆಯಂ ಸುಡಲೆನುತೆ ದೇವಿಯಂ ಬಲವಂದು ಲಕ್ಷ್ಮಣಂ ನಮಿಸಿ ಬಳಿಕ ॥
ಬೀಳ್ಕೊಂಡು ನಡೆಯಲ್ಕೆ ಹಿಂದು ಹಿಂದಕೆ ಮನಂ।
ಸೀಳ್ಕಳಿಗೊಳಲ್ಕೆಂದು ಮಗಲ ದಣ್ಣನ ಕಡೆಗೆ।
ದೂಳ್ಕಾಯದೊಳ್ಪತ್ತಿ ಪೊರಳ್ವಸೀತೆಯ ಕಡೆಗೆ ತೂಗುಯ್ಯಲೆವೊಲಾದನು ॥ ॥೨೯॥

ನಡೆಗೊಳಲ್ಕಂಡು ಬಾಯಾರ್ವಳಂ ಚೀರ್ವಳಂ।
ಕಡಲಿಡುವ ಕಂಬನಿಯೊಳಾಳ್ವಳಂ ಬೀಳ್ವಳಂ।
ಪುಡಿಯೊಳ್ಪೊರಳ್ದು ಬಸವಳಿವಳಂ ಸುಳಿವಳಂ ಭರತಾವರಜನಗಲ್ದು ॥
ಅಡಿಗಡಿಗೆ ತಿರುತಿರುಗಿ ನೋಡುವಂ ಬಾಡುವಂ।
ಬಿಡದೆ ಬಿಸುಸುಯ್ದು ಬೆಂಡಾದಪಂ ಪೋದಪಂ।
ಪೊಡೆಮರಳ್ವಂ ನಿಲ್ವನಳಲುವಂ ಬಳಲುವಂ ಬಟ್ಟೆಯೊಳ್ದಿಟ್ಟಗೆಟ್ಟು ॥ ॥೩೦॥

ತಾಯನೆಳಗರು ಬಿಚ್ಚುವಂತೊಯ್ಯನೊಯ್ಯನ।
ತ್ಯಾಯಾಸದಿಂದಗಲ್ದಮರ ನದಿಯಂ ದಾಂಟಿ।
ರಾಯ ಕೇಳ್ದುಃಖಾರ್ತನಾಗಿ ಸೌಮಿತ್ರಿ ಸಾಗಿದ ನತ್ತಲವ ಲಿವ ಳಿತ್ತಲು ॥
ಬಾಯಾರಿ ಕಂಗೆಟ್ಟು ಲಕ್ಷ್ಮಣನ ತಲೆ ಮಸುಳ।
ಲಾ ಯೆಂ ದೊರಲ್ದು ಭಯಶೋಕದಿಂ ದಸವಳಿದು।
ಕಾಯಮಂ ಮರೆ ದವನಿ ಗೊರಗಿದ ಳ್ಮೂರ್ಲೆವಂಕೊ ಯ್ದೆಳೆಯ ಬಳ್ಳಿಯಂತೆ ॥ ॥೩೧॥

ಅರಸ ಕೇಳಲ್ಲಿರ್ದ ಪಕ್ಷಿಮೃಗ ಜಂತು ಗ।
ಳ್ಧರಣಿಸುತೆಯಂ ಬಳಸಿ ನಿಂದು ಮೈಯುಡುಗಿ ಜೋ।
ಲ್ದಿರದೆ ಕಂಬನಿಗರೆದು ನಿಜವೈರಮಂ ಮರೆದು ಪುಲ್ಮೇವುಗಳನೆ ತೊರೆದು ॥
ಕೊರಗುತಿರ್ದುವು ಕೂಡೆ ವೃಕ್ಷಲತೆಗಳ್ಬಾಡಿ।
ಸೊರಗುತಿರ್ದುವು ಶೋಕಭಾರದಿಂ ಕಲ್ಗಳುಂ।
ಕರಗುತಿರ್ದುವು ಜಗದೊಳುತ್ತಮರ ಹಾನಿಯಂ ಕಂಡು ಸೈರಿಸುವರುಂಟೆ ॥ ॥೩೨॥

ಮೊರೆಯಲೊಲ್ಲವು ತುಂಬಿ ಕುಣಿಯಲೊಲ್ಲವು ನವಿ।
ಲ್ಬಿರೆಯ ಲೊಲ್ಲವು ಕೋಕಿ ನಡೆಯಲೊಲ್ಲವು ಹಂಸೆ।
ಕರೆಯ ಲೊಲ್ಲವು ಪಿಕಂ ನುಡಿಯಲೊಲ್ಲವು ಶುಕಂ ನಲಿಯ ಲೊಲ್ಲವು ಚಕೋರಿ ॥
ನೆರೆಯ ಲೊಲ್ಲವು ಹರಿಣಿ ಯೊಲೆಯ ಲೊಲ್ಲವು ಕರಿಣಿ।
ಪೊರೆಯ ಲೊಲ್ಲವು ಚಮರಿ ಮೆರೆಯಲೊಲ್ಲವು ಸಿಂಗ।
ಮರರೆ ಜಾನಕಿಯ ಶೋಕಂ ತಮ್ಮದೆಂದಾಕೆಯಂಗಮಂ ನೋಡಿನೋಡಿ ॥ ॥೩೩॥

ಬೀಸಿದುವು ಚಾಲದೊಳ್ಚಮರಿಗಳ್ಚಮರವಂ ।
ಪಾಸಿದುವು ಕರಿಗಳಿಳೆ ದಳಿರ ಮೃದುತಲ್ಪಮಂ ।
ಸೂಸಿದುವು ಸಾರಸಂಗಳ್ತಮ್ಮ ಗರಿಗಳಂ ತೋಯ್ದು ತಂದಂಬುಗಳನು ॥
ಆಸಿರಿಮೊಗಕ್ಕೆ ಬಿಸಿಲಾಗದಂತಾಗಸದೊ ।
ಳೋಸರಿಸದಂಚೆಗಳೆರಂಕೆಯು ನಗಲ್ಚಿ ನೆಳ ।
ಲಾಸೆಗೈದುವು ರಾಘವನ ರಾಣಿ ದುಃಖಸಂತಪ್ತೆಯಾಗಿರುತಿರಲ್ಕೆ ॥ ॥೩೪॥
ಸುರನದಿಯ ತೆರೆತೆರೆಯ ನಡುನಡುವೆ ಬಿದ್ದೆದ್ದು ।
ಬರಲಾರದಿರ್ದೊಡಂ ಮುತ್ತೆ ಗಂಗೆಯೊಳಲ ।
ರ್ದರವಿಂದ ಗಂಧದತಿಭಾರಮಂ ಪೊರಲಾರದಿರ್ದೊಡಂ ಧರಣಿಸುತೆಯ ॥
ಪರಿತಾಪಮಂ ತವಿಸದಿರಬಾರದೆಂದು ತರ ।
ಹರದೊಳೊಯ್ಯೊಯ್ಯನೈತಂದು ಬೀಸಿತು ಸುಖ ।
ಸ್ಪರುಶವಾತಂ ಜಗದೊಳುಪಕಾರಿಯಾದವಂ ತನ್ನ ನೋವಂ ನೋಳ್ಪನೆ ॥ ॥೩೫॥
ಪೃಥಿವಿಯಾತ್ಮಜೆ ಬಳಿಕ ಚೇತರಿಸಿ ತನಗಿನ್ನು ।
ಪಥಮಾವುದೆಂದು ದೆಸೆದೆಸೆಗಳಂ ನೋಡಿ ಸಲೆ ।
ಶಿಥಿಲಮಾದವಯವದ ದೂಳಿಡಿದ ಮೈಯ ಬಿಡುಮುಡಿಯ ವಿಕೃತಿಯನೆಣಿಸದೆ ॥
ನಿಖಿಲೇಂದ್ರವಂಶದೊಳ್ಜನಿಸಿ ರಘುಕುಲದ ವಶ ।
ರಥನೃಪನ ಸೊಸೆಯಾಗಿ ತನಗೆ ಕಟ್ಟಡವಿಯೊ ।
ಳ್ವ್ಯಥಿಸುವಂತಾಯ್ತಕಟ ವಿಧಿಯೆಂದು ಹಲುಬಿದಳ್ಕಲ್ಮರಂ ಕರಗುವಂತೆ ॥ ॥೩೬॥
ಕೇಣಮಂ ಬಿಟ್ಟಾತ್ಮಘಾತಕದೊಳೀಕ್ಷಣಂ ।
ಪ್ರಾಣಮಂ ತೊರೆದಪೆನೆ ಬಂದಪುದು ಗರ್ಭದಿಂ ।
ಭ್ರೂಣಹತ್ಯಾದೋಷ ಮೇಗೈವೆ ನಾರ್ಗೊರೆವೆನೆಂದೊಯ್ಯನೆದ್ದು ಬಳಿಕ ॥
ಏಣಾಕ್ಷಿ ನಡೆವಳಡವಿಯೊಳುಪಲ ಕಂಟಕ ।
ಶ್ರೇಣಿಗಳ್ನೋಂಕಿ ಮೆಲ್ಲಡಿಗಳಿಂ ಬಸಿವ ನವ ।
ಶೋಣಿತಂ ನೆಲದೊಳ್ಪೊನಲ್ವರಿಯುಲರಸಕೇಳ್ಪೆಣ್ಣೊಡಲ್ಪಡಿಯಬಹುದೆ ॥ ॥೩೭॥
ಅನ್ನೆಗಂ ಮುಖಕೆ ಯೂವವ ನರಸುತಾ ಬನಕೆ ।
ಸನ್ನುತ ತಪೋಧನಂ ವಾಲ್ಮೀಕಿಮುನಿವರಂ ।
ತನ್ನ ಶಿಷ್ಯರ್ವೆರಸಿ ನಡೆತಂದು ಕಾಡೊಳೊರ್ವಳಿ ಪುಗಲ್ಪೆಸೆಗಾಣದೆ ॥
ಬನ್ನದಿಂ ಬಗೆಗೆಟ್ಟು ವಾಡಳಿದು ಗ್ರೀಷ್ಮರುತು ।
ವಿಂ ಸವೆದ ಕಾಂತಾರದಧಿದೇವಿ ತಾನೆನ ।
ಲ್ಸನ್ನಗದ್ಗದ ಕಂಠಿಯಾಗಿ ರೋದಿಸುತಿರ್ದ ವೈದೇಹಿಯಂ ಕಂಡನು ॥ ॥೩೮॥
ಆರಿವಳಿ ದೇತಕಿರ್ದಪ ಳೀವನಾಂತರದೊ ।
ಳಾರೈವೆ ನಿವನೆಂದು ನಡೆತಂದು ಕರುಣದಿಂ ।
ದಾರುಷಿ ನುಡಿಸಿದ ನೆಲೆ ತಾಯೆ ನೀನಾವಳೌ ಕಂಡ ಕುರುಪಾಗಿರ್ಪುದು ॥
ಘೋರತರ ಗಹನದೊಳೊರ್ವಳಿ ಬಂದೆ ಯೆಂತಕಟ ।
ಭೀರು ಹೇಳೌ ಬೆದರಬೇಡ ವಾಲ್ಮೀಕಿ ನಾಂ ।
ಭೂರಿ ಶೋಕಾರ್ತರಾಗಿರ್ದರಂ ಕಂಡು ಸುಮ್ಮನೆ ಪೋಪನಲ್ಲೆಂದನು ॥ ॥೩೯॥

ಹರುಷ ಮೊತ್ತರಿಸಿದುದು ಶೋಕವಿಮ್ಮಡಿಸಿದುದು |
ಬೆರಸಿದುದು ಲಜ್ಜೆ ಭೂಮಿಜೆಗಂದು ಗದ್ಗದ |
ಸ್ವರದಿಂದೆ ಸೀತೆ ತಾಂ ಲೋಕಾಪವಾದ ಕಪರಾಧಿಯಲ್ಲದ ತನ್ನನು ||
ತರಣಿಕುಲಸಂಭವಂ ಬಿಟ್ಟನೆಂದೀ ವನದೊ |
ಳಿರಿಸಿ ಪೋದಂ ಸುಮಿತ್ರಾತ್ಮಜಂ ಜೀವಮಂ |
ಪೊರೆಯವೇಳ್ಪುದೆ ಗರ್ಭಮೊಡಲೊಳಿಹುದೇವೆಂದೆರಗಿದಳ್ಮುನಿಪದದೊಳು ||೪೦||
ದೇವಿ ಬಿಡು ಶೋಕಮಂ ಪುತ್ರಯುಗಮಂ ಪಡೆವೆ |
ಭಾವಿಸದಿರಿನ್ನು ಸಂದೇಹಮಂ ಜನಕಂಗೆ |
ನಾವನ್ಯರಲ್ಲ ನಮ್ಮಾಶ್ರಮಕೆ ಬಂದು ನೀಂ ಸುಖದೊಳಿರ್ದೊಡೆ ನಿನ್ನನು ||
ಆವಾವ ಬಯಕೆಯುಂಟೆಲ್ಲಮಂ ಸಲಿಸಿ ತಾ |
ನೋವಿಕೊಂಡಿರ್ಪೆ ನಂಜದಿರೆಂದು ಸಂತೈಸಿ |
ರಾವಣಾರಿಯ ರಾಣಿಯಂ ನಿಜ ತಪೋವನಕೆ ವಾಲ್ಮೀಕಿ ಕರೆತಂದನು || ||೪೧||
ಚಿತ್ರಮಯಮಾಗಿ ಕಟ್ಟಿತು ಪರ್ಣಶಾಲೆ ಶತ |
ಪತ್ರಲೋಚನೆಗೆ ಬಳಿಕಲ್ಲಿ ಋಷಿಪತ್ನಿಯವರ |
ಮಿತ್ರತ್ವಮಂ ತಳೆದು ವಾಲ್ಮೀಕಿ ಮುನಿಪ ನಾಜ್ಞೆಯಿಂ ಸೀತೆ ತನ್ನ ||
ಪುತ್ರೋದಯದ ಕಾಲಮಂ ನೋಡುತಿರ್ದ ಳ್ಧ |
ರಿತ್ರಿಯೊ ಳ್ದೃಢಪತಿವ್ರತೆಯರ್ಗೆ ನಿರ್ಮಲ ಚ |
ರಿತ್ರ ಮೆಂತಾದೊಡಂ ವಿಪರೀತ ಮಾದಪುದೆ ಭೂಪಾಲ ಕೇಳೆಂದನು || ||೪೨||
ಜಾತಿವೈರಂಗಳಿಲ್ಲದ ಪಕ್ಷಿಮೃಗದ ಸಂ |
ಘಾತದಿಂ ಋತುಭೇದಮಿಲ್ಲದ ಲತಾದ್ರುಮ |
ವ್ರಾತದಿಂ ಪಗಲಿರುಳ ಶಂಕೆಯಿಲ್ಲದ ಪೂಗೊಳಂಗಳಂ ವಿಕಾಸದಿಂದೆ ||
ಶೀತೋಷ್ಣದಾಸರಿಲ್ಲದ ಸುಸ್ಥಳಂಗಳಿಂ |
ಪ್ರೀತಿ ವಿರಹಿತ ದುಃಖಸುಖದ ಜಂಜಡಮಿಲ್ಲ |
ದಾತಪೋವನದೊಳಗೆ ಋಷಿವಧುಗಳೊಡನೆ ವೈದೇಹಿ ಪದುಳದೊಳಿರ್ದಳು || ||೪೩||
ಮುನಿವಟುಗಳೆಡೆಯಾಡಿ ಪರಿಚರ್ಯೆಯಂ ಮಾಳ್ಪ |
ರಿಸಿದಾದ ವಸ್ತುವಂ ಋಷಿವಧುಗಳಿತ್ತಪ |
ರ್ತನತನಗೆ ಸತ್ಕರಿಸುವುದು ತಾಪಸೋತ್ಕರಂ ವಾಲ್ಮೀಕಿ ಸಾದರದೊಳು ||
ದಿನದಿನಕೆ ಬೇಕಾದ ಬಯಕೆಯಂ ಸಲಿಸುವಂ |
ಬನದೊಳಿಂತಿರುತಿರ್ದ ಳವನಿಸುತೆ ರಾಘವೇಂ |
ದ್ರನ ಚರಣಕಮಲಮಂ ಧ್ಯಾನಿಸುತೆ ಮರೆದಖಿಲ ರಾಜವಿಭವ ಶ್ರೀಯನು || ||೪೪||
ಅವನಿಜೆಯ ಗರ್ಭಕ್ಕೆ ತುಂಬಿದುದು ನವಮಾಸ |
ದವಧಿ ಬಳಿಕೊಂದಿರುಳ್ ಶುಭಲಗ್ನದೊಳ್ಪಡೆದ |
ಳವಳಿಮಕ್ಕಳ ನುಪಚರಿಸೆ ನಿವಗ್ಗಾಂಗನೆಯ ರಾ ಸೂತಿಕಾಗೃಹದೊಳು ||
ತವಕದಿಂದೈತಂದು ಮುನಿವಟುಗಳುಸಿರ ಲು |
ತ್ಸವದಿಂದೆ ವಾಲ್ಮೀಕಿಮುನಿ ಬಂದು ನೋಡಿ ಕುಶ |
ಲವದಿಂದೆ ಸೇಚನಂಗೈದು ಕುಶಲವರೆಂದು ಪೆಸರಿಟ್ಟನರ್ಭಕರ್ಗೆ || ||೪೫||

ದೆಸೆಗಳ್ಪ್ರಸನ್ನತೆಯೊಳಿದ್ದು ವಾಗಸದೊಳುಡು |
ವಿಸರಂಗ ಳೊಪ್ಪಿದುವು ಪೊಸಗಂಪಿಡಿದು ಗಾಳಿ |
ಪಸರಿಸಿತು ತವೆ ಸುಪ್ರದಕ್ಷಿಣಮೊಳುರಿದು ದಗ್ನಿಜ್ವಾಲೆ ಕಡಲುಕ್ಕಿತು ||
ವಸುಧೆ ನಲಿದುದು ತಿಳಿದು ಪರಿದುವು ನದಿಗಳಂದು |
ಶಶಿ ರವಿಗಳುದಯಿಸಿವ ರೇಕಕಾಲದೊಳೆ ನ |
ಲ್ಶಿಶುಗಳಾಶ್ರಮದ ಮುನಿಗಳ ಕಣ್ಗೆ ಕಾಣಿಸಿದರೊಸಗೆ ಮೂಜಗಕಾದುದು || ||೪೬||

ಬಾಲದುಡಿಗೆಗಳೆಲ್ಲಮುಂ ತುಡಿಸಿ ನೋಡುವಂ |
ಬಾಲಲೀಲೆಗಳನಾಡಿಸಿ ಮುದ್ದುಮಾಡುವಂ |
ಬಾಲಕರ್ಗಿನಿದಾದ ವಸ್ತುವಂ ಕೊಡುವಂ ತನ್ನ ತೊಡೆಮುಡಿಲೊಳಿಟ್ಟು ||
ಲಾಲಿಸುವ ನಾವಗಂ ಜಪ ಸಮಾಧಿ ತಪಗಳ |
ಕಾಲಮುಂ ಬಗೆಯದೆ ಮುನೀಶ್ವರಂ ಕುಶ ಲವರ |
ಮೇಲಣಕ್ಕರೊಳಿರ್ದ ನಾಶ್ರಮದೊಳುತ್ಸವಂ ಪೆರ್ಚಿದುದು ದಿನದಿನದೊಳು || ||೪೭||

ದಶರಥ ನೃಪಾಲಸುತ ನರಮನೆಯ ಬೆಳವಿಗೆಯ |
ಶಿಶುಗಳ್ಗೆ ಕಾಂತಾರ ವಾಸದೊಳ್ನವೆವ ಕ |
ರ್ಕಶಮಿದೆತ್ತಣದೆಂದು ಮಿಥಿಳೇಂದ್ರ ಸಂಭೂತೆ ಚಿತ್ತದೊಳ್ಮರುಗದಂತೆ ||
ವಿಶದಮಾನಸನಾಗಿ ವಾಲ್ಮೀಕಿಮುನಿವರಂ |
ಕುಶ ಲವರ ನೋವಿದಂ ವಿವಿಧ ವೈಭವದಿಂದೆ |
ಶಶಧರ ಕಳೆಯ ತೆರದೊಳಾ ರಾಘವಾತ್ಮಜ ರ್ದಿನದಿನಕೆ ವರ್ಧಿಸಿದರು || ||೪೮||

ಚೆಲ್ವೆರಡು ರೂಪಾಯ್ತೊ ವಿಮಲತೆ ಕವಲ್ತುದೋ |
ಗೆಲ್ವದೆಸೆ ಗಳೆಗೊಂಡಡರ್ದಪುದೊ ಕೀರ್ತಿಯ ಮು |
ಡಲ್ವಸುಧೆಯೊಳ್ದ್ವಿಧಾಕೃತಿ ಯಾಯ್ತೊ ಸಂತಸದ ಬೆಳಸಿನ ಬೆಳೆದ ಪಸುಗೆಯೊ ||
ಸಲ್ವ ಕುಲದೇಳ್ಗೆಯ ಸಸಿಯ ಕೋಡೊ ಮೋಹನದ |
ಬಲ್ಪೊನಲ ಸವಡಿಯೋ ಸೊಗಸಿನವಳಿಯ ಫಲವೊ |
ಸೊಲ್ವೊಡಿದು ಪೊಸತೆನಲ್ಕುಶಲವ ರ್ಕುಶಲದಿಂ ಕಣ್ಗೆಸೆದರಾಶ್ರಮದೊಳು || ||೪೯||

ತೊಟ್ಟಿಲೊಳ್ನಲಿವ ನೆವಮಿಲ್ಲದೆ ನಗುವ ಬಾಯ್ಗೆ |
ಬೆಟ್ಟಕ್ಕಿ ಪೀರ್ವ ಪಸಿದೊಡೆ ಚೀರ್ವ ಮೊಲೆಯುಂಬ |
ಪಟ್ಟಿರಿಸೆ ಪೊರಳ್ವಂಬೆಗಾಲಿಡುವ ಮೊಳೆವಲ್ಲ ಜೊಲ್ಲುಗೆ ತೊದಳಿಸಿ ನುಡಿವ ||
ಪಟ್ಟಡಿ ಯಿಡುವ ನಿಲ್ವ ತೊಡರ್ವ ಜೇಡುವ ಪರಿವ |
ಬಟ್ಟೆಯೊಳೊರಗುವ ಕಾಡುವ ಕುಣಿವ ಲೀಲೆಯಂ |
ನೆಟ್ಟನೆ ಕುಮಾರಕ ತೋರ್ಇವ ರ್ಜಾನಕಿಗೆ ವಾಲ್ಮೀಕಿಮುನಿವರಂಗೆ || ||೫೦||

ಬಿಡದೆ ಪಾಲ್ಪೀರ್ವದಂ ಕಳೆಯಲೋರಗೆ ಮಕ್ಕ |
ಳೊಡನೆ ದೂಳಾಟ ಮೊದಲಾದ ಲೀಲೆಗಳ ಪರಿ |
ವಿಡಿಯಿಂ ದೆಸೆವ ಕುಮಾರರ್ಗೆ ಮುನಿಪತಿ ಚೌಲಕರ್ಮಂಗಳಂ ಮಾಡಿಸಿ ||
ತೊಡಗಿಸಿದ ನಕ್ಷರಾಭ್ಯಾಸಮುಂ ಬಳಿಕ ನಡೆ |
ನುಡಿಯ ಚಾತುರ್ಯದ ಕಲೆಯ ರಾಜಲಕ್ಷಣದ ಜೆ |
ಲ್ವಿಡಿದ ಲಲಿತಾಂಗದಿಂ ಕುಶ ಲವ ರ್ಕುಶಲ ವರ್ಧನರಾಗಿ ರಂಜಿಸಿದರು || ||೫೧||

ಶ್ರೀಮಾಧವನ ಮನೋಹರದ ಸೌಂದರ್ಯಮಂ ।
ಕಾಮ ಜನಕನ ಕಮನೀಯ ಲಾವಣ್ಯಮಂ ।
ರಾಮಚಂದ್ರನ ರಾಮಣೀಯಕದ ರೂಪಮಂ ತಾಳ್ದೊಗೆದ ಸುಕುಮಾರರ ॥
ಕೋಮಲಾಂಗದ ಸೊಬಗ ನಭಿವರ್ಣಿಸುವರುಂಟೆ ।
ಭೂಮಿಯೊಳ್ಪ್ರಿಗೆ ವಸಂತನಂ ಮದನನಂ ।
ಸೋಮನಂ ಪಡಿಯಿಡಲ್ಕು ಸರುಕ್ತಮಪ್ಪುದೆನೆ ಕುಶಲವ ರ್ಕಣ್ಗೆಸೆದರು ॥ ॥೫೨॥

ದ್ವಾದಶಾಬ್ದದ ಮೇಲೆ ಮುನಿಪಂ ಕುಮಾರರ್ಗೆ ।
ವೇದೋಕ್ತದಿಂದ ಮುಪನಯನಂಗಳಂ ಮಾಡಿ ।
ಭೂದೇವನಿಕರಕೆ ವಶಿಷ್ಠನೊ ಳ್ವರ ಕಾಮಧೇನುವಂ ಬೇಡಿ ತಂದು ॥
ಆದರಿಸಿ ಭೋಜನಸುದಕ್ಷಿಣೆಗಳಿಂ ತಣಿಸ ।
ಮಾಡುವತಿ ವಿಭವದಿಂದುತ್ಸವಂ ಬಳಿಕ ತದ ।
ಣಾದಿತ್ಯ ಸನ್ನಿಭತರ್ೊಡಗಿದರ್ಜಾನಕಿಯ ಚಿತ್ತಕಾನಂದಮಾಗೆ ॥ ॥೫೩॥

ಸರ್ವಕರ್ಮದ ವಿಧಿಯ ನಖಿಳ ನಿಗಮದ ಕಡೆಯ ।
ಸುರ್ವಶಾಸ್ತ್ರದ ಬಗೆಯ ನುದಿತಧರ್ಮದ ನೆಲೆಯ ।
ಸುರ್ವೀಶ ನೀತಿಗಳ ನಿಶ್ಚಯವನೈದೆ ಸಾಂಗೋಪಾಂಗಮಾಗಿ ಬರಿಸಿ ॥
ತರ್ವಾಯೊಳಾ ಕುಮಾರರ್ಗೆ ಮುನಿನಾಥಂ ಧ ।
ನುರ್ವೇದಮಂ ಶಿಕ್ಷೆಗೈದು ರಾಮಾಯಣವ ।
ನಿರ್ವರುಂ ಪಾಡುವಂ ತೋದಿಸಿದ ನತಿ ಮಧುರಭಾವದಿಂ ತುದಿ ಮೊದಲ್ಗೆ ॥ ॥೫೪॥

ಸೀತೆ ನಲಿವಂತೆ ವಾಲ್ಮೀಕಿ ಮೆಚ್ಚುವತೆರದೊ ।
ಳಾತಪೋವನದ ಮುನಿಗಣಮೈದೆ ಕೊಂಡಾಡ ।
ಲಾ ತರುಣರಿರ್ವರುಂ ಮಧುರ ವೀಣೆಗಳ ಮೇಳಾಪದಾಲಾಪಂಗಳ ॥
ಗೀತದೊಳ್ಸಂಕೀರ್ಣ ಶುದ್ಧ ಸಾಳಗದಿಂ ರ ।
ಸಾತಿಶಯಮೆನೆ ಪಾಡುವರ್ದೇವನಗರೀ ನಿ ।
ಕೇತನ ಶ್ರೀಪತಿಯ ಚಾರಿತ್ರಮಪ್ಪ ರಾಮಾಯಣವ ನನುದಿನದೊಳು ॥ ॥೫೫॥

ಸಂಧಿ ೧೯ ಕ್ಕೆ ಪದ್ಯಗಳು ೯೫೮ ಕ್ಕೆ ಮಂಗಳಮಸ್ತು.

## ಇಪ್ಪತ್ತನೆಯ ಸಂಧಿ.

ಸೂಚನೆ॥ ರಘುವರನ ತುರಗಮಂ ಧಾತ್ರ್ಯರದ ಕುಮಾರಕನ
ಲಘುಪರಾಕ್ರಮಿ ಲವಂ ತರಳತನದಿಂ ಕಟ್ಟಿ ।
ಲಘುವಿತನೆಂದು ನಿತು ಶತ್ರುಘ್ನ ಲಕ್ಷ್ಮಣರ ತಳತಂತ್ರಕ್ಕೆ ಬಿಡಿಸಿಕೊಂಡಲು ।

ಹಿಮಕರ ಕುಲೇಂದ್ರ ಕೇಳ್ ವಾಲ್ಮೀಕಿಮುನಿಪ ನಾ ।
ಶ್ರಮದೊ ಳ್ಸಮಸ್ತ ಕಲೆಗಳ ನರಿದು ಕಾಕ ಪ ।
ಕ್ಷಮನಾಂತು ಜಾನಕಿಯ ಶುಶ್ರೂಷೆಯೊಳ್ಸಂದು ಋಷಿಯ ಚಿತ್ತಕ್ಕೆ ಬಂದು ॥
ಯಮಳರಿರೆ ಕಂಡು ಸಂಪ್ರೀತಿಯಿಂ ತಾಪಸೋ ।
ತ್ತಮನಿತ್ತ ನಿಷುಚಾಪ ಚರ್ಮ ಖಡ್ಗಂಗಳಂ ।
ರಮಣೀಯ ಕವಚ ಕುಂಡಲ ಕಿರೀಟಂಗಳಂ ತನ್ನಯ ತಪೋಬಲದೊಳು ॥ ॥೧॥

ಅವರ್ಗಿಂತಿರೆ ಅಯೋಧ್ಯಾಪುರದೊಳಿತ್ತ ರಾ |
ಘವ ನಖಿಳ ಧರಣಿಯಂ ಪಾಲಿಸುತೆ ಸೌಖ್ಯಾನು |
ಭವದೊಳೊಂದಿನದೆ ರಾವಣ ವಧೆಯೊಳಂದು ಬಂದಾ ಬ್ರಹ್ಮಹತಿ ತನ್ನನು |
ಅವಗಡಿಸಲದಕೆ ನಿಷ್ಕೃತಿಯಾವುದೆಂದು ನಾ |
ರುವ ನಿಗಮದರ್ಥಮಂ ತಿಳಿದು ಹಯಮೇಧಮಂ |
ತನೆ ನೆಗಳ್ಚುವನಾಗಿ ನಿಶ್ಚೈಸಿ ಕರೆಸಿದಂ ವರ ವಶಿಷ್ಠಾದಿಗಳನು || ೨||

ವಾಮದೇವಾತ್ರಿಗಾಲವ ಗುರು ವಶಿಷ್ಠ ವಿ |
ಶ್ವಾಮಿತ್ರರಂ ಕರೆಸಿ ಹಯಮೇಧ ಲಕ್ಷಣವ |
ನಾ ಮುನಿಗಳಂ ಕೇಳ್ದನುಜ್ಞೆಗೊಳ ಲವರಿದಕೆ ನಿಜಪತ್ನಿ ಬೇಳ್ಪುದೆನಲು |
ಹೇಮ ನಿರ್ಮಿತವಾದ ಜಾನಕಿಯ ನಿರಿಸಿ ಕೊಂ |
ಡೀ ಮಹಾ ಯಜ್ಞಮಂ ನಡೆಸುವೆಂ ತಾನೆಂದು |
ರಾಮಚಂದ್ರಂ ನಿಖಿಳಋಷಿಗಳ ನೊಡಂಬಡಿಸಿ ಶಾಲೆಯಂ ಮಾಡಿಸಿದನು || ೩||

ಬಳಿಕ ವೇದೋಕ್ತ ಪ್ರಕಾರದಿಂ ದೀಕ್ಷೆಯಂ |
ತಳೆದು ರಘುನಾಥಂ ತುರಂಗಮಂ ಪೂಜಿಸ್ಯೈ |
ವಿಳೆಯೊಳ್ಚರಿಸಲವರ ಪಣೆಗೆ ತನ್ನಗ್ಗಳಿಕೆಯಂ ಬರೆದ ಪತ್ರಿಕೆಯನು ||
ಅಳವಡಿಸಿ ಕೂಡೆ ಮೂರಕ್ಷೋಹಿಣೀ ಮೂಲ |
ಬಲಸಹಿತ ವೀರಶತ್ರುಘ್ನನಂ ಕಾವಲ್ಗೆ |
ಕಳುಹಿಬಿಡಲಾ ಹಯಂ ತಿರುಗುತಿರ್ದುದು ಧರೆಯಮೇಲಖಿಳ ದೆಸೆದೆಸೆಯೊಳು || ೪||

ಬಲ್ಗಯ್ಯ ನೃಪರಂಜಿ ತಡೆಯದೆ ರಘೂದ್ವಹನ |
ಸೊಲ್ಗೇಳಿ ನಮಿಸಲಿಳೆಯೊಳ್ಚರಿಸು ತಧ್ವರದ |
ನಲ್ಗುದುರೆ ಬಂದು ವಾಲ್ಮೀಕಿಯ ನಿಜಾಶ್ರಮದ ವಿನಿಯೋಗ ದುಪವನದೊಳು ||
ಪುಲ್ಗಳ ಪಸುರ್ಗೆಳಸಿ ಪೊಕ್ಕುದಾ ತೋಟಗಾ |
ವಲ್ಗೆ ತನ್ನೊಡನಾಡಿಗಳ ಕೂಡಿ ಲೀಲೆಸುಗೆ |
ಬಿಲ್ಗೊಂಡು ನಡೆತಂದವಂ ಕಂಡನರ್ಚಿತ ಸುವಾಜಿಯಂ ವೀರ ಲವನು || ೫||

ಎತ್ತಣ ತುರಂಗಮಿದು ಪೊಕ್ಕು ಪೂದೋಟಮಂ |
ತೊತ್ತಳ ದುಳಿವುದು ವಾಲ್ಮೀಕಿ ಮುನಿನಾಥ ನೇ |
ಪೊತ್ತು ಪಾಕ್ಯಪ್ರಪಿಂದಿನಗೆ ನೇಮಿಸಿ ಪೋದನಬ್ಧಿಪಂ ಕರೆಸಲಾಗಿ ||
ಮತ್ತೆ ವರುಣನ ಲೋಕದಿಂ ಬಂದು ಮುನಿಪನ ನೆ |
ಸುತ್ತೆ ಹಯದೆಡೆಗೆ ನಡೆತಂದು ನೋಡಲ್ಕದರ |
ನೆತ್ತಿಯೊಳ್ಮೆರೆವ ಪಟ್ಟದ ಲಿಖಿತಮಂ ಕಂಡು ಲವ ನೋದಿಕೊಳುತಿರ್ದನು || ೬||

ಉರ್ವಿಯೊಳ್ಕ್ಷತ್ರ್ಯೈ ಪಡೆದ ಕುವರಂ ರಾಮ |
ನೊರ್ವನೇ ವೀರ ನಾತನ ಯಜ್ಞ ತುರಗಮಿದು |
ನಿರ್ವಹಿಸಲಾರ್ಗಾದೊಡಂ ತಡೆಯಲೆಂದಿರ್ದ ಲೇಖನವನೋದಿ ||
ಗರ್ವಮಂ ಬಿಡಿಸದಿರ್ದೊಡೆ ತನ್ನ ಮಾತೆಯಂ |
ಸರ್ವ ಜನಮುಂ ಬಂಜೆಯೆನ್ನದಿರ್ದಪುದೆ ತನ |
ಗುರ್ವ ತೋರ್ಗೆನೀತಕೆಂದು ಪಳಿ ವಾಜಿಯಂ ಕಟ್ಟಿ ಲವನುಬ್ಬಿದನು || ೭||

ತೆಗದುತ್ತರೀಯಮಂ ಮುರಿದು ಕುದುರೆಯ ಗಳಕೆ।
ಬಿಗಿದು ಕದಳೀವೃಕ್ಷಕೆ ಕಟ್ಟಲ್ಕೆ ಮುನಿಸುತ।
ರ್ನಿಗೆ ನಡುಗಿ ಬೇಡಬೇಡರಸುಗಳ ವಾಜಿಯಂ ಬಿಡು ಬಡಿವರೆಮ್ಮನೆನಲು ॥
ನಗುತೆ ಪಾರ್ಥರ ಮಕ್ಕಳಂಜಿದೊಡೆ ಜಾನಕಿಯ।
ಮಗನಿದಕೆ ಬೆದರುವನೆ ಪೋಗಿ ನೀವೆಂದು ಲವ।
ನಗಡುತನದಿಂದೆ ಬಿಲ್ಲಿದುವನೇರಿಸಿ ತೀಡಿ ಜೇಗೈದು ನಿಂದಿರ್ದನು ॥ ॥೮॥
ಕುದುರೆಗಾವಲ ಸುಭಟರನಿತರೊಳೊದಗಿ ಬಂದು।
ಕದಳೀವೃಕ್ಷಕ್ಕೆ ಕಟ್ಟಿದ ತುರಗಮಂ ಕಂಡು।
ಸದಮಲ ಬ್ರಹ್ಮಚಾರಿಗಳ ನಾರ್ಭಟಿಸಿ ವಾಜಿಯನೇಕೆ ಬಿಗಿದಿರೆನಲು ॥
ಬೆದರಿ ನಾವಲ್ಲವಂ ಬೇಡಬೇಡೆನೆ ಬಂಧಿ।
ಸಿದನೆಂದು ಲವನಂ ಕರಾಗ್ರದಿಂ ತೋರಿಸಿದ।
ರದಟರೀತಂ ತರಳ ನರಿಯದೆಸಗಿದನೆಂದು ಬಿಡಹೇಳಿ ಗರ್ಜಿಸಿದರು ॥ ॥೯॥
ವಿಕ್ರಮವಿದೇಕೆ ಬಿಡೆನಶ್ವಮಂ ಮೇಣ್ಬಿಡಲು।
ಪಕ್ರಮಿಸಿ ದವರ್ಗಳ ಕರವ ನರಿವೆನೆನೆ ಲವ ರ।
ತಿಕ್ರಮಿಸಿ ವಾಜಿಯಂ ಬಿಡುವೊಡೈತರ ಲವರ ಕೈಗಳಂ ಕೋಪದಿಂದೆ ॥
ವಕ್ರಮಿಲ್ಲದೆ ಕೋಲ್ಗಳಿಂದೆಚ್ಚು ಕಡಿಮೊಡನೆ।
ಶಕ್ರನಪ್ರಿಯ ಮೇಲೆ ಮಳೆಗರೆವೊಲಾ ಸೈನ್ಯ।
ಚಕ್ರಮಂ ಮುಸುಕಿದಂ ವೀರ ಲವ ನಾಕ್ಷಣಮೊಳೇನೆಂಬೆ ನದ್ಭುತವನು ॥ ॥೧೦॥
ಬಾಲಕನ ಮೇಲೆ ಕವಿದುದು ಬಳಿಕ ಮುಳಿದು ಹಯ।
ಪಾಲಕ ಬಲಂ ಕರಿ ತುರಗ ರಥ ಪದಾತಿಗಳ।
ಜಾಲಕವ ನೊರ್ವನೆನ್ನದೆ ಬಾಣ ಪರಶು ತೋಮರ ಶಕ್ತಿ ಸುರಗಿಗಳೊಳು ॥
ಕಾಲಕಖಿಳ ಪ್ರಾಣಿಗಳನೈದೆ ಸಂಹರಿಪ।
ಶೂಲ ಕರ ನೆನಲವಂ ಕೊಲುತಿರ್ದ ನನಿಬರಂ।
ಕೋಲ ಕಡುವಳೆ ಗರೆದು ಮುನಿಪ ನಿ ತ್ತ್ರಕ್ಷಯ ನಿಷಂಗ ಮೆಸೆದಿರೆ ಬೆನ್ನೊಳು ॥೧೧॥
ಸಂಖ್ಯೆಯಿಲ್ಲದೆ ಮೇಲೆ ಬೀಳ್ವ ಕೈದುಗಳೆಲ್ಲ।
ಮಂ ಖಂಡಿಸುತ್ತೊಡನೆ ಮುತ್ತಿ ದರಿ ಚತುರಂಗ।
ಮಂ ಖಾತಿಯಿಂದೆ ಸಂಹರಿಸುತೊಂದೊಂದು ರಿಪುಬಾಣ ಕೈದಂಬುಗಳನು ॥
ಪುಂಖಾನು ಪುಂಖದಿಂದಿಸುವ ಬಾಲಕ ನಿಸುಗೆ।
ಯಿಂ ಖಿಲಪ್ರಾಯವಾಗಿರ್ದ ನಿಜ ಬಲಜಾಲ।
ಮಂ ಖರಾಂತಕ ನನುಜ ನೀಕ್ಷಿಸಿ ಕನಲ್ದೇರಿದಂ ಮಹಾಮಣಿರಥವನು ॥ ॥೧೨॥
ದುರಿತಗಣ ನಿರ್ದಪುದೆ ಗೌತಮಿಯ ಕಾಳ್ಗಂಗೆ।
ಪರಮಯೋಗಿಗೆ ಭವದ ಬಂಧನಂ ಬಂದಪುದೆ।
ಪರಸೈನ್ಯ ದುರುಬೆ ರಘುಕುಲಜರ್ಗೆ ತೋರುವುದೆ ಕೇಳವನಿಪಾಲತಿಲಕ ॥
ತರಳನಾದೊಡೆ ಲವಂ ಬೆದರುವನೆ ನಿಮಿಷ ದೊ।
ಳ್ಕರೆಗಡಿದ ನನಿತು ಚತುರಂಗಮಂ ಶತ್ರುಘ್ನ।
ನುರವಣಿಸಿ ತಡೆದ ನೆರಗುವ ಸಿಡಿಲ ಗರ್ಜನೆಗೆ ಮುಳಿವ ಮರಿಸಿಂಗದಂತೆ ॥ ॥೧೩॥

ಒತ್ತಿ ಬಹ ಶತ್ರುಘ್ನನುರುಬೆಗೆ ಲವಂ ತನ್ನ |
ಚಿತ್ತದೊಳ್ಮಹೇಶಮಂತ್ರಮಂ ಸ್ಮರಿಸುತ್ತೆ |
ಮತ್ತೆ ನಿರ್ಭಯನಾಗಿ ಮಾರಾಂತೊಡಾತ ನೆಲವೆಲವೊ ನೀಂ ಪಸುಳೆ ನಿನಗೆ ||
ತೆತ್ತಿಗ ರದಾರಕಟ ಸಾಯದಿ ರ್ಪೋಗೆನುತೆ |
ಹತ್ತು ಶರದಿಂ ಪೆಚ್ಚೊಡವನ ಬಾಣಂಗಳಂ |
ಕತ್ತರಿಸಿ ಕೂಡೆ ಭರತಾನುಜನ ಕಾರ್ಮುಕದ ಹೆದೆಯ ನಿಕ್ಕಡಿಗೈದನು || ||೧೪||

ತರಳನ ಪರಾಕ್ರಮಕೆ ಮೆಚ್ಚಿದಂ ಮತ್ತೊಂದು |
ತಿರುವ ನಳವಡಿಸಿದಂ ಕಾರ್ಮುಕಕೆ ಶತ್ರುಘ್ನ |
ನಿರದೆ ಕಣೆ ಮೂರರಿಂ ಬಾಲಕನ ಪಣೆಯ ನೆಚ್ಚೊಡೆ ನಗುತೆ ಪರಿಮಳಿಸಿದ ||
ವಿರಹಿಗಳ ನಂಜಿಸುವ ಪೂಗಣೆವೊಲಾಯ್ತು ನಿ |
ಸ್ನರವಣೆಯ ಬಾಣಂ ಗಡೆನುತೆ ಭರತಾನುಜನ |
ತುರಗ ಸಾರಥಿ ವರೂಥ ಧ್ವಜ ಶರಾಸನಂಗಳ ನವಂ ತಡೆಗಡಿದನು || ||೧೫||

ಕೋಪದಿಂ ಪೊಸರಥಕಡರ್ದು ಶತ್ರುಘ್ನನುರು |
ಚಾಪಮಂ ಕೊಂಡು ದಿವ್ಯಾಸ್ತ್ರದಿಂದಿಸುತೆ ಬರ |
ಲಾ ಪಥದೊಳಿಣಿಕೆಗೈದಣ್ಣನಂ ಮಾತೆಯುಂ ನೆನೆದು ಮನದೊಳ್ಮರುಗುತೆ ||
ಆ ಪಸುಳೆ ಮತ್ತೆ ಕಡು ಧೈರ್ಯಮಂ ತಪೆ ತಾಳ್ದಿ |
ನೋಪಮದೊಳೈದುವ ಪಗೆಯ ಶರವ ನೆಡೆಯೊಳ್ಪ್ರ |
ತಾಪದಿಂ ಕತ್ತರಿಸಿ ಕೆಡಹಲ್ಕೆ ಬಯಲಾಯ್ತು ಕೂಟಸಾಕ್ಷಿಯ ಸಿರಿವೊಲು || ||೧೬||

ವಿಸ್ಮಯಾನ್ವಿತನಾದನಂದು ಶತ್ರುಘ್ನನಾ |
ಕಸ್ಮಿಕವ ಪಸುಳೆಯ ಪರಾಕ್ರಮಕೆ ಬಳಿಕ ವಿಲ |
ಯಸ್ಮರಾಂತಕನ ಪಣೆಗಣ್ಣಿಂದೆ ಪೊರಮಡುವ ದಳ್ಳುರಿಯ ತೆರದೊಳೆಸೆವ ||
ರಶ್ಮಿಗಳ ಸುಗುಳ್ವಮೋಘದ ಬಾಣಮಂ ಪೂಡು |
ತಸ್ಮದಿಷುಘಾತಮಂ ನೋಡೆನುತಿರಲ್ಕೆ ಮಂ |
ದಸ್ಮಿತದೊಳಾ ಸರಳನೆಚ್ಚು ಲವನೆಡೆಯೊಳಿಕ್ಕಡಿಗೈವನೇವೇಳ್ವೆನು || ||೧೭||

ಅರಸ ಕೇಳಾ ಶರಮೋಘಮವನಿಗೆ ಕೆಡೆದು |
ಬಿರಿದೆ ಮೇಲ್ವಾಯ್ದುರ್ವಿಯಾ ಲವನ ಕಾರ್ಮುಕವ |
ಸರಿದು ಕೊಂಡೆದೆಯನುಚ್ಚಳಿಸೆ ಮೈಮರೆದೊರಗಿದಂ ಪಸುಳೆ ಮೂರ್ಛೆಯಿಂದೆ ||
ಹರುಷದಿಂದಾರ್ದುದುಳಿದರಿಬಲಂ ನಡೆತಂದು |
ಕರುಣದಿಂ ತರಳನಂ ನೋಡಿ ರಾಮಾಕೃತಿ ಪ್ರೊ |
ಲಿರೆ ಮೋಹದಿಂ ತನ್ನ ರಥದ ಮೇಲಿರಿಸಿಕೊಂಡೈದಿದಂ ಶತ್ರುಘ್ನನು || ||೧೮||

ಕದನದೊಳ್ಸಿಕ್ಕಿದ ಕುಮಾರಿಯಂ ಬಿಡಿಸಿ ನಗ |
ರದ ಕಡೆಗೆ ಪಡೆನಡೆಸಿ ತಿರುಗಿದಂ ಶತ್ರುಘ್ನ |
ಮುದಭಿಶೋಕದೊಳತ್ತ ಲೋಡಿದರ್ತಾಪಸ ವಟುಗಳವನಿಸುತೆಯ ಪೊರೆಗೆ ||
ಕದನದೊಳ್ನಡೆದ ವೃತ್ತಾಂತಮಂ ಪೇಳಲ್ಕೆ |
ರುದಿತದಿಂ ಕೈನೆರಳನೊತ್ತಿಕೊಳುತೆ ನಿಜ |
ಸದನಮಂ ಪೊರಮಟ್ಟು ಹಲುಬಿದಳ್ಸುತನ ಗುಣಶೀಲ ರೂಪುಗಳನೆಣಿಸಿ || ||೧೯||

ಒಸರಿದುವು ಕಂಬನಿಗಳಂಗಲತೆ ಕಂಪಿಸಿತು |
ಪೊಸೆವಳೊಡಲಂ ಕೂಡೆ ಕೂಡೆ ಸುತ ಮೋಹದಿಂ |
ಪಸವಳಿದು ಕಂದನೆಲ್ಲಿರ್ದಪಂ ಕಾದಿವನೆ ಪಗೆಯು ಕೈಗೊಳಗಾದನೆ |
ಪಸುಳೆಗೇನಾಯ್ತೊ ಮಗನೆಂತು ನೊಂದನೊ ತರಳ |
ನಸುವಿಡಿದಿಹನೊ ಬಾಲಕನ ಮುದ್ದು ಮೊಗಮೆನ್ನ |
ದೆಸೆಗೆ ಸ್ಫುರಿಸದೊ ಜೀವಿಸಿ ಕೆಟ್ಟೆನೆಂದು ಹಲುಬಿದಳಂಬುಜಾಕ್ಷಿ ಮರುಗಿ || ||೨೦||
ಅನ್ನೆಗಂ ಬಂದನಗ್ಗದ ಸಮಿತ್ಪುಷ್ಪಂಗ |
ಳನ್ನೆತ್ತಿಯೊಳ್ಪೊತ್ತುಕೊಂಡು ಕುಶ ಸಲುತಿರ್ಪ |
ತನ್ನ ತಾಯಂ ಕಂಡಿದೇನದ್ಭುತ ಪ್ರಳಾಪಂ ನಿನಗೆ ಪೇಳೆನಲ್ಕೆ ||
ಬನ್ನಮಂ ಕೇಳ್ಮಗನೆ ಹಯಮೊಂದು ಬರಲದಂ |
ನಿನ್ನ ತಮ್ಮಂ ಕಟ್ಟಲರಸುಗಳ್ಪಿಡಿದೊಯ್ದು |
ರಿನ್ನೇವೆನೆಂದು ಜಾನಕಿ ನುಡಿಯೆ ರೋಷದಿಂದಾ ಕುವರನಿಂತೆಂದನು || ||೨೧||
ಶೋಕಮೇಕಿದಕೆ ಹರಿಣವ ನೊಯ್ದೊಡಂತಕನ |
ಲೋಕಮಂ ಸುಡುವೆನಲ್ಲಹುದೆಂದೊಡಜ ಹರಿ ಪಿ |
ನಾಕಿಗಳ ನುರಿಪುವೆಂ ಮಿಕ್ಕರಸು ಗಿರಸುಗಳ ಪಾಡಾವುದೀಗ ತನಗೆ ||
ಆ ಕವಚ ಶರ ಧನುಃ ಖಡ್ಗ ಮಕುಟಂಗಳಂ |
ತಾ ಕಳವಳಿಸದಿರೆಂ ದವನಿಜೆಗೆ ನುಡಿದೊಡವ |
ನಾ ಕುಶಂ ಗೋಣಗಣಿಂ ದಂಗಿಯಂ ತಂ ದಳವಡಿಸಿ ಪರಸಿ ಬೀಳ್ಕೊಟ್ಟಳು || ||೨೨||
ರಾಯ ಕೇಳ್ಕುಶನ ವಿಕ್ರಮವ ನಭಿವರ್ಣಿಸ ಲ |
ಪಾಯುವ ಕೃಷ್ಣೆಗಂ ತನಗೆ ತೀರದು ಬಳಿಕ |
ತಾಯಂಘ್ರಿಗೆರಗಿ ಬೀಳ್ಕೊಂಡು ತಾರಕನ ಪೆರ್ಬಡೆಗೆ ಗುಹನೈದುವಂತೆ ||
ವಾಯುವೇಗದೊಳುಪಗಿ ವೀರ ಭರತಾನುಜನ |
ಪಾಯದಳಮಂ ಪೊಗಪೇಡ ಪೊಡೆಸುತ್ತೆ ಸಲೆ |
ನಾಯಕರ ಮಳಿಗಳಂ ಕರೆಯುತ್ತೆ ತಿರುಗಿದುದು ಮತ್ತೆ ಶತ್ರುಘ್ನಸೇನೆ || ||೨೩||
ಸಪ್ಪಳಗಿದುವು ಭಟರ ಮಂಡೆಗಳ ಮೇಲುದಿದು |
ಬಿದ್ದುವು ಚಲ ಧ್ವಜ ಪತಾಕೆ ಗಳ್ಕೂಡೆ ದೂ |
ಳಿದ್ದು ಬಿರುಗಾಳಿ ಬೀಸಿದುದು ಕಂಬನಿ ಗರೆದು ವಂದಾನೆ ಕುದುರೆಗಳ್ಗೆ ||
ಪೊದ್ದಿದುತ್ಪಾತ ಭಯ ಕಾಬಲಂ ಗಜಬಜಿಸು |
ತಿದ್ದುದೀಜೆಯೊಳೀ ಕುಶಂ ಪೋಗದಿರಿ ನಿಲ್ಲಿ |
ಕದ್ದು ಮುಪೊಡೆ ತುರಗ ಸಹಿತ ಲವನಂ ಬಿಟ್ಟು ನಡೆಯಿ ನೀವೆನುತೆಚ್ಚನು || ||೨೪||
ಆಬಾಲಕನ ಬಾಣಘಾತದಿಂ ದಳವಳಿದು |
ದೀ ಬಲದ ಮುಂದಿ ಮತ್ತೀಗ ಶಿವನೊರ್ವ ನಿಡೆ |
ಕೋ ಬಂದನೆಂ ದಿಸುವ ದೆಸೆಗಳ್ಗೆ ದೆಸೆಗೆಟ್ಟು ಸೇನೆ ಗಜಬಜಿಸೆ ಕಂಡು ||
ಶಾಖ ಮೃಗ ಮುಂಜಿಪುದು ಗಡ ಪುಲಿಯನೆನುತಾ ಮ |
ಹಾಬಾಹು ಶತ್ರುಘ್ನನಾಗ ನಿಜ ದಳಪತಿಯ |
ನೀ ಬೇಗ ಕಳುಹಿದೊಡವಂ ಸಕಲ ಸೇನೆ ಸಹಿತೈದಿದಂ ಕುಶನಮೇಲೆ || ||೨೫||

ಬಳಿಕ ಶತ್ರುಘ್ನನ ನಿರೂಪದಿಂ ತಿರುಗಿಪಾ |
ದಳಪತಿ ಸಮಸ್ತ ಬಲ ಸಹಿತಾ ಕುಮಾರನಂ |
ಬಳಸಿದಂ ತಮತಮಗೆ ವಿವಿಧಾಯುಧಂಗಳಂ ಜಾಳಿಸುತೆ ವಹಿಲದಿಂದೆ ||
ಅಳವಿಯೊಳ್ತೀವಿದುವು ಕುದುರೆ ತೇರಾನೆ ಯಾ |
ಳ್ಕ್ಕಿ ಳುಗುಳದೊಳನಿತುಮಂ ಸವರಿ ಸೇನಾನಿಯಂ |
ಕಳುಹಿದಂ ಜವಪೊಳಲ್ಗವನ ಸಾರಥಿ ರಥಾಶ್ವಂ ಬೆರಸಿ ಸೀರಕುಶನು || ||೨೬||
ಆ ದಳಪತಿಯ ತಮ್ಮನೊರ್ವ ಸಗನೆಂಬವಂ |
ಕಾದಿ ಮಡಿದಣ್ಣನಂ ಕಾಣುತ್ತೆ ಖತಿಯಿಂ ಮ |
ಹಾದಂತಿಯಂ ಕುಶನ ಮೇಲೆ ಯಂಕುಶದಿಂದಿರಿದು ನೂಕಿದಂ ಕುಶಲದ ||
ಜೋದಗಾಳಗದಿಂದೆ ಬಳಿಕೆರಡು ಸೀಳಾಗಿ |
ಮೇದಿನಿಗೆ ಬಿಳ್ವಂ ತಿಭವ ನೆಚ್ಚವನ ಧನು |
ಶ್ಛೇದವಮಂ ಮಾಡಲಾತಂ ಪಲಗೆ ಕಡುಗಮಂ ಕೊಂಡಿವಂಗಿದಿರಾದನು || ||೨೭||
ಕಿತ್ತಡಾಯುಧದೊಳ್ಪೊಡುವನ ಘನಹಸ್ತಮಂ |
ಕತ್ತರಿಸಲಿಡಗೈಯೊಳೊಂದು ಗದೆಯಂ ಕೊಂಡು |
ಮತ್ತೆ ಮೇಲ್ವಾಯ್ದ ಡಾಕರಮುಮಂ ಕಡಿಯೆ ಬಾಹುಗಳಿಂದೆ ಪೊಯ್ವನೆಂದು ||
ಒತ್ತಿ ರಥೈತರ ಲೆರಡುತೋಳ್ಗಳಂ ಕೂರ್ಗಣೆ ಯೊ |
ಳುತ್ತರಿಸೆ ಕಾಲ್ಗಳಿಂದೊದೆದು ಕೆಡಪುವ ಭಟನೊ |
ಳೆತ್ತಲಾ ತೊಡೆಗಳನವಂ ಬೇಗದಿಂದೆಯ್ದು ಕುಶನೆಚ್ಚು ತುಂಡಿಸಿದನು || ||೨೮||
ಬಾಹುಯುಗ ಮೂರುಪ್ಪಯುಂ ಪೋದಕಾಯದಿಂ |
ಸಾಹಸಂ ಗೈವನಂ ಮೇಲ್ವಾಯ್ದು ಚಂಪ್ರಂಗೆ |
ರಾಹುವಂ ಗೈಸುವಂತುರವಣಿಸೆ ಕುಶನಳುಕ ದೆಚ್ಚವನ ತಲೆಯನರಿಯೆ ||
ಮಾಹೇಶ್ವರಾಧರಣ ದೊಳ್ಮರೆದು ವಾಲಿರಂ |
ಕಾಹುರದ ಕುವರನವಟಂ ಕಂಡು ಖಾತಿಯಿಂ |
ದಾಹವಕೆ ಬಿಲ್ವಿಡುಕಿ ತರಳನಂ ಕೆಣಕಿದಂ ಬಂದು ಕಲಿ ಶತ್ರುಘ್ನನು || ||೨೯||
ಕಡುಮುಳಿದು ಶತ್ರುಘ್ನನೊಂಬತ್ತು ಬಾಣದಿಂ |
ಬಿಡದೆಚ್ಚೊಡಾಕುಶಂ ಕೋಪದಿಂದವನ ತೇ |
ರ್ಪುಡಿಯಾಗೆ ಸಾರಥಿ ರಥಾಶ್ವಂಗ ಳಡಿಗೆಡೆಯೆ ಬಿಲ್ಲುಡಿಯೆ ಪೇರುರದೊಳು ||
ನಿಡು ಸರಲ್ಮೀಲಿಸ ಲ್ಕರೆದ ನಂಬುಗಳ ನೊಡ |
ನೊಡನೆ ಕೂರ್ಗಣೆಗಳಾರಂ ಮತ್ತೆ ವಕ್ಷದೊ |
ಳ್ತುಡಿಸಿದಂ ಕುಶನಪರ ಘಾತಿಗೆ ಮರೂಛೆಯಿಂ ಭರತಾನುಜಂ ಬಿದ್ದನು || ||೩೦||
ಗಿರಿತಟ ದೊಳೊಂದೊಂದರೊ ಳ್ಪೆಣಗಿ ಸೋಲ್ತ ಮದ |
ಕರಿ ಧರೆಗುರುಳ್ವಂತೆ ಪೊರಾಯ ಗಾಯದಿಂ |
ಬಿರದೆ ಶತ್ರುಘ್ನಂ ಮಹೀತಳಕೆ ರಥದಿಂದೆ ಬೀಳ್ವಸಿತ ದೊಳ್ಪಡೆಯೊಳು ||
ಮೊರೆಮೊರೆಗಳೆಲ್ಲರುಂ ಕೈಕೊಂಡು ಕಾವಿ ನಂ |
ಗರದೊಳ್ ಕ್ಷತ್ರತರಾದ ರಾಕುಶನ ಬಾಣದಿಂ
ಸಿರಿದು ಕನ್ಯಾಪಿತೃಯಂಗೈದು ಜೀವಿಸುವ ಮಾನವನ ಪಿತೃಗಳಂತೆ || ||೩೧||

ಪ್ರಾಣಮಿಲ್ಲದೆ ಚೇತರಿಸಿಕೊಳ ಲ್ತನುವಿನೊ |
ಳ್ಪ್ರಾಣಮಿಲ್ಲದೆ ನೊಂದು ಗಾಯದಿಂ ಮರವೆಯಂ |
ಕೇಣಿಗೊಂಡೊರಗಿ ಶತ್ರುಘ್ನ ನಳಿದುಳಿದ ಬಲದೊಡನೆ ರಾಹುಗ್ರಸ್ತದ ||
ಏಣಧರನಂತಿರ ಲ್ಪಡೆಸಹಿತ ಲಕ್ಷ್ಮಣಂ |
ಕ್ಷೋಣಿಪತಿ ಕೇಳ್ಬಂದು ಕಂಡು ಸ್ತೈತಿಟ್ಟನ್ನ |
ಕಾಣ ಬಹುದೆನುತೆ ಕೈವೀಸಿದಂ ಕಾಲಪೆ ಸ್ಮುಖ್ಯ ಸೇನಾನಿಗಳ್ಗೆ || ||೩೮||
ಕಂಡರೀಚೆಯೊ ಳರಿಬಲ ವ್ಯೂಹಮಂ ಬರಲಿ |
ಖಂಡಿಸುವೆನೆಂದೊರ್ವ ರೊರ್ವರೊ ಳ್ಮಾತಾಡಿ |
ಕೊಂಡ ರವರೊ ಳ್ತನ್ನ ಬಿಲ್ಮುರಿದು ದಾಹವ ದೊಳಿಂದು ಲವನಗ್ರಜಂಗೆ ||
ಚಂಡ ಮುನಿಪತಿ ಮಾಡಿ ದುಪದೇಶದಿಂದೆ ಕೋ |
ದಂಡಮಂ ಪಡೆವೆ ನೀಕ್ಷಣದೊಳೆಂದೊರೆದು ರವಿ |
ಮಂಡಲವ ನೀಕ್ಷಿಸುತೆ ತರಣಿಯಂ ಪ್ರಾರ್ಥಿಸಿದ ನನುಪಮ ಸ್ತುತಿಗಳಿಂದೆ || ||೩೯||
ಮಿತ್ರಾಯ ಸೂರ್ಯಾಯ ಹಂಸಾಯ ಪೂಷ್ಣೇ ನ |
ವಿತ್ರೇ ಜಗಚ್ಚಕ್ಷುಷೇ ಚಂಡಘೃಣಯೇ ಪ |
ವಿತ್ರಾಯ ಪಿಂಗಾಯ ಪುರುಷಾಯ ಭಾನವೇ ಜ್ಯೋತಿಷೇ ಭಾಸ್ಕರಾಯ ||
ಸತ್ರೈಕರೂಪಾಯ ವಿಮಲಾಯ ಸಾಕ್ಷಿಣೇ |
ಕ್ಷೇತ್ರಿಣೇ ಸಹಸ್ರಕಿರಣಾಯ ರವಯೇ ಮಂದ |
ಪಿತ್ರೇ ದಿವಾಕರಾಯ ಬ್ರಹ್ಮ ವಿಷ್ಣು ರುದ್ರಾತ್ಮನೇ ತುಭ್ಯಂ ನಮಃ || ||೪೦||
ಜಗಕೆ ನೀ ನೊಂದು ಕಣ್ಣಾಗಿರ್ಪೆ ನೇ ಣೆರಡು |
ಬಗೆಯ ಪಥದೊಳ್ನಡೆವೆ ತಿಳಿಯಲ್ಕೆ ಮೂರು ಮೂ |
ರ್ತಿಗಳನೊಳ ಕೊಂಡಿರ್ಪೆ ನಲೆ ನಂದ ನಾಲ್ಕು ವೇದಂಗಳೊಡಲಾಗಿ ತೋರ್ಪೆ ||
ಅಗಲ ದೈದಂಗ ದೊಳ್ಕಾಣಿಸುವೆ ಪರಿಪರಿ ಯೊ |
ಳೊಗೆ ದಾರು ಋತುಗಳೊ ಳ್ವರ್ತಿಸುವೆ ಸಂತತಂ |
ಗಗನ ಕೇಳಶ್ವಮಂ ಕೊಂಡೇಳ್ವೆ ದೇವ ಬಿಲ್ಗೊಟ್ಟುಳುಹಬೇಕೆಂದನು || ||೪೧||
ಪತ್ತು ದೆಸೆಯಂ ಬೆಳಗಿಸುವೆ ಪನ್ನೆರಡು ರಾಶಿ |
ಗೊತ್ತಾಸೆಯಾಗಿರ್ಪೆ ಶತಪತ್ರ ಮಿತ್ರನಹೆ |
ಮತ್ತೆ ಸಾಸಿರ ಕಿರಣದಿಂದೆಸೆವೆ ಲಕ್ಷಯೋಜನ ದಳತೆಯೊ ಳ್ಪೊಳಗುವೆ ||
ಬಿತ್ತರ ದನಂತ ದೊಳ್ಸಂಚರಿಪೆ ದೇವ ನಿ |
ನ್ನುತ್ತಮ ಗುಣಾವಳಿಯ ನೆಣಿಸ ಲೆನ್ನಳವೆ ಬಿ |
ಲ್ಲಿತ್ತುಳುಹಬೇಕೆಂದು ದಿನಮಣಿಯ ನಾ ಲವಂ ನುತಿಸಿದಂ ಭಕ್ತಿಯಿಂದೆ || ||೪೨||
ಅವನೀಶ ಕೇಳ್ಬಳಿಕ ಲವನ ವಿಮಲಸ್ತುತಿಗೆ |
ರವಿ ಮೆಚ್ಚಿ ಕೊಟ್ಟನಾತನ ಕೈಗೆ ದಿವ್ಯ ಚಾ |
ಪವನದಂ ಕೊಂಡ ಗ್ರಜಂಗೆ ತೋರಿಸಿ ಮುನಿಪ ವಾಲ್ಮೀಕಿ ಬಾಳುಗೆನುತೆ ||
ಪವಣ ನಾರ್ಪದು ಬಿಲ್ದಿರುವ ನೊದರಿಸಿದ ನು |
ತ್ಸವದಿಂದೆ ಕುಶ ನುಗ್ರ ಕೋದಂಡಮಂ ಪಿಡಿದ |
ನವ ರಿರ್ವರುಂ ಮತ್ತೆ ಪವನ ಪಾವಕರಂತೆ ಪೊಕ್ಕ ರರಿಬಲವ ನುರುಬಿ || ||೪೩||

ನೂರಾಳಿಗೊಂದು ಹಯಮಿರುತಿರ್ಪು ದಾಹಯಂ |
ನೂರ ಕಿರುತಿಹುದು ನೇ ಱೊಂದುರಥ ಮಾರಥಂ |
ನೂರ ಕಿಭಮೊಂದಿರ್ಪುದಿಂ ತಿಭ ಸಹಸ್ರಮಿರೆ ಭ್ರಮಿ ಯೆಂದೆನಿಸಿ ಕೊಳ್ವುದು ||
ಮೂಱು ಯೋಜನದಗಲದೊ ಳ್ಭ್ರಮಿ ಗಳೀರೈದು |
ನೂರಿಟ್ಟಣಿಸಿ ನಡೆದು ಬಂದು ದಾ ಸೇನೆಯಂ |
ತಾರು ತಟ್ಟಾಗಿ ಕೆಡಹಿದ ರೊಂದು ನಿಮಿಷದೊ ಳ್ಕುಶ ಲವ ರದೇ ನೇಳ್ವೆನು ||೪೪||

ಹೊಣೆವೊಕ್ಕಿಸುತೆ ಬಾಲಕರೈದೆ ಲಕ್ಷ್ಮಣಂ |
ಕಾಣು ತಿದಿರಾದಂ ಕುಶಂ ಗಖಿಳ ವಾಹಿನೀ |
ಶ್ರೇಣಿ ಸಹಿ ತುರುಬಿದಂ ಕಾಲಜಿತು ವಾ ಲವನ ಮೇಲೆ ವಡಬಾಗ್ನಿ ಯೆಡೆಗೆ ||
ಮಾಣದೆರಗುವ ಕಡಲ ಜಲದಂತೆ ಕವಿದುದು ಕೃ |
ಪಾಣ ತೋಮರ ಪರಶು ಕುಂತ ಮುದ್ಗರ ಚಕ್ರ |
ಬಾಣ ಶಕ್ತಿಗಳ ಘೋರ ಪ್ರಹಾರಂಗಳಿಂ ದಾ ಸಕಲ ಸೇನೆ ಮುಳಿದು || ||೪೫||

ಏಸು ಭಟ ರಂಬುಗಳ ನಿಸುವ ರೈ ಸಂಬುಗಳ |
ನಾ ಸುಭಟ ರಂಗದೊ ಳ್ಕಾಣಿಸಿದ ನಾ ಬಲದೊ |
ಳೇಸು ಕೈದುಗಳೊಳೊದಗಿವ ರೈಸು ಕೈದುಗಳ ನೆಲ್ಲಮಂ ತಡೆಗಡಿದನು ||
ಏಸಾನೆ ಕುದುರೆಗ ಳ್ಕವಿದು ವೈಸಂ ಸೀಳ್ದ |
ನೇಸು ತೇ ರುರವಣಿಸಿ ತೈಸು ರಥಮಂ ಮುಱಿದ |
ನೇಸುಮಂದಿ ಗಳುರುಬಿ ತೈಸುಮಂ ಕೊಂದ ನಿನ್ನೇಸು ಸಾಹಸಿಯೊ ಲವನು ||೪೬||

ಜಾನಕಿಯ ಸುತನ ಬಾಣಾವಳಿಯು ಹಾವಳಿಯು |
ನೇನೆಂಬೆ ನಹಿತರಂ ಕವರಿದುವು ಸವರಿದುವು |
ಬಾ ನೆಡೆಯೊಳಿಟ್ಟಣಿಸಿ ಹಾರಿದುವು ತೂರಿದುವು ಕೊಂದು ವರಿದುವು ಸರಿದುವು ||
ಆನೆ ಕುದುರೆಗಳ ನುರೆ ಸೀಳಿದುವು ತೂಳಿದುವು |
ನಾನಾ ಪ್ರಕಾರದಿಂ ಕೆಡಹಿದುವು ಕೊಡಹಿದುವು |
ಸೇನೆಗ ಳೊಡಲ್ಗಳಂ ಪಚ್ಚಿದುವು ಕೊಚ್ಚಿದುವು ತಲೆಗಳಂ ತತ್ಕ್ಷಣದೊಳು ||೪೭||

ಭೂರಿ ಬಾಣ ದೊಳಹಿತ ಸೇನೆಯೊ ಳ್ಮುಳಿದು ಚ |
ತ್ವಾರಿಂಶ ದನುಪಮ ಭ್ರಮಿಗಳಂ ತಡೆಗಡಿದು |
ವೀರ ಲವನಲ್ಲಿ ಕುಶನಂ ಕಾಣ ದೆಡಬಲ ದೊಳರಸೆ ರುಧಿರಾಕ್ಷನೆಂಬ ||
ಶೂರಾಸುರಂ ಲವಣ ದಾನವನ ಮಾತುಲಂ |
ಶ್ರೀರಾಮ ಚರಣ ಶರಣಾಗತಂ ಸೀತಾ ಕು |
ಮಾರಕನ ಕರದ ಕೋದಂಡಮಂ ತುಡುಕಿದಂ ಮೆಲ್ವಾಯ್ದು ರೋಷದಿಂದೆ || ||೪೮||

ಕರದ ಬಿಲ್ಲಂ ಕಿತ್ತುಕೊಂ ಡೋಡು ವಸುರನಂ |
ಭರದಿಂದೆ ಬೆಂಬತ್ತಿ ಪೋಗದಿ ಪೋಗದಿ |
ರ್ತಿರುಗೆನುತೆ ವಾಲ್ಮೀಕಿ ಮುನಿಪ ನಿತ್ತಗ್ನಿ ಮಂತ್ರಧ್ಯಾನಮಂ ಮಾಡಲು ||
ದೊರೆಕೊಂಡುದೊಂದು ಚಕ್ರಂ ಬಳಿಕ ಲವ ನದಂ |
ಧರಿಸಿ ಚಕ್ರಾಯುಧಂ ತಾನೆನ ಲ್ಕಂಗೊಳಿಸು |
ತುರವಣಿಸಿ ರುಧಿರಾಕ್ಷನಂ ಗಗನದೊಳ್ಪಿಡಿಯೆ ಕಂಡವನ ಪಡೆ ಕವಿದುದು || ||೪೯||

ಮತ್ತುರುಬಿ ದಸಿತು ಬಲಮುಂ ಕರವ ಚಕ್ರದಿಂ |
ತತ್ತರದರಿದು ರಾಕ್ಷಸೇಂದ್ರನಂ ಬಿಡದೆ ಲವ |
ನೊತ್ತಾಯಮುಂ ಮಾಡುತಿರೆ ಕಂಡು ದಶರಥ ನೃಪತಿಯ ಮಂತ್ರಿಯ ತನುಜರು ||
ಹತ್ತುಮಂದಿ ಪ್ರಸಿದ್ಧ ಪ್ರಧಾನಿಗಳಾಗ |
ಹತ್ತು ಹತ್ತಂಬುಗಳ ನೋಂದೂರ್ವರೆಚ್ಚು ಕಡಿ |
ಹತ್ತು ಹತ್ತಾಗೆ ಬಾಲಕನ ಪಾರುಂಬಳೆಯ ನಾಕ್ಷಣಂ ಖಂಡಿಸಿದರು || ||೫೦||
ಕರದ ಚಕ್ರಂ ಪೋಗೆ ಪರಿಘಮುಂ ಕೊಂಡು ಲವ |
ನುರವಣಿಸಿ ಹೊಯ್ದನಿಬರಂ ಕೆಡಪೆ ಮತ್ತೆ ಬಂ |
ದುರು ಗದಾ ದಂಡಮುಂ ಕೊಂಡು ರುಧಿರಾಕ್ಷನೀತನ ಪಣೆಯ ನಪ್ಪಳಿಸಲು ||
ಇರದೆ ಮೂರ್ಛಿತನಾಗಿ ಬಾಲಕಂ ಕೂಡೆ ಚೇ |
ತರಿಸಿ ಕೊಂಡೆದ್ದು ಕುಂತ ದೊಳಾ ಮಹಾಸುರನ |
ಶಿರವ ನರಿ ದಾದಿತ್ಯಸಿತ್ತ ನಿಜ ಚಾಪಮುಂ ತೆಗೆದುಕೊಂಡಂ ಘುರದೊಳು || ||೫೧||
ಬಿಡದೆ ರುಧಿರಾಕ್ಷರಾಕ್ಷಸನಂ ರಣಾಗ್ರದೊ |
ಳ್ಕಿಡಹಿ ನಿಜ ಚಾಪ ಚಾಪಲಹಸ್ತನಾಗಿ ಲವ |
ನಡಸಿ ದರಿಚತುರ ಚತುರಂಗಮುಂ ಸಂಹರಿಸ ತೊಡಗಿದಂ ಮತ್ತೆ ಮುಳಿದು ||
ತೊಡಪುಗಳ ಕಾಯ ಕಾಯುತಮಾದ ಜೋಡು ಗ |
ಳ್ಕಡಿಯೆ ಕುಱಪಕ್ಕೆ ಪಕ್ಕೆಗಳಾಗೆ ಪಟುಭಟ |
ರ್ಪೊಡೆಗೆಡೆದರಾಗ ರಾಗದೊ ಳಮರ ನಾರಿಯ ರ್ತಕ್ಕೈಸ ಲಂಬರದೊಳು || ||೫೨||
ಪಡೆ ಮಡಿಯುತಿರ್ದುದು ಲವಾಸ್ತ್ರದಿಂ ದಿತ್ತ ಕುಶ |
ನೊಡನೆ ಸೌಮಿತ್ರಿಗಾದುದು ಯುದ್ಧಮಾಗ ಕಿವಿ |
ಗಡೆಗೆ ತೆಗೆದೆಚ್ಚನೈದಂಬುಗಳ ನಿದಿರಾಗಿ ಭೂಮಿಜೆಯ ಸುತನ ಮೇಲೆ ||
ಕಡುಗಿ ಖಾತಿಯೊ ಳೀತ ನೊಂದು ಸರಳಂ ಪೂಡಿ |
ಬಿಡ ಲೂರ್ಮಿಳಾ ವಲ್ಲಭನ ತೇ ರೆರಡುಗಳಿಗೆ |
ಬಿಡದೆ ತಿರುಗಿತು ಬವಣಿಗೊಂಡು ರಥ ವಾಜಿಗ ಳ್ಪೊಡೆಗೆಡೆದು ವೇನೆಂಬೆನು ||೫೩||
ಮೆಚ್ಚಿದಂ ಬಾಲಕನ ವಿಕ್ರಮಕೆ ಲಕ್ಷ್ಮಣಂ |
ಪೆಚ್ಚಿ ದತಿರೋಷದಿಂ ಮತ್ತೊಂದು ರಥ ಕಡ
ರ್ದೆಚ್ಚ ನೆರಡಂಬಿನಿಂ ದೀತನ ಕಿರೀಟಮುಂ ಕವಚಮುಂ ಮೂರರಿಂದೆ ||
ಕೊಚ್ಚಿ ಕೆಡಹಿದನಾಗ ಜಾನಕಿಯ ಸೂನು ಪೆರೆ |
ಯುಚ್ಚ ದಹಿಪತಿಯಂತೆ ಶೌರ್ಯ ವಿಸ್ಮಿಡಿಸೆ ನಗು |
ತುಚ್ಚರಿಸಿದಂ ವಿನಯಪೂರ್ವಕ ದೊಳರಸ ಕೇಳಾ ರಾಘವಾನುಜಂಗೆ || ||೫೪||
ಘುರದೊ ಳ್ಕಿರೀಟ ಕವಚದ ಪೊರೆ ಯಿದೇಕೆಂದು |
ಪರಿಹರಿಸಿ ದುಪಕಾರ ಕಪಕಾರಮುಂ ಮಾಡೆ |
ನುರು ಸೈನ್ಯಭಾರಮುಂ ನಿನಗೆ ಬಿಡಿಸುವೆ ನೀಗ ನೋಡಾದೊಡೆನುತೆ ಕುಶನು ||
ವರ ವಹ್ನಿ ಸೂಕ್ತ ದೊಳಥರ್ವ ಮಂತ್ರದ ಪುರ |
ಶ್ಚರಣೆಯಿಂ ದನಲಾಸ್ತ್ರಮುಂ ಪೂಡಿ ತೆಗೆ ದಿಸ |
ಲ್ಕುರಿದುದು ಚತುರ್ಬಲ ದಕಾಲದೊ ಳ್ಪುರಹರಂ ಪಣೆಗಣ್ದೆರೆವ ನೆನಲ್ಕೆ || ||೫೫||

ಬಲಮೆಲ್ಲಮಂ ಸುಡುವ ಪಾವಕ ಜ್ವಾಲೆಯಂ |
ಕಲಿಲಕ್ಷ್ಮಣಂ ಕಂಡು ವರುಣಾಸ್ತ್ರದಿಂದ ದಂ |
ನಿಲಿಸಲ್ಕೆ ಬಾಲಕಂ ಮತ್ತೆ ನಸುನಗುತೆ ವಾಯವ್ಯ ಮಾರ್ಗಣವ ನಿಸಲು ||
ಕುಲಶೈಲಮಂ ಕಿತ್ತು ಬಿಸುಡುವಂದದ ಗಾಳಿ |
ಸಲೆ ಬಡಿದು ಪಡೆಗಳಂ ಕೆಡಹುತಿರೆ ನಡೆತಂದು |
ನೆಲವುಗೊಂ ಡೂರ್ಮಿಳಾಕಾಂತನಂ ಪೆರಗಿಕ್ಕಿ ಕಾಲಜಿತು ಎದಿರಾದನು || ||೫೬||
ಭುಜಬಲಕೆ ಪಾಡಲ್ಲ ತರಳನೆಂ ದುಳುಹಿದೊಡೆ |
ವಿಜಯನಾದಪೆ ಬೇಡ ಹೋಗೆಲವೊ ಕಾರುಣ್ಯ |
ರುಜುವಲ್ಲ ತಾನೆನುತೆ ಕಾಲಜಿತು ನೆಚ್ಚೊಡಾತನ ಬಾಣಮಂ ಖಡಿಸಿ ||
ಅಜಗಳ ಸ್ತನದಂತೆಸೆವ ನಿನ್ನ ಪೌರುಷಂ |
ನಿಜವಾದೊಡಾಂ ಸೈರಿಸುವೆ ನಲ್ಲದಿರ್ದೊಡಾ |
ರಜದಿಂದೆ ಪುಸಿವೇಳ್ದ ನಾಲಗೆಯ ನರಿವೆನೆಂದಾಕುಶಂ ಕೋಲ್ಗರೆದನು || ||೫೭||
ಇಸುಗೆ ಯೆಂತುಟೊ ಕುಶನ ಕಣೆ ರಣದೊಳಾರ್ದು ಗ |
ರ್ಜಿಸುವ ನಾಲಗೆಯ ನರಿದುದು ಬಳಿಕ ಮೌನದಿಂ |
ಮಸಗಿ ರೋಷದೊಳುಬ್ಬಿ ಕಾಲಜಿತು ನೆಚ್ಚೊಡಾ ಜಾನಕಿಯ ಸೂನು ನಗುತೆ ||
ನಿಶಿತಾಸ್ತ್ರದಿಂದೆ ಕೈ ಕಾ ಲ್ತಲೆಗಳಂ ಕೂಡೆ |
ಕುಸುರಿ ದರಿಯಲ್ಕಂಡು ಖತಿಯಿಂದೆ ಲಕ್ಷ್ಮಣಂ |
ಮುಸುಕಿದಂ ಕೋಲ್ಗಳಂ ಬಾಲಕನ ಮೇಲೆ ಮೂಲೋಕ ದಾಲೋಕನುತಗೆ ||೫೮||
ವೀರ ಲಕ್ಷ್ಮಣನಿಸುವ ಕೂ ರಂಬನೆಲ್ಲಮಂ |
ವಾರುವಂ ನಾಲ್ಕುಮಂ ತೇರಂ ಸುಕೇತುವಂ |
ನಾರಿಯಂ ಚಾಪ ತೂಣೀರಂಗಳಂ ಕೆಲದ ಚಾರರಂ ಸಾರಥಿಯನು ||
ಚಾರು ಕವಚವ ನೆಚ್ಚು ಧಾರಿಣಿಗೆ ಕೆಡಹಲ್ಕೆ |
ತೋರ ಗದೆಗೊಂಡೂರ್ಮಿಳಾ ರಮಣನೈತರ |
ಲ್ಭೀರನಹ ಸೀತಾ ಕುಮಾರಕಂ ಸಾಯಕದ ಸಾರದಿಂ ಪುಡಿಗೈದನು || ||೫೯||
ಚರ್ಮ ಖಡ್ಗಂಗಳಿಂ ವಿವಿಧಾಯುಧಂಗಳಿಂ |
ದೂರ್ಮಿಳಾಕಾಂತ ನೊದಗಿದೊ ಡನಿತನೆಲ್ಲಮಂ |
ನಿರ್ಮಲಾಸ್ತ್ರಂಗಳಿಂ ಕತ್ತರಿಸಿ ವಾಲ್ಮೀಕಿ ಮುನಿಪರಂ ತನಗೆ ಕೊಟ್ಟ ||
ಮರ್ಮಭೇದಿಗಳಾ ದುಸ್ಸೈ ಪಂಬುಗಳ ನಿಸ |
ಲ್ಸ್ವರ್ಮಣಿ ಧರಾತಳಕೆ ನಭದಿಂ ದುರುಳ್ವಂತೆ | ||೬೦||
ಪೆರ್ಮರವೆಗೊಂಡು ಬೀಳ್ವ ನಿತರೊಳ್ಮೋಳ್ವೆಯ್ದು ಕುಶ ನಾರ್ದು ಬೊಬ್ಬಿರಿದನು
ಆ ಘೋರತರದ ಸಂಗ್ರಾಮ ದೊಳ್ಮಾನೆ ಚ್ಛಾ |
ಮೋಘನಾಗಿರ್ದ ಮುನಿ ಕೊಟ್ಟ ದಿವ್ಯಾಸ್ತ್ರದ ಮ |
ಹಾ ಘಾತಿಯಿಂದೆ ಕಡುನೊಂದು ಮೂರ್ಛಿತನಾಗಿ ಬಿದ್ದು ಭೂತಳದ ಮೇಲೆ ||
ರಾಘವಾನುಜನಿರೆ ಕುಶಂ ಬಳಿಕ ನಿಜ ಹಸ್ತ |
ಲಾಘವ ದೊಳಲ್ಲಿರ್ದರಂ ಸದೆದು ಲವನಂ ಬ |
ಲೌಘ ದೊತ್ತಾಯದಿಂ ಮುತ್ತಿಕೊಂಡಿರ್ದ ಕೋಲಾಹಲವ ನಾಲಿಸಿದನು || ||೬೧||

ಶರ ಚಾಪ ಚರ್ಮ ಖಡ್ಗಂಗಳಂ ಕೊಂಡು ಕುಶ |
ಸರಿದೆ ಲವನಿದ್ದೆಡೆಗೆ ಚಿಗಿವ ಸಲ್ಲಿಂ ಖಗೇ |
ಶ್ವರನಂ ತೆರಗಿದ ನವನೀ ಪೇಳ್ವೆ ನಳಿ ದುಳಿದ ರಿಪುವಾಹಿನೀ ಭ್ರಮಿಗಳು ||
ಪರಿದುನೆಣ್ದೆಸೆಗಳ್ಗೆ ಸೀತಾ ಕುಮಾರಕ |
ರ್ತಿರುಗಿದ ರ್ತುರಗ ಮಿಹ ಬನಕಾಗಿ ದೇವಪುರ |
ವರಸ ಲಕ್ಷ್ಮೀಶ ರಾಘವನಲ್ಲಿಗೈದಿದ ರ್ದೂತ ರತಿವೇಗದಿಂದೆ || ||೬೨||

ಸಂಧಿ ೨೦ ಕ್ಕೆ ಪದ್ಯಗಳು ೧೦೫೦ ಕ್ಕೆ ಮಂಗಳಮಸ್ತು.

## ಇಪ್ಪತ್ತೊಂದನೆಯ ಸಂಧಿ.

ಸೂಚನೆ|| ತನಯರೊಳ್ಕಾದಿ ಮೂರ್ಛಿತನಾದ ರಾಮನಂ |
ಮುನಿವರಾಳಿ ವಾಲ್ಮೀಕಿ ಬಂದು ಸಂತೈಸಲ್ಕೆ |
ವಿನುತಾಶ್ವಮೇಧಮಂ ಪೂರೈಸಿ ಸೀತೆ ಸಹಿ ತವನಿಯಂ ಪಾಲಿಸಿದನು ||

ಅರಸ ಕೇಳ್ಜಾಹ್ನವಿಯ ತೀರ ದೊಳ್ದೀಕ್ಷೆಗೊಂ |
ಡಿರುತಿರ್ದ ರಾಘವಂ ಚಿತ್ತ ದನುತಾಪದಿಂ |
ಭರತನಂ ಕರೆದು ಶತ್ರುಘ್ನನೇಗೈದನೆಂಬುದ ನುಸಿರ ರಾರುಮೆನಗೆ ||
ತರಳರಂ ಪಿಡಿದಪನೊ ಕೊಂದಪನೊ ಲಕ್ಷ್ಮಣಂ |
ಘುರದೊಳ್ಕಳ್ದಪನೊ ಗೆಲ್ದಪನೊ ಸೋಲ್ದಪನೊ |
ತುರಗಮಂ ಬಿಡಿಸಿ ತಂದಪನೊ ತಾ ನರಿಯೆನೆಂ ದಸುರಾರಿ ಚಿಂತಿಸಿದನು || ||೧||

ಕನಸಿನೊ ಳ್ಸೋಲ್ದಿಲ್ಲಾರ್ಗೆಯುಂ ಲಕ್ಷ್ಮಣಂ |
ವನಚಾರಿ ಬಾಲಕರ ಪಾಡಾವುದೀಗ ಮುಳಿ |
ದನುವರ ದೊಳಿರ್ದರಂ ಘಾತಿಸದೆ ಸಮ್ಮೋಹನಾಸ್ತ್ರದೊ ಳ್ಮರವೆ ಗೊಳಿಸಿ ||
ತನಗೆ ತಂದೊಪ್ಪಿಸುವ ತೆರದೊ ಳತಿಬಲ ಚರರ |
ನನುಜ ನೆಡೆಗಟ್ಟೆಂದು ರಾಘವಂ ಭರತನೊಡ |
ನೆಸಲವಂ ದೂತರಂ ಕಳುಹ ಲವ ರರಿದು ಬಂದವನಿಪತಿ ಗಿಂತೆಂದರು || ||೨||

ದೇವ ಬಿಡು ದೀಕ್ಷೆಯುಂ ಕಾದು ನಡೆ ಕುಶನೊಳ್ಮ |
ಹಾ ವೀರ ನಾತನಾ ಲವನಿಂದೆ ಬಲ್ಲದಂ |
ಜೀವ ಸಂದೇಹಮಾಗಿರ್ಪರ್ದ್ದೈ ಶತ್ರುಘ್ನ ಲಕ್ಷ್ಮಣರ್ ಸಹಿತ ಸೇನೆ ||
ಭಾವಿಸೆ ತವಾಕೃತಿಯು ಬಾಲಕರ ದೆಸೆಯಿಂದೆ |
ಗೋವರ್ಧನಂಗೆ ಮೊಲೆಗೊಟ್ಟ ಪೂತನಿ ಪ್ರೋಲಾ |
ಯ್ತೀವೇಳ್ವೆಂದು ದೂತರ್ನುಡಿಯೆ ರಾಘವಂ ಕೇಳ್ದು ಮೂರ್ಛಿತನಾದನು || ||೩||

ಬಳಿಕ ಶೈತ್ಯೋಪಚಾರಂಗಳಿಂ ಭರತ ನಿನ |
ಕುಲ ಸಾರ್ವಭೌಮನಂ ಸಂತೈಸುತಿರೆ ಮೂರ್ಛೆ |
ತಿಳಿದು ಲಕ್ಷ್ಮಣ ನಾವೆಡೆಯೊಳಿನ್ನು ಸೊಲ್ಲಿಸುವ ನಾವೆಡೆಯೊಳು |
ಕಳುಪಿಸೊ ಕ್ಕಸಗಾಗಿ ನವೆ ದನುಜ ನಾವೆಡೆಯೊ |
ಳಿಪನೋ ಸೌಮಿತ್ರಿ ಹಾ ತಮ್ಮ ಹಾ ಯೆನುತೆ |
ಹಲವರಿಸಿ ಬಿಸುಸುಯ್ದು ಳಲ್ದು ಮರುಗಿದನಂದು ರಾಘವಂ ಶೋಕದಿಂದೆ || ||೪||

ಜಾನಕಿಯನಂದು ಪೊರಮಡಿಸಿ ದನ್ಯಾಯದಿಂ ।
ಭಾನುಕುಲ ಸಂಭವಂಗಾಮುನಿಂ ತೀ ತೆರವ ।
ಹಾನಿಗ ಸೌಮಿತ್ರಿ ಶತ್ರುಘ್ನರಂ ಜಯಿಸು ವಗ್ಗಳಿಯರಾ ರ್ಜಗದೊಳು ।
ಕಾನನದ ಮುನಿಸುತ ರ್ಗವಟಿತ್ತಣದು ರಾಮ ।
ಸೂನುಗ ಳ್ತಪ್ಪದಾ ಕೃತಿಗಳಂ ನೋಡ ಲಸು ।
ಮಾನಮೇಕೆಂದು ನೊರೆಯಿಟ್ಟುದೆಲ್ಲಾ ಜನಂ ರಾಘವಂ ಕೇಳುವಂತೆ ॥ ॥೫॥
ಸೀತಾವದನ ಚಿಹ್ನಮೆ ನ್ನಂಗದಾಕಾರ ।
ಮಾ ತಾಪಸಾರ್ಭಕ ರೊಳಿರ್ದಪ್ಪುದು ಗಡ ಪಡೆದ ।
ಮಾತೆ ಯಿಲ್ಲಿರ್ದಪಳೊ ಕುದುರೆಯಂ ಕಟ್ಟು ವದಟಿತ್ತಣ ದಿವರ್ಗೆಂಬುದ ॥
ದೂತರಂ ಕರೆ ಕೇಳ್ವೆ ವಿನ್ನೊಮ್ಮೆ ಶಿಶುಗಳಂ ।
ಘಾತಿಸದೆ ದಯೆಗೈದು ತಾನೇರ್ವಡೆದನೊ ಮೇ ।
ಣಾ ತರಳ ರತಿಬಲರೊ ಸೌಮಿತ್ರಿ ಬಿದ್ದನೇಕೆಂದು ರಘುಪತಿ ಸುಯ್ದನು ॥ ॥೬॥
ಇಂತಿಂ ತಳಲ್ದಾಗ ಬಿಸುಸುಯ್ದೊ ಡನೆ ರಾಘ ।
ವಂ ತನ್ನ ಸಹಜರ ಗುಣಂಗಳಂ ನೆನೆ ನೆನೆದು ।
ಚಿಂತಿಸುತ್ತಿರೆ ಪುತ್ತ್ರ ಕುಶನ ಶರಘಾತಿಯಿಂದುರೆ ನೊಂದು ಭೀತಿಗೊಂಡು ॥
ಸಂತಪ್ತರಾಗಿ ಪರಿತಂದು ಲಕ್ಷ್ಮಣ ನೊಡಲೆ ।
ಳಂತಲಿಸ ಲರಿಯದಸು ಪಡಿದುದು ಸಕಲ ಸೈನ್ಯ ।
ಮೆಂತಿಹನೊ ಶತ್ರುಘ್ನನೇಕೆ ದೀಕ್ಷೆಯಿದೆಂದು ಚರರ್ಕೈದೆ ಮೊರೆಯಿಟ್ಟರು ॥ ॥೭॥
ಮೊರೆವೇಳ್ವ ದೂತರಂ ಗರ್ಜಿಸುತೆ ರಾಘವಂ ।
ಗೆರಗಿ ಕೈಮುಗಿದು ಭಯವಿಹ್ವಲ ಚಾರ್ಗರ ರಿದ ।
ರರಿದಪರೆ ಸೌಮಿತ್ರಿ ಶತ್ರುಘ್ನ ರಾಹವಶ್ರಮದಿಂದೆ ತನು ಮನವನು ।
ಮರೆದಿರಲ್ಲದೆ ಮರಣ ಮುತ್ತಣದು ಸಾಕಿನ್ನು ।
ಬರಿದೆ ಚಿಂತಿಸಬೇಡ ನಾಂ ಪೋಗಿ ಬಾಲಕರ ।
ಮುರುಕಮಂ ಬಿಡಿಸಿ ತಪೆ ನಶ್ವಮಂ ಕಳುಪೆನ್ನನೆಂದು ಭರತಂ ನುಡಿದನು ॥ ॥೮॥
ಬಳಿಕ ಜಾಂಬವ ಸುಷೇಣಾಂಗದ ಹನೂಮಂತ ।
ನಳ ನೀಲ ಕುಮುದ ಶತಬಲಿ ಗವಯರೆಂಬ ಕಪಿ ।
ಗಳ ಪಡೆಯ ನೆಲ್ಲಮಂ ಬಲಿದೊಳಿದಯೆಳ ಚತುರಂಗಮಂ ಕೂಡಿಕೊಟ್ಟು ॥
ಕಳುಪ ಲಿನಕುಲ ಸಾರ್ವಭೌಮನಂ ಬೀಳ್ಕೊಂಡು ।
ತಳಿದು ಸುರನದಿಯ ತೀರದೊಳಾಂಜನೇಯನಂ ।
ಕೊಳುಗುಳದ ವೃತ್ತಾಂತಮಂ ಕಂಡು ಬಂದೊರೆವುದೆಂದು ಭರತಂ ಪೇಳ್ದನು ॥೯॥
ಥಿಂಕಿಟ್ಟನಲ್ಲಿಂದೆ ಕಲಿ ಹನುಮ ನಾ ರಣದೊ ।
ಳಂಕಿತದ ಕುಶನ ಬಾಣಂಗಳಿಂ ಮಡಿದ ಬಲ ।
ಸಂಕುಲದ ನಿಕ್ಷ್ವಾಕುನಂದನಂ ನಿನ್ನ ಸುತೆ ಸೀತೆಯಂ ಬಿಟ್ಟನೆಂದು ॥
ಕೊಂಕದಿರು ಸೈರಿಸುವುದೆಂದೈದೆ ಭೂದೇವಿ ।
ಯಂ ಕೋಪಮಂ ಮಾಣಿಸ ಲ್ಬೇಡಿಕೊಳ್ವ ತೆರ ।
ದಿಂ ಕೆಡೆದು ನೈಮರೆದು ಮಲಗಿರ್ದ ಸೌಮಿತ್ರಿ ಶತ್ರುಘ್ನರಂ ಕಂಡನು ॥ ॥೧೦॥

ಕಂಡು ಕಪಿವೀರ ನವರಿರ್ವರಂ ತೆಗೆದೆತ್ತಿ |
ಕೊಂಡು ಭರತನ ಪೊರೆಗೆ ತರಲವಂ ಬಳಿಕ ಮಣಿ |
ಮಂಡಿತ ವರೂಥ ದೊಳವರ್ಗಳಂ ಪಟ್ಟಿರಿಸಿ ಹಯಮಂ ಕದಳಿಗೆ ಕಟ್ಟಿ ||
ಚಂಡ ಶರ ಚಾಪ ಪಾಣಿಗಳಾಗಿ ತೊಳಗು ವ |
ದ್ದಂಡ ಕುಶಲವ ರಿರ್ವರಿರ್ಪುದಂ ಕೇಳ್ದು ಕೋ |
ದಂಡಮಂ ಜೇಗೈದು ಪಡೆವೆರೆಸಿ ನೂಕಿದಂ ಮುಳಿದು ಬಾಲಕರ ಮೇಲೆ || ||೧೧||
ಅಣ್ಣ ತಮ್ಮಂದಿರಿರ್ವರು ಮರಿ ಚತುರ್ಬಲಂ |
ಪಣ್ಣಿ ಬರೆ ಕಂಡು ಬಿಲ್ಗೊಂಡೆದ್ದು ಕೋಪದಿಂ |
ದಣ್ಣಿಕಲ್ಲಾಡಿದ ಪಟುಭಟರ ತಲೆಗಳಂ ಬಾಣಪ್ರಯೋಗದಿಂದೆ ||
ಬಣ್ಣಿಸ ಲ್ಪವಣೆ ಯೋಜನ ದಗಲಮೆಲ್ಲಿಯುಂ |
ಕಣ್ಣೆವೆಯೊ ಲುಗು ವನಿತ ರೊಳ್ಸರ ಲ್ಮಯವಾಗೆ |
ಚಿಣ್ಣರಂಗಪ ಮೇಲೆ ಮೆಚ್ಚಿ ಪೂಮಳೆಗಳಂ ಕರೆದ ರಮರ ರ್ಪೊಗಳುತೆ || ||೧೨||
ಚಾಪ ಟಂಕಾರಂ ಜಗತ್ತ್ರಯದೊ ಳೆಲ್ಲಿಯುಂ |
ವ್ಯಾಪಿಸ ಲ್ಕಿವುಡಾದು ವಷ್ಟದಿಗ್ದಂತಿ ಗ |
ಳ್ಭೊ ಪಯೋಧಿ ಗಳೊಡವೆರೆಸಿದುವು ಕುಲಾದ್ರಿಗ ಳ್ಜರಿದುವಹಿ ಕಂಪಿಸಿದನು ||
ತಾಪದಿಂ ಪೊಡೆಮರಳ್ದಂ ಕೂರ್ಮ ನೀ ರವಿಯು |
ರೂಪಡಗಿ ತಿಸುವ ಬಾಣಾಂಧಕಾರದೊ ಳಂದು |
ದೀಪವಿಲ್ಲದ ಮನೆವೊಲಾದುದು ರಣಾಂಕಣಂ ಕಾದುವ ರಡೆಂತೊ ಭಟರು || ||೧೩||
ಕೋಲ್ಗರೆಯ ಲಾನೆಗಳ ಸುಂಡಿಲ್ಗಳುಂ ಹಯದ |
ಕಾಲ್ಗಳುಂ ರಾವುತರ ಜೋದರ ಶಿರಂಗಳುಂ |
ನೇಲ್ಗೆಲಯ ರಥಿಕರ ಧನುರ್ದಂಡಮುಂ ಕೈದುವಿಡಿದ ಪಾಣಿಗಳು ಮಿಳಿಗೆ ||
ಸಾಲ್ಗೊಂ ಡುರುಳ್ದು ಪೊವಗಿದ ಕಪಿಗ ಳಂಗದೊ |
ಳ್ಕೀಲ್ಗಳಂ ಬಲಿದಂತೆ ನಾಂಟಿದುವು ಪರಬಲಂ |
ಸೋಲ್ಗುಮಲ್ಲದೆ ಕುಶಲವರ ಮುಂದೆಗೆಲ್ವ ಭಟರಂ ಕಾಣೆ ಸಾಹಸದೊಳು || ||೧೪||
ಸೇನೆಯಂ ನಿಮಿಷದೊಳ್ತಡೆಗಡಿಯೆ ಕಂಡು ಪವ |
ಮಾನಜಂ ನಡೆತಂದು ಬಾಲಕರ ವಿಗ್ರಹಂ |
ಭಾನುಕುಲತಿಲಕ ನಾಕೃತಿವೊಲಿದೆ ನೋಡೆಂದು ಭರತಂಗೆ ತೋರಿಸಲ್ಕೆ ||
ಸಾನುರಾಗದೊ ಳತುಲ ಚಾಪಮಂ ಪಿಡಿದು ರಾ |
ಮಾನುಜಂ ಕುಶನ ಸಮ್ಮುಖಕ್ಕೈದಿ ನುಡಿಸಿದಂ |
ಸೂನುಗಳ ಮೊಗಮಂ ನಿರೀಕ್ಷಿಸಿ ಘನಸ್ನೇಹದಿಂದೆ ಪುಳಕಂ ಪೊಣ್ಮಲು || ||೧೫||
ವತ್ಸ ನೀಂನಾರವಂ ನಿನಗೀತನೇಂ ಸಹಂ |
ಮತ್ಸಹೋದರರ ನುರೆ ಘಾತಿಸಿದಿರೆಮ್ಮಯ ಮ |
ಹತ್ಸೈನ್ಯಮಂ ಕೊಂದಿ ರಿನ್ನಾದೊಡಂ ಕುದುರೆಯಂ ಬಿಟ್ಟು ಪೋಗಿ ಬರಿದೆ ||
ಮತ್ಸರಿಸಬೇಡ ನಿಮ್ಮಂ ಪಡೆದ ತಾಯ ಬಳಿ |
ಗುತ್ಸವದೊಳೈದಿ ಸುಖಮಿಹುದೆಂದು ಭರತ ನೆನ |
ಲುತ್ಸುಕ ದೊಳಾಕುಶಂ ನಸುನಗುತೆ ನುಡಿದ ನಿಂತಾರಾಘವಾನುಜಂಗೆ || ||೧೬||

ಕಟ್ಟಿದ ತುರಂಗಮಂ ಬಿಡುವನ ಲ್ಲೀತ ನೊಡ ।
ಹುಟ್ಟಿದಂ ತನಗೆ ವಾಲ್ಮೀಕಿಮುನಿವರನ ವ ।
ರ್ನಿಟ್ಟನೆ ರಣಾಗ್ರದೊಳ್ನಿನ್ನನುಂ ನಿನ್ನನುಜರಂತೆ ಘಾತಿಸಿದ ಬಳಿಕ ॥
ಮುಟ್ಟಿದುತ್ಸವದಿಂದೆ ತಾಯ ಬಳಿಗೈದಿ ಪೊಡ ।
ಮಟ್ಟಲ್ಲಿ ಸುಖದೊಳಿರ್ದಪೆವೆಂದು ಕಣೆಗಳಂ ।
ತೊಟ್ಟು ತಾನೀಗ ಕುಶನರಿದುಕೊಳ್ಳೆನು ತೆಚ್ಚನಾ ಭರತನಂ ಧುರದೊಳು ॥ ||೧೭||

ಭರತನಂ ಗಣಿಸದಿಸುತಿರೆ ಕಂಡು ಮತ್ತೆ ಕರಿ ।
ತುರಗ ರಥ ಪಾಯದಳ ಮೊತ್ತಿದುದು ಕೂಡೆ ವಾ ।
ನರ ಸಿಂಗಳೀಕ ಮುಸುಕರಡಿಯ ಬಲಂ ಮುತ್ತಿದುದು ಬಳಿಕ ನಗುತೆ ಕುಶನು ॥
ಕರೆದು ಕುದುರೆಯ ಬಳಿಗೆ ತಮ್ಮನಂ ಕಳುಹಿ ಬಿ ।
ಲ್ದಿರುವಿಂ ದುಗುಳ್ಚಿದಂ ಕಣೆಗಳಂ ವೈರಿ ಮೋ ।
ಹರದ ತಲೆವಣಿಗಳಂ ಪಗೆಗಳಿದಿರ್ವಣೆಗಳಂ ರವಿಗೆಣೆಗಳಂ ಕ್ಷಣದೊಳು ॥ ||೧೮||

ಹತ್ತು ಭರತನ ಮೇಲೆ ನಳನ ಮೇಲೆಂಟು ಮೂ ।
ವತ್ತು ಹನುಮನ ಮೇಲೆ ಜಾಂಬವನ ಮೇಲೆ ನಾ ।
ಲ್ವತ್ತಂಗದನ ಮೇಲೆ ತೊಂಬತ್ತು ನೀಲಕುಮುದರ ಮೇಲೆ ನೂರುನೂರು ॥
ಉತ್ತುಂಗ ಗವಯ ಶತಬಲಿ ಸುಷೇಣರ ಮೇಲೆ ।
ಹತ್ತು ಹತ್ತಂಬೊಡ ಲ್ವಗಲೆಚ್ಚು ನಿಸಬರಂ ।
ಮತ್ತೆ ಘಾತಿಸಿ ಕೂಡೆ ರಾಮಾನುಜನ ಮೇಲೆ ಕೂರ್ಗಣೆಗಳಂ ಕರೆದನು ॥ ||೧೯||

ಎಲ್ಲ ಕುಶನಂಬು ಸೋಂಕಿದುವಲ್ಲಿ ಮೂರ್ಛೆ ವೃತಿ ।
ಯಲ್ಲ ದುಳಿಸಿಲ್ಲ ಪಡೆಯೆಲ್ಲಮುಂ ತಲ್ಲಣಿಸಿ ।
ಚೆಲ್ಲಿದುದು ದೆಸೆದೆಸೆಗೆ ಬಲ್ಲಿದ ಕಪೀಶ್ವರ ಕೈರ್ಗೆಟ್ಟು ಮೈಮರೆದರು ॥
ನಿಲ್ಲಿಮೋಡಿತು ಬೊದ್ದೆ ಘಲ್ಲಣೆಯನಾಂತು ನಿಂ ।
ದಲ್ಲಿ ಸಾರಥಿ ಕುದುರೆಗಳ್ಮಡಿದು ತೇರ್ಮುರಿದು ।
ಬಿಲ್ಲುಡಿದು ಭರತ ಸಂಗೋಪಾಂಗದಲ್ಲಿ ನಾಂಟಿದುವು ಪೊಸಮಸೆಗಣೆಗಳು ॥ ||೨೦||

ಜಗಮೊಳ್ಕಶಾಸ್ತ್ರಪ್ರಕರಕೆ ಮೈಗೊಟ್ಟವಂ ।
ಮಿಗೆ ಪತ್ರಿತ ನಾಗಪಿರ್ದಪನೆ ಪೇಳೆಂಬಿನಂ ।
ವಿಗತ ಚೇತನನಾಗಿ ಭರತಂ ಮಹೀತಳಕೆ ಬಿದ್ದು ಮೂರ್ಛೆಯೊಳಿರಲ್ಕೆ ॥
ಬಿಗಡ ಹನುಮಂ ಕಂಡು ಕಿತ್ತು ಪಿರ್ಜಿಟ್ಟಮಂ ।
ನೆಗಪಿ ತಂದರ್ಭಕನ ಮೇಲಿಡಲ್ಕಣುವೆಂದು ।
ಬಗೆಯದೆ ವಿಭಾಡಿಸಿದ ನಾತನಂ ಕಣೆಯೆಚ್ಚು ನಗುತೆ ಜಾನಕಿಯ ಸೂನು ॥ ||೨೧||

ಕಡೆಯ ಮಾತೇಂ ನಖಿಳ ಸೇನೆಯಂ ಭರತನಂ ।
ಕೆಡಹಿ ಕುಶನಲ್ಲಿಂದೆ ತುರಗಮಿರ್ದೆಡೆಗೆ ಬಂ ।
ದೊಡ ಹುಟ್ಟಿದಂ ಪೆರೆಸಿ ಶಿಲ್ಪಿನಂ ದೂತರೀತೆರನಂ ರಘೂದ್ವಹಂಗೆ ॥
ಕಡುವೇಗದಿಂ ಪೋಗಿ ಬಿನ್ನೈಸೆ ಕೇಳ್ದು ಪ ।
ಲ್ವಿಡಿದು ಪರಿತಾಪದಿಂದುರೆ ನೊಂದು ವಿಸ್ಮಯಂ ।
ಬಡುತಿದ್ದು ಸುಗ್ರೀವ ವರ ವಿಭೀಷಣ ರೆಡಬಲದೊಳೈದೆ ಪೊರಮಟ್ಟನು ॥ ||೨೨||

ಬಂದಂ ರಥಾರೂಢನಾಗಿ ರಣರಂಗ ದೊ |
ಳ್ನಿಂದು ಮೈಮರೆ ದೊರಗಿ ದನುಜರಂ ಮಡಿದ ಬಲ |
ವೃಂದಮಂ ಕುದುರೆಯಂ ಕಟ್ಟಿಕೊಂಡಿದಿರಾಗಿ ಬಿಲ್ವಿಡಿದು ಕಾಳಗಕ್ಕೆ ||
ನಿಂದಿರ್ದ ಯಮಳರಂ ಕಂಡು ಬೆರಗಾಗಿ ರಘು |
ನಂದನಂ ವಿನಯದಿಂ ತಾನೆ ಬೆಸಗೊಂಡ ನಿಂ |
ತೆಂದು ಘನ ಗಂಭೀರ ವಾಕ್ಯದಿಂ ದತಿಮನೋಹರಮಾದ ಸುಸ್ವರದೊಳು || ||೨೩||
ಎಲೆ ಪಸುಳೆಗಳಿರ ನಿಮಗೀ ಧನುರ್ವೇದಮಂ |
ಕಲಿಸಿದವ ನಾವ ನಾವುದು ನಿವಾಸಸ್ಥಳಂ |
ಸಲಹಿದವನಾವ ನಾವಂ ತಂದೆ ತಾಯಾವಳಶ್ವಮಂ ಕಟ್ಟುವಿನಿತು ||
ಛಲಮಿದೇತಕೆ ನಮ್ಮ ಸೇನೆಯಂ ಜಯಿಸುವೀ |
ಬಲಮೇತರಿಂದಾದುದೆಂದು ನಯದಿಂದೆ ರಘು |
ಕುಲ ಲಲಾಮಂ ಕೇಳ್ದೊಡಾ ಕುಶಂ ನಸುನಗುತೆ ಮಾರುತ್ತರಂಗೊಟ್ಟನು || ||೨೪||
ರಾಜೇಂದ್ರ ನೀನೆಮ್ಮೊಳಾಹವಕೆ ಬಿಲ್ಗೊಂಡು |
ವಾಜಿಯಂ ಬಿಡಿಸಿಕೊಳ್ಳಲ್ಲದೊಡೆ ಮರುಳಪ್ಪ |
ಯೋಜಕದ ಮಾತಿದೇತಕೆ ನಿರುಪಮ ಕ್ಷಾತ್ರಪೌರುಷವನುಳಿದು ಬರಿದೆ ||
ಸೋಜಿಗಮೊಳೆಮ್ಮ ಜನನಸ್ಥಿತಿಗಳಂ ಕೇಳ್ದ |
ಡೀಜಗಂ ಮೆಚ್ಚದೆಚ್ಚಾಡಿ ನೋಡೆನುತೆ ಕುಶ |
ನಾ ಜಲಜಮಿತ್ರಕುಲತಿಲಕನಂ ಬಗೆಯದೆ ನುಡಿದೊಡಾತ ನಿಂತೆಂದನು || ||೨೫||
ಶಿಶುಗಳಾಗಿಹ ನಿಮ್ಮೊಳೆನಗೆ ಕಾಳಗವೆ ಪರ |
ವಶರಾಗಿ ಬಿದ್ದನುಜರಂ ಕಂಡು ಖತಿಯೊಳಾಂ |
ವಿಶಿಖಮಂ ತುಡುವೆನೆಂದೊಡೆ ಮನಮೊಡಂಬಡದು ನಿಮ್ಮ ಜನನಸ್ಥಿತಿಗಳ ||
ವಿಶದ ವಿಸ್ತರವ ನೊರೆದೊಡೆ ನೋಡಿಕೊಳ್ಳೆನೆನೆ |
ಕುಶನೆಂದನಿಂತು ಲೋಕಾನಂದಕರಮಾದ |
ನಿಶಿತ ವಾಕ್ಯಂಗಳಂ ಜನಮೇಜಯಕ್ಷಿತಿಪ ಕೇಳಾ ರಘೂದ್ವಹಂಗೆ || ||೨೬||
ಈ ತಪೋವನದೊಳೆಮ್ಮೀರ್ವರ ನವಳಿಯಾಗಿ |
ಸೀತೆಯೊರ್ವಳೆ ಪಡೆದ ಳನುದಿನದೊ ಳಾರೈದು |
ಜಾತೋಪನಯನಾದಿ ಕರ್ಮಂಗಳಂ ಮಾಡಿ ನಿಗಮಾಗಮ ಸ್ಮೃತಿಗಳ ||
ವ್ರಾತಮಂ ಬರೆಸಿ ಕಾರ್ಮುಕವೇದಮಂ ಕಲಿಸಿ |
ನೀತಿಗಳನರುಹಿ ರಾಮಾಯಣವ ನೋದಿಸಿ ಮ |
ಹಾತಿಬಲರೆನಿಸಿದಂ ವಾಲ್ಮೀಕಿಮುನಿಪ ನೆಂದೊರೆದು ಮಗು ಳಿಂತೆಂದನು || ||೨೭||
ರಾಮಚಾರಿತ್ರ ಪಠನಾಭ್ಯಾಸಯೋಗದಿಂ |
ಕ್ಷೇಮಂ ಸುಪುಷ್ಟಿ ನಿಶ್ಚಲಮತಿ ನಿರಾಲಸ್ಯ |
ನಿರಾ ಮಹಾಕ್ಷತ್ರಿಯನಂ ಗೆಲ್ವಪಟು ತನ ಮಹುದೆಂದು ಕುಶನುಸಿರೆ ಕೇಳ್ದು ||
ಪ್ರೇಮದಿಂ ತನ್ನ ಸುತರೆಂದರಿದು ಸೀತೆಯಿಂ |
ಬೇಸಾತು ಕಿವಿದಾಗಿದೊಡೆ ಬಿದ್ದು ಮೂರ್ಛೆವೆ |
ತ್ತಾಮಯಂ ಕೂಡೆ ಚೇತನಂ ಬಡೆದು ಸುಗ್ರೀವನೊಡನಿಂತೆಂದನು || ||೨೮||

ಕಪಿರಾಜ ಕೇಳ್ದೈ ಕುಮಾರಕರ ನುಡಿಗಳಂ।
ನಿಪುಣ ರಿವರಾವ ಪುರುಷಂಗೆ ಸಂಭವಿಸಿದ।
ರ್ವಿಪಿನಚಾರಿಗಳ ನಿನ್ನೊಮ್ಮೆ ನೀಂ ಬೆಸಗೊಳೆನೆ ನಸುನಗುತೆ ಸುಗ್ರೀವನು ॥
ತಪನಕುಲಜಾತ ಪೂರ್ಣರಾಣ ಪುರುಷೋತ್ತಮನ।
ವಿಪುಲಸಂತತಿಗ ಳಿವ ರೀಕ್ಷಿಪೊಡೆ ದೇವ ನಿ।
ನ್ನಪರೂಪವಾಗಿರ್ಪುದಲ್ಲದೊಡಿವರ್ಗಿನಿತು ಸತ್ವಮೆತ್ತಣದೆಂದನು ॥ ॥೨೯॥
ಸುಗ್ರೀವ ರಾಘವ ವರ್ಾತಾಡುವನಿತ ರೊ।
ಳ್ನಿಗ್ರಹಿಸಿಕೊಂಡಿರ್ದ ಕುದುರೆಯಂ ಬಿಡುವೊಡ।
ಭ್ಯಗ್ರಮುಳ್ಳವನಾಗಿ ನೀಲನೈತರೆ ಕುಶಂ ಕೋಪದಿಂದಾ ಕಪಿಗಳ ॥
ಅಗ್ರಣಿಯನೆಚ್ಚು ಕೆಡಪಿದೊಡವನ ರುಧಿರ ದಿಂ।
ದುಗ್ರರೂಪದೊಳೆದ್ದುದಾ ನೀಲಕೋಟಿಗಳ್ವಿ।
ಗ್ರಹಕೆ ಕಡುಮುಳಿದು ಮರಗೊಂಬೆ ಜೆಟ್ಟಿ ಕಲ್ಗುಂಡು ಗೊಂಡೆಲ್ಲೆಡೆಯೊಳು ॥ ॥೩೦॥
ನೀಲವಾನರ ಸೈನ್ಯ ದೊತ್ತಾಯಮಂ ಕಂಡು।
ಮೇಲೆಸೆವ ರವಿಯನಾರಾಧಿಸಿ ಕುಶಂ ಮಹಾ।
ಸ್ಥೂಲಕಾಯದ ಕಪಿಗಳಂ ಗೆಲಲ್ಕೊಂದು ಯೋಜನ ದಳತೆ ಯಗಲದೆ ॥
ಕೋಲ ಗಾಯದ ನೆತ್ತರೂಸರ ಲೀಯುವಾದ।
ಬಾಲಕಂ ತುಡುವೊ ಡಳವಡುವ ತೆರನಾದ ರಿಪು।
ಜಾಲ ಕಸದಳವಾದ ಪೂಡ ಲಕ್ಷಯವಾದ ಬಾಣಂಗಳಂ ಪಡೆದನು ॥ ॥೩೧॥
ಆ ಮಹಾ ಬಾಣಂಗಳಂ ಪೂಡಿ ತೆಗೆದೆಚ್ಚು।
ಭೀಮವಿಕ್ರಮ ಕುಶಂ ಕೆಡಹಿದ ನಸಿತ ಕಪಿ।
ಸ್ತೋಮಮಂ ಬಳಿ ಕುರುಳ್ಚಿದ ನಾದಿ ನೀಲನಂ ಸುಗ್ರೀವ ಮುಖ್ಯರಾದ ॥
ಕಾಮರೂಪದ ಸಕಲ ವಾನರ ಚಮೂಪರಂ।
ಭೂಮಿಯೊ ಳ್ಮೂರ್ಛೆ ಗೆಯ್ದೊರಗಿಸಿ ವಿಭೀಷಣನ।
ಸಾಮರ್ಥ್ಯಮಂ ನಿಲಿಸಿ ಮತ್ತವನ ಬಲಮಂ ಪೊರಳ್ಚಿದಂ ಸಂಗರದೊಳು ॥ ॥೩೨॥
ನರ ವಾಜಿ ದಂತಿ ಮುಸುಕರಡಿ ಸಿಂಗಳಿಕ ವಾ।
ನರ ದಾನವ ರೊಳಿಡಿದ ಸೇನೆಯೊ ಳ್ನೋಡಲೊ।
ರ್ವರು ಮಿಲ್ಲದೆಲ್ಲರುಂ ಬಿದ್ದು ತಾ ನೇಕಾಕಿಯಪ್ಪುಸುಂ ಖಾತಿಗೊಂಡು ॥
ಸರಳ ನರ್ಭಕರ ಮೇಲೆಚ್ಚಂ ರಘೂದ್ವಹಂ।
ಧರೆಯೊಳೀ ಕ್ಷತ್ರಿಯರ ಮನವಾಸಿಗ ಳದೆಂತೊ।
ತರಹರಿಸಬಾರ ೨ಹ ರಾಮ ಬಾಣಂಗಳೈದಿದುವು ಕಾಲಾಗ್ನಿಯಂತೆ ॥ ॥೩೩॥
ಬಚ್ಚೆ ವೋಗದ ರಾಮಬಾಣಂಗಳಂ ನಡುವೆ।
ನುಚ್ಚು ನೂರಾಗೆ ಕತ್ತರಿಸಿ ರಘುನಾಥನಂ।
ಮುಚ್ಚಿದ ರ್ಕಣೆಗಳಿಂ ಮತ್ತೆ ಕಾಕುತ್ಥ್ಸನಂ ಕೆರಳ್ದು ಕುಶ ಲವರ ಮೇಲೆ।
ಎಚ್ಚೊಡಾ ಕೋಲ್ಗಳಂ ಬಾಲಕರ್ ಮಧ್ಯದೊ।
ಳ್ಕೊಚ್ಚಿ ರಾವಣರಿಪುವಿ ನಂಗಮಂ ನೋಯಿಸಿದ।
ರಚ್ಚರಿಯ ಕಾಳಗಂ ತಂದೆ ಮಕ್ಕಳ್ಗೆ ನಡೆದುದು ಸುರ ರ್ಜರಗಾಗಲು ॥ ॥೩೪॥

ಕಕ್ಕಸದೊಳಂದು ರಾವಣ ಕುಂಭಕರ್ಣಾದಿ |
ರಕ್ಕಸರ ತಲೆಗಳ ನರಿದು ತಿರುಗಿ ಬಹ ಕಣೆಗ |
ಳಿಕ್ಕಡಿಗಳಾಗಿ ಬಿದ್ದುವು ಧರೆಗೆ ಕೂಡೆ ಬಾಲಕ ರಿಸುಗೆ ತನ್ನಿಸುಗೆಗೆ ||
ಮಿಕ್ಕು ಬರೆ ಬೆರಗಾಗಿ ರಾಘವಂ ಸುಮ್ಮನಿರೆ |
ಪೊಕ್ಕು ವಂಬುಗಳೊಡಲೊಳಾತ್ಮಜರ ಮೇಲೆ ತನ |
ಗಕ್ಕರುಂಟೆಲ್ಲೆಂಬುದಂ ನೋಳ್ಪೆನೆಂಬ ವೊಲ್ಭೂಪ ಕೇ ಳ್ಕೌತುಕವನು || ||೩೫||
ಪಲ್ಲವಿತ ನವ ಚೂತತರು ಬೇಸಗೆಯ ಝಳಕೆ |
ನಿಲ್ಲ ದಸವಳಿದು ಜೋಲ್ವಂತೆ ಕೋಮಲ ಕಾಯ |
ದೆಲ್ಲೆಡೆಯೊಳಂ ನಾಂಟಿದಂಬುಗಳ ರುಧಿರ ಪ್ರವಾಹದಿಂದುರೆ ಬಳಲ್ದು ||
ಮೆಲ್ಲನೆ ವರೂಥದೊ ಳ್ಸಾರಥಿವೆರಸಿ ಧರಾ |
ವಲ್ಲಭಂ ಮೈಮರೆದು ಪವಡಿಸಿದ ನನಿಮಿಷ |
ರ್ಚೆಲ್ಲಿದ ಪೂರ್ಮಳೆಗಳಂ ಮೊಳಗಿದುವು ದೇವ ದುಂದುಭಿಗ ಳಂಬರದೊಳು || ||೩೬||
ಆ ಕುಮಾರರ್ಬಳಿಕ ಶರಹತಿಗೆ ಮೈಮರೆದ |
ಕಾಕುತ್ಸ್ಥನಲ್ಲಿಗೈತಂದು ರಾಜೇಂದ್ರನ ಶು |
ಭಾಕಾರಮಂ ನೋಡಿ ಸಿರಿಮೊಗದ ಮಣಿಕುಂಡಲಂಗಳಂ ಕಂಬುಗಳದ ||
ಏಕಾವಳಿಯ ಹಾರಮಂ ತೆಗೆದು ಕೊಂ ಡೂರ್ಮಿ |
ಳಾಕಾಂತ ಭರತ ಶತ್ರುಘ್ನರ ವಿಭೂಷಣಾ |
ನೀಕಮಂ ಕಳೆದೊಂದು ವಸನದೊಳ್ಕಟ್ಟಿ ಕುಶನೊಡನೆ ಲವ ನಿಂತೆಂದನು || ||೩೭||
ಅಗ್ರಭವ ಕೇ ಳಿವರೊಳೊಂದು ರಥಮಂ ಪತ್ತಿ |
ವಿಗ್ರಹದೊ ಳೆಚ್ಚರಾಗಿರ್ದ ವೀರರ್ಕಳ ಕ |
ಚಗ್ರಹಣಮಂ ಮಾಡಿಕೊಂಡು ಬಹೆನೆನುತೆ ಲಕ್ಷ್ಮಣನ ಪೊಂದೇರ್ಗಡರ್ದು ||
ವ್ಯಗ್ರದಿಂ ಲವ ನೈತರಲ್ಕುಶನ ಶರಹತಿಯ |
ನಿಗ್ರಹಕ್ಕೊಳಗಾಗಿ ಮೂರ್ಛೆಯಿಲ್ಲದೆ ಕಪಿಗ |
ಳಗ್ರಣಿಗ ಳುಳಿದಿರ್ದ ರಿರ್ವರವರೊ ಳ್ಜಾಂಬವನೊ ಳೆಂದನಾ ಹನುಮನು || ||೩೮||
ಕಂಡಿರೇ ಜಾಂಬವರೆ ರಾಮಾದಿ ವೀರರಂ |
ದಿಂಡುಗೆಡಹಿದ ಬಳಿಕ ರಣದೊಳುಸಿ ರಿರ್ದರಂ |
ಮುಂಡೆವಿಡಿ ದೆಳೆದುಯ್ವೆನೆಂದು ಸೀತಾಸುತಂ ಬಂದಪಂ ನಾ ವಿವನೊಳು ||
ದಂಡಿಗಾರೆವು ನಮ್ಮ ನೀಬಾಲಕಂ ಪಿಡಿದು |
ಕೊಂಡು ಪೋಗಲಿ ಜಾನಕಿಯು ಪೊರೆಗೆ ದೇವಿ ಕೃಪೆ |
ಯಿಂ ಡಿಂಗರಿಗರೆಂದು ಪಾಲಿಸಲಿ ಮೇಣುಳಿಯಲೆಂದನಾ ಹನುಮಂತನು || ||೩೯||
ಕೆಡೆದಿರ್ದರೆಲ್ಲರಂ ನೋಡಿ ರಣರಂಗದೊ |
ಳ್ಮಿಡುಕಿ ಮಾತಾಡು ವಿವರಂ ಕಂಡು ಲೀಲೆಯಿಂ |
ಪಿಡಿದು ಲವ ನೆಳೆತಂದು ಕೌತುಕದ ಕಪಿಗಳಂ ದಣ್ಣಂಗೆ ತೋರಿಸಲ್ಕೆ ||
ಕಡುಮೆಚ್ಚಿ ತಮ್ಮನಂ ಕುಶ ನಪ್ಪಿದಂ ಬಳಿಕ |
ಪಡೆದ ತಾಯಂ ಕಾಣಲಾ ಪ್ಲವಗಪತಿ ಗಳಂ |
ಬಿಡ ದಸಿಬರಾಭರಣ ಮನಿತುಮಂ ಕೊಂಡಿರ್ವರುಂಬಂದ ರಾಶ್ರಮಕ್ಕೆ || ||೪೦||

ಏನಾದರೋ ತನಯರೆಂದು ಚಿಂತಿಸುತಿರ್ಪ |
ಜಾನಕಿಗೆ ರಾಮಾದಿಗಳ ಭೂಷಣಂಗಳಂ |
ಕಾನನದ ಬೇಂಟೆ ಯೊಳ್ಸಿಕ್ಕಿ ಸೀಕರಿಗೊಂಬ ಮೃಗ ಪೋತಕಂಗಳಂತೆ ||
ಮೌನದಿಂ ಮೈಯುಡುಗಿ ನೊಂದೆಳೆತಟಕೆ ಬಿದ್ದ |
ವಾನರ ಶ್ರೇಷ್ಠರಂ ತಂದಿತ್ತು ಚರಣ ದೊ |
ಳ್ಮಾನುಗ ಳ್ಮೊಡಮಡ ಲ್ಕಾಸೀತೆ ನಡನಡುಗಿನಂದನರ್ಗಿಂತೆಂದಳು || ||೪೧||
ಆರುಮರಿಯದ ವೋಲೀ ಕಾನನದೊಳಿರ್ದೆನಾಂ |
ಧಾರಿಣೀಶರ ಭೂಷಣಂಗಳೇತಕೆ ನಮಗೆ |
ವೀರ ಕಪಿವರ ರಿವ ರ್ಜಗದೊ ಳಭಿಮಾನಿಗ ಳ್ಭಂಗಮೇಕಿಂತಿವರ್ಗೆ ||
ಘೋರ ಕರ್ಮಂಗಳಂ ಮಾಡಿದಿರಿ ಮಕ್ಕಳಿರ |
ಪಾರಿ ದಪ್ಪಿದಿ ರಿನ್ನು ವಾಲ್ಮೀಕಿ ಮುನಿವರಂ |
ಬಾರಡಿರನೀಗಳೆ ರಣದೊಳಿವರ ನಿರಿಸಿ ಬಹುದೆಂದ ಳವನಿಜೆ ಲವಂಗೆ || ||೪೨||
ವೈದೇಹಿ ನುಡಿದುದಂ ಕೈಕೊಂಡು ಲವನವರ |
ನುಯ್ದು ರಣರಂಗದೊಳ್ಮಗುಳಿರಿಸಿ ಬಂದ ನಿರ |
ದೈದೆ ನಾರದನಿಂದೆ ಕೇಳ್ದು ವಾಲ್ಮೀಕಿಮುನಿ ಪಾತಾಳ ಲೋಕದಿಂದೆ ||
ಮೈದೋರ ಲಾಶ್ರಮದ್ವಾರದೊಳ್ಕಂಡು ಮೇ |
ಲ್ವಾಯ್ದು ಕ್ಕುವಾನಂದ ರಸದಿಂದೆ ವಂದನಂ |
ಗೈದ ಳವನಿಜೆ ಮಣಿದರೆಲ್ಲರುಂ ಜಾನಕಿಯಸುತರೆರಗಿದ ರ್ಪದದೊಳು || ||೪೩||
ಶರವೇದಮೂರ್ತಿಗಳ ತೆರದಿಂದೆ ರಾಜಿಸುವ |
ತರಳರಂ ಮಣಿದೆತ್ತಿ ಮಕ್ಕಳಿರ ನಿಮಗೆ ರಘು |
ವರನ ಸೇನೆಯೊಳಾಯ್ತುಗಡ ಕಲಹಮೇಕೆ ತೊಡಗಿತು ತೋಟಿ ನಿಮ್ಮ ಕೂಡೆ ||
ಧುರಕೆ ಬಂದೆಚ್ಚಾಡಿ ಬಿದ್ದ ರಾರಾ ಮರ್ಯ್ಯೊ |
ಳರಿಗಳಂಬಿನ ಗಾಯಮಿಲ್ಲ ದೆತ್ತಣ ಬಲೋ |
ತ್ಕರದೇಳ್ಗೆ ಪೇಳ್ವುದೆನೆ ವಾಲ್ಮೀಕಿ ಮುನಿಪುಂಗವಂಗೆ ಕುಶನಿಂತೆಂದನು || ||೪೪||
ತಂದೆ ನೀವಿರಲೆಮಗೆ ಸುಕ್ಷೇಮಕರಮಪ್ಪು |
ದೆಂದೆಂದು ಮಿದುನಿಜಂ ನಿಮ್ಮಡಿಗ ಳುಪದೇಶ |
ದಿಂದರಿಗಳಂ ಗೆಲ್ದೆವೀನಿಮ್ಮ ಪುಣ್ಯಾಶ್ರಮ ದೊಳಾಯ್ತು ಘಾತಹಿಂಸೆ ||
ಬಂದುದೊಂ ದಶ್ವಮದನೀ ಲವಂ ಕಟ್ಟಿದಂ |
ಮುಂದಿ ಕನಿಮಮ ಮೇಲೆ ಶತ್ರುಘ್ನ ನುರುಬಿದಂ |
ಸಂಧಿಸಿದೆನಾಂ ಬಳಿಕ ಸೌಮಿತ್ರಿ ಭರತ ರಾಮಾದಿಗಳ್ನಡೆ ತಂದರು || ||೪೫||
ಕಡೆಯ ಮಾತೇನಿನ್ನು ದೊರೆದೊರೆಗಳೆಲ್ಲರಂ |
ಪಡೆಯೊಳ್ನಿಶಾಟ ಕಪಿ ನರ ಚಾತುರಂಗಮುಂ |
ಕೆಡಹಿದೆವೆನ ಲ್ಕುಶನ ನುಡಿಗೆ ಸೈವೆರಗಾಗಿ ವಾಲ್ಮೀಕಿಮುನಿ ಮನದೊಳು ||
ಕಡುನೊಂದ ನಕಟಕಟ ತಪ್ಪಾದುದೆನುತೆ ನಡ |
ನಡುಗುತಿಹ ಸೀತೆಯಂ ಸಂತೈಸಿ ವಹಿಲದಿಂ |
ನಡೆತಂದ ನೊಡನಿರ್ದ ತಾಪಸ ವಿತತಿ ಸಹಿತ ಸಂಗ್ರಾಮ ಭೂಮಿಗಾಗಿ || ||೪೬||

ಶರಧಿಯಂ ಕಟ್ಟುವಂ ದಾ ರಾಘವೇಶ್ವರಂ ।
ಧರೆಯೊಳಿಟ್ಟಣಿಸಿರ್ದ ಬೆಟ್ಟಂಗಳೆಲ್ಲಮಂ ।
ತರಿಸಿದ ಧ್ರುವಮಿಗಾಧಾರಮಿಲ್ಲದೆ ಪೋಪುದೆಂದವನ ತನುಜಾತರು ॥
ಗಿರಿಗಳಂ ಪ್ರತಿಯಾಗಿ ತಂದಿಳೆಯ ಮೇಲಿನ್ನು ।
ಪರಪಿವರೊ ವೇಳೆನ ಲ್ಪೊಡೆಗೆಡೆದು ಬಿದ್ದಿರ್ದ ।
ಕರಿಘಟೆಗ ಳಟ್ಟೆಗಳ್ಕಾಣಿಸಿದು ವಾರಣದೊಳಾ ತಪೋನಿಧಿಯ ಕಣ್ಗೆ ॥ ॥೪೭॥
ತಟ್ಟು ಗೆಡೆದಿಹ ವಾಜಿ ವಾರಣ ವರೂಥದಿಂ ।
ದಿಟ್ಟಣಿಸಿ ಬಿದ್ದ ರಾಕ್ಷಸ ಮನುಜ ಕಪಿಗಳಿಂ ।
ಪಟ್ಟಿಡಿ ದಗಲಕೆ ಚೆಲ್ಲಿದ ಛತ್ರ ಚಾಮರ ಪತಾಕೆಗಳ ಮೆದೆಗಳಿಂದೆ ॥
ಒಟ್ಟೊಟ್ಟಿಲಾಗಿ ಸೂಸಿದ ಪಲವು ಕೈದುಗಳ ।
ಬೆಟ್ಟಂಗಳಿಂ ಮಿದು ಳ್ನೆಣವಸೆ ಕರುಳ್ಗಳಿಂ ।
ಕಟ್ಟುಗ್ರಮಾದ ರಣರಂಗದೊ ಳ್ವಾಲ್ಮೀಕಿಮುನಿ ರಾಮನಂ ಕಂಡನು ॥ ॥೪೮॥
ಅಂದು ಪುರುಹೂತವೈರಿಯ ಸರ್ಪಶರದಿಂದೆ ।
ಪೊಂದಿದ ಸಮಸ್ತ ಬಲಸಹಿತ ಬಿದ್ದೆಚ್ಚರಳಿ ।
ದಂಪದಿಂ ನಸುಮುಸುಳ್ದಾನನದ ನಿಶೆಯ ತಾವರೆವೊಲಾಗಿಹ ಕಣ್ಗಳ ॥
ಕಂದಿ ದವಯವದ ಕಾಂತಿಗಳ ಕರ ಪಂಕರುಹ ।
ದಿಂದೆ ಕೆಲಕೋಸರಿಸಿ ಬಿದ್ದ ಬಿಲ್ಲಂಬುಗಳ ।
ನೊಂದ ಗಾಯದ ನೆತ್ತರೊರತೆಗಳ ರಾಮನಂ ಕಂಡು ಮುನಿ ಬೆರಗಾದನು ॥ ॥೪೯॥
ಈಕ್ಷಿಸಿ ಕಮಂಡಲೋದಕದಿಂದೆ ಮುನಿವರಂ ।
ಪ್ರೋಕ್ಷಿಸಿದೊ ಡುರಗತಲ್ಪದೊ ಳುಪ್ಪವಡಿಸು ವ ।
ಬ್ಜಾಕ್ಷನೀತಂ ತಪ್ಪದೆಂಬಂತೆ ಕಣ್ದೆರೆದು ವಾಲ್ಮೀಕಿ ಗಭಿನಮಿಸಲು ॥
ಸಾಕ್ಷಾ ಜ್ಜಗನ್ನಾಥ ಸರ್ವಕಾರಣ ಸಕಲ ।
ರಾಕ್ಷಸಾಂತಕ ಭಕ್ತವತ್ಸಲ ಕೃಪಾಳು ನಿರ ।
ಪೇಕ್ಷ ರಾಘವರಾಮ ಚಿತ್ತಾವಧಾನ ಮೆಂದಾ ಮುನಿ ಪೊಗಳುತಿರ್ದನು ॥ ॥೫೦॥
ಬಳಿಕ ರಾಘವನ ಸಿರಿಮುಡಿಗೆ ನಭದಿಂದೆ ಪೂ ।
ಮಳೆ ಕರೆದು ದುತ್ಸವದೊ ಳಮರದುಂದುಭಿಗ ಳುರೆ ।
ಮೊಳಗಿದುವು ಋಷಿ ಮಂತ್ರಪೂತ ಜಲದಿಂದೆ ಭರತಾದಿಗ ಳ್ಜೀವಿಸಿದರು ॥
ತಳೆದ ರನಿಮಿಷ ರಮೃತಮಂ ಬಿದ್ದ ಪಡೆಯ ಮೇ ।
ಲುಳಿಯದೆ ಸಮಸ್ತ ಸೈನಿಕ ಮೆದ್ದುದಾಗ ಪೆರೆ ।
ಗಳೆದ ಫಣಿಕುಲದಂತೆ ನಲಿದುದು ಚತುರ್ಬಲಂ ಪೇಳಲೇನಚ್ಚರಿಯನು ॥ ॥೫೧॥
ಬರಿಸಿದಂ ನೆನೆದು ಸುರಧೇನುವಂ ವಾಲ್ಮೀಕಿ ।
ಪರಮ ಸಂಪ್ರೀತಿಯಿಂ ಬೇಡಿದ ಪದಾರ್ಥಮಂ ।
ತರಿಸಿದಂ ದುಗ್ಧಾಭಿಷೇಕಮಂ ಮಾಡಿಸಿದ ನಾ ರಾಘವೇಶ್ವರಂಗೆ ॥
ಭರತಾದಿಗಳ್ವೆರಸಿ ಕುಳ್ಳಿರ್ದ ಬಳಿಕ ಪತಿ ।
ಕರಿಸಿ ಕಾಕುತ್ಸ್ಥನಂ ಕೊಂಡಾಡಿ ನೇಮದಿಂ ।
ಕರೆಸಿ ಕುಶಲವರಂ ಪದಾಬ್ಜದೊಳ್ಕೆಡಹಿ ಮುನಿವರ ನೊಯ್ಯನಿಂತೆಂದನು ॥ ॥೫೨॥

ರಾಜೇಂದ್ರ ಕೋಪಮಂ ಮಾಡದಿ ನಿರ್ನ್ನಂ ಕೃ |
ಪಾಜಲಧಿ ಯೆಂದು ಮರೆವೊಕ್ಕರಂ ಕಾವನೆಂ |
ಬೀಜಗಂ ಬಣ್ಣಿಪುದು ನಿನ್ನ ತನುಸಂಭವ ಜಾನಕಿಯು ಮಕ್ಕಳಿವರು ||
ಪಿಪವಪ್ಪಿದ ರಾಶ್ರಮದೊಳಿದ್ದುದಿಲ್ಲ ಮಖ |
ಯಾಜನಕೆ ವರುಣಂ ಕರೆಸಲಾಗಿ ಪೋದೆ ನೀ |
ವ್ಯಾಜಮಂ ತಾನರಿಯೆ ನಪರಾಧ ಮೆನಿತುಳ್ಳೊಡಂ ಸೈರಿಸುವುದೆಂದನು || ||೫೩||
ಜಾತಂ ವಿನೀತನಾಗಲಿ ಧೂರ್ತನಾಗಿರಲಿ |
ತಾತಂಗೆ ವಿರಹಿತನೆ ನೋಡದಿ ಬಾಲಕರ |
ತೀತಮಂ ಕ್ಷಮಿಸೆಂದು ವಾಲ್ಮೀಕಿ ನುಡಿಯೆ ರಾಘವ ನೂರ್ಮಿಳಾಪತಿಯನು ||
ಸೀತೆ ಸುತರಂ ಪಡೆದಳೆಂತೆನೆ ತವಾಜ್ಞೆಯಿಂ |
ಶ್ವೇತನದಿಯಂ ದಾಂಟಿ ಪೂರ್ಣ ಗರ್ಭಿಣಿಯಾದ |
ಘೂ ತನುಜೆಯಂ ಕಾನನದೊಳಿರಿಸಿ ಬಂದೆನಲ್ಲದೆ ಮುಂದರಿಯೆನೆಂದನು || ||೫೪||
ಇಂತೆಂದು ಲಕ್ಷ್ಮಣಂ ನುಡಿಯೆ ವಾಲ್ಮೀಕಿ ಸಮ |
ನಂತರ ದೊಳೇಕಾಕಿಯಾಗಿ ಜಾನಕಿ ವಿರಹ |
ಸಂತಾಪದಿಂ ಪಡವಿಯೊಳ್ತೊಳಲುತಿರ್ದುದಂ ಕಂಡು ತನ್ನಾಶ್ರಮಕ್ಕೆ ||
ಸಂತೈಸಿ ಕೂಡೆ ಕೊಂಡುಯ್ದುದಂ ಬಳಿಕಲ್ಲಿ |
ಸಂತತಿಗಳಾದುದಂ ತಾನ ವರ್ಗಿಲ್ಲಿಪ |
ರ್ಯಂತರಂ ಮಾಡಿಸಿದ ಕೃತ್ಯಂಗಳೆಲ್ಲಮಂ ಪೇಳ್ದಂ ರಘೂದ್ವಹಂಗೆ || ||೫೫||
ಬಳಿಕ ವಾಲ್ಮೀಕಿ ನಿಜಶಿಷ್ಯರಂ ಸದನಕ್ಕೆ |
ಕಳುಹಿ ತರಿಸಿದ ನಮಲ ವಲ್ಲಕಿಗಳಂ ತನ್ನ |
ಬಳಿಯೊಳಭ್ಯಾಸಮಂ ಮಾಡಿಸಿದ ರಾಮಚಾರಿತ್ರಮಂ ತುದಿಮೊದಲ್ಗೆ ||
ಲಲಿತ ಸಾಳಂಗ ಸಾವೇರಿ ಗುಜ್ಜರ ಗೌಳ |
ಪಳಮಂಜರಿ ಗಳೆಂಬ ವಿವಿಧ ರಾಗಂಗಳಂ |
ಬಳಸಿ ಪಾಡಿಸಿದ ನೆರಡನೆಯ ತುಂಬುರು ನಾರದರ ತೆರದೆ ಕುಶಲವರನು || ||೫೬||
ವೀಣೆಯಂ ಕೈಗಿತ್ತು ಬಾಲಕರ ವದನದೊ |
ಳ್ವಾಣಿ ತಾಂ ನೆಲಸಿದಳೊ ಗಾನದೇವತೆಯು ವೈ |
ಗಾಣಿಕೆಯೊ ಮೋಹನದ ತನಿರಸವೊ ಸೊಗಯಿಸುವ ಕರ್ಣಾಮೃತವೊ ಪೇಳೆನೆ ||
ಜಾಣುಣ್ಮೆ ಜೋಕೆಯಿಂ ಜತಿ ರೀತಿ ತಾಳ ಪ್ರ |
ಮಾಣ ಕಂಪಿತ ಮೂರ್ಛೆ ರಸ ಪಾಡು ಬೆಡಗು ಬಿ |
ನ್ನಾಣ ಲಯ ಮಾಹತ ಪ್ರತ್ಯಾಹತ ವ್ಯಾಪ್ತಿಯರಿದು ಕೇಳಿಸಿದ ರವರು || ||೫೭||
ಸ್ಥಾಯಿ ಸಂಚಾರಿಗಳ ಸರಿಗಮಪಧನಿಯಸರ |
ದಾಯತದ ಶುದ್ಧ ಸಂಕೀರ್ಣ ಸಾಳಗದ ಪೂ |
ರಾಯತ ಸುತಾನಂಗಳಂ ತಾರ ಮಧ್ಯ ಮಂದ್ರ ಗಳಿಂದೆ ಸೊಗಸುಗೊಳಿಸಿ ||
ಗೇಯ ರಸಮೊಸರೆ ಪಾಡಿದ ರವರ್ಪ್ಪಿನುತ ರಾ |
ಮಾಯಣದ ಸುಶ್ಲೋಕಮಾಲೆಯಂ ಕೇಳ್ದು ರಘು |
ರಾಯನುರೆ ಮೆಚ್ಚಿ ಕೊಂಡಾಡಿ ನಸುನಗೆಯಿಂದೆ ಸೌಮಿತ್ರಿಗಿಂತೆಂದನು || ||೫೮||

ಭಾವಿಸಲೆ ಸೌಮಿತ್ರಿ ಬಾಲಕರ ಸುಲಲಿತ ವ |
ಚೋವಿಲಾಸಂಗಳಿಂ ಸ್ವರದಿಂದೆ ರೂಪಿಂದೆ |
ಲಾವಣ್ಯದಿಂದೆ ಗತಿಯಿಂದೆ ಚೇಷ್ಟೆಗಳಿಂದೆ ಸೀತೆಯಂ ನೆನೆಯಿಸುವರು ||
ದೇವಿಯ ನಗಲ್ದ ವಿರಹಾಗ್ನಿ ಸುತ ದರ್ಶನದ |
ದೇವನದೊ ಳುರೆ ನಂದಿ ತಾದು ದಿನಕುಲದೇಳ್ಗೆ |
ಭೂವಲಯದೊ ಳ್ತನ್ನಬಾಣಮಂ ಬಂಜೆಗೈದಪರೆ ಪೊರಬಿಗ ರೆಂದನು || ||೫೯||

ರಾಯನಾಡಿದ ನುಡಿಗೆ ನಸುನಗುತೆ ಲಕ್ಷ್ಮಣಂ |
ಜೀಯ ನಿನ್ನಂಬುಗಳ್ಮೋಘಮಾದಪುವೆ ಪರ |
ಸಾಯಕದೊಳೀತಗ ಳ್ನಿನ್ನ ಸುತ ರದರಿಂದೆ ನೆಲೆಗೊಂಡು ದಾತ್ಮಶಕ್ತಿ ||
ಈ ಯಮಳರಂ ಪರಿಗ್ರಹಿಸೆಂದೊಡಾ ಕೌಸ |
ಲೇಯ ನತಿಧನ್ಯರಾವೆಂದು ವಾಲ್ಮೀಕಿಯಂ |
ಪ್ರಿಯೋಕ್ತಿಯಿಂದೆ ಕೊಂಡಾಡಿ ಸುಕುಮಾರರಂ ಕರೆದಾಗಳಿಂತೆಂದನು || ||೬೦||

ಆರ ತನುಜಾತರೆಲೆ ಮಕ್ಕಳಿರ ನಿಮಗಿನಿತು |
ವೀರತ್ವಮೆತ್ತಣದು ಪೇಳ್ವುದೆಂ ದಾತ್ಮಜರ |
ನಾರಾಘವಂ ಕೇಳ್ದೊಡವರಾವು ಜಾನಕಿಯ ಗರ್ಭಸಂಭವ ರೆನ್ನರು ||
ಆರೈದು ವಾಲ್ಮೀಕಿಮುನಿ ಸಲಹಿ ಸಕಲ ವಿ |
ದ್ಯಾರಾಜಿಯಂ ಕಲಿಸಿದಂ ದೇವ ನಿನ್ನ ಪದ |
ವಾರಿಜಕೆ ದ್ರೋಹಮಂ ಮಾಡಿದೆವು ಸೈರಿಸುವುದೆಂ ದೆರಗಿದ ರ್ಪದದೊಳು || ||೬೧||

ತನಯರಂ ತೆಗೆದೊಡನೆ ಮುಂಡಾಡಿ ಬಿಗಿಯಪ್ಪಿ |
ಘನತರ ಸ್ನೇಹದಿಂ ಶಿರವ ನಾಘ್ರಾಣಿಸಿ ವ |
ದನವ ನೊಡನೊಡನೆ ಚುಂಬಿಸಿ ಮತ್ತೆಮತ್ತೆ ವಾಲ್ಮೀಕಿಯಂ ಮಿಗೆ ಪೊಗಳುತೆ ||
ಅನುಜರಿಂ ದೊಡಗೂಡಿ ರಘುವರಂ ಸಂತೋಷ |
ವನಧಿಯೊಳ್ಮುಳುಗಿದಂ ಸುಕುಮಾರರಂ ಕೊಂಡು |
ಕೊನರಿತು ಸಮಸ್ತ ಪರಿವಾರ ಮುತ್ಸವದಿಂದೆ ಮೊಳಗಿದುವು ವಾದ್ಯಂಗಳು || ||೬೨||

ಬಳಿಕ ವಾಲ್ಮೀಕಿಯಂ ಸತ್ಕರಿಸಿ ಸೀತೆ ಭೂ |
ತಳವರಿಯೆ ಪರಿಶುದ್ಧೆ ಲೋಕಾಪವಾದಕ್ಕೆ |
ಕಳಿದೆ ನೆಂತಾದೊಡಂ ಪುತ್ರರಂ ಪಡೆದಳೆನ್ನರವರಿಸವೆನ್ನ ಬಳಿಗೆ ||
ಕಳುಹೆಂದು ಬೀಳ್ಕೊಂಡು ಸುತ ಸಹೋದರ ರೊಡನೆ |
ದಳಸಹಿತ ಹಯವರಂ ಬೆರಸಿ ನಿಜಪುರಕೆ ಬಂ |
ದುಳಿದಿರ್ದ ಯಜ್ಞಮಂ ನಡೆಸಿದಂ ಮೂಜಗಂ ಪೊಗಳಲ್ಕೆ ರಘುನಾಥನು || ||೬೩||

ಇತ್ತ ನಿಜತನುಜರಂ ಕಳುಹಿ ವಾಲ್ಮೀಕಿಮುನಿ |
ಪೋತ್ತಮಂ ಬರಲಾಶ್ರಮದ್ವಾರದೊಳ್ಕಂಡು |
ಚಿತ್ತದೊಳ್ಮರುಗುತೇನಾದರೆಲೆ ತಾತ ಕುಶ ಲವರೊಡ ಲ್ಲಿಡಿನೆನೆಂತೊ ||
ಚಿತ್ತಂಮ ನೋಡಲಾಗಿ ಪತಿವಿರಹಮಂ ಮರೆದು |
ಪೊತ್ತಿರ್ದ [illegible] ತನ್ನ ಸುತರ ನಾ |
ಗೆತ್ತು ಸಿನ್ನೆತಂದೆ ತಂದೆ ಸೇಳೆಂದು ಜಾನಕಿ ಬಿಪ್ಪ ಳಂಘ್ರಿಗಳ್ಗೆ || ||೬೪||

ಮಣಿವೆತ್ತಿ ಸೀತೆಯಂ ಸಂತೈಸಿ ಮಗಳೆ ನಿ |
ನ್ನಣುಗರಂ ತಮ್ಮ ತಾತಂ ಕೂಡಿ ಕೊಂಡುಯ್ದು |
ನೆಣಿಕೆ ಬೇಡಿದ ಕಿನ್ನು ನಿನ್ನುಮಂ ಕಾಂತನಲ್ಲಿಗೆ ಕಳುಹಿ ಬರ್ಪೆನೆಂದು ||
ಗುಣದಿಂ ಪೊಡಂಬಡಿಸಿ ವಾಲ್ಮೀಕಿ ಮುನಿವರಂ |
ಮಣಿರಥ ವನೇರಿಸಿ ಸಮಸ್ತವೈಭವದಿಂ ಧ |
ರಣಿಯಂ ತಂದಯೋಧ್ಯಾಪುರದೊಳಿರಿಸಿ ರಘುನಾಥನಂ ಕಾಣಿಸಿದನು || ||೬೫||

ಮೇಲೆ ಜಾನಕಿ ಸಹಿತ ರಾಘವಂ ಸಾಮ್ರಾಜ್ಯ |
ಲೋಲನಾಗಿರ್ದನೆಲೆ ಜನಮೇಜಯಾ ವನೀ |
ಪಾಲ ಕೇಳ್ದ್ಲ ಕುಶ ಲವರೊಡನಾ ರಾಮಂಗೆ ಬಂದ ಕದನದ ಕಥೆಯನು ||
ಮೂಲೋಕಕಿದು ಪುಣ್ಯ ವತಿರಮ್ಯವಾಗಿರ್ಪು |
ದಾಲಿಪ ಗರ್ಾಯುರಾರೋಗ್ಯಮೈಶ್ವರಂ ವಿ |
ಶಾಲಮತಿ ಸತ್ಕೀರ್ತಿವಿಮಲ ಸಂತತಿ ಸುಗತಿಮೊರೆಕೊಂಬುದಿಹ ಪರದೊಳು || ||೬೬||

ಅರಸ ನೀಂ ಬೆಸಗೊಳಲ್ಪೇಳ್ದೆನಾಂ ಕುಶ ರಾಘ |
ವರ ಯುದ್ಧಮಂ ಸುರಸ ಫಲ್ಗುಣರ ಕಾಳಗ ವ |
ನೊರೆಯುಲೇಕಿನ್ನು ಕೇಳ್ದರಿವಲ್ಲೆ ಬಭ್ರುವಾಹನ ಪಾರ್ಥರಾಹವವನು ||
ವಿರಚಿಸುವೆ ನೊಲಿದಾಲಿಸೆಂದು ಜೈಮಿನಿ ಮುನೀ |
ಶ್ವರ ನಿಂದುಕುಲತಿಲಕ ಜನಮೇಜಯಂಗೆ ವಿ |
ಸ್ತರಿಸಿದಂ ದೇವಪುರ ನಿಲಯಲಕ್ಷ್ಮೀಶನಂ ಚಿತ್ತದೊಳ್ಧ್ಯಾನಿಸುತ್ತೆ || ||೬೭||

ಸಂಧಿ ೨೧ ಕ್ಕೆ ಪದ್ಯ ೧೧೧೭ ಕ್ಕೆ ಮಂಗಳಮಸ್ತು.

## ಇಪ್ಪತ್ತೆರಡನೆಯ ಸಂಧಿ

ಸೂಚನೆ|| ಸತ್ವದಿಂದೊದಗಿದರ್ಜುನತನುಗೆ ಭುಜಸಾಹ |
ಸತ್ವದಿಂ ಪ್ರದ್ಯುಮ್ನ ಮೊದಲಾದ ಪಟುಭಟ |
ಸತ್ವರದೊಳ್ಚಾಡಿದ ಬಭ್ರುವಾಹನ ಧನಂಜಯ ಸಂಗರದೊಳು ||

ಅರಸ ಕೇಳರ್ಜುನಂ ಪ್ರೈದು ನೂಕಿದಬಳಿಕ |
ತರಿಸಿದ ಸುವಸ್ತುಗಳ ನಧ್ವರದ ತುರಗಮಂ |
ತಿರುಗಿ ನಿಜನಗರಿಗೆ ಕಳುಹಿ ಬಭ್ರುವಾಹನಂ ಸಮರ ಕನುವಾಗಿ ನಿಲಲು ||
ಧರಣಿಮಂಡಲಮುಂ ಚತುರ್ಬಲಂ ಗೀರ್ವಾಣ |
ಸರಣಿ ಮಂಡಲಮುಂ ಧ್ವಜ ಛತ್ರಚಾಮರಂ |
ತರಣಿಮಂಡಲಮುಂ ಚಮೂಪದಹತೋದ್ಧೂತರೇಣುವ್ರಜಂಮುಸುಕಿತು || ||೧||

ಅರ್ಬುದಗಜಂ ಪತ್ತುಕೋಟಿ ಸುವರೂಥ ಮೆರ |
ಡರ್ಬುದ ತುರಂಗಮಂ ಕೂಡಿತು ಪದಾತಿ ಮೂ |
ರರ್ಬುದಂ ಜೋಡಿಸಿದ ರಾಹವ ಪ್ರೌಢ ಸುಬುದ್ಧಿ ಮೊದಲಾದ ಭಟರು ||
ಸರ್ಬ ಸನ್ನಾಹದಿಂ ದೊತ್ತರಿಸಿ ತೆತ್ತಣ ಚ |
ತುರ್ಬಲಮೊ ಕಮಲಜನ ಸೃಷ್ಟಿಯೊಳ ದೃಷ್ಟಮೆನೆ |
ಪರ್ಬಿದುದು ನೆಲ ದಗಲ ಕಾ ಬಭ್ರುವಾಹನಂ ತರಿಸಿದಂ ಮಣಿರಥವನು || ||೨||

ಚಿತ್ರಶೋಭಿತವಾದ ಮಣಿಮಯ ವರೂಥಮಂ |
ಚಿತ್ರಾಂಗದೆಯ ತನೂಭವ ನಡರ್ದಂ ಕೂಡೆ |
ಚಿತ್ರಮಾದುದು ಸಮರ ಮೆರಡು ಥಟ್ಟಿನ ಚೂಣಿ ಸಂದಣಿಸಿ ತುರವಣೆಯೊಳು ||
ಮಿತ್ರಮಂಡಲವ ನೊಡೆದೈದು ವತಿಭರದಿಂದೆ |
ಮಿತ್ರ ಭಟರಂ ತಾಗಿದ ರ್ಕಡುಗಲಿಗಳಾಗ |
ಮಿತ್ರಭಾನದ ನೇಹದಿಂದೆ ಮರುಗವೆ ಮಾಣ ವಂಭೋರುಹಂಗಳೆನಲು || ||೩||
ತೀರ ವಂಗಡದ ಜರ್ಜಾರವಂ ಗಜದ ಘಂ |
ಟಾರವಂ ಹಯದ ಹೇಷಾರವಂ ನಡೆವ ಸೇ |
ನಾರವಂ ಭೇರಿಯ ಮಹಾರವಂ ಬಹಳ ಕಹಳಾರವಂ ಸಂಗಡಿಸಿದ ||
ಜ್ಯಾರವಂ ಭಟರ ಬಾಹಾರವಂ ದಳದ ಬಂ |
ಭಾರವಂ ರಣ ಕಿಲಕಿಲಾರವಂ ಪಟಹ ಢ |
ಕ್ಕಾರವಂ ಪುದಿದ ನಾನಾರವಂ ಕಿವಿಗತಿ ಕಠೋರವಂ ತೀವಿತಂದು || ||೪||
ಸಿಂಧ ಸೀಗುರಿ ಛತ್ರ ಚಾಮರ ಪತಾಕೆ ಗ |
ಳ್ಸಂದಣಿಸಿ ಗಗನಮಂ ಮುಸುಕಲ್ಕೆ ತವೆ ಮೂಡಿ |
ದಂಧಕಾರಂಗಳಂ ಕಿಡಿಸಿದುವು ರತ್ನಾಭರಣ ಕಾಂತಿಗಳೂಭ್ಪರ ||
ಕೆಂದೂಳಡರ್ದು ನಭಮಂ ಮುಸುಕಿತಾಗ ಸುರ |
ಸಿಂಧು ಪ್ರವಾಹ ಮುತ್ತುಂಗ ಶೋಣಾಚಲದ |
ಬಂಧುರ ತಟ ಪ್ರದೇಶದೊಳೊಪ್ಪುವೊಜ್ಜರದ ನದಿಯೆಂಬ ತೆರನಾಗಲು || ||೫||
ಚೂಣಿಯೊಳ್ಬೆರೆಸಿ ಪೊಯ್ದಾಡಿದ ರ್ತಮತಮಗೆ |
ಬಾಣ ತೋಮರ ಪರಶು ಚಕ್ರ ವಸಿ ಮುದ್ಗರ ಕೃ |
ಪಾಣ ಡೊಂಕಣಿ ಕುಂತ ಸುರಗಿ ಶಲ್ಲೆಹ ಶಕ್ತಿ ಮೊದಲಾದ ಕೈದುಗಳೊಳು ||
ಕೇಣಮಿಲ್ಲದೆ ಚಾರಿ ಚಳಕ ಚಾಳೆಯ ಚದು |
ರ್ವಾಣಿಲಾಘವ ಪಂಥ ಪಾಡುಗಳ ನರಿದು ಬಿ |
ನ್ನಾಣದಿಂ ಗಾಯಗಾಣಿಸಿದ ರತಿಬಲರಲ್ಲಿ ನಾನಾ ಪ್ರಹಾರದಿಂದೆ || ||೬||
ತೂಳಿಸಿದರಾನೆಯಂ ಜೋದ ರುರವಣಿಸಿ ದೂ |
ವಾಳಿಸಿದ ರುಬ್ಬೆದ್ದು ರಾವುತ ರ್ತೇಜಿಯಂ |
ಕೇಳಿಸಿದ ರಾಹವದ ನಾಟ್ಯಮಂ ರಣರಂಗದೊಳ್ಚಟುಲ ಪಟುರಥಿಕರು ||
ಏಳಿಸಿದ ರಾಳ್ತನದ ಪಂತಮಂ ಕಾಲವ |
ರ್ಬೀಳಿಸಿದ ರಹಿತರಂ ಪೊಯ್ದಾಡಿ ತಲೆಯಂ ನಿ |
ವಾಳಿಸಿದ ರಾಳ್ದಂಗೆ ಕೈದುಗಳ ಹೋರಟೆಯು ಖಣಿ ಕಟಿಲ ರಭಸದಿಂದೆ || ||೭||
ಕಾರ್ಮುಗಿಲ ಸಿಡಿಲ ರವದಂದವಾಗಿರೆ ಕರೆದ |
ಕಾರ್ಮುಕಧ್ವನಿ ಮಿಂಚಿನಂತೆ ಪೊಳೆಪೊಳೆವ ಪೊಂ |
ದೇರ್ಮೆರೆಯೆ ಶರವರ್ಷಮಂ ಕರೆಯುತರ್ಜುನನ ಸಮ್ಮುಖಕೆ ಬಂದು ನಿಂದು ||
ಮಾರ್ಮಲೆಯ ಬಾರದಯ್ಯನೊಳಂದು ಕಂಡು ನಾಂ |
ಕೂರ್ಮೆಯಿಂದೆರಗಿದೊಡೆ ಜರೆದೆಲಾ ರಣದೊಳೆ |
ನ್ನಾ ರ್ಮೊಗೆದೊಡಂ ಜೈಸದೊಡೆ ನಿನ್ನ ಸುತನಲ್ಲೆನುತೆ ಪಾರ್ಥ ತೆಗೆದೆಚ್ಚನು ||೮||

ಪಾರ್ಥಿವರ ಪಂತಮಲ್ಲೆಂದು ಪೇಳಲ್ಕೆ ಪುರು |
ಷಾರ್ಥಮಂ ಮಾಳ್ಪೆಲಾ ನಿನ್ನ ಪೌರುಷವ ನಪ |
ಕೀರ್ತಿ ಗಂಜುವನಲ್ಲ ಪಿತನಂ ಪಚಾರಿಸುವೆ ಮತ್ತೆ ಕಾಳಗಕೆ ಬಂದು ||
ಧೂರ್ತನಹೆ ನೀನೆನುತೆ ನಸುನಗೆಯೊಳಿದಿರಾಗಿ |
ಪಾರ್ಥನ ಕುಮಾರನಂ ಘಾತಿಸಿದ ನೊಂಬತ್ತು |
ಕಾರ್ತಸ್ವರಾಂಕಿತ ಸುಪುಂಖದಿಂದೆಸೆವ ಬಾಣಂಗಳಿಂ ದನುಸಾಲ್ವನು || ||೯||
ಕೈತವ ದಿಸುಗೆಯೊ ನಿಜ ಸಾಹಸ ಮಿನಿತೊ ನಿನ್ನ |
ಮೈತಲೆಗಲಸಿ ಬಂದುದಾಹವಕೆ ಪೊಸತೆನುತೆ |
ಕೈತವಕ ದಿಂದೆಚ್ಚ ನನುಸಾಲ್ವನಂ ನೂರು ಬಾಣದಿಂ ಪಾರ್ಥಸೂನು ||
ಐತರಲವಂ ಮಧ್ಯಮಾರ್ಗದೊಳ್ತಡೆಗಡಿದು |
ದೈತೇಯರಾಜಂ ಕನಲ್ದಾಗ ಬರಸಿಡಿಲ |
ಹೊಯ್ತೆಗಿಮ್ಮಡಿಯಾವ ಕಣೆಗಳಂ ಕವಿಸಿದಂ ಬಭ್ರುವಾಹನನಮೇಲೆ || ||೧೦||
ಉಬ್ಬಿದುದು ಮೈ ರೋಷದಿಂದೆ ಗಂಟಿಕ್ಕಿದುವು |
ಪುಬ್ಬುಗಳ್ಬಭ್ರುವಾಹಂಗೆ ತೆಗೆತೆಗೆದಿಸುತೆ |
ಬೊಬ್ಬಿರಿದ ನನುಸಾಲ್ವನಂ ಮುಸುಕಿದುವು ಕೋಟಿ ಸಂಖ್ಯೆಯ ಪೊಗರ್ಗಣೆಗಳು ||
ಅಬ್ಬರಿಸಿ ದೈತ್ಯನದ ಕಿಮ್ಮಡಿಸಿ ಕೋಲ್ಗರೆದ |
ನೊಬ್ಬೊಬ್ಬರಂ ಜಯಿಸು ವಾತುರದೊಳೆಚ್ಚಾಡ |
ಲಿಬ್ಬರಂಗದೊಳಿಡಿದು ವಂಬುಗಳ್ಪರಿದು ವರುಣಾಂಬುಗಳ್ಸಂಗರದೊಳು || ||೧೧||
ಬಾಣದೊಳ್ಚಣಿತೆಯೊಳ್ಬಿಲ್ಗಾರತನದ ಬಿ |
ನ್ನಾಣದೊಳ್ಬಿಂಕದೊಳ್ಪ್ರೌಢಿಕೆಯೊಳುರುತರ |
ತ್ರಾಣದೊಳ್ಜಯದೊಳ್ಚಮತ್ಕೃತಿಯೊಳದಟಿನೊಳ್ಬೀರದೊಳ್ಧಾರಣೆಯೊಳು ||
ಪಾಣಿಲಾಘವದೊಳ್ಪರಾಕ್ರಮದ ಪಂತದೊ |
ಳ್ಕಾಣೆ ನವರಿರ್ವರ್ಗೆ ಸಮರಾದ ಕಲಿಗಳಂ |
ಕ್ಷೋಣಿಯೊಳಿನ ಲ್ಬಭ್ರುವಾಹಾ ನುಸಾಲ್ವ ರೆಚ್ಚಾಡಿದ ರ್ಕೋಳುಗುಳದೊಳು ||೧೨||
ಕಾಳಗಂ ಸಮಮಾಗಿ ಬರೆ ಕೆರಳ್ದನುಸಾಲ್ವ |
ನೇಳಂಬಿನಿಂ ಪಾರ್ಥಸುತನ ಬತ್ತಳಿಕೆಯಂ |
ಕೋಲೆಂಟರಿಂದೆ ಟೆಕ್ಕೆಯುವ ನೀರೇಳು ಮಾರ್ಗಣದಿಂದೆ ಕಾರ್ಮುಕವನು ||
ಬೀಳ ಲಿಕ್ಕಡಿಯಾಗಿ ಕತ್ತರಿಸಿ ಕವಚಮಂ |
ಸೀಳಿದಂ ಕೈಯೊಡನೆ ಸಾಸಿರ ಸರಲ್ಗಳಿಂ |
ಪೂಳಿದಂ ಸಾರಥಿ ವರೂಥ ವಾಜಿಗಳಂ ಶಿಲೀಮುಖ ವ್ರಾತದಿಂದೆ || ||೧೩||
ಕ್ಷಣದೊಳಾಗಳೆ ಬಭ್ರುವಾಹನಂ ಮತ್ತೊಂದು |
ಮಣಿವರೂಥವ ನಡರ್ದಿಸುತಿರ್ದ ನಿತ್ತ ಲುರ |
ವಣಿಸು ವನುಸಾಲ್ವಂ ವಿರಥನಾಗಿ ಕೊಂಡ ನುರುಗದೆಯ ನೀಪಾರ್ಥಸುತನ ||
ರಣಚಮತ್ಕಾರಮೆಂತುಟೊ ತನ್ನ ಮೇಲಕೆ |
ಟ್ಟಣಿಸಿ ಬಹ ದಾನವನ ನೆಡ್ಜೊಡುಚ್ಚಳಿಸಿ ಕೂ |
ರ್ಗಣೆಗಳಡಗಿದು ವಿಳೆಯೊಳಸುರೇಂದ್ರ ನಸವಳಿದು ವಸುಧೆಯಂ ಪಸಗೈದನು ||೧೪||

ಅನುಸಾಲ್ವ ನಳವಳಿಯೆ ಚಾಪಮಂ ಜೇಗೈದು ।
ದನುಜಾರಿತನಯ ನಿದಿರಾಗಿ ನಿಲ್ಲೆಲವೊ ತ ।
ನ್ನನೆ ಮೊದಲೆ ವಂದಿಸದೆ ಪಾರ್ಥನಂ ಕಂಡು ಕೆಡಿಸಿದೆ ರಾಜಕಾರಿಯವನು ॥
ತನುವನುರೆ ನೋಯಿಸೆಂ ಮೈದುನನಲಾ ಸರಸ ।
ಕನುವರದೊಳೆಚ್ಚಾಡಿ ನೋಡುವೆಂ ಕಂಗೆಡದಿ ।
ರೆನುತೆ ನಾಲ್ಕೈದು ಬಾಣಂಗಳಂ ಬೀರಿದಂ ಬಭ್ರುವಾಹನನ ಮೇಲೆ ॥ ॥೧೫॥
ಸರಸ ಭಾವದೊಳೆ ಭಾವಿಸೆ ಭಾವನವರಿಗಿದು ।
ವಿರಸವಾಗದೆ ಮಾಣದೀಗ ಸಂಗ್ರಾಮದೊ ।
ಳ್ಸರಸ ಕಾರ್ಮುಕಮಿಲ್ಲ ಸರಸಶಿಂಜಿನಿಯಿಲ್ಲ ಸರಸಬಾಣಂಗಳಿಲ್ಲ ॥
ಸರಸ ಯುವತಿಯ ಕಟಾಕ್ಷದ ನೆಮ್ಮುಗೆಗಳಿಲ್ಲ ।
ಪರುಷಮಾಗದೆ ನೋಡು ರಣವೆನುತೆ ಪತ್ತು ಸಾ ।
ಸಿರ ಕೋಲ್ಗಳಂ ಮುಸುಕಿ ಹರಿತನಯನಂ ದಿಟದನಂಗ ನೆನಿಸಿದ ನಾರ್ಜುನಿ ॥೧೬॥
ಮುಸುಕಿದ ಸರಳ್ಗಳಂ ಕುಸುರಿ ದರಿದಂ ಕೂಡೆ ।
ದೆಸೆಗಳೀನಾದು ವಾಗಸ ಮೆತ್ತ ಲಡಗಿದುದು ।
ವಸುಮತಿಯದೆಲ್ಲಿಹುದು ಶಶಿ ರವಿ ಗಳೆಡೆಯಾಟ ದೆಸಕಂ ಗಳಾವೆಡೆಯೊಳು ॥
ಅಸುರರೊ ಳ್ನಿರ್ಜರ ಪ್ರಸರದೊ ಳ್ಮನುಜರೊ ।
ಳ್ಪೆಸರುಳ್ಳವರ ಸಮರ ದಿಸುಗೆಯೊ ಳ್ಕಾಣೆನಿದು ।
ಪೊಸತೆಂಬ ತೆರನಾಗೆ ವಿಶಿಖಮಂ ಕೆದರಿದಂ ಬಿಸರುಹಾಕ್ಷನ ತನಯನು ॥ ॥೧೭॥
ಕರ್ಕಶದೊ ಳೆಸುವ ಕೃಷ್ಣಾತ್ಮಜನ ಬಾಣ ಸಂ ।
ಪರ್ಕದಿಂದಾದ ಕತ್ತಲೆಯಂ ಕೆಡಿಸಿದು ವಮು ।
ರರ್ಕ ಳಹುದೆನೆ ಸವ್ಯಸಾಚಿಯ ತನುಜನ ಪೊಸಮಸೆಯ ವಿಶಿಖ ಪ್ರಭೆಗಳು ॥
ಅರ್ಕರಶ್ಮಿಗ ಳಂಧಕಾರಂಗ ಳಡಿಗಡಿಗೆ ।
ತರ್ಕಮಂ ಮಾಳ್ಪಂತೆ ಕಂಗೊಳಿಸಲಾಗ ವೀ ।
ರರ್ಕ ಳೆಚ್ಚಾಡಿದ ರ್ಬಭ್ರುವಾಹನ ರುಕ್ಮಿಣೀಸುತ ರ್ಸಂಗರದೊಳು ॥ ॥೧೮॥
ಅಚ್ಚರಿಯನಿನ್ನು ಜನಮೇಜಯ ನರೇಂದ್ರ ಕೇ ।
ಳಚ್ಯುತನ ಸುತನ ಬಾಣಂಗಳಂ ನಡುವೆ ಮುರಿ ।
ಯೆಚ್ಚ ನಾತನ ದುಣಿವರೂಥ ಚೈತ್ರವ ನಂಬಿನಂಬುಧಿಯ ವೀಚಿಯಿಂದೆ ॥
ಮುಚ್ಚಿದ ನೊಡನೆ ಮದನ ನಂಗದೊಳ್ಕಣೆಗಳಂ ।
ಪೊಚ್ಚಿದಂ ಕೆಲಬಲದೊಳಿಡಿದ ರಿಪುಸೇನೆಯಂ ।
ಕೊಚ್ಚಿದಂ ಕೊಂದ ನಗಣಿತ ಬಲವ ನಾಬಭ್ರುವಾಹನಂ ಕೊಳುಗುಳದೊಳು ॥ ॥೧೯॥
ಕಂಡುರೆ ಕನಲ್ದಾತ ನಿಸುವಿಸುವ ಕೋಲ್ಗಳಂ ।
ಖಂಡಿಸುತೆ ಮಿಡುಕದಂ ತವನ ತೇರೊಡ ನೊಡನೆ ।
ಚಂಡ ಶರಜಾಲಮಂ ಸೈಗರೆಯು ತುಚ್ಚಳಿಸಿ ಮತ್ತೆ ರಿಪುಬಲದ ಮೇಲೆ ॥
ಹಿಂಡುಗಣೆಯಂ ಕವಿಸಿ ಮಂದಿಯಂ ಕೊಲುತಿರ್ದ ।
ನಂಡಲೆದು ಮೂಜಗವನೈದೆ ಕುಸುಮಾಸ್ತ್ರದಿಂ ।
ದಿಂಡುರುಳ್ಚುವ ಶಂಬರಾರಿ ಗಿದಿರಾರೆನ ಲ್ಪುಂಡರೀಕಾಕ್ಷಸೂನು ॥ ॥೨೦॥

ಕಡಿಯೆ ರಾವುತರ ತಲೆ ನೆಲಕುದುರೆ ಕುದುರೆಗ ।
ಳ್ಮಡಿಯೆ ಜೋದ ರ್ಕೆಡೆಯು ಲಾನೆಗಳ್ನಿಗಳ್ದ ರಣ ।
ದೆಡೆಯೊಳ್ಪೊರಳೆ ಶಿರಂ ಪರಿಯಲ್ಕೆ ಸಾರಥಿಯು ರಥಿಯ ತನು ಸೀಳ್ಗಳಾಗೆ ॥
ಕಡುಪಾಂತಕಾಲಾಳ್ಗಳೊಡಲಳಿಯೆ ಲಳಿಯೆದ್ದು ।
ಪಡೆಯು ನುರೆ ಕೊಂಡುವು ಶರಧಿ ಛವನ ಛವನ ಪೊಗ ।
ರಿಡಿ ವಂಬುಗ.ಳ್ಪ್ರಳಯಶತಕೋಟಿ ಶತಕೋಟಿಯಂ ಪೋಲ್ತು ಸಂಗರಮೊಳು ॥ ॥೨೧॥
ಧರಣಿತಳದಂತೆ ನವಖಂಡಮಯಮಾಗಿ ಯಮ ।
ಪುರದಂತೆ ಬಹುನರ ಕಪಾಲಮಯಮಾಗಿ ಸಾ ।
ಗರದಂತೆ ಭೂರಿ ಜೀವನ ಭಂಗಮಯಮಾಗಿ ಸಂಚಾರಚಕ್ರದಂತೆ ॥
ಭರಿತ ಪಾತಕ ಬಂಧಮಯಮಾಗಿ ಕೈಲಾಸ ।
ಗಿರಿಯಂತೆ ಶಿವಗಣ ವಿಲಾಸ ಮಯಮಾಗಿ ವಿ ।
ಸ್ತರದ ನೈಮಿಶದಂತೆ ಪ್ರಾವೃತ ವಿರಕ್ತಮಯಮಾಗಿ ರಣಮೆಸೆದಿರ್ದುದು ॥ ॥೨೨॥
ಪೆಣಮಯಂ ಮೀರಿ ಮೆಡೆಗೆಡೆದಿರ್ದ ವಾಜಿ ವಾ ।
ರಣಮಯಂ ಬಿಡದೆ ಕುಣಿದಾಡು ವಟ್ಟೆಗಳ ರಿಂ ।
ಗಣಮಯಂ ನಿಡುಗರುಳ್ಖಂಡಮಿದುಳಡಗು ಸುಂಟಿಗೆ ಮಜ್ಜೆಮಾಂಸಂಗಳ ॥
ನೆಣಮಯಂ ಪರಿವ ನೆತ್ತರ ಬಸೆಯ ಜಿಗಿಯ ದಾ ।
ರುಣಮಯಂ ಯಕ್ಷರಾಕ್ಷಸ ಭೂತಭೇತಾಳ ।
ಗಣಮಯಂ ಸಲೆ ಭಯಂಕರಮಾದುದಂದು ರಣರಂಗಮಾಪ್ರದ್ಯುಮ್ನನ ॥ ॥೨೩॥
ಅರಿದಸುಂಡಿಲ ಕಹಳೆ ವಿಡಿದೂದಿದುವು ಕೆಲವು ।
ಕರಿಯ ರದನಂಗಳ್ಗೆ ತಲೆಯೋಡ ಸೊರೆಗಟ್ಟಿ ।
ನರದ ತಂತ್ರಿಯ ಪೂಡಿ ದಂಡಿಗೆ ವಿಡಿದು ಪಾಡಿದುವು ಕೆಲವು ತುರಗಂಗಳ ॥
ಖುರಮಂ ಪಿಡಿದು ತಾಳ ವಿಕ್ಕಿದುವು ಕೆಲವು ಕುಂ ।
ಜರಶಿರದ ಮುರಜಂಗಳಂ ಬಾರಿಸಿದುವು ಕೆಲ ।
ವಿರದೆ ಕುಣಿ ದಾಡಿದುವು ಮರುಳ್ಗಳಾ ರಣರಂಗದೊಳ್ನಾಟ್ಯರಚನೆ ಮೆರೆಯೆ ॥೨೪॥
ಹರಿಸುತಂ ತನ್ನ ಮೋಹರವ ನಿಂತ್ತೈದೆ ಸಂ ।
ಹರಿಸು ತಂತಕನೊಲಿರೆ ಕಾಣುತೆ ವರೂಥಮಂ ।
ಹರಿಸುತಂ ತಾ ಬಭ್ರುವಾಹನಂ ಖಾತಿಯಂ ಕೈಕೊಂಡು ಕಣೆ ಗರೆಯುತೆ ॥
ಪರ ದಳವ ನೊಳಪೊಕ್ಕು ಸುಭಟರಂ ಸದೆದು ಸೊ ।
ಪ್ಪರೆ ದಳವಳಿಸ ಲಾಗ ಭೀತಿಯಿಂ ದೆಸೆದೆಸೆಗೆ ।
ಪರಿ ದಳವಡಿಸಿದ ರ್ಪಲಾಯನವ ನತಿಬಲರ್ಪಾರ್ಥನ ಪತಾಕಿನಿಯೊಳು ॥ ॥೨೫॥
ಕೆಡೆದ ಕರಿಗಳ ಬೆಟ್ಟವಳಿಯ ಗುಂಡುಗಳೊಳಗೆ ।
ಮಡಿದ ಕುದುರೆಗಳ ಪೊಡೆಗಲ್ಲ ಪೊರಳಿಗಳೊಳಗೆ ।
ಕಡಿದ ಕೈಕಾಲ ನರ ರಟ್ಟೆಗಳ ತುಂಡುಗಳ ಮರಮುಟ್ಟೆಗಳ ನೆಳೆಯುತೆ ॥
ಒಡೆದ ತಲೆಯೋಡ ದೋಣಿಗಳಿಂದೆ ತಡಿಗೈದು ।
ತಿಡಿದ ನೆಣಪಸೆ ಮಿದುಳ್ಗಳ ಕರ್ದಮಂಗಳಿಂ ।
ಬಿಡದ ರುಧಿರಪ್ರವಾಹಂ ಪರಿಯೆ ಸವರಿದಂ ಪಾರ್ಥಜಂ ಪರಬಲವನು ॥ ॥೨೬॥

ಶಕ್ರತನಯನ ಸಂಭವಂ ಬಳಿಕ ರೋಷದಿಂ |
ಚಕ್ರಾಯುಧನ ಸುತನ ಸೂತನಂ ಕುದುರೆಯುಂ |
ನಕ್ರಧ್ವಜನ ನತುಲ ಚಾಪಮುಂ ಕತ್ತರಿಸಿ ವಿರಥನಂ ಮಾಡೆ ಕೂಡೆ ||
ವಿಕ್ರಮದೊಳಾಗ ಮತ್ತೊಂದು ಮಣಿರಥದಿಂ ದು |
ಷ್ಕ್ರಮಿಸದಂ ಕಾಳಗಕೆ ಕೃಷ್ಣನಂದನ ನ |
ತಿಕ್ರಮಿಸಿ ಮಗುಳಾ ವರೂಥಮುಂ ತಡೆಗಡಿದ ನಾ ಪಾರ್ಥಿ ಕೊಸುಗುಳದೊಳು ||೨೭||

ಪೊಸ ರಥವ ನಳವಡಿಸಿ ತಂದು ಹರಿಸೂನು ಬಂ |
ದಿಸುವ ನಾತೇರ ನೊಡನೊಡನೆ ಪಾರ್ಥನ ಸುತಂ |
ಕುಸುರಿ ದರಿವಂ ಧುರದೊಳಿಂತು ಬಯಲಾದುದು ವರೂಥ ಮಿಪ್ಪತ್ತು ಬಳಿಕ ||
ಅಸವಳಿದ ನಾಬಭ್ರುವಾಹನನ ಬಾಣದಿಂ |
ದಸುರಾರಿ ನಂದನಂ ಕೂಡೆ ಸಂತೈಸಿ ಕೊಂ |
ಡಸಮ ಬಲನೊಳ್ಪಳಂಚಿದ ನಾಗಳಿರ್ವರ್ಗೆ ಮಸೆದುದಂಕಂ ಖತಿಯೊಳು || ||೨೮||

ಎದ್ದು ನಭದೊಳ್ಪಳಂಚುವರೊಮ್ಮೆ ಭೂತಳದೊ |
ಳಿದ್ದು ಹೆಣಗುವರೊಮ್ಮೆ ಬಳಸಿ ಮಂಡಲದಿಂದೆ |
ಹೊದ್ದಿ ಹೋರುವರೊಮ್ಮೆ ತಗುಳು ಮಗುಳಾಗಿ ತಾಗುವರೊಮ್ಮೆ ಸರಿಬರಿಯೊಳು ||
ತಿದ್ದಿ ತುಡುಕುವರೊಮ್ಮೆ ಬಾಣಾಂಬುಧಿಯ ತೆರೆಯೊ |
ಳದ್ದಿ ಪೊಣರುವರೊಮ್ಮೆ ವರೂಥಿಯಿಂ ಮೈಮರೆದು |
ಬಿದ್ದು ಚೇತರಿಸಿ ಕಾದುವರೊಮ್ಮೆ ಕೃಷ್ಣಪಾರ್ಥರ ತನಯ ರಾಹವದೊಳು || ||೨೯||

ಕೃತ ಚಾಪ ಚಾಮಲ ಶಸ್ತ್ರಾಸ್ತ್ರನಿಪುಣ ರು |
ನ್ನತ ಸತ್ವ ಸತ್ವರ ದುಸ್ಸಹ ರಜೇಯ ರ |
ಪ್ರತಿ ಸಮರ ಸಮರಥ ಸಾಹಸಿಗಳಿ ವರುಂ ಗಗನ ಗಮನದ ವೀರರು ||
ಧೃತಮಾನ ಮಾನಸ ಕುಪಿತಮುಖ ಕರ್ಕಶ |
ವಿತತ ರಣತರಣಕ ಚಂಡ ಭುಜಬಲ ಯುತ |
ನುತ ಕಾರ್ಷ್ಣಿಕಾರ್ಷ್ಣಿಗಳ್ಕಡುಪಿಂದೆ ಕಾದಿದರ್ ಬೇಸರದೆ ಸಂಗರದೊಳು ||೩೦||

ಏಳುವ ಬೀಳುವ ಮೂದಲೆಯ ನುಡಿಗಳಂ |
ಪೇಳುವ ಕೇಳುವ ನಾಂಟಿದ ಶರಂಗಳಂ |
ಕೀಳುವ ತಾಳುವ ಗಾಯಮುಂ ವಿಕ್ರಮಾಗ್ನಿಗೆ ವಡೆಯೊಡಲ ಹವಿಯನು ||
ಬೇಳುವ ಬಾಳುವ ವೀರಸಿರಿಯುಂ ತಳೆದು |
ಸೀಳುವ ತೂಳುವ ಕಣೆಯಿಂ ದರುಣಜಲ ದೊ |
ಳಾಳುವ ಪೂಳುವ ಕೋಲ್ಗಳಿಂ ದಹಿತರಂ ಪ್ರದ್ಯುಮ್ನ ಪಾರ್ಥಸುತರು || ||೩೧||

ಇಂತೊರ್ವರೊರ್ವರ್ಗೆ ಸೋಲದೆ ಸುಪರ್ಣ ಹನು |
ಮಂತರ ಕದನದಂತೆ ಧರೆಯೊಳ್ಪೊಣರ್ದು ಮೇ |
ಣಂತರಿಕ್ಷದ ನಡುವೆ ಪೆಣಗಿದರ್ ಬಳಿಕ ರೌಕ್ಮಿಣೇಯನ ಚಾಪದ ||
ತಂತುವಂ ಕತ್ತರಿಸ ಲಾರ್ಜುನಿಯುಮೇಳೆ ಗದೆ |
ಯಂ ತೆಗೆದಿಡಲ್ಕವನದಂ ನಡುವೆ ಕಡಿಗೆಯ್ದು |
ಲಿಂತೊದಗಿದನೊ ಮತ್ತೆ ಬಿಲ್ವಿಡಿದು ಹರಿಸೂನು ಪಾರ್ಥಿಯಂ ತೆಗೆದೆಚ್ಚನು || ||೩೨||

ಪೊಡವಿಗಧಿನಾಥ ಕೇಳ್ಬಳಿಕಿರ್ವರುಂ ಗಗನ।
ಕಡರಿ ನಿಜ ಸತ್ವದಿಂ ದನ್ಯೋನ್ಯ ಮಾರ್ದಿಸ।
ಲ್ಪಿಡಿಲ ರಭಸ ಮೊಳಂಬುಗ ಳ್ತಾಗ ಲುಭಯವೀರ ಕ್ರೋಶ ಮಾತ್ರಕಾಗಿ॥
ಪಿಡಿದಂತರಿಕ್ಷದಿಂ ಧಾರಿಣೀತಳಕೆ ಪೊಡೆ।
ಗೆಡೆವ ರಾಕ್ಷಣದೊಳ್ಪುರಂದರನ ವಜ್ರದಿಂ।
ಕಡಿವಡೆದು ಮೇದಿನಿಗೆ ಬೀಳ್ವ ಕುಲಗಿರಿಗಳಂ ತೊಬ್ಬೊಬ್ಬ ರೊಂದುಕಡೆಗೆ॥ ॥೩೩॥
ಸಾಹಸಮದೆಂತೊ ಭೂತಳಕೆ ಬೀಳುತೆ ಬಭ್ರು।
ವಾಹನಂ ತರಹರಿಸುತವ ನೆಚ್ಚರಿಕೆ ಗುಂದದೆ ಮ।
ಹಾಹವಕೆ ಬೇರೊಂದು ಮಣಿವರೂಥವ ನಡರ್ದಾಗ ತನ್ನಭಿಮುಖದೊಳು॥
ಆ ಹರಿಕುಮಾರನಂ ಕಾಣದೆ ಧನಂಜಯನ।
ಮೋಹರವನೈದಿವಂ ಪಸಿದ ಪೆರ್ಬುಲಿ ಮೃಗ ಸ।
ಮೂಹಮಂ ಪುಗುವಂತೆ ಕಾಡಾನೆ ಕವಳಿಗಳ ತುರುಗಳಂ ತುಡುಕುವಂತೆ॥ ॥೩೪॥
ಕವಿದ ರಾಂತ ರ್ನಿಂದ ರುರುಬಿದ ರ್ತರುಬಿದ।
ರ್ತವಿದ ರೆಚ್ಚ ರ್ಪೊಯ್ದ ರೊತ್ತಿದ ರ್ಮುತ್ತಿದ।
ರ್ನವಿಧಾಯುಧಂಗಳಂ ಬೀರಿದ ರ್ಮೀರಿದ ರ್ವಿಗ್ರಹಾವೇಶದಿಂದೆ॥
ತವೆ ತಾಗಿದ ರ್ತಡೆದ ರಡರಿದ ರ್ತೊಡರಿದ।
ರ್ತವಕದಿಂ ತನುತನುಗೆ ಕಾದಿದ ರ್ಮೋದಿದ।
ರ್ಬವರದೊಳ್ಪಾರ್ಥಿಯಂ ಬಳಸಿದ ರ್ಸೆಳಸಿದ ರ್ನರನ ಸೇನೆಯ ಸುಭಟರು ॥೩೫॥
ಒತ್ತರಿಸಿ ಫಲುಗುಣನ ಸೂನುವಂ ಭಾನುವಂ।
ಮುತ್ತಿದುದು ಚಾತುರಂಗಾಳಿಯುಂ ಧೂಳಿಯುಂ।
ಬಿತ್ತರದ ಮಣಿಪುರ ಸ್ವಾಮಿಯುಂ ಭೂಮಿಯುಂ ಸಲೆ ಮುಸುಕಿತಾಕ್ಷಣದೊಳು॥
ನೊತ್ತಪ ಶರಾವಳಿಯ ಸೋನೆಯುಂ ಸೇನೆಯುಂ।
ಪತ್ತೆ ಚಿತ್ರಾಂಗದೆಯ ಜಾತನಂ ಘಾತನಂ।
ಹತ್ತಿ ಹರಿದುದು ಬಲ ಮಶೇಷಮುಂ ಘೋಷಮುಂ ಘೋರತರ ಸಂಗರದೊಳು ॥೩೬॥
ರಿಪುಬಲದ ಮುತ್ತಿಗೆಯ ಕೋಲಾಹಲಂಗಳಂ।
ವಿಪುಲ ಶಸ್ತ್ರಾಸ್ತ್ರ ಪ್ರಯೋಗಂಗ ಳುರುಬೆಯುಂ।
ಸಪದಿಪ್ರಹಾರದಾಯುಧ ಸಮೂಹಂಗಳಂ ಕಂಡು ಫಲುಗುಣನ ಸೂನು॥
ಕುಪಿತ ಬದ್ಧ ಭ್ರುಕುಟಿ ಮುಖನಾಗಿ ವಹಿಲದಿಂ।
ದ್ವಿಪ ಹಯ ವರೂಥ ಪತ್ತಿಗಳೆನಿತು ಕವಿದು ವನಿ।
ತಪರಿಮಿತ ಬಾಣಮಂ ಸುರಿದವರಿದಂ ಪೊಕೆದ ನಂತಕ ಪುರದ ಸಿರಿಯನು॥ ॥೩೭॥
ಅರಸ ಕೇಳಾಶ್ಚರ್ಯಮುಂ ಬಳಿಕ ಪಾರ್ಥಜನ।
ಶರವರ್ಷದೊಳ್ನೆಯುವವರಿಲ್ಲ ಪಾಂಡವನ।
ಪರಿವಾರದೊಳ್ಕರಿ ತುರಗ ರಥಪ ಪಾಳೆಯ ದೊಳಿರ್ದ ಜನ ಜಂಗುಳಿಯೊಳು॥
ಅರರೆ ಬಿಲ್ಗಾರತನ ದೇಳ್ಗೆಯೆಂತುಟೊ ಜಗ।
ದ್ಭರಿತನಾಗಿಹ ವಿಷ್ಣು ಮಾಯಾ ಪ್ರಭಾವ ದಂ।
ತಿರೆ ಬಭ್ರುವಾಹನನ ಬಾಣಂಗಳೆಲ್ಲರಂ ಮುಸುಕಿ ಮೋಹಿಸುತಿರ್ದುವು॥ ॥೩೮॥

ರಂಭಾದಿಗಳ ಕುಚದ ಕುಂಕುಮ ದೊಳಾಳ್ದ ಹಾ |
ರಂ ಭಾರಿಯುಂಕದೊಳ್ಮಡಿದ ವೀರಾಂಗ ಪರಿ |
ರಂಭಾತಿಶಯದ ಸಮ್ಮರ್ದನದೊ ಳಾತನಂ ಪರಿದು ಸೂಸುವ ತೆರದೊಳು ||
ಕುಂಭಿಕುಂಭದ ಸಮುಕ್ತಾಫಲಂಗ ಳ್ಯಾತ |
ಕುಂಭ ಚಿತ್ರಿತ ಮಾರ್ಗಣದ ರುಚಿಗಳೊಡನೆ ರಣ |
ಕುಂಭಿನಿಗೆ ಬೀಳುತಿರ್ದುವು ಬಭ್ರುವಾಹನನ ತೀವ್ರತರ ವಿಸುಗೆಯಿಂದೆ || ||೩೯||
ಮುರಿದುವಗಣಿತ ರಥದ ರಾಜಿಗಳ್ತೇಜಿಗ |
ಳ್ತೊರೆದು ವಸುವಂ ಮಡಿದು ವಾನೆಗ ಳ್ಸೇನೆಗ |
ಳ್ಕುರಿದರಿವೊಲಾದ ರರಿವೀರರೊಳ್ಧೀರರೊಳ್ಪಾರ್ಥನಂದನನ ಮುಂದೆ ||
ಇರಿದು ಮೆರೆಯಲ್ಕಾಣೆನೊರ್ವರಂ ಸರ್ವರಂ |
ನೆರೆ ಗೆಲ್ದ ನತುಳ ಮಾರ್ಗಣದಿಂದೆ ರಣದಿಂದೆ |
ಹೆರದೆಗೆದು ಕಂಡಕಡೆಗೋಡಿದ ರ್ನೋಡಿದ ರ್ಜೀವದುಳಿವಂ ಸುಭಟರು || ||೪೦||
ತಾಗಿ ವಂದುಗ ಗೊಂಡ ನನುಸಾಲ್ವನಂಗೈಸಿ |
ಬೀಗಿದಂ ಕರ್ಣಜಂ ಹಂಸಧ್ವಜಂ ಕೆಣಕಿ |
ಸೀಗಿದಂ ಮಾನಮಂ ಯೌವನಾಶ್ವಂ ತಡೆದು ಸೋಲ್ದಂ ಸುವೇಗನಾಂತು ||
ಸಾಗಿದಂ ಘುರದಿಂದೆ ಸಿತಕೇತು ಸೆಣಸಿ ತಲೆ |
ದೂಗಿದಂ ಪರಿಭವ ಕ್ಕನಿರುದ್ಧ ನಿರದಿಳೆಗೆ |
ಬಾಗಿದಂ ಮೈಮರೆದು ಕೃತವರ್ಮ ಸಾತ್ಯಕಿಗಳಿದಿರಾಗಿ ದೆಸೆಗೆಟ್ಟರು || ||೪೧||
ಏನೆಂಬೆ ನಾ ರಣವಸಂತದೊಳ್ನೆರೆದ ಜಯ |
ಮಾನಿನಿ ವಿಮುಖವಾದ ವಿರಹದಿಂ ತಪಿಸುವ ಭ |
ಟಾನೀಕಮಂ ಬೆದರಿಸದೆ ಮಾಣದೆಂಬಿನಂ ಪಾರ್ಥಿಯ ಶಿಲೀಮುಖಾಳಿ ||
ದಾನ ಮಾತಂಗ ಘಟೆಗೆರಗಿದುದು ಸ್ಯಂದನ ವಿ |
ತಾನಮಂ ಡೋರು ಗಳೆದುದು ಗರಿಯ ಗಾಳಿಯಂ |
ಬಾನೆಡೆಗೆ ತೀಡಿದುದು ಶತಪತ್ರದಳದ ಮೇಲ್ವೈದಿ ವಿಸಟಂ ಬರಿದುದು || ||೪೨||
ಜೋದ ರಾವುತ ರಥಿಕ ರಳಿವಾನೆ ಕುದುರೆ ತೇ |
ರ್ಪೋದು ವೆಣ್ದೆಸೆಗೆ ತಮ್ಮಿಚ್ಛೆಯಿಂ ಪಟ್ಟಣದ |
ಬೀದಿಗ ರ್ಕೂಡಿದ ರ್ಲಾಯದೊಳ್ಸೂರೆಗೊಂಡ ರ್ಭೂಷಣಾದಿಗಳನು ||
ಕಾದುವ ಕಲಿಗಳಿಲ್ಲ ಪಡೆಯೊ ಳ್ಪಲಾಯನವ |
ನಾದರಿಸಿದ ರ್ಭಟ ಪ್ರದ್ಯುಮ್ನ ಮೊದಲಾದ |
ರಾದಿಯೊಳ್ಬಿದ್ದು ಮೋಹಿತರಾದರಾ ಬಭ್ರುವಾಹನನ ಕೋಲ್ಗಳಿಂದೆ || ||೪೩||
ಪಡೆ ಪಡಪುಗೆಟ್ಟು ದೆಸೆದೆಸೆಗೋಡುತಿರ್ಪುದಂ |
ತಡೆತಡೆದು ಕಡುಗಲಿಗಳಡಗೆಡಹುತಿರ್ಪುದಂ |
ಹೊಡೆಹೊಡೆದು ಪುರಕಾನೆ ಕುದುರೆಯಂ ಕೂಡಿಕೊಳುತಿರ್ಪುದಂ ದೊರೆದೊರೆಗಳು ||
ಸಿಡುಸಿಡು ಸರಳ್ನಾಂಟಿ ಮೂರ್ಛೆವಡೆದಿರ್ಪುದಂ |
ನಡನಡುಗುತತಿಬಲ ಕೈಮರೆಯುತಿರ್ಪುದಂ |
ಬಿಡಬಿಡದೆ ಫಲುಗುಣಂ ನೋಡಿ ಖತಿಯಿಂದೆ ಘುಡುಘುಡಿಸಿ ಕಿಡಿಕಿಡಿಯಾದನು ||೪೪||

ಗಾಂಡೀವಮಂ ತುಡುಕಿ ಟಂಕಾರ ಮಂಬುಜ ಭ।
ವಾಂಡಮಂ ತುಂಬದಿರಪೆಂಬಿನಂ ಜೇಗೈದು।
ತಾಂಡವದ ಮೃಡನ ಸಾರೂಪ್ಯಮಂ ಕೈಕೊಂಡು ರೋಷತಾಮ್ರಾಕ್ಷನಾಗಿ॥
ಪಾಂಡವಂ ಮಣಿರಥ ಮೊಳಿಸಿದ ನಡುವಗಲ ಮಾ।
ರ್ತಾಂಡನಂ ತುಜ್ವಲಿಸುತೈದಿದಂ ಕಾಳಗಕೆ।
ಖಾಂಡವ ದಹನದಂದು ತನ್ನ ಮೇ ಲಮರಪತಿ ಮುಳಿದು ಕದನಕೆ ಬಹವೊಲು ॥೪೫॥

ಆ ನರಂ ಕೋಪಮಂ ತಾಳ್ದು ನಿಜಚಾಪಮಂ।
ಜ್ಯಾನಾದಮಂ ಮಾಡೆ ಹಂಸಧ್ವಜಂ ಕೂಡೆ।
ಸೇನೆ ಸಹಿತುರುಬಿದಂ ಪಾರ್ಥಯಂ ತರುಬಿದಂ ಕೂರ್ಗಣೆಗಳಂ ಕರೆಯುತೆ॥
ಬಾನೆಡೆಯೊಳೆತ್ತಲುಂ ದೆಸೆದೆಸೆಯ ಸುತ್ತಲು ಮ।
ನೂನ ಶರಜಾಲಮಯಮಾಗಿರ್ದುದಾ ಸಮಯ।
ನೇನೆಂಬೆ ನಚ್ಚರಿಯ ಕಾಳಗದ ಹೊಸ ಪರಿಯು ನತಿ ಭಯಂಕರಮಾಗಲು ॥೪೬॥

ಬಳಿಕ ಹಂಸಧ್ವಜಂಗಾ ಬಭ್ರುವಾಹನಂ।
ಗಳವಿಯೊಳ್ಕಾಳಗಂ ಪೂಣ್ದುದು ಕಠೋರಮೆನೆ।
ದಳಕೆ ದಳಮುಗ್ಗಳಿಕೆ ಗಗ್ಗಳಿಕೆ ಧೃತಿಗೆ ಧೃತಿ ಕೊಲೆಗೆ ಕೊಲೆ ಕೋಲ್ಗೆ ಕೋಲು॥
ಮುಳಿಸಿಂಗೆ ಮುಳಿಸು ಗಾಯಕೆ ಗಾಯ ಮದಟ ಗದ।
ಟ ಳವಡಿಕೆ ಗಳವಡಿಕೆ ಸಮಮಾಗೆ ದೇವಪುರ।
ನಿಳಯ ಲಕ್ಷ್ಮೀವರನ ಮೈದುನಂ ತಲೆದೂಗೆ ಮೆಚ್ಚಿ ಸುರರುಲಿಯೆ ಮೇಗೆ॥ ॥೪೭॥

ಸಂಧಿ ೨೨ ಕ್ಕೆ ಪದ್ಯಗಳು ೧೧೬೪ ಕ್ಕೆ ಮಂಗಳಮಸ್ತು.

## ಇಪ್ಪತ್ಮೂರನೆಯ ಸಂಧಿ.

ಸೂಚನೆ। ಆಹವಸಮರ್ಥ ಕರ್ಣಜನಂ ಕೆಡಹಿ ಬಭ್ರು।
ವಾಹನಂ ಸುರನದಿಯ ಶಾಪದಿಂದರಿಯಲ್ಕೆ।
ರಾಹುತುಡುಕಿ ದರ್ಮೃತಕರ ಬಿಂಬದಂತಿರ್ದ ದರ್ಜುನನ ತಲೆ ರಣದೊಳು॥

ಜನಪ ಕೇಳರ್ಜುನನ ಸೈನ್ಯದೊಳ್ಬಭ್ರುವಾ।
ಹನ ನಖಿಳ ವೀರರಂ ಕೆಡಹಿ ಹಂಸಧ್ವಜನೊ।
ಡನೆ ರಣದೊಳಿಚ್ಚಾಡಿ ಸ್ಯಂದನ ಸಹಸ್ರಮಂ ತಡೆಗಡಿ ದವನ ಪಡೆಯೊಳು॥
ತನಿ ಗಲಿಗಳಾರು ಸಾವಿರಮಂ ಪೊರಳ್ಚಿ ವಾ।
ಹಿನಿಯ ನೈದಕ್ಷೌಹಿಣಿಯ ನೊಕ್ಕಲಿಕ್ಕಿ ಮೇ।
ದಿನಿಗವಂ ಮೈಮರೆದು ಬೀಳ್ವಂತೆ ಸೆಕ್ಕಿದಂ ಕಾಯದೊಳ್ನಾಯಕವನು॥ ॥೧॥

ಅಸವಳ ದೊಳವನ ಸುತರಿರ್ವರುಂ ಮಡಿದ ಬಳಿ।
ಕಸುರಾರಿ ತನ್ನೊಳಾಡಿದ ಬಲ್ಮೆಯುಂ ನೆನೆದು।
ಜೆಸೆಗೆಟ್ಟು ಬಿದ್ದ ನಕಟೆಂದು ಹಂಸಧ್ವಜಂ ಗರ್ಜನಂ ಮರುಗುತಿರಲು॥
ಮುಸುಕಿದಂ ಪಡೆಸಹಿತ ಬಂದು ಪಾರ್ಥಯ ರಥವ।
ನಸಮ ಭುಜಬಲ ಸುವೇಗಂ ಬಳಿಕ ಸಂಗರಂ।
ಪೊಸತಾದು ದಿರ್ವರ್ಗೆ ಕೊಂದ ನರ್ಜುನಿ ಮತ್ತೆ ವೀರ ರಿಥಾಸಿರವನು॥ ॥೨॥

ಸಾಹಸ ದೊಳಿರ್ವರುಂ ಸರಿಯೆನೆ ಸುವೇಗಂ ಮ |
ಹಾಹವದೊ ಳೆಚ್ಚಾಡಿ ವಿರಥನಾಗಿಯೆ ಬಭ್ರು |
ವಾಹನನ ಬಾಣದಿಂ ಮರೆ ನೊಂದು ಬಿದ್ದನವನಿಗೆ ಬಳಿಕ ಪಾರ್ಥ ನರನ ||
ಮೋಹರವ ನೈದಿದಂ ಪ್ರಳಯಭೈರವನ ಕೋ |
ಲಾಹಲ ಮಿದೆಂಬಂತೆ ಕೊಂದ ನೆಲ್ಲಾ ಬಲವ |
ದೇಹದೊಳಿಸಿನ ಜೀವ ಪರಮರವೊಲುಳಿದಿರ್ದ ರಾವೃಷಧ್ವಜ ಪಾರ್ಥರು || ||೩||
ರಣದೊ ಳಂತವ ರಿರ್ದರಿತ್ತ ಮುನ್ನೊಂದು ಕಾ |
ರಣಕೆ ಗುರು ಶಾಪಮಂ ಕುಡಲದಂ ಬಿಡಿಸಿ ಫಲು |
ಗುಣ ನಮಲ ತೀರ್ಥಯಾತ್ರಾ ಪ್ರಸಂಗದೊಳಂದು ತಾಂ ಪರಿಗ್ರಹಿಸಿ ನೆರೆದ ||
ಫಣಿರಾಜನಂದನೆ ಯುಲೂಪಿ ಪಾತಾಳದಿಂ |
ಮಣಿಪುರಕೆ ಬಂದು ಮೂರ್ಛಿತರಾಗಿ ಸಮರ ಧಾ |
ರಿಣಿಯೊಳಿಹ ದೊರೆಗಳಂ ತರಿಸಿ ಮಂತ್ರೌಷಧಗಳಿಂದೆ ಪಾಲಿಸುತಿರ್ದಳು || ||೪||
ನೃಪ ಕೇಳುಲೂಪಿ ಚಿತ್ರಾಂಗದೆಗೆ ಪೇಳ್ದ ಸುರ |
ರಿಪುಸುತಂ ತನ್ನ ತನಯಂಬೆರಸಿ ಪಾರ್ಥಜನ |
ವಿಪುಲಾಸ್ತ್ರದಿಂದೆ ಮೂರ್ಛಿತನಾಗಿ ರಣದೊಳಿರ ಲಿರ್ವರಂ ತರಿಸಿಕೊಂಡು ||
ಅಪಗತ ಶ್ರಮರಪ್ಪತೆರದಿಂದೆ ಮಂದಿರ ದೊ |
ಳುಪಚರಿಸಿ ಮಣಿ ಮಂತ್ರ ಮೂಲಿಕಾ ತತಿಗಳಿಂ |
ತಪಿಸದಂ ತಾರ್ಕೈಯು ತಿರ್ದಳರ್ಜುನ ನಿತ್ತ ವೃಷಕೇತು ಗಿಂತೆಂದನು || ||೫||
ಮಗನೆ ಮಡಿದುದು ಸೈನ್ಯ ಮನುಸಾಲ್ವ ಮುಖರಾದ |
ವಿಗಡ ರೇರ್ವಡೆದು ಸ್ಮೈಗೆಡೆದ ರಿಳೆಯೊ ಳ್ತಮ್ಮ |
ನಗರಿ ಗನಿರುದ್ಧ ಪ್ರದ್ಯುಮ್ನರಂ ಕೊಂಡೊಯ್ದು ರಹಿತ ರಿವನಂ ಜಯಿಸುವ ||
ಬಗೆಗಾಣೆನಾದೊಡಂ ನಿಲ್ವೆ ನಾನಿಲ್ಲಿ ಕಾ |
ಳಗಕೆ ನೀನಿರದೆ ಹಸ್ತಿನಪುರಿಗೆ ಪೋಗಿ ಪೇ |
ಳಗಧರ ಯುಧಿಷ್ಠಿರ ಗಿರ್ಸ್ಥಿತಿಯನೆಂಬಿನಂ ತೋರ್ದು ವುತ್ಪಾತಂಗಳು || ||೬||
ಪರ್ದು ಕುಳ್ಳಿರ್ದು ದರ್ಜುನನ ಮಕುಟಾಗ್ರದೊ ಳ |
ಡರ್ದು ಗೂಡಿಕ್ಕಿದುವು ರಥದೊ ಳ್ಕಪೋತಂಗ |
ಳಿರ್ದುದು ತನುಚ್ಛಾಯೆ ತಲೆಯಿಲ್ಲ ದಿನಿತುಮಂ ಕಂಡು ಬೆರಗಾಗಿ ನರನು ||
ಪೊರ್ದದಿರ ದಪಜಯಂ ತನಗಿನ್ನು ಧರ್ಮಜಂ |
ನಿರ್ದೈವನಹನಲಾ ಶಿವ ಮಹಾದೇವ ಮುರ |
ಮರ್ದನಂ ತುರಗಮೇಧವನೆಂತು ಮಾಡಿಪನೊ ಕರ್ಣಸುತ ಕೇಳೆಂದನು || ||೭||
ವಾಜಿ ಸಹಿತಾಂ ಪೋಗಿ ಸಕಲ ಪರಿಕರದಿಂದೆ |
ತೇಜದಿಂದೊಪ್ಪುವಗ್ನಿಗಳಿಂದೆ ಭೂಸುರ ಸ |
ಮಾಜದಿಂ ದಖಿಳ ಋತ್ವಿಕ್ಕುಗಳ ಬಹುವಿಧದ ಮಂತ್ರಘೋಷಂಗಳಿಂದೆ ||
ರಾಜಿಸುವ ನುತ ಯಜ್ಞಶಾಲೆಯೊ ಳುದ್ಭವರಂ |
ಯಾಜಮಾನ್ಯದೊಳಿಸೆವ ಸಿರಿಯಂ ವೃಕೋದರ ಸ |
ರೋಜಾಂಬಕಾದಿ ಬಾಂಧವರೊ ಳಾವೃತನಾಗಿರ ಲ್ಕಾಣೆ ನಕಟೆಂದನು || ||೮||

ಪೇಳಲೇನಹುದಿಸ್ಸು ಬಭ್ರುವಾಹನನೊಡನೆ ।
ಕಾಳಗಂ ಗುಡುವೆನಾಂ ಕುಲಕೆ ನೀಂ ಮಗನೊರ್ವ ।
ಬಾಳುವೆ ಗೆಡಿಸಚೇಡ ಗಜಪುರಕೆ ಪೋಗಿ ಮುರಹರ ಧರ್ಮನಂದನರ್ಗೆ ॥
ಕಾಳಾದ ರಾಜಕಾರ್ಯ ಸ್ಥಿತಿಯ ನೆಚ್ಚರಿಸು ।
ಕೇಳೆನ್ನ ಮಾತನೆಂ ದರ್ಜುನಂ ನುಡಿಯಲ್ಕೆ ।
ತಾಳಬೆ ವೃಷಧ್ವಜಂ ಕೋಪದಿಂ ಪಾರ್ಥಂಗೆ ಕೈಮುಗಿಯು ತಿಂತೆಂದನು ॥ ॥೯॥
ಒಳ್ಳಿತಿದು ತಾತ ನಿನ್ನಂ ಬಿಟ್ಟು ನಾಂ ಪೋಗ ।
ಲುಳ್ಳವನೆ ಗಜನಗರಿ ಗಕಟ ರಣದೊಳ್ಜೀವ ।
ಗಳ್ಳನಾದೊಡೆ ಮತ್ಪಿತಾಮಹಂ ಬೀಳದಿರ್ಪನೆ ಗಗನ ಮಾರ್ಗದಿಂದೆ ॥
ಹೊಳ್ಳಿದೆಯ ಹೊರಬಿಗರೊ ಳೆಂಬುದೀ ನುಡಿಗಳಂ ।
ತಳ್ಳಂಕದಿಂದೆ ನೀ ನಾಹವದೊಳಿಂತೆಣಿಕೆ ।
ಗೊಳ್ಳಲೇಕಿವನ ಬಿಂಕವ ನೀಗ ಮುರಿವೆನೆನ್ನಂ ಕಳುಹಿ ನೋಡೆಂದನು ॥ ॥೧೦॥
ತಂದೆಗೋಸುಗ ಮಾಳ್ದ ನವಸರಕೆ ಗೋ ನಿಮಿ ।
ತ್ತಂ ದೇವ ವಿಪ್ರಾರ್ಥ ಕಸುದೊರೆದೊ ಡಾತಂಗೆ ।
ಸಂದೇಹಮಿಲ್ಲದಾದಪುದು ಗಡ ಕೈವಲ್ಯಮಾಗಳಾ ನೆಂತು ರಣಕೆ ॥
ಹಿಂದುಗಳೆದಪೆ ನೇಕಪತ್ನಿಯಾಗಿಹ ಸತಿಯ ।
ಮುಂದಕೈದುವೆನೆಂತು ಭಾನುಸಂಭವನ ಸುತ ।
ನೆಂದೆನಿಸಿಕೊಂಬೆ ನೆಂತನ್ನೃತಮಂ ನುಡಿವನ ಲ್ಲಾಹವಕೆ ಕಳುಹೆಂದನು ॥ ॥೧೧॥
ಮಂದಿಸಹಿತೀ ಬಭ್ರುವಾಹನಂ ಬರಲಿ ನಾ ।
ನಿಂದು ರಣದೊಳ್ನಿನ್ನಕಂಗಳ್ಗೆ ಹಬ್ಬಮಂ ।
ತಂದಲ್ಲದಿರೆನೆಂದು ವೃಷಕೇತು ಬಲ್ಪಿಂ ಧನಂಜಯಂಗೆರಗಿ ಬಳಿಕ ॥
ಪೊಂದೇರ್ಗಡರ್ದು ನಿಜಚಾಪಮಂ ತುಡುಕಿ ನರ ।
ನಂದನನ ಸಮ್ಮುಖಕೆ ನಡೆತಂದು ನುಡಿದ ನೆಲೆ ।
ಮಂದಮತಿ ಪಾರ್ಥಸುತನೆ ಹೊಡೆ ನಿಲ್ಕರ್ಣಜಂ ತಾನೆನುತೆ ತೆಗೆದೆಚ್ಚನು ॥ ॥೧೨॥
ಲೇಸನಾಡಿದೆ ಕರ್ಣಸುತನಾದೊ ಡೊಳ್ಳಿತೈ ।
ವಾಸಿಯುಳ್ಳವನಪ್ಪೆ ಫಲುಗುಣಂ ಕೊಂದನ ।
ಲ್ಲಾ ಸಮರದೊಳ್ನಿನ್ನ ತಾತನಂ ತನಗೆ ನೀನಿದಿರಪ್ಪುದುಚಿತಮೆನುತೆ ॥
ಸೂಸಿದಂ ಕಣೆಗಳಂ ಬಭ್ರುವಾಹನ ನದಂ ।
ನೇಸ ರಣುಗನ ಸುತಂ ಬರಿಕೈದು ಪಾರ್ಥಿಯಂ ।
ಗಾಸಿಮಾಡಿದ ನಂಬುಗಳ ಮಳೆಯೊಳವ ನೀತನಂ ಮುಸುಕಿದಂ ಶರದೊಳು ॥ ॥೧೩॥
ಇಸುವ ರೆಚ್ಚಂಬುಗಳ ನೆಡೆಯೊ ಳಿಕ್ಕಡಿಗೈವ ।
ರಿಸುವ ರೋರೊರ್ವರಂ ಗಾಯಗಾಣಿಸಿ ಕೆರ ।
ಳ್ದಿಸುವ ರಶ್ವ ಧ್ವಜ ವರೂಥ ಸಾರಥಿಗಳಂ ತರಿದಿಳೆಗುರುಳ್ಚಿ ಕೂಡೆ ॥
ಇಸುವ ರೊಮ್ಮೆಮ್ಮೆ ಮೈಮರೆದು ಜೇತರಿಸಿ ಕೊಂ ।
ಡಿಸುವ ರಾಗ್ನೇಯಾದಿ ದಿವ್ಯಾಸ್ತ್ರ ನಿಕರದಿಂ ।
ದಿಸುವ ರಿಂತವರವರ ಸರಿಬರಿಗೆ ಬಾಣಂಗಳಂ ಕರ್ಣ ಪಾರ್ಥಸುತರು ॥ ॥೧೪॥

ಅಂದಾದ ಕರ್ಣಾರ್ಜುನರ ಕಾಳಗವ ನವರ |
ನಂದನರ್ಕಿನ್ನೈಸು ತಿರ್ದರೆನೆ ಶಸ್ತ್ರಾಸ್ತ್ರ |
ದಿಂದೆ ಶರಸಂಧಾನ ಸತ್ವ ಸಾಹಸ ಲಕ್ಷ್ಯ ಲಳಿ ಲಾಘವಂಗಳಿಂದೆ ||
ಮುಂದು ವರಿ ವಗ್ಗಳಿಕೆ ಮುಳಿಸು ಮೂದಲೆ ಮೋಡಿ
ಬಂದಿ ಭಾರಣೆ ಬಿಂಕ ಬೆಸೆ ಚಮತ್ಕಾರಂಗ |
ಳಿಂದೆ ಸಮನಾಗೆ ಕೈದೋರಿದಂ ವೃಷಕೇತು ಬಭ್ರುವಾಹನನ ಮೇಲೆ || ||೧೫||

ಬಳಿ ಕಖಿಳ ದಿವ್ಯಾಸ್ತ್ರದಿಂದೆ ವೃಷಕೇತು ವೆ |
ಗ್ಗಳಿಸೆ ಪಾಡಬ ವೈಷ್ಣವಂಗಳಿಂ ಪರಿಹರಿಸಿ |
ಕೊಳು ತರ್ಜುನಾತ್ಮಜಂ ಕೆರಳ್ದವನ ನೆಚ್ಚೊಡುಚ್ಚಳಿಸಿ ತಚ್ಛೋಣಿತವನು ||
ತ್ತೊಳೆಯ ಲಿಳಿದುವು ಭೋಗವತಿಯು ಜಲ ಕಂಬುಗ |
ಳ್ಮಳಿದು ಕರ್ಣಜ ನಿಸಲ್ಕಾತನಂ ಸುತ್ತಿಸಿತು |
ಸುಳಿಗಾಳಿ ಯಂದದಿಂ ಕಣೆಗಳರೆಗಳಿಗೆ ಪರಿಯಂತರಂ ಸಂಗರದೊಳು || ||೧೬||

ಮತ್ತೆ ಮೊಡಕರಿಸಿ ಪಾರ್ಥನ ಸೂನು ರೋಷಾಗ್ನಿ |
ಪೊತ್ತಿ ಕಿಡಿಗೆದರಿ ದಿವ್ಯಾಸ್ತ್ರಮಂ ಪೂಡಿ ತೆಗೆ |
ಯುತ್ತಿಲವೊ ಕರ್ಣಸುತ ನೀನೆ ಬಿಲ್ಲಾಳಪ್ಪೆನಾಂ ಪೊಣರ್ದತಿಬಲರೊಳು ||
ಚಿತ್ತಚಂಚಲಮಿಲ್ಲ ದೀಕ್ಷಿಸೆನು ತೆಚ್ಚೊಡೆರ್ದೆ |
ಗೊತ್ತಿ ತಿರಮಂ ಕೂಡಿ ಪಿಡಿದಾಗಸಕೆ ಬಾಣ |
ಮೆತ್ತಿಕೊಂಡೊಯ್ದು ವೃಷಕೇತುವಂ ತಿರುಗಿಸಿತು ದೆಸೆದೆಸೆಗಳಂ ನಭದೊಳು || ||೧೭||

ಭಾನುಸುತಸೂನುವಂ ನಭಕೆತ್ತಿ ಕೊಂಡೊಯ್ದು |
ನಾನಾದೆಸೆಗೆ ತಿರುಗಿಸಿತು ಮುಹೂರ್ತತ್ರಿತಯ |
ಮೀನೆಲಕೆ ಕೆಡಹದೆ ಮಹಾಶರಂ ಕೆಳಗೆ ಬಿಲ್ವಿಡಿದು ಸನ್ನದ್ಧರಾಗಿ ||
ಈಸರನು ಪೂಬಭ್ರುವಾಹನ ನನುಮೊಡಸ್ಸೈದೆ |
ಬಾನೆಡೆಯೊಳಾತಂ ಪಿತಾಮಹಂ ಗಘಿನಮಿಸಿ |
ಕಾನನ ಸರಿತ್ಸಾಗರಂಗಳೊಳ್ಕೀಳದಿಳಿದಂ ಮಣಿಪುರದ ಮಹಿಯೊಳು || ||೧೮||

ಮೊಗಮೆತ್ತಿ ಫಲುಗುಣಂ ನೋಡುತಿರೆ ಕರ್ಣಜಂ |
ಗಗನದಿಂ ಬಿದ್ದಿಳೆಗೆ ಪೊಡೆಚಂಡಿನಂತೆ ಪುಟ |
ನೆಗೆದೆದ್ದು ರೋಷದಿಂ ಘುಡುಘುಡಿಸಿ ಪಾರ್ಥಸುತನಂ ಪಚಾರಿಸಿ ಕನಲ್ದು ||
ತೆಗೆ ದಿಸಲ್ಬಾಣಂಗ ಳಶ್ವ ಸಾರಥಿ ಪತಾ |
ಕೆಗಳಿಂ ದಮರ್ದ ರಥ ಸಹಿತ ಚಿತ್ರಾಂಗದೆಯ |
ಮಗನಂ ನಭಸ್ಥಳಕೆ ಕೊಂಡಡರ್ದುವು ನಾಕ ಪರಿಯಂತ ಮಾಕ್ಷಣದೊಳು || ||೧೯||

ನಭದೊಳತ್ಯುಗ್ರದಿಂ ತಪಿಸುವ ದಿವಾಕರ |
ಪ್ರಭೆಯಿಂ ದುರಿಯೆ ರಥಂ ಬಿದ್ದನುರ್ವಿಗೆ ಪಾರ್ಥ |
ರಭಸದಿಂ ಪೂರ್ವದೊಳಡರ್ದ ಸಂಪಾತಿ ಗರಿ ಸೀದಿಳೆಗೆ ಬೀಳ್ವಂತೆ ||
ತ್ರಿಭುವನಕೆ ಪೊಸತಾಗೆ ಕರ್ಣಜಂ ಮತ್ತೆ ರಿಪು |
ಸುಭಟನಂ ನೂರು ಬಾಣದೊಳೆಚ್ಚು ದಿವಸ ವ |
ಲ್ಲಭನ ಮಂಡಲದಲ್ಲಿಗೈದಿಸಿ ಪಚಾರಿಸಿ ಜರೆದು ಕೂಡೆ ಬೊಬ್ಬಿರಿದನು || ||೨೦||

ಬೊಬ್ಬಿರಿವ ಕರ್ಣಜನ ದನಿಗೇಳ್ದು ರೋಷದಿಂ ।
ದಬ್ಬರಿಸಿ ಗಗನದೊ ಳ್ತನ್ನ ರಥಮಂ ಬಿಟ್ಟು ।
ಹೆಬ್ಬೆಟ್ಟದಂ ತಿವನ ಮಸ್ತಕದ ಮೇಲೆ ಬೀಳ ಲ್ಕಿವಂ ಕನಲ್ದು ಕೂಡೆ ॥
ಉಬ್ಬಿ ಪುಟ ನೆಗೆದೆದ್ದು ಸಾಯಕದೊ ಳೆಚ್ಚವನ ।
ನೆಬ್ಬಿಸಿದ ನಾಗಸಕೆ ಮತ್ತೆ ಭೀಭತ್ಸುಕಂ ।
ಡೊ ಬ್ಬೆರಳನಲ್ಲಾಡಿ ಪೊಗಳಲ್ಕೆ ವೃಷಕೇತು ಫಲುಗುಣಂ ಗಿಂತೆಂದನು ॥ ॥೨೧॥

ತಾತ ನೋಡಂದು ರಣದೊಳ್ತೀರ ಗಾಲಿ ವಸು ।
ಘಾ ತಳದೊಳ ಳ್ದೊ ಡಾಯತವಾಗಿ ನಿಲ್ವಿಸಂ ।
ಘಾತಿಸದಿರೆಂದು ನಿನ್ನೊಡನೆ ನಮ್ಮಯ್ಯನಾಡಿದ ವೊಲಾಡದೆ ಸುಮ್ಮನೆ ॥
ಈತನೆನ್ನಸ್ತ್ರದಿಂ ಗಾಸಿಯಾದಪನೆಂದು ।
ಮಾತಾಡು ವನಿತರೊ ಳ್ಮತ್ತಿವನ ಮೇಲೆ ಬಂ ।
ದಾತಂ ಬಿಳ ಲ್ಕೊಂದ ರಿರ್ವರುಂ ಚೇತರಿಸಿಕೊಂಡು ಧುರ ಕನುವಾದರು ॥ ॥೨೨॥

ಮಣಿವರೂಥಾ ರೂಢರಾಗಿ ಬಳಿಕಿರ್ವರುಂ ।
ರಣರಂಗದೊ ಳ್ಕಡುಗಿ ಕಾದಿದ ರ್ಕಾಯದೊ ।
ಳ್ಕಣೆಗಳಿಡಿಯ ಲ್ಖಂಡಮಂ ಕಚ್ಚಿ ಪಾರ ಲರುಣಾಂಬುಗ ಳ್ಕೋಡಿವರಿಯೆ ॥
ಪೊಣರ್ವ ರಂಬರ ಕಡ ರ್ದೋರ್ಮ್ಮ ಮೇದಿನಿ ಗಿಳಿದು ।
ಪೆಣಗುವ ರ್ಮತ್ತೊಮ್ಮೆ ನಭದೊಳಿ ರ್ದೊರ್ವ ರ್ಧ ।
ರಣಿಯೊಳಿರ್ದೊರ್ವ ನ್ನೆಲದೊಳೊರ್ವ ರಾಗಸದೊಳೊರ್ವ ರಿದಾರ್ಕಲಿಗಳು ॥೨೩॥

ಭೂಪ ಕೇಳಿಂತೈದುದಿನಮೈದೆ ಕಾದಿದ ।
ಚಾಪ ವಿದ್ಯಾ ಪ್ರವೀಣ ರ್ಬಳಿಕ ಪಾರ್ಥಜಂ ।
ಭಾಪುರೇ ವೃಷಕೇತು ನೀನೆ ಪಟುಭಟ ನಪ್ಪೆ ಲೋಕದೊ ಳ್ನಾಕೆದೆಯೊಳು ॥
ಶ್ರೀಪತಿ ಧ್ಯಾನಮಂ ಮಾಡೆನುತೆ ತೆಗೆ ದಿಸ ।
ಲ್ಕೋಪದಿಂ ದಾ ಕಣೆಯ ನಿವ ನರಿ ವನಿತರೊ ಳ್ಪ ।
ತಾಪದಿಂ ಕವ ಲಂಬನೆಚ್ಚು ಕತ್ತರಿಸಿದಂ ಕರ್ಣಜನ ಕಂಧರವನು ॥ ॥೨೪॥

ಕಡುಗಿ ಕವಲಂಬುಗಿಯೆ ಕರ್ಣಜನ ತಲೆ ನಭಕೆ ।
ಸಿಡಿದು ಕಂತುಕದಂತೆ ಬಂದು ಬಿದ್ದುದು ಪಾರ್ಥ ।
ನಡಿಗೆ ನಾರಾಯಣ ಮುಕುಂದ ಮಾಧವ ಯೆನುತೆ ಮುಂಡ ವತಿವೇಗದಿಂದೆ ॥
ನಡೆದು ರಣದೊಳ್ಮಣಿಪುರೇಂದ್ರನಂ ಪೊಯ್ದಿಳೆಗೆ ।
ಕೆಡಹಿ ಪಡೆಯೆಲ್ಲಮಂ ಸದೆ ದುರುಳ್ದುದು ನರಂ ।
ಪಿಡಿ ದೆರಡು ಕೈಗಳಿಂ ದಾ ಶಿರವ ನೆತ್ತಿಕೊಂಡೀಕ್ಷಿಸು ತಳಲ್ದನಂದು ॥ ॥೨೫॥

ಬಿಟ್ಟಕಂಗ ಳ್ಬಿಗಿದ ಪುರ್ಬುಗ ಳ್ಪೆರೆ ನೊಸಲ ।
ಬಟ್ಟು ಸೂಸಿದ ಕುರು ಳ್ಥಳಥಳಿಪ ಕುಂಡಲಂ ।
ಪುಟ್ಟು ದುಪ್ಪುಳ್ಮೀಸೆ ಪೊಳೆವ ಲ್ನಗುವ ಮೊಗಂ ಕಳಕಳಿಸೆ ಕಳೆಯುದಿಂದೆ ॥
ಕಟ್ಟುಗ್ರವಾಗಿರ್ದ ತನಿ ವೀರ ರಸದೊಂದು ।
ಗಟ್ಟಿಯೆನೆ ತೋರ್ಪ ಕರ್ಣಜನ ತಲೆಯುಂ ನರಂ ।
ನಿಟ್ಟಿಸುತೆ ಪಣೆಯಂ ಪಣೆಯೊಳಿಟ್ಟು ಪೊಸೆದು ಚುಂಬಿಸಿ ಕಂಬನಿ ಯೊಳಾಳ್ದನು ॥೨೬॥

ಮಗನೆ ನೀನೆಂತು ಮಡಿದೈ ಕೃಷ್ಣರಾಯಂಗೆ ।
ಸೊಗಸಾದುದೇ ನಿನ್ನಳಿವು ಧರ್ಮತನಯಂಗೆ ।
ಮೊಗದೋರ್ಪ ಸುತರುಂಟೆ ನೀ ನಿಲ್ಲದೇಸೆಂ ದಳಲ್ವಳೈ ಕುಂತಿ ನಿನಗೆ ॥
ಪಗೆಯೆಂದು ಕೊಂದೆ ವಗ್ರಜನ ನೆಮಗಾತನಿಂ ।
ಮಿಗಿಲೆಂದು ಕಂಡಿಹೆವಲೈ ನಿನ್ನ ನೈವರ್ಗೆ ।
ಸುಗತಿ ಗುಡುವಾತ್ಮಭವ ರಿರ್ದಪರೆ ಪೇಳೆಂದು ಹಳವಳಿಸಿದಂ ಪಾರ್ಥನು ॥ ॥೨೭॥

ಸಾಲದೆ ಮಹಾಹವದೊ ಳಭಿಮನ್ಯು ಮಡಿದಳ ।
ಲ್ಬಾಲಕಂ ನೀನಿರ್ದೊಡೇನಕಟ ಕಣ್ಣ ಮುಂ ।
ದಾಲಿಸೈ ತನ್ನ ಮಾತಂ ನುಡಿಸಲಾಗದೇ ನೋ ಡೆನ್ನ ನಾದರಮೊಳು ॥
ಪಾಲಿಸೈ ತುರಗಮಂ ಮಂದಿಯಂ ನಡೆಸಿನ್ನು ।
ಮೇಲ ಉದ್ಯೋಗವಾವುದು ಕಂದ ನಿನ್ನ ಗುಣ ।
ಶೀಲಮಂ ಭೂಪನೊ ಳ್ಬಣ್ಣಿಪ ವೃಕೋದರಂ ಗೇನೆಂಬೆ ನುಸಿರೆಂದನು ॥ ॥೨೮॥

ಮೂಗಿಲ್ಲದಾನನಂ ಲಿಂಗಮಿಲ್ಲದ ಪೀಠ ।
ಮಾಗಿರದೆ ಪಾಂಡವರ ಸಿರಿಯಿನ್ನು ನೀ ನಿಲ್ಲ ।
ದಾಗ ನಿ ನ್ನದಟಿಂದೆ ಯೌವನಾಶ್ವನುಸಾಲ್ವರ ಸಖ್ಯಮಾದುದೆಮಗೆ ॥
ಯಾಗಮಹು ದರಸಂಗೆ ನಿನ್ನಿಂದೆ ನೀಂ ಪದ್ದು ।
ಕಾಗೆಗೊಡಲಂ ಕೊಟ್ಟು ರಣದೊ ಳೆನ್ನಂ ಬಿಟ್ಟು ।
ಪೋಗ ಲಪ್ಪುದೆ ತಂದೆ ವೃಷಕೇತು ಪೇಳೆಂದು ಮರುಗಿದಂ ಸವ್ಯಸಾಚಿ ॥ ॥೨೯॥

ಈ ಪರಿಯೊ ಳಾ ವೃಷಧ್ವಜನ ತಲೆ ವಿಡಿ ದವನ ।
ರೂಪ ಗುಣ ಶೀಲಮಂ ನೆನೆ ನೆನೆದು ಶೋಕ ಪ್ರ ।
ಲಾಪದಿಂ ನರ ನಳಲುತಿರ ಲತ್ತ ಕರ್ಣಸುತ ನಟ್ಟಿ ಬಂ ದಪ್ಪಳಿಸಲು ॥
ಭೂಪಿಸಿ ಧರೆಗೆ ಬಿದ್ದೊಡನೆ ಮೂರ್ಛೆ ತಿಳಿದೆದ್ದು ।
ಚಾಪದ ಕೊನೆಗೆ ಮೊಗವನಿ ಟ್ಟೋರೆಯಾಗಿ ನಿಂ ।
ದಾ ಪಾರ್ಥನಂ ನೋಡಿ ನಸುನಗುತೆ ಚಿತ್ರಾಂಗದೆಯ ತನುಜನಿಂತೆಂದನು ॥ ॥೩೦॥

ಎಲೆ ಪಾರ್ಥ ವೈಶ್ಯಸಂಭವ ರಾವಹೆವು ನಿಮ್ಮ ।
ಬಲಸಮಾಜದೊಳಂಬುಗಳ ಪಸರಮಂ ಹರಹಿ ।
ಗೆಲವಿ ನಗ್ಗದ ಲಾಭಮಂ ಪಡೆದೆ ವದಟರ ಶಿರಂಗಳಂ ಕೊಂಡೆ ವರಸಿ ॥
ಕಲಿಗ ಳೈತಂದು ಜೀವಕೆ ಸಂಚಕಾರಮಂ ।
ಸಲೆ ಬೇಡಿದೊಡೆ ಕೊಟ್ಟೆ ವಿಜ್ಜೆಯುಳ್ಳೊಡೆ ನಿನ್ನ ।
ತಲೆಯ ಬೆಲೆಗಿದೆ ಸಾಹಸ ದ್ರವ್ಯಮೆನ್ನೊಳೆಂ ದಾರ್ಜುನಿ ಪಚಾರಿಸಿದನು ॥ ॥೩೧॥

ಇವರೊಳೇ ನಹುದಿನ್ನು ವೀರನೀ ಕರ್ಣಸುತ ।
ನಿವನ ತಲೆಯಂ ಸಮರ್ಪಿಸು ಮಹಾದೇವಂಗೆ ।
ತವೆ ರುಂಡಮಾಲೆಯೊ ಳ್ಪೂಜ್ಯ ಮಾಗಿಪು ದೀಶ್ವರಪ್ರೀತಿಯಹುದು ನಿನಗೆ ॥
ಶಿವನಂದು ಪಾಶುಪತ ಬಾಣಮಂ ಕೊಟ್ಟು ದಿ ।
ಲ್ಲವೆ ನಿಜಸ್ವಾಮಿಯಂ ಮರೆದಪರೆ ಸಾಕಿದರ ।
ಬವಣೆಯೇತಕೆ ನಮಗೆ ಕಾದುನೆಯೊ ತುರಗಮಂ ಬಿಟ್ಟಪೆಯೊ ಪೇಳೆಂದನು ॥೩೨॥

ನೋಡಿದಂ ತಿರುಗಿ ಕಣ್ಣಾಲಿಗ ಳ್ಕೆಂಪಡರೆ ।
ಮಾಡಿದಂ ಕೋಪಮುಂ ಧೈರ್ಯದಿಂ ದಳಲ ನೀ ।
ಡಾಡಿದಂ ಕರ್ಣಜನ ಶಿರವನ ಲ್ಲರಿಸಿದಂ ಕೊಂಡ ಸುರು ಕಾರ್ಮುಕವನು ॥
ತೀಡಿದಂ ಜೇಗೈದು ತಿರುವಿನೊ ಳ್ಬಾಣಮಂ ।
ಪೂಡಿದಂ ತೆಗೆದೆಚ್ಚು ರುಧಿರ ಪ್ರವಾಹಮಂ ।
ತೋಡಿದಂ ಬಭ್ರುವಾಹನನ ಸರ್ವಾಂಗದೊ ಳ್ಕಲಿಪಾರ್ಥ ನಾಕ್ಷಣದೊಳು ॥ ॥೩೩॥
ಮೈಸಿರಿ ಯುಳಲ್ಗಳಿವು ಲೇಸಾಯ್ತು ಪಗೆಯ ಮಗ ।
ನೈಸಲೇ ಕರ್ಣಜಂ ಸಾಕಿದೇತಕೆ ಬರಿದೆ ।
ನೈಸಿಕದ ಬಾಣಪ್ರಯೋಗಂಗ ಳಿಂದ್ರಕೀಲದೊ ಳುಮಾಕಾಂತನಿಂದೆ ॥
ಕೈಸಾರ್ದ ಸಾಯಕವ ನುಗಿಯೆನುತೆ ಪಾರ್ಥನಂ ।
ಪೈಸರಿಸ ದೆಚ್ಚನೀ ಬಭ್ರುವಾಹನನ ಕೈ ।
ಗೈಸದು ನಭೋವಲಯಮೆನೆ ಕವಿದು ವಂಬುಗ ಳ್ದೇವತತಿ ಬೆರಗಾಗಲು ॥ ॥೩೪॥
ಮುತ್ತುವು ಮುಸುಳ್ವಂತೆ ಸರನಾರ್ದು ತೆಗೆ ದಿಸ ।
ಲ್ಪೆತ್ತುವು ಸರ ಳ್ಗಳೊಂದೊಂ ದಯುತ ನಿಯುತಮಂ ।
ಪೊತ್ತುವು ನಭಸ್ಥಳಕೆ ಕೊಂಡು ರಿಪುಸೇನೆಯಂ ತಾರೆಗಳ ನುದಿರಿಸಿದುವು ॥
ಕಿತ್ತುವು ಕುಲಾದ್ರಿಗಳ ನಾಗಸದ ಬಟ್ಟೆಯಂ ।
ಕೆತ್ತುವು ದಿಗಂತಮಂ ತುಂಬಿದುವು ಬಾಣಂ ಗ ।
ಳಿತ್ತುವು ಜಗತ್ತ್ರಯಕೆ ಕಂಪಮಂ ಪಿಂ ತೆಂದುಮಿಲ್ಲಿದು ವಿಚಿತ್ರಮೆನಲು ॥ ॥೩೫॥
ಕೊರೆದು ವಂಗೋಪಾಂಗಮಂ ಪಾರ್ಥ ನಂಬುಗ ।
ಳ್ತೆರೆದ ಜಾಳಾಂಧ್ರದಂತಾ ಯ್ತುಗಿದ ಬಟ್ಟೆ ಗ ।
ಳ್ಸುರಿವ ಪೆರ್ಮಳೆಯಿಂದೆ ನನೆದ ಜಾದಿನ ಗಿರಿಯೊಳಿರ ದಿಳಿವ ಕೆಂಬೊನಲ್ಗಳ ॥
ತೆರ ದೊಳೆಸೆದುವು ರಕ್ತಧಾರೆಗ ಳ್ಗಾಯ ದೊ ।
ಳ್ಮರೆದ ನೊಡಲಂ ನಿಮಿಷಕೊಡನೆ ತರಹರಿಸಿದಂ ।
ಜರೆದ ನರ್ಜುನನಂ ರಣಾಗ್ರದೊಳ್ಮೂದಲಿಸಿ ಬಭ್ರುವಾಹಂ ಕನಲ್ದು ॥ ॥೩೬॥
ಕರ್ಣ ಭೀಷ್ಮ ದ್ರೋಣರಂ ಗೆಲ್ದು ಕೊಟ್ಟಂ ಸು ।
ಪರ್ಣಧ್ವಜಂ ನಿನಗೆ ಕರುಣದಿಂ ಕಾದಿಪ ನ ।
ಪರ್ಣಾರ್ಥಪಂ ನಿನ್ನೊ ಳಗ್ಗಳಿಕೆ ಪಿರಿದೆಂದು ಮೇದಿನಿಯೊ ಳರಿಯದವರು ॥
ವರ್ಣಿಸುವರೆಂದು ಜರೆತಿಹೆ ತನ್ನ ಸಮರಮಂ ।
ನಿರ್ಣೈಸಿದೊಡೆ ನೀರ ನಹುದೆಂದು ಬಾಣಮಯ ।
ವರ್ಣವ ಮಿದೆತ್ತಣಿಂ ಮೇರೆವಪ್ಪಿದು ದೆನ ಲ್ಬಭ್ರುವಾಹನ ನೆಚ್ಚನು ॥ ॥೩೭॥
ಕೆತ್ತಿದುವು ದಿಕ್ತಟದ ಭಿತ್ತಿಗಳ ನದ್ರಿಗಳ ।
ನೆತ್ತಿದುವು ಧರೆಯ ನುಚ್ಚಳಿಸಿ ಕೂರ್ಮನ ಬೆನ್ನ ।
ನೊತ್ತಿದುವು ಕಲಕಿದುವು ಸಾಗರವ ನಾದಿತ್ಯಮಂಡಲವ ನಂಡಲೆದುವು ॥
ಮುತ್ತಿದುವು ಬಾಂದಳವ ನೆಲ್ಲಮಂ ಕೆಲಕೆಲವು ।
ಪತ್ತಿದುವು ಪರಿದು ನಿಳಿದುವು ಸಕಲ ಲೋಕಕ್ಕೆ ।
ಬಿತ್ತಿದುವು ಭೀತಿಯಂ ಬಭ್ರುವಾಹನನ ಶರಜಾಲ ಮದನೇ ವೇಳ್ವೆನು ॥ ॥೩೮॥

ಹಾರಿಸಿತು ರಥಮಂ ತುರಗಮುಂ ರುಧಿರಮಂ ।
ಕಾರಿಸಿತು ಸಾರಥಿಯ ಜೀವಮಂ ಸುರಲೋಕ ।
ಕೇರಿಸಿತು ಛತ್ರ ಚಾಮರ ಪತಾಕಾಳಿಯಂ ಕೆಂಗರಿಯ ಗಾಳಿಯಿಂದೆ ॥
ತೂರಿಸಿತು ಟೆಕ್ಕೆಯದ ಮೇಲೆ ಹನುಮಂತನಂ ।
ಚೀರಿಸಿತು ಪಾರ್ಥನ ಶರೀರದೊಳ್ ಬಟ್ಟೆಯಂ ।
ತೋರಿಸಿತು ಬಭ್ರುವಾಹನನ ಶರಸಂಕುಲಂ ಫಲುಗುಣಂ ಕಂಪಿಸಲ್ಕೆ ॥ ॥೩೯॥

ಮತ್ತೆ ಸಂಗರದೊಳನ್ಯೋನ್ಯ ಮವರಿರ್ವರ್ಗೆ ।
ಚಿತ್ತದೊಳ್ಮಸುಳಿತು ಘನಕ್ಷಾತ್ರ ತಾಮಸಂ ।
ಪೊತ್ತಿ ತತಿರೋಷಾಗ್ನಿ ಬಳಿಕೊರ್ವರೊರ್ವರಂ ಜೈಸು ವಭಿಲಾಷೆಯಿಂದೆ ॥
ತೆತ್ತಿಸಿದ ಕಣೆಗಳಿಂ ಮೈಗಳೈಮಿಗದೊಲಿರೆ ।
ನೆತ್ತರೊರತೆಗಳಿಂದೆ ತನುಗಳುರೆ ಪೂತ ಮು ।
ಳ್ಮುತ್ತಗದೊಲಿರೆ ತಂದೆ ಮಕ್ಕಳೆಚ್ಚಾಡಿದ ರ್ನಿಚ್ಚಟ ದೊಳಚ್ಚರಿಯೆನೆ ॥ ॥೪೦॥

ಜನಪ ಕೇಳ್ಜಾಹ್ನವಿಯ ಶಾಪದಿಂ ಬಳಿಕ ಪಾ ।
ರ್ಥನ ಸತ್ವಮೆಳದಾಗಿ ಬರೆ ಕಂಡು ಬಭ್ರುವಾ ।
ಹನ ನೆಂದನೆಲೆ ಧನಂಜಯ ತನ್ನ ಜನನಿ ಚಿತ್ರಾಂಗದೆ ಪತಿವ್ರತೆ ಕಣಾ ॥
ಅನಿಮಿತ್ತಮಾಕೆಯಂ ಪಳಿದ ಕಾರಣದಿಂದೆ ।
ನಿನಗೆ ಕೈಗುಂದುತಿದೆ ಸಾಕಿನ್ನು ಕೃಷ್ಣನಂ ।
ನೆನೆ ಮರುಳೆ ಮುರಹರನ ಸಾರಥ್ಯಮಿಲ್ಲದಾರಂ ಗೆಲ್ದೆ ಹೇಳೆಂದನು ॥ ॥೪೧॥

ಕ್ಷೋಣಿಗೋಸುಗ ಕೊಂದೆ ನೀನಂದು ಕರ್ಣನಂ ।
ಮೇಣವನ ತನಯನ ನೆಳಲ್ಗೆ ಸೇರದೆ ಮನದ ।
ಕೇಣದಿಂದೆನ್ನ ಕೈಯಿಂದೆ ಕೊಲಿಸಿದೆ ಸಾಕು ಹಗೆ ಹರಿದುದಿನ್ನು ನಿನಗೆ ॥
ಪ್ರಾಣಮಂ ಕಾದುಬಿಡುವೆಂ ಪೋಗು ಬಿಲ್ಲೊಳಲ್ ।
ತ್ರಾಣಮುಳ್ಳೊಡೆ ನಿಂದು ಚಿತ್ತದೊಳ್ನೆನೆ ಚಕ್ರ ।
ಪಾಣಿಯುಂ ಬಲಮಪ್ಪುದೆಂದು ಜರೆದಂ ಬಭ್ರುವಾಹನಂ ಫಲುಗುಣನನು ॥ ॥೪೨॥

ಹೂಣೆಹೊಕ್ಕಿರಿದು ತಾಂ ಪಗೆವನಂ ಗೆಲ್ದೊಡಂ ।
ಮಾಡದೆ ರಣಾಗ್ರದೊಳ್ಮಡಿದೊಡಂ ಕ್ಷತ್ರಿಯ ।
ರ್ಗೂಣೆಯಮೆ ಕರ್ಣನಂ ಕೊಂದೊಡೇಗವನ ಸುತ ನಳಿದೊಡೇ ನಾಹವದೊಳು ॥
ಕ್ಷೀಣಬಲನೇ ತಾನಕಟ ನೀಂ ಸಮರ್ಥನೇ ।
ಕಾಣಬಹುದೆನುತೆ ಭೀಮಾನುಜಂ ಕೋಪದಿಂ ।
ಬಾಣಂಗಳಂ ಮಗನಮೇಲೆ ಕರೆಯಲ್ಕವಂ ಪರೆಗಡಿಯುತಿಂತೆಂದನು ॥ ॥೪೩॥

ಪ್ರೀತಿಯಿಂ ದ್ರೋಣ ನಿತ್ತಂಬುಗಳ್ಮನ್ಮಥಾ ।
ರಾತಿ ಮುಖ್ಯಾಮರ ರ್ಕೊಟ್ಟಬಾಣಂಗಳ ।
ಚ್ಚಾತಮಾದುವು ನಿನಗೆ ಮರುಳೆ ನಿನ್ನೊಡನಾಡಿ ಕೃಷ್ಣನಂ ಮರೆದೆಯಾಗಿ ॥
ಏತ ಕಾಹವ ಮಿನ್ನು ಸಾಕೆನಲ್ಫಲುಗುಣಂ ।
ಖಾತಿಯಿಂ ಮುಗು ಳಿಸಲ್ಕಾ ಬಭ್ರುವಾಹನಂ ।
ಘಾತಿಸಿದ ನಡಿಗಡಿಗೆ ಪಾರ್ಥನಂ ಜಾಹ್ನವಿಯ ಶಾಪದಿಂ ಕೈಗಿಡಲ್ಕೆ ॥ ॥೪೪॥

ಸುರನದಿಯ ಶಾಪದಿಂ ಮೋಹಿಸಿ ನರಂ ಮುಳಿದು ।
ಧುರದೊ ಳಾವಾವಂಬ ನಿಸುವ ನದನೆಲ್ಲಮಂ ।
ಪರಿಗಡಿದು ಕೋಪದಿಂ ಪೂಡಿದಂ ಬಭ್ರುವಾಹನಂ ತನ್ನ ಕಾರ್ಮುಕದೊಳು ॥
ನಿರುಪಮ ಜ್ವಾಲಾಮುಖದ ಕಾಮರೂಪ ದುರು ।
ತ್ತರ ವಡಬಶಿಖಿ ಯಂದ ದರ್ಧಚಂದ್ರಾಕೃತಿಯ ।
ಕರವ ನುತ್ಕೀರ್ಣ ಸ್ಫುಲಿಂಗ ಪ್ರಕರವ ನುಗ್ರಪ್ರಭಾ ಭೀಕರವನು ॥ ॥೪೫॥
ಅರ್ಕಾದಿ ಸರ್ವಗ್ರಹಂಗ ಳಿಂದ್ರಾದಿ ದೇ ।
ವರ್ಕ ಳಾಂಗಿರಸಾದಿ ಮುನಿಗಳೆಲ್ಲ ಮ್ಮರುಗಿ ।
ವರ್ಕರೆದು ವರುಣಾಂಬುವಂ ಮೇಘಮುದಿರಿ ತುಲ್ಕಾಪಾತ ಮಿಳೆನಡುಗಿತು ॥
ಶರ್ಕರಾವರ್ತಂ ಪ್ರವರ್ತಿಸಿತು ಪಾರ್ಥಜಂ ।
ಕರ್ಕಶದ ಬಾಣಮಂ ತೆಗೆ ದಿಸಲ್ಕಿಡಿಗಳ ಪೊ ।
ವರ್ಕವಿಯೆ ದೆಸೆದೆಸೆಗೆ ಭುಗಭುಗಿಸುವ ಜ್ವಾಲೆ ಮೇಲ್ವಾಯ್ದು ಬರುತಿರ್ದುದು ॥೪೬॥
ಅತ್ಯುಗ್ರಸಾಯಕಂ ಬರೆ ಪಾರ್ಥನಿದಿರಾಗಿ ।
ಪ್ರತ್ಯಸ್ತ್ರದಿಂ ದಿಸಲದಂ ಕೊಳ್ಳ ದೈತರ ।
ಲ್ಸತ್ಯಭಾಮಾಕಾಂತನಂ ಚಿಂತಿ ಪನಿತರೊ ಳ್ತೀವ್ರದಿಂ ಕೊರಳ ನರಿಯೆ ॥
ಅತ್ಯಧಿಕ ಕುಂಡಲದ ತಲೆ ಚಿಗಿದು ನಭದೊ ಳಾ ।
ದಿತ್ಯಮಂಡಲ ಮಿಳೆಗುರುಳ್ವಂತೆ ಮುನಿಗಣ ।
ಸ್ತುತ್ಯ ಕೇಶವ ಕೃಷ್ಣ ಯೆನುತೆ ಬಿದ್ದುದು ಕರ್ಣಸುತನ ಶಿರದೆಡೆಗೆ ಪೋಗಿ ॥೪೭॥
ಕಲಿವೃಷಧ್ವಜನ ಶಿರದೊಡನೆ ಕೂಡಿತು ನರನ ।
ತಲೆ ಕರ್ಣಜನ ಕಬಂಧವ ನಪ್ಪಿಕೊಂಡು ದಾ ।
ಫಲುಗುಣನ ಮುಂಡಮಿದನೆಲ್ಲರುಂ ಕಂಡು ಮರುಗಿದರಾಗ ಕರುಣದಿಂದೆ ॥
ಸಲವಿಂದೆ ಬೊಬ್ಬಿರಿದು ದಾ ಬಭ್ರುವಾಹನನ ।
ಬಲಮ್ಮೈದೆ ಮೊಳಗಿದುವು ವಾದ್ಯಂಗ ಳಾಹವದ ।
ಗೆಲವಿಂದೆ ಪುರಕೆ ತಿರುಗಿದನವಂ ವಂದಿಸಂದೋಹದ ಪೊಗಳ್ಕೆಯಿಂದೆ ॥ ॥೪೮॥
ತ್ರಿಜಗಂ ಮರುಗುವಂತೆ ಕಾರ್ತಿ ಕೈಕಾದಶೀ ।
ಕುಜವಾರ ದುತ್ತರಾನಕ್ಷತ್ರದಂದು ವಾ ।
ನಿಜಮಿತ್ರ ನಸ್ತಮಯ ಸಮಯದೊ ಳ್ಕೃಷ್ಣಯೆನು ತರ್ಜುನನ ತಲೆ ಬೀಳಲು ॥
ವಿಜಯೋತ್ಸವದೊ ಳ್ಪೊದಿದಂ ಬಭ್ರುವಾಹನಂ ।
ನಿಜಪುರಕೆ ಗುಡಿ ತೋರಣದೊ ಳೆಸೆಯೆ ಬಣ್ಣಿಸಲ್ ।
ಪ್ರಜೆಗ ಳಂಗನೆಯ ರಾರತಿ ಪುಷ್ಪ ದಧಿ ಲಾಜ ದೂರ್ವೆ ಯೊಳಿದಿ ರ್ಗೊಳಲ್ಕೆ ॥೪೯॥
ಮಿಗೆ ಜಯೋತ್ಸವದಿಂದೆ ಪೌರಜನ ದೊಸಗೆಯಿಂ ।
ಬಗೆಬಗೆಯ ಸಿಂಗರದ ಪೆಣ್ಗಳ ಸೊಡರ್ಗಳಿಂ ।
ನಗರ ಪ್ರವೇಶಮಂ ಮಾಡಿದಂ ಬಭ್ರುವಾಹನ ನಿತ್ತ ಲರಮನೆಯೊಳು ॥
ಸೊಗಸಿಂ ದುಲೂಪಿಸಹಿ ತಿರುತಿರ್ದ ಚಿತ್ರಾಂಗ ।
ದೆಗೆ ಬಂದು ಸುದತಿಯು ದ್ದೇವಿ ನೀನೇಂ ನೋಂತು ।
ಮಗನಂ ಪಡೆದೆಯೊ ನರನಂ ಕೊಂದು ಬರ್ಪ ನಾರತಿಗಳಂ ತರಿಸೆಂದರು ॥ ॥೫೦॥

ಮಾನಿನಿಯರಿಂತಾಗ ಚಿತ್ರಾಂಗದೆಗೆ ನಿನ್ನ ।
ಸೂನು ಕಲಿಪಾರ್ಥನಂ ಸಮರಮೊಳ್ಕೊಂದು ಸು ।
ಮ್ಮಾನದಿಂ ಪೈತಪ್ಪನೆಂದು ಪೊಗಳಲ್ಕೇಳಿ ಹಮ್ಮೈಸಿ ಬಿದ್ದಿಳೆಯೊಳು ॥
ಹಾ ನಾಥ ಕೆಟ್ಟೆನಕಟೆಂದು ಕಂಬನಿ ಯೊಳ ।
ಳ್ದಾನಾರಿ ದುಃಖಾರ್ತೆಯಾಗ ಲಂತಃಪುರದ ।
ಮೀನಾಕ್ಷಿಯರ್ಕೂಡೆ ರೋದಿಸಲ್ಪೆರ್ಚಿತು ವಿಷಾದರವ ಮರಮನೆಯೊಳು ॥ ||೫೧||
ರಾಜಾಲಯ ದ್ವಾರದೊಳ್ತೇರ ನಿಳಿದು ನೀ ।
ರಾಜನಾದಿಗಳಿಂ ದಿದಿರ್ಗೊಂಬ ಸಂಭ್ರಮದ ।
ರಾಜವದನೆಯರೊಳಗೆ ಚಿತ್ರಾಂಗದೆಯ ಶೋಕದಿಂದ ಮಾರ್ತೆಯರಾಗಿರೆ ॥
ಈ ಜಯೋತ್ಸವದೊ ಳಿಂತೀ ವಿಷಾದಧ್ವನಿ ವ ।
ಧೂಜನ ಕಿದೇಕೆನುತೆ ಪೊಕ್ಕ ನಂತಃಪುರವ ।
ನಾ ಜನನಿಯಂಗದಿರವಂ ಕಂಡು ಬೆರಗಾಗಿ ಪಾರ್ಥಸುತ ನಿಂತೆಂದನು ॥ ||೫೨||
ಅಪಜಯಂ ತನಗಾದುದಿಲ್ಲ ಸಂಗ್ರಾಮ ದೊ ।
ಳ್ವಿಪರೀತ ಮೇತ ಕಿಂತಾನಂದ ಕಾಲದೊ ।
ಳ್ಕುಪಿತಮುಖನಾಗಿ ತನ್ನಂ ಜರೆದೊ ಡರ್ಜುನನ ಶಿರವ ನರಿದೆಂ ಧುರದೊಳು ॥
ರಿಪುಭಯಂಕರ ಕರ್ಣತನಯಂಗೆ ಸಂಗರ ದೊ ।
ಳುಪಹತಿಯುನಿತ್ತೆಂ ಪ್ರಯಾಸದಿಂದದಕೆ ನೀಂ ।
ತಪಿಸಲೇಕೆಂದು ಕಣ್ಣೀರ್ದೊಡೆದು ಮಾತೆಯಂ ಸಂತೈಸ ಲಿಂತೆಂದಳು ॥ ||೫೩||
ಲೇಸುಮಾಡಿದೆ ಮಗನೆ ಪಗೆಯಾದನೇ ನರಂ ।
ವಾಸಿ ಬಂದುದೆ ನಿನಗೆ ಮತ್ಕಾಂತ ನಳಿದನೇ ।
ವಾಸವನ ಸೂನು ಮೃತನಾದನೇ ಧರ್ಮಾನುಜಂ ಪ್ರಾಣಮಂ ತೊರೆದನೆ ॥
ವಾಸುದೇವನ ಸಖಂ ಮಡಿದನೇ ನಿನ್ನಿಂದ ।
ದಾಸುರ ಪರಾಕ್ರಮದೊಳಾತ್ಮ ಪಿತೃಘಾತಮುಂ ।
ಹೇಸ ದೆಸಗಿದರುಂಟೆ ಸುಡಲಿ ಸುತರೇಕೆಂ ದಳಲ್ದಳಾ ಚಿತ್ರಾಂಗದೆ ॥ ||೫೪||
ಈ ಕರ್ಣಸೂತ್ರಮೀ ಕರ್ಣತಾಟಂಕ ಮೀ ।
ಶ್ರೀಕರಂ ನಿಜ ಜನನಿಗೇಕೆಂದು ಬಿಡಿಸಿ ದೈ ।
ನಾಕಿನ್ನು ಮಗ ಪೊಮ್ಮರಳಿದುದಂ ಕೇಳ್ದಿಂತು ಸೈರಿಪಳೊ ಕುಂತಿದೇವಿ ॥
ಭೂಕಾಂತನೇಗೈದಪನೊ ಧರ್ಮರಾಜ ನವಿ ।
ವೇಕದಿಂ ಬಾಳ್ಕೆ ಗಿಡಿಸಿದೆ ಯೆಂದು ತನಯನಂ ।
ಶೋಕದಿಂ ಮಿಗೆ ಬೈದಳಲ್ವ ಚಿತ್ರಾಂಗದೆ ಗುಲೂಪಿ ಬಳಿಕಿಂತೆಂದಳು ॥ ||೫೫||
ದೇವಿ ನಿಲ್ಲಿನ್ನು ಮರ್ಜುನನ ಮೃತಿ ಸಂಶಯಂ ।
ಭಾವಿಸುವೊಡೆನಗೊಂದು ಕುರುಪುಂಟು ತನ್ನ ಕೇ ।
ಳೀ ವನದೊಳಂದು ಪಾರ್ಥಂ ತನಗೆ ತೋರಿದಂ ದಾಡಿಮ ದ್ರುಮಮೈದನು ॥
ಆವದಿನ ಕೊಣಗುವುವು ತರುಗಳಾ ದಿನ ಕೆನ್ನ ।
ಜೀವ ಕಳಿವಹುದೆಂದು ತಾನದಂ ನೋಡಿ ಬಹೆ ।
ನೀ ವಿಷಾದಂ ಬೇಡ ಸೈರಿಸೆನೆ ಕಳುಹಿದ ಳುಲೂಪಿಯಂ ಚಿತ್ರಾಂಗದೆ ॥ ||೫೬||

ಕ್ರೀಡಾವನಕೆ ಪೋಗಿ ನಿಮಿಷದೊಳಹೀಂದ್ರಸುತೆ |
ನೋಡಿ ಬಂದಲ್ಲಿಯ ದವಾಗ್ನಿಯಿಂದಾ ಪಂಚ |
ದಾಡಿಮ ದ್ರುಮ ಮೊಣಗಿ ತರ್ಜುನನ ಮೃತಿ ದಿಟಂ ನಡೆ ಪೋಪೆವಲ್ಲಿಗೆಂದು ||
ಪೀಡಿಸುವ ಶೋಕದಿಂ ಚಿತ್ರಾಂಗದೆಗೆ ನುಡಿಯೆ |
ಕೂಡೆ ಪೊರಮಟ್ಟೆಲ್ಲರುಂ ರಣಕೆ ನಡೆತಂದು |
ಜೋಡಾಗಿ ಬಿದ್ದಿರ್ದ ಕರ್ಣಸುತ ಪಾರ್ಥರಂ ಕಂಡಲ್ಲಿ ಕೆಡೆದಳಲ್ದರು || ||೫೭||

ಶೀತೋಷ್ಣ ರುಚಿಗಳಂ ಗಗನ ಗತಿಯಂ ಬಿಟ್ಟು |
ಭೂತಳದ ಮೇಲೆ ರವಿ ಶಶಿ ಗಳೆಸೆವಂತೆ ಪುರು |
ಹೂತಸುತ ಕರ್ಣಜರ ತಲೆಗಳೊಪ್ಪಿರೆ ಕಂಡುಲೂಪಿ ಚಿತ್ರಾಂಗದೆಯರು ||
ಕಾತರಿಸಿ ಕರಗಿ ಕಂಬನಿಯೊಳಾಳ್ದಗ ಶೋ |
ಕಾತಿಶಯದಿಂದೆ ಪಾರ್ಥನ ಪಾದದೊಳ್ಪೊರ |
ಳ್ದಾತನ ಗುಣಂಗಳಂ ಸಾಲ್ಗೊಳಿಸಿ ಬಣ್ಣಿಸಿ ಪೊರಳ್ದು ಗೋಳಿಡುತಿರ್ದರು || ||೫೮||

ನಿನ್ನಂಗ ಸಂಗಮು ನಗಲ್ದಾಯ್ತು ಪಲಕಾಲ |
ಮಿನ್ನೊಮ್ಮೆ ಸೆರೆಯಲಾಗದೆ ನಾಥ ಮೂ ಜಗದೊ |
ಳುನ್ನಿಸಲ್ಕಿನಗೆ ಪಡಿಯಹರುಂಟೆ ರೂಪ ಗುಣ ವಿಕ್ರಮ ಪ್ರೌಢಿ ಗಳೊಳು ||
ಛಿನ್ನಿಸದೆ ಕೆಚ್ಚೆದೆಯ ಸತಿಯ ರಾ ವಸು ವಿಡಿದೆ |
ವಿನ್ನೆಗಂ ಕೇಳ್ದಂತು ಸ್ವೈರಿಪರೊ ಕಾಂತ ನೊ |
ಳ್ನಿನ್ನಿಯು ಳ್ಳರಸಿಯ ದ್ರೌಪದಿ ಸುಭದ್ರೆಯ ರದೆಂತುಳಿವ ರಕಟೆಂದರು || ||೫೯||

ಅಡಿಯೊಳ್ಪೊರಳ್ದು ಕಾಯವನಪ್ಪಿ ಕೈಗಳಂ |
ಪಿಡಿ ದುರಸ್ಥಳಕೆ ತೆಗೆದೊಂದಿಸಿ ಕೊರಲ್ಗೆ ಕವಿ |
ವಡೆದ ತಲೆಯಂ ಕೂಡಿ ನೋಡಿ ಮುಂಡಾಡಿ ಪಣೆಗಿಟ್ಟು ಮೊಗಮಂ ಚುಂಬಿಸಿ ||
ಒಡನೊಡನೆ ಪಾರ್ಥನ ಚರಿತ್ರಮಂ ಸಾಲ್ಗೊಳಿಸಿ |
ನುಡಿ ನುಡಿ ಗಳಲ್ದು ಕೆಲದೊಳ್ಕೆಡೆದ ಕರ್ಣಜಂ |
ಗೊಡಲುರಿಯೊಳಕಟ ಸುತ ಹಾಯೆಂದು ಮರುಗಿದ ರುಲೂಪಿ ಚಿತ್ರಾಂಗದೆಯರು ||೬೦||

ಬಳಿಕ ಚಿತ್ರಾಂಗದೆ ಕುಮಾರನಂ ನೋಡಿ ಕೊಲೆ |
ಗೆಳಸಿದೈ ಜನಕಂಗೆ ಜನನಿಯರ್ನಾ ವಿರ್ದ |
ರುಳಿಯಲೇಕಿನ್ನಕಟ ವೈಧವ್ಯಮಂ ತಾಳಬಲ್ಲೆವೆ ಮಹೀತಳದೊಳು ||
ಸೆಳೆದು ಪೊಡೆ ಖಡ್ಗದಿಂ ದೆವಿಮ್ಮ ಶಿರಂಗಳಂ |
ಬಳಿಕೈದೆ ಭಾರ್ಗವಂ ಕೊಂದುದಿಲ್ಲವೆ ತಾಯ |
ನಳುಕದಿ ಪಿರ್ತನ ಮಾತೃದ್ವಯದ ವಧೆ ನಿನಗೆ ಸಫಲಮಾದಪುದೆಂಪಳು || ||೬೧||

ತಾಯ ಮಾತಂ ಕೇಳ್ದು ಶೋಕ ಕಲುಷಿತನಾಗಿ |
ಪ್ರೀಯದಿಂ ಪೋಗಿ ಕಂಡೊಡೆ ತನುಜನಲ್ಲೆಂದು |
ನೋಯೆ ನುಡಿದಾಹವಂ ಬೇಕೆಂದೊಡೀತನಂ ಕೊಂದೆ ನಾಂ ಪಂತಮೆಂದು ||
ದಾಯ ತಪ್ಪಿದ ಬಳಿಕ ಪೇಳ್ದೊಡೇನಹುದಿನ್ನು |
ಹೇಯಮಾದುದು ತನ್ನ ಬಾಳ್ಕೆ ಪಿತೃವಧೆಯೊಳೀ |
ಕಾಯಮಂ ಬಿಡುವೆನೀಗಳೆ ನೋಳ್ಪುದೆಂದವಂ ಕಿಚ್ಚವುಗ ಲನುವಾದನು ||೬೨||

ತಂದೆಯಂ ಕೊಂದುಳಿದನೆಂದು ಲೋಕವ ಜನಂ ।
ನಿಂದಿಸದೆ ಬಿಡದಿದಕೆ ನಿಷ್ಕೃತಿಗಳಂ ಕಾಣೆ ।
ನೊಂದು ಮಂತ್ರ ಧ್ಯಾನ ಜಪ ತೀರ್ಥ ಯಾಗಯೋಗಂಗಳಿಂ ಕಳೆದುಕೊಳಲು ॥
ಸಂದಿಗ್ಧವಾಗಿರ್ದ ಪಾತಕಂ ಪೋಪುದು ಮು ।
ಕುಂದ ಸ್ಮರಣೆಯಿಂದ ಮರ್ಜುನಂ ವೈಷ್ಣವಂ ।
ಬಂದು ದಪಕೀರ್ತಿ ನಾಂ ನಾಚದೆಂತಿರ್ದಪೆಂ ಪುಗುವೆ ನಗ್ನಿಯೊಳೆಂದನು ॥ ॥೬೩॥
ಅನಲ ಪ್ರವೇಶನಮಂ ನಿಶ್ಚಯಿಸಿ ಬಭ್ರುವಾ ।
ಹನ ಸಗರು ಚಂದನದ ಕಾಷ್ಠಂಗಳಂ ತರಿಸು ।
ವನಿತರೊ ಳ್ಕಂಡು ಚಿತ್ರಾಂಗದೆ ಕನಲ್ದು ಸುತನಂ ಬೈದು ಫಲುಗುಣಂಗೆ ॥
ವನಜನಾಭಂ ಮಿತ್ರ ನಿನ್ನೆಗಂ ಮನದೊ ಳರಿ ।
ದನುಪಮ ಕೃಪಾಳು ತಾನಿಲ್ಲಿಗೈದದೆ ಮಾಣ್ದ ।
ಪನೆ ಸೈರಿಸನ್ನೆಗಂ ನರನ ಜೀವಕ್ಕೆ ಪೊಣೆ ದೇವಪುರ ಲಕ್ಷ್ಮೀಶನು ॥ ॥೬೪॥

ಸಂಧಿ ೨೩ ಕ್ಕೆ ಪದ್ಯಗಳು ೧೨೨೮ ಕ್ಕೆ ಮಂಗಳಮಸ್ತು.

## ಇಪ್ಪತ್ನಾಲ್ಕನೆಯ ಸಂಧಿ.

ಸೂಚನೆ॥ ಪತ್ನಿಯರ ದೆಸೆಯಿಂದ ಮಡಿದಿರ್ದ ಪಾರ್ಥಂ ಪ್ರ ।
ಯತ್ನದಿಂ ನಿಜಸುತಂ ತಂದ ಸಂಜೀವಕದ ।
ರತ್ನದಿಂ ಕೃಷ್ಣ ಪ್ರಸಾದದಿಂ ಜೀವಿಸಿದ ಸುರ್ವಿಗಾಶ್ಚರ್ಯಮೆನಲು ॥

ರಾಯ ಕೇಳಲ್ಲಿ ಗಸುರಾಂತಕಂ ಬಂದು ಕೌಂ ।
ತೇಯನಂ ನೋಡದಿರ ನನ್ನೆಗಂ ಸೈರಿಪು ದು ।
ಪಾಯ ಮುಳ್ಳೊಡೆ ನರನ ಜೀವಮಂ ಪಡೆವುದಿಂ ತಗ್ನಿಪ್ರವೇಶದಿಂದೆ ॥
ಸಾಯಲೇ ನಹುದೆಂ ದಳಲ್ದು ಸುತನಂ ಜೈದು ।
ಬಾಯಾರಿ ಚೀರಿ ಚಿತ್ರಾಂಗದೆ ಹಲುಬಲೊಂದು ।
ಪಾಯಮಂ ಕಂಡು ನುಡಿದ ಳ್ಪನ್ನಗೇಂದ್ರಸಂಭವೆ ಬಭ್ರುವಾಹನಂಗೆ ॥ ॥೧॥
ಮಗನೆ ಮಡಿದರ್ಜುನಂ ಮಗು ಳೇಳ್ವತೆರನಂ ನಿ ।
ನಗೆ ಪೇಳ್ವೆ ನಾನೀಗ ಪಾತಾಳ ಲೋಕ ದೊ ।
ಳ್ನಗರಾಜ ನೊರಸಿ ದಹಿನಿಕರ ದಸು ಮರಳ್ವಂತೆ ಫಣಿವರಂ ಬೇಡಿಕೊಳಲು ॥
ಅಗಜಾ ರಮಣ ನಿತ್ತ ಸಂಜೀವಕದ ಮಣಿ ಯು ।
ರಗಪತಿ ಯೊಳಿಹು ದದಂ ಸತ್ವದಿಂ ತರ ಬಲ್ಲ ।
ವಿಗಡರಂ ಕಾಣೆ ನೀ ಮೂ ಜಗದೊಳಿನೆ ಬಭ್ರುವಾಹನಂ ಖತಿಗೊಂಡನು ॥ ॥೨॥
ಸಂಜೀವಕದ ಮಣಿಯನೀಗ ತಾರದೊಡೆ ತ ।
ನ್ನಂ ಜನನಿ ಪಿತೃಳೀತಕೆ ಮುತ್ತೆ ಮಡಿದಿಹ ಧ ।
ನಂಜಯನ ಹರಣಮಂ ಪಡೆವೆ ನವನೀಯುದೊಡೆ ಫಣಿ ಲೋಕಮಂ ಸುಡುವೆನು ॥
ಕಂಜಜ ಕಪರ್ದಿಗ ಳ್ಬೊಡಕಿದೊ ಡೊರಲ್ಚುವೆಂ ।
ಭಂಜಿಸುವೆ ನಖಿಳ ದಿಕ್ಪಾಲರಂ ಸೆಣಸಿದೊಡೆ ।
ಸಂಜಾತನಾದುದಕೆ ಸಫಲವಾಯ್ತೆನು ತುಬ್ಬಿದಂ ಬಭ್ರುವಾಹನಂದು ॥ ॥೩॥

ಮರುಳಾಟವೇಕೆ ನಿ ನ್ನಪಟು ಕೊಳ್ಳದು ಮಗನೆ ।
ಗರಳಮಯ ದುರಿಯೊಳಿವೆ ಸೀವುದು ಕಣಾ ನೋಡ ।
ಲುರಗಪತಿ ಶೇಷರಾಜನ ಕೋಶ ದೆಡೆಯೊಳಿಹ ಸಂಜೀವಕದ ಮಣಿಯನು ॥
ತರಬಲ್ಲ ನಾವವಂ ಗುಳಿಕ ವಾಸುಕಿ ತಕ್ಷ ।
ಕರ ಶಂಖ ಪದ್ಮ ಕರ್ಕೋಟಕಾದಿಗಳ ಘೀ ।
ಕರ ವಿಷೋತ್ಕರದಿಂದೆ ಕಾಹು ಬಲಿ ದಿಹುದೆನ ಲುಲೂಪಿ ಗವನಿಂತೆಂದನು ॥ ॥೪॥

ಈ ಮಹಾಹಿಗಳ ವಿಷಕಳುಕುವೆನೆ ಯೆನ್ನ ಮಾ ।
ತಾಮಹಂ ಹರಿಗೆ ಹಾಸಿಗೆಯಾದವಂ ಮೇಲೆ ।
ಭೂಮಿಯಂ ಪೊತ್ತವಂ ಶೇಷರಾಜಂ ಗಾಸಿಯಹನೆಂಬ ಭಯಮಲ್ಲದೆ ॥
ಆ ಮಣಿಯ ನೀಯದೊಡೆ ಸಪ್ತಪಾತಾಳಮಂ ।
ಸಾಮರ್ಥ್ಯದಿಂದೆ ಭೇದಿಸಿಕೊಂಡು ಬಂದು ಸು ।
ತ್ರಾಮಸುತನಂ ಬದುಕಿಸದೆ ಮಾಣ್ದಪೆನೆ ತಾಯೆ ಹೇಳೆಂದೊ ಡಿಂತೆಂದಳು ॥ ॥೫॥

ಒಂದು ಮೊದಲೊಂಬತ್ತುನೂರು ಕಡೆಯಾದ ಪೆಡೆ ।
ಯಿಂದೆಸೆವ ನಾಗಂಗ ಳತಿ ವಿಷೋಲ್ಬಣ ದುರಗ ।
ವೃಂದ ವೋಲೈಸುವುದು ಸಾಸಿರ ಮೊಗದ ಶೇಷರಾಜನಂ ಪಾತಾಳದ ॥
ಮಂದಿರದೊ ಳೊಮ್ಮೊಮ್ಮೆ ಗರುಡನಲ್ಲಿಗೆ ಬಂದು ।
ಕೊಂದಹಿಗಳಂ ಬದುಕಿಪೊಡೆ ತೋರಿಸುವರಲ್ಲ ।
ದೆಂದುಂ ತೆಗೆಯರಾ ಮಣಿಯನೆಂ ದುಲೂಪಿ ನುಡಿಯ ಲ್ಕಾತ ನಿಂತೆಂದನು ॥ ॥೬॥

ಲೇಸನಾಡಿದೆ ತಾಯೆ ಪಾತಾಳದಲ್ಲಿಹ ಮ ।
ಹಾಸರ್ಪ ಸಂಕುಳವನೆಲ್ಲವಂ ಕೊಂ ದಳಿದ ।
ವಾಸವನ ಸುತನಂ ಮಡಿದ ವೀರ ವೃಷಕೇತುವಂ ಬಿದ್ದ ಸೈನಿಕವನು ॥
ಆ ಸುಮಣಿಯಂ ಕೊಂಡು ಬಂ ದೆಬ್ಬಿಸಿದ ಬಳಿಕ ।
ವಿಾಸಲಾಗಿರ್ದ ಸಂಜೀವಕವ ನೀವೆಂ ಗ ।
ತಾಸುವಾಗಿರ್ದ ಫಣಿಗಳ್ಗೆಂದು ಪಾರ್ಥಜಂ ನುಡಿದೊ ಡವಳಿಂತೆಂದಳು ॥ ॥೭॥

ತನಯ ಕೇ ಳನ್ಯರೊಳ್ಕೊಳ್ವ ಕಜ್ಜದ ಮಾಳ್ಕೆ ।
ವಿನಯದಿಂ ದೆಸಗಿದೊಡೆ ಸಲೆ ಸುಗುಣಮಾದಪುದು ।
ನೊನೆಯ ಮೇಲಪ್ಪುದಾಯಾಸ ಮಂತದರಿಂದೆ ನೀ ನತಿಕ್ರಮಿಸಬೇಡ ॥
ತನಗುಂಟು ಕೆಳೆ ಪುಂಡರೀಕ ನೆಂಬಹಿ ಯೊರ್ವ ।
ನನುಕೂಲ ನೆಮ್ಮ ತಂದೆಗೆ ಮಂತ್ರಿ ತಾನೀಗ ।
ನೆನೆದೊಡಿಲ್ಲಿಗೆ ಬರ್ಪ ನಾತನಂ ಕಳುಹಿ ತರಿಸುವೆ ನಾ ಮಣಿಯನೆಂದಳು ॥ ॥೮॥

ಇಂತೆಂ ದುಲೂಪಿ ಬಳಿಕಾ ಪುಂಡರೀಕನಂ ।
ಚಿಂತಿಸುವಿನಂ ಬಂದಿದೇಕೆ ಬರಿಸಿದೆಯೆನ ಲ ।
ನಂತನಲ್ಲಿಗೆ ಪೋಗಿ ನಿನ್ನ ತನುಜೆಯ ಕರ್ಣತಾಟಂಕ ಮಳಿವಿ ಗಳಿವ ॥
ಕುಂತೀ ಕುಮಾರಕಂ ತನ್ನ ರಮಣ ಬದುಕು ।
ವಂ ತಮೃತ ಸಂಜೀವಕದ ಮಣಿಯ ನೀವುದೆಂ ।
ದಂತರಿಸ ದಖಿಳ ವೃತ್ತಾಂತಮಂ ಪೇಳದಂ ಕೊಂಡು ಬಾ ನಡೆಯೆಂದಳು ॥ ॥೯॥

ಆ ಪುಂಡರೀಕಫಣಿ ಬಳಿಕ ದುಃಖಿತೆಯಾದು |
ಲೂಪಿಯಂ ಸೈತಿಟ್ಟು ಸಂಜೀವಕದ ಮಣಿಗೆ |
ಪೋಪೆ ನಾ ನಹಿಪತಿಯ ಸಮಯುಮಂ ಕಾಣ್ಬು ದರಿದಲ್ಲಿ ತಳುವಾಗದಿರದು ||
ಈ ಪಾರ್ಥ ನಂಗ ಕಳಿವಾಗ ದಿರ ದನ್ನೆಗಂ |
ರೂಪು ಕಿಡದಂತೆ ಕಚ್ಚುವೆನೀಗ ಮದ್ವಿಷಂ |
ವ್ಯಾಪಿಸಲೊಡ ಲ್ಕಳಲದೆನೆ ಬಭ್ರುವಾಹನಂ ಕೇಳ್ದು ಮತ್ತಿಂತೆಂದನು || ||೧೦||
ಎಲೆ ಪುಂಡರೀಕ ಕೇಳೀ ಕರ್ಣ ಸಂಭವಂ |
ಕಲಿ ಚೆಲ್ವನತಿಬಲಂ ಶುಚಿ ಸುಗುಣಿ ಕೋವಿದಂ |
ಕುಲ ವಿವರ್ಧನ ನೀತನಂಗಮಂ ಕಿಡದಂತೆ ಮೊದಲೆ ನೀಂ ಕಚ್ಚಿ ಬಳಿಕ ||
ಫಲುಗುಣನ ದೇಹಮಂ ಕಚ್ಚಿನ ಲೊಡರ್ಚಿ ಫಣಿ |
ತಿಲಕ ನವರಿರ್ವರ ಶರೀರಂಗಳಂ ಕಚ್ಚಿ |
ಸಲೆ ಸಂತವಿಟ್ಟು ನಂಬುಗೆ ಗೊಟ್ಟು ಬೀಳ್ಕೊಂಡು ಪಾತಾಳ ಕೈತಂದನು || ||೧೧||
ಅತಳ ದಾಶ್ಚರ್ಯಮಂ ವಿತಳದ ವಿಚಿತ್ರಮಂ |
ಸುತಳದ ಸುರುಚಿಯಂ ಮಹಾತಳದ ಮಣಿಮಯೋ |
ನ್ನತಿಯಂ ತಳಾತಳದ ತಾಣ ದತಿಶಯುಮಂ ರಸಾತಳದ ರಂಜಿತವನು ||
ಪ್ರತಿದಿನದೊ ಳರಿದರಿದುಮಾ ಪುಂಡರೀಕ ಫಣಿ |
ಪತಿ ನೋಡಿ ನೋಡಿ ವಿಸ್ಮಿತನಾಗುತ್ತೈದಿದಂ |
ವಿತತ ರತ್ನ ಪ್ರಭಾಶೋಭಿತದ ಪಾತಾಳಲೋಕ ದಹಿರಾಜನೆಡೆಗೆ || ||೧೨||
ಫಲಿತ ಕಾಂಚನ ವೃಕ್ಷಲತೆಗಳ ಬನಂಗಳಿಂ |
ಜ್ವಲಿತ ನವರತ್ನ ಸೌಧಂಗಳ ಪುರಂಗಳಿಂ |
ಕಲಿತ ಪೀಯೂಷ ದೀರ್ಘಿಕೆಗಳಿಂ ಕನಕಾರವಿಂದದ ಕೊಳಂಗಳಿಂದೆ ||
ಲಲಿತ ಲಾವಣ್ಯದುರಗಾಂಗನೆಯರಿಂ ಸಮಾ |
ಕುಲಿತ ಮಾಗಿಹ ಭೋಗವತಿಯ ನದಿಯಿಂದೆ ನಿ |
ಶ್ಚಲಿತ ಸುಖನಿಲಯ ಮೆನಿಸಿರ್ದ ಪಾತಾಳಕ್ಕೆ ಪುಂಡರೀಕಂ ಬಂದನು || ||೧೩||
ನವರತ್ನಮಯದ ಗೋಪುರದ ಕಾಂತಿಯ ದಿವ್ಯ |
ಭವನದಿಂ ನಾಗವಧುಗಳ ನೃತ್ತಗೀತ ದು |
ತ್ಸವದಿಂದೆ ಪುಣ್ಯಗಂಧೋತ್ಕರದ ಪದ್ಮವನ ಪುಷ್ಪವಾಟಿಕೆಗಳಿಂದೆ ||
ವಿವಿಧೋಪಚಾರ ಕೃತ ಪೂಜೆಗಳ ನಾನಾ ವಿ |
ಭವದಿಂದೆಸೆವ ಮಹಾ ಹಾಟಕೇಶ್ವರನೆಂಬ |
ಶಿವಲಿಂಗಮಿರೆ ಭೋಗವತಿಯ ತಟದೊಳ್ಕಂಡು ಪುಂಡರೀಕಂ ಮಣಿದನು || ||೧೪||
ದಿವ್ಯಭವನದೊ ಳನೇಕಾಸುರ ಸುರಾದಿ ನಿಖಿ |
ಳವ್ಯಾಳ ವೃತನಾಗಿ ವರಫಣಾಮಣಿ ಸಹ |
ಸ್ರವ್ಯೂಹ ದರ್ಚಿಯಿಂದುರು ಕಾಯ ಕಾಂತಿಯಿಂ ದೇದೀಪ್ಯಮಾನನಾಗಿ ||
ಅವ್ಯಾಕುಲದೊ ಳಚ್ಯುತಧ್ಯಾನದಿಂದೆ ಕ |
ರ್ತವ್ಯದಿಂ ದವನಿಯಂ ತಾಳ್ದ ನಘೋತ್ತಮ |
ದ್ರವ್ಯ ಕಧಿಪತಿಯಾಗಿ ರಂಜಿಸುವ ಶೇಷನೋಲಗ ಕುರಗನೈತಂದನು || ||೧೫||

ಪುಂಡರೀಕಂ ಸಮಯಮರಿ ದುರಗರಾಜನಂ।
ಕಂಡೆರಗಿ ನುಡಿದ ನವಧರಿಸೆಲೆ ಫಣೀಂದ್ರ ಭೂ।
ಮಂಡಲದ ರಾಯರೊಳ್ಪಾಂಡುಸುತ ಕೌರವರ್ಗಾದು ದಾಹವ ನುದರೊಳು॥
ದಿಂಡುವರಿ ದಹಿತರಂ ಭೀಷ್ಮನಂ ಕೊಂದ ನಾ।
ಖಂಡಲಾತ್ಮಜ ನವರ ಪಾತಕಕೆ ನೃಪತಿ ಕೈ।
ಕೊಂಡ ನಚ್ಯುತನಾಜ್ಞೆಯಿಂ ಕ್ರತುವನಾಯ್ತು ಗಂಗಾಶಾಪ ಮರ್ಜುನಂಗೆ॥ ॥೧೬॥

ಆ ಜಾಹ್ನವಿಯ ಶಾಪದಿಂ ಬಭ್ರುವಾಹನಂ।
ವಾಜಿ ಸಹಿತೈದಿದ ಧನಂಜಯನ ತಲೆಯಂ ಮ।
ಹಾಜಿಯೊಳ್ತರಿಯೆ ಪತಿಶೋಕಮಂ ತಾಳಲಾರದೆ ನಿನ್ನ ಮಗಳುಲೂಪಿ॥
ತೇಜದಿಂದೆಸೆವ ಸಂಜೀವಕದ ಮಣಿಯಂ ಪ್ರ।
ಯೋಜನಕೆ ತಹುದೆಂದು ಕಳುಹಿಮೊಡೆ ಬಂದೆ ನೀ।
ವ್ಯಾಜದಿಂ ದಿದೆನೋಡೆಸುತೆ ಕೊಟ್ಟನವಳ ಕುರುಹಂ ಪನ್ನಗೇಶ್ವರಂಗೆ॥ ॥೧೭॥

ಆ ಪುಂಡರೀಕ ನಿಂತೆಂ ದುರಗರಾಜಂ ಗು।
ಲೂಪಿ ಕಳುಹಿದ ಕರ್ಣ ಕಂಠ ಭೂಷಣದ ಸ್ವ।
ರೂಪಮಂ ಮುಂದಿರಿಸಿ ನಿನ್ನ ನಿಜ ಜಾಮಾತ ನರ್ಜುನಂ ಸುಜನ ನಿಳೆಗೆ॥
ಶ್ರೀಪತಿಯ ಸಖ ನಿಂದ್ರಸೂನು ಧರ್ಮಾನುಜಂ।
ಭೂಪಾಲರೊಳ್ಸರ್ವಡೆದವಂ ಜೀವಿಸೆ ಪ।
ರೋಪಕಾರಂ ಪೊಲ್ಲಮಲ್ಲ ನಿನಗದರಿಂದೆ ಕುಡುವುದು ಮಣಿಯನೆಂದನು॥ ॥೧೮॥

ಶೇಷರಾಜಂ ಬಳಿಕ ತನ್ನ ತನುಜೆಯ ಕರ್ಣ।
ಭೂಷಣವ ನಾಕಂಠ ಸೂತ್ರಮಂ ಕಂಡು ಸಂ।
ತೋಷವರ್ಜಿತನಾಗಿ ಪೊರೆಯೊಳಿಹ ತಕ್ಷಕಾದ್ಯಹಿಪತಿಗಳಂ ನೋಡುತೆ॥
ದೋಷಮೇನಿದಕೆ ಮಣಿಯಂ ಕುಡುವೆ ವೈಸಲೆ ವಿ।
ಶೇಷ ಫಲಮಹು ದಾರ್ಜಿಸಿದ ವಸ್ತು ಲೋಗ ರಥಿ।
ಲಾಷೆ ಗಾದೊಡೆ ಪಾರ್ಥನುತ್ತಮಂ ವೈಷ್ಣವಂ ಜಾಮಾತ ನೆಮಗೆಂದನು॥ ॥೧೯॥

ಕೇಳಿ ದುರ್ಮಾನದಿಂ ತಮತಮಗೆ ನಿಖಿಳ ಸ।
ರ್ಪಾಳಿ ಚಿಂತಿಸೆ ಬಳಿಕ ಧೃತರಾಷ್ಟ್ರನೆಂಬ ದು।
ರ್ವ್ಯಾಳಪತಿ ನುಡಿದನೆಲೆ ನಾಗೇಂದ್ರ ತಮ್ಮವಸರಕ್ಕೆ ಬೇಹುದ ನನ್ಯರ॥
ನೇಳಿಗಿತ್ತೊಡೆ ಮರಳಿ ಬಂದಪುದೆ ಮಾನವ।
ರ್ಖೂಳ ಕೃತಘ್ನ ರುಪಕಾರಮಂ ಬಲ್ಲರೆ ವೃ।
ಥಾಳೋಚನೆಗಳೇತಕಿದಕೆ ಮಣಿಯಂ ಕುಡದಿರೆನೆ ಫಣಿಪ ನಿಂತೆಂದನು॥ ॥೨೦॥

ನಾಡೊ ಳೂರೊ ಳ್ಮನೆಯೊ ಳೋರೊರ್ವರುಂಟು ಪರ।
ಪೀಡೆಗಳುಕದೆ ವಕ್ರಗತಿಯಿಂದೆ ನಡೆವ ಕಡು।
ಗೇಡಿಗ ರ್ನಿನ್ನಂತೆ ಶಿವಶಿವಾ ಪ್ರಾಣಿಗ ಳ್ದುಃಖಾರ್ತರಾಗಿ ಬಂದು॥
ಜೇಡಿಮೊಡೆ ತನಗುಳ್ಳ ವಸ್ತುವಂ ಕುಡದೆ ಕೆಡೆ।
ನೋಡುವವ ನಧಿಕನೆ ದಧೀಚಿ ಶಿಬಿಗಳ ಮಾಳ್ಕೆ।
ಯೋಡಿಯಾಡುವೆ ಮಣಿಯ ನೀವೆಂ ಕಿರೀಟಿಗೆನೆ ಧೃತರಾಷ್ಟ್ರನಿಂತೆಂದನು॥ ॥೨೧॥

ಹೇಳಿದಂತಿರದು ಪುರುಷಾರ್ಥಮಂ ನೋಡಿದೊಡೆ ।
ಕಾಳಹುದು ನಾಗಲೋಕದ ಬಾಳ್ಕೆ ಮಾರಿ ಪಾ ।
ತಾಳಕೆ ಮತಂಗ ಋಷಿಶಾಪದಿಂ ಬಾರನೈಸಲೆ ಗರುಡ ನಿಳೆಯಮೇಲೆ ॥
ತಾಳಬಲ್ಲನೆ ನಮ್ಮ ರತ್ನಮಂ ಕಂಡು ನರ ।
ರಾಳಿಕೆಗ ಳಲ್ಪಕಾಲಂಗಳಿಂ ದುಳಿದೊಡಂ ।
ನಾಳೆ ಪಾಂಡವ ನಳಿಯದಿರ್ಪನೆ ಮಣಿಯಂ ಕುಡದಿರೆನ ಲ್ಕಿಂತೆಂದನು ॥ ॥೨೨॥

ಕಷ್ಟದಿಂದಾವು ಮಣಿಯಂ ಕುಡದೆ ಮಾಣ್ದೊಡೇಂ ।
ನಷ್ಟಮಾದಪುದೆ ಪಾರ್ಥನ ಜೀವ ಮಸುರಾರಿ ।
ಯಿಷ್ಟನಲ್ಲವೆ ಪಾಂಡವ ಪ್ರಾಣನಾಗಿರ್ಪ ನಂತಲ್ಲ ದಾನತರ್ಗೆ ॥
ಸ್ಪಷ್ಟದಿಂ ಕೃಷ್ಣ ಕಾರುಣ್ಯ ಸಂಜೀವನಂ ।
ದೃಷ್ಟವಾಗಿರಲಿವರ ಹಂಗದೇತಕೆ ನೀನ ।
ರಿಷ್ಟನಾಗ ದಿರಿಸ್ನು ಮಿಗಿಸಿಕೊಳ್ವೆವು ಲೇಸನೆಂದೊ ಡವನಿಂತೆಂದನು ॥ ॥೨೩॥

ಉರಗೇಂದ್ರ ನೀನಾಡಿದ ವೊಲೆಂತು ಮರ್ಜುನಂ ।
ಮುರಹರನ ಕರುಣದಿಂ ಸಪ್ರಾಣನಪ್ಪ ನಿದ ।
ಕುರುತರದ ಸಂಜೀವಕದ ಮಣಿಯನಿತ್ತು ನಮ್ಮೆಲ್ಲರಂ ಕೆಡಿಸಬೇಡ ॥
ಗರುಡದೇವನ ಹಾವಳಿಗೆ ಜೋಕೆಯಾಗಿರಲಿ ।
ತಿರುಗಿ ಕಳುಹಿಸು ಪುಂಡರೀಕನಂ ತವ ಸುತೆಯು ।
ಪೊರೆಗೆಂದು ಧೃತರಾಷ್ಟ್ರನೆನಲೊಪ್ಪಿ ನಿಖಿಳ ಸರ್ಪಾಳಿ ಗರ್ಜಿಸುತಿರ್ದುದು ॥ ॥೨೪॥

ಭೂಪಾಲ ಕೇಳ್ ಳೊದ್ದರೆಗ ಳೊಲಿದೀವ ಕಜ್ಜಂ ಸ ।
ಮಾಪವ ದುರಾತ್ಮರಿಂ ಕಿಡದೆ ಮಾಣ್ಬುದೆ ಪೇ ।
ಳಾ ಪನ್ನಗೇಶ್ವರಂ ಧೃತರಾಷ್ಟ್ರನೆಂಬ ಮಾತಿನ ಮೇಲೆ ಖಿನ್ನನಾಗಿ ॥
ಆ ಪುಂಡರೀಕನಂ ಕರೆದು ಕುಡಲೀಸ ರ್ಪ ।
ರೋಪಕಾರಕೆ ಮಣಿಯ ನೀ ಫಣಿಗಳೆಂತೆಂ ದು ।
ಲೂಪಿ ಗರುಪೆಂದು ಕಳುಹಿದೊಡವಂ ನರ ನಳಿದ ರಣಭೂಮಿಗೈತಂದನು ॥ ॥೨೫॥

ಚಂದನದ ತೈಲದಿಂದುರಿವ ಬೊಂಬಾಳಂಗ ।
ಳಿಂದೆ ಕರ್ಪೂರದ ಸೊಡರ್ಗಳಿಂ ಮಣಿದೀಪ ।
ದಿಂದಿರು ಳ್ಕಂಗೊಳಿಸುತಿರೆ ಬಭ್ರುವಾಹನಂ ಮಂದಿ ಸಹಿತಾ ರಣದೊಳು ॥
ನಿಂದಿರ ಲುಲೂಪಿ ಚಿತ್ರಾಂಗದೆಯು ರಮರೇಂದ್ರ ।
ನಂದನನ ಬಳಿಯ ಸಂಜೀವಕದ ರತ್ನಮಂ ।
ದಂದಶೂಕೇಶ್ವರಂ ಕುಡುವನೆಂಬಾಸೆಯಿಂ ಹಂಬಲಿಸು ತಿರುತಿರ್ದರು ॥ ॥೨೬॥

ಅನ್ನೆಗಂ ಪುಂಡರೀಕಂ ಬಂ ದುಲೂಪಿ ಯೊ ।
ಳ್ಪನ್ನಗೇಂದ್ರಂ ಸುಧಾಮಣಿಯಂ ಕುಡದೆ ತಿರುಗಿ ।
ತನ್ನಂ ಕಳುಹಿದ ವೃತ್ತಾಂತಮ ನುಸಿರಲಿದಂ ಚಿತ್ರಾಂಗದೆಗೆ ಸೂಚಿಸಿ ॥
ಇನ್ನು ವೈಧವ್ಯದಿಂ ದೊಡಲಂ ಪೊರೆಯೆನೆಂದು ।
ನನ್ನಿಯಿಂ ದಗ್ನಿಪ್ರವೇಶಮಂ ನಿಶ್ಚೈಸ ।
ಲಂ ನೋಡಿ ಕೋಪದಿಂ ದಾ ಬಭ್ರುವಾಹನಂ ನಿಜಮಾತೆ ಗಿಂತೆಂದನು ॥ ॥೨೭॥

ಚಕ್ರಿ ಸೇವಕ ನೀಂ ಕಿರೀಟಿ ಧರ್ಮಾನುಜಂ।
ಶಕ್ರಸುತ ನೆನ್ನ ತಾತಂ ಮೇಲೆ ತುರಗ ಮೇ।
ಧ ಕ್ರತುವಿ ಗೋಸುಗಂ ಮುಡಿದಿರ ಲ್ಬೇಡಿದೊಡೆ ಮಣಿಯಂ ಕುಡದೆ ಶೇಷನು ॥
ವಕ್ರನಾದೊಡೆ ವಾಸುಕಿ ಪ್ರಮುಖ ಫಣಿಗಳ ನ।
ತಿಕ್ರಮಿಸಿ ತದ್ರತ್ನಮಂ ಕೊಂಡು ಬಹೆ ನೆನ್ನ।
ವಿಕ್ರಮವ ನೀಗ ನೋಡೆನುತೆದ್ದು ಕರೆಸಿದಂ ಪಾರ್ಥಿ ನಿಜ ಸೈನಿಕವನು ॥ ॥೨೮॥
ಫಣಿಕುಲವ ನಾಕ್ರಮಿಸಿ ಕೊಂಡು ಬಹೆ ನಾ ಮಹಾ।
ಮಣಿಯ ನಲ್ಲಹುವೆಂದೊ ಡಜ ಹರಿ ಪಿನಾಕಿ ಗಳ।
ಪಣೆ ಯಕ್ಕರಂಗಳಂ ತೊಡೆವೆ ನೊರೆಸುವೆ ನಷ್ಟದಿಕ್ಪಾಲ ರಾಯುರುಗಳನು ॥
ಎಣಿಕೆ ಬೇ ಡಿದಕಿನ್ನು ವೀರ ವೃಷಕೇತು ಫ।
ಲ್ಗುಣರ ದೇಹಂಗ ಳತಿ ಜತನ ವೆಂದಾಪ್ತರ್ಗೆ।
ರಣವ ಸುಯ್ದಾನಮಂ ಪೇಳ್ದು ನಿಜ ಬಲಸಹಿತ ಪಾರ್ಥಸುತ ನನುವಾದನು ॥೨೯॥
ಏರಿಸಿ ಮಹಾಧನುವ ನಶನಿ ಬಾಣವ ನೆಚ್ಚು।
ಡೋರುಗಳೆ ದವನಿಯಂ ಸಪ್ತ ಪಾತಾಳಕ್ಕೆ।
ತೋರಿಸಿದ ನೊಂದು ಪೆರ್ಬಟ್ಟೆಯಂ ನಡೆದ ನಾರ್ಜುನಿ ತನ್ನ ಸೇನೆಸಹಿತ ॥
ನಾರಿದ ಶರಾವಳಿಯ ಘಾತಿಯಂ ತವೆ ತಾಳ।
ಲಾರದೆ ಸಕಲ ಭೋಗಿತತಿ ಬಂ ದನಂತಂಗೆ।
ಮೊರಲ್ಕೆ ಧೃತರಾಷ್ಟ್ರನಂ ಬೈದು ಫಣಿಗಳಂ ಕಾಳಗಕೆ ಬೀಳ್ಕೊಟ್ಟನು ॥ ॥೩೦॥
ನಾಗ ರಥ ವಾಜಿಗಳ ಕಾಲಾಳ ಕೈದುಗಳ।
ನಾಗವಳ ಮೈದುಯೋಜನ ದಗಲದಿಂದೆ ನಾ।
ನಾಗತಿ ಯೊಳ್ಕೈತಂದು ದಾರ್ಜುನಿಯ ಸೈನಿಕದ ಮೇಲೆ ಸನ್ನಾಹದಿಂದೆ ॥
ತಾಗಿದುದು ಸರ್ಪಾಳಿ ತಮತಮಗೆ ವಾಸಿ ಮುಂ।
ತಾಗಿ ವದನದ ವಿಷಜ್ವಾಲೆ ಮಿಗೆ ಡಾವರಿಸಿ।
ತಾ ಗಿರಿಶ ನಕ್ಷಿಯಿಂ ಪೊರಮಡುವ ದಳ್ಳುರಿಯ ದಾಳಿಯೆನೆ ಪರ ಬಲದೊಳು ॥೩೧॥
ಗುಳಿಕ ತಕ್ಷಕ ಶಂಖ ಕರ್ಕೋಟಕಾದಿ ಫಣಿ।
ಗಳ ತಂಡದಿಂದೆ ಧೃತರಾಷ್ಟ್ರನುರವಣಿಸಿ ಪರ।
ಬಲಮೊ ಳಿಪ್ಪತ್ತೊಂದುಸಾಸಿರ ಘಟಾಳಿಯಂ ಕೆಡಹಲಾರ್ಜುನಿ ಕನಲ್ದು ॥
ಪೊಳೆವ ಕೂರ್ಗಣೆಗಳಂ ಕರೆಯಲ್ಕೆ ಪನ್ನಗಾ।
ವಳಿಯ ತಲೆಗಳ್ಹರಿದು ಬೀಳುತಿರ್ದವು ಮಹಾ।
ಪ್ರಳಯದೊ ಳ್ಗಗನದಿಂ ದುದಿ ವರ್ದಡುಗಳಂತೆ ತೊಳತೊಳಪ ಪಡೆವಣಿಗಳೊಡನೆ॥೩೨॥
ಪರ್ವಿಕರಾವಳಿಯ ನರೆಗಡಿಯಲವು ಮತ್ತೆ।
ಸರ್ಪದಳಮಂ ವಿಷಜ್ವಾಲೆಯೊ ಳುರಿಪ ಲವಕೆ।
ನಿರ್ವಾಹಮಂ ಕಂಡು ಸಾರಂಗ ಶಿಖಿ ನಕುಲ ಗೃಧ್ರಂಗಳಾಗಿ ಸೀಳ್ವ ॥
ಖರ್ವ ಮಂತ್ರಾಸ್ತ್ರಂಗಳಂ ತಿರುವಿ ನೊ ಳ್ಪೂಡಿ।
ಗೀರ್ವಾಣಪತಿಸುತನ ಸೂನು ಕಾಲದ ಕಡೆಯ।
ಶರ್ವನಂತಿರೆ ಕೋಪಮಂ ತಾಳ್ದು ತೆಗೆದೆಚ್ಚನೇ ಪೇಳ್ವೆ ನದ್ಭುತವನು ॥ ॥೩೩॥

ಇಟ್ಟಣಿಸಿ ಪದ್ದು ಸಾರಂಗ ಮುಂಗುಲಿ ನವಿಲ।
ಘಟ್ಟುರಗ ಸೇನೆಯಂ ಘಾತಿಸಿ ಪೊರಳ್ಚಿನುದು।
ಬಿಟ್ಟನಾರ್ಜುನಿ ಮತ್ತೆ ಮಧುಶರವನಾಕ್ಷತಂಗಳ ಮೇಲೆ ಜೇನ್ಗರೆವೊಲು॥
ತೊಟ್ಟು ತೆಗೆದೆಚ್ಚಂ ಪಿಪೀಲಿಕಾಸ್ತ್ರವ ನೊಡನೆ।
ಕಟ್ಟಿರುಪೆ ಮುತ್ತಿದುವು ಫಣಿಗಳಂ ಕಚ್ಚಿದುವು।
ನಿಟ್ಟಿಸುವ ಕಂಗಳಂ ತಿಂದುವು ನೆಣಂಗಳಂ ಕೊರೆದು ಪೊಡ ಲಸ್ಥಿಗಳನು॥ ॥೩೪॥
ಪೋಟೆಗೊಂಬುಗಳ ಪಳಮರದಂತೆ ತಿರುಳಿಲ್ಲ।
ದೋಟೆಗಳ ತಿಂತ್ರಿಣೀ ಫಲದಂತೆ ಗುಳಿಕ ಕ।
ರ್ಕೋಟಕಾದಿಗಳೊಡಲ್ಪೊಳ್ಳಾದು ವಿರುಹಗಳ ಮುತ್ತಿಗೆಗೆ ಕಂಗೆಟ್ಟುವು॥
ತೋಟಿಯಂ ತಂದ ಧೃತರಾಷ್ಟ್ರನ ವರೂಥಮಂ।
ಘೋಟಕವ ಸಿಷುಕಾರ್ಮುಕಂಗಳಂ ಖಂಡಿಸಿ ಕಿ।
ರೀಟಿಸುತ ಸುರುಬಿದೊಡೆ ಮುರಿವಡೆ ದುರಗಸೇನೆ ಶೇಷನಿದ್ದೆಡೆ ಗೋಡಿತು॥ ॥೩೫॥
ಕೆಟ್ಟೋಡಿ ಬಂ ದಹಿಗಳಾರ್ಜುನಿಗೆ ರತ್ನಮಂ।
ಕೊಟ್ಟುಳುಹಬೇಕೆಂದು ನಾಗರಾಜಂಗೆ ನೊರೆ।
ಯೆಟ್ಟೊಡಾತಂ ಕನಲ್ದೇಕೆ ತಡೆದಿರಿ ಪೊದ ಲ್ಮಂತ್ರಜ್ಞರಿಳೆಯ ನರರು॥
ಕಟ್ಟುಗ್ರಮಾಗಿರ್ದ ನಿಮ್ಮ ವಿಷ ಕಂಜರಿ।
ನ್ನಟ್ಟಿ ಸುಡದಿರಸ್ಕಿಗ ಪಾರ್ಥ ಪಾತಾಳಮಂ।
ನೆಟ್ಟನೆ ಸಮರ್ಥರ್ಗೆ ತನು ಧನವನೊಪ್ಪಿಸ ದೊಡುಳಿವರೇ ಕೃಶರೆಂದನು॥ ॥೩೬॥
ಸಾಕದಂತಿರಲಿನ್ನು ಪಾರ್ಥಿಯ ಶರಾಗ್ನಿಯಿಂ।
ಕಾಕೋದರಾಳಿ ಬೇಯುವ ಮುನ್ನ ವಾರ್ಜುನಿಗೆ।
ಬೇಕಾದ ವಸ್ತುವಂ ಕೊಟ್ಟಿ ಮ್ಮನುಳುಹೆಂದು ಫಣಿಕುಲಂ ಬಾಯ ಬಿಡಲು॥
ಲೋಕದೊಳ್ದಾನ ಧರ್ಮೋಪಕಾರಂಗಳ್ಗೆ।
ತಾ ಕುಡದೆ ಮಾಡಿಕೊಂಡಿರ್ದ ಲೋಭಿಯ ಧನಂ।
ಕಾಕಭಾಜನ ಮಪ್ಪು ದಡವಿಯೊಳ್ಬಿಪ್ಪ ಪೆಣನಂತೆಂದ ನುರಗೇಂದ್ರನು॥ ॥೩೭॥
ಧರಣೀಧರ ನಮ್ಮ ದುರ್ನೀತಿಯಂ ನೋಡ ದಿ।
ರ್ಮ್ಮರಹರ ಪ್ರೀತಿಯಪ್ಪಂತೆ ಕುಡು ರತ್ನಮಂ।
ನರಸುತಂ ಗರ್ಜನಂ ಬದುಕಲೆಂ ದಹಿಗಳಾ ಶೇಷನಂ ಬೇಡಿಕೊಳಲು॥
ಹರಿಯ ಕಾರುಣ್ಯ ಸಂಜೀವನಂ ಪಾಂಡವ।
ರ್ಗಿರ ಲದೇಗೆಯ್ವುದಾ ವಿತ್ತಮಣಿ ದುಗ್ಧಸಾ।
ಗರ ಕಜಕ್ಷೀರಮಂ ಬೆರೆಸಿ ದುಪಕಾರ ಮಹುದೆಂದು ಮತ್ತಿಂತೆಂದನು॥ ॥೩೮॥
ಈ ಮಣಿಯುಮಂ ಕಲ್ಪತರು ಕಾಮಧೇನು ಚಿಂ।
ತಾಮಣಿಯುಮಂ ಬಯಸಲೇ ಕಕಟ ಯಾದವ ಶಿ।
ಖಾಮಣಿಯ ನುನ್ನತದ ಭಕ್ತಿಯಿಂ ದರಿವರ್ಗೆ ಸಾ ಕವಂತಿರಲಿ ನೀವು॥
ಆಮಣಿಯ ದಾನಮಂ ತಡೆದ ಪಾಪಂ ಹರಿಯ।
ರಾಮಣೀಯಕ ಮೂರ್ತಿ ದರ್ಶನದೊಳಲ್ಲದ ಮು।
ತಾ ಮಣಿಯ ದಂಜದಿರಿ ಗರುಡಂ ಮುಳಿವನಲ್ಲ ಬನ್ನಿ ಪೋಗುವ ಮೆಂದನು॥ ॥೩೯॥

ಇಂತೆಂ ದವರ್ ಪನ್ನಗಾವಳಿಯ ನೊಡಗೊಂ ಡ |
ನಂತರದೊ ಳಾ ಮಹಾಮಣಿ ವೆರಸಿ ಪೊರಮಟ್ಟ |
ನಂತ ನುರು ಕುಂಡಲ ದ್ವಿತಯಮಂ ಶತಶಲಾಕೆ ಯೊಳಿಸೆವ ಸತ್ತಿಗೆಯನು ||
ಸಂತಸದೊ ಳಾರ್ಜುನಿಗೆ ಕೊಟ್ಟು ಕಂದಾತ್ರನಂ |
ಸಂತೈಸಿ ಪಾತಾಳ ದುತ್ತಮ ಸುವಸ್ತು ಸಹಿ |
ತಂತರಿಸದೈದಿದಂ ಫಲುಗುಣಂ ಮಡಿದಿಹ ರಣಾವನಿಗೆ ಸಂಭ್ರಮದೊಳು || ||೪೦||
ಸುಮ್ಮಾನದಿಂದೆ ಶೇಷಂ ಪೋಗುತಿರೆ ಕಂಡು |
ದುಮ್ಮಾನದಿಂದೆ ಧೃತರಾಷ್ಟ್ರಂ ನಿಜಾಲಯ ದೊ |
ಳುಮ್ಮಳಿಸಿ ಮಣಿವಿಜಯ ಮಾರ್ಜುನಿಗೆ ಪಾರ್ಥಂಗೆ ಜೀವಂ ಯುಧಿಷ್ಠಿರಂಗೆ ||
ತಮ್ಮ ನಧ್ಯವಯಂ ಮಹಾಧ್ವರಕೆ ತುರಗ ಮಿನಿ |
ತೊಮ್ಮೆ ಸಂಜನಿಸುತಿ ರ್ದಪುದಕಟ ಬಹು ವಿಘ್ನ |
ಮಂ ಮಾಡಿದೆಂ ತಪ್ಪಿತೀಗಳಾ ನೇಗೈವೆನೆಂದು ಚಿಂತಿಸುತಿರ್ದನು || ||೪೧||
ಅನ್ನೆಗಂ ದುರ್ಬುದ್ಧಿ ದುಸ್ಸ್ವಭಾವ ರ್ಕಳೆಂ |
ಬುನ್ನತದ ಪೆಸರುಳ್ಳ ಮಕ್ಕಳುಂ ಟಿರ್ದರಾ |
ಪನ್ನಗಂ ಗವರಾತನಂ ಸಂತವಿಟ್ಟು ನೀಂ ಬಹುದು ಫಣಿರಾಜನೊಡನೆ ||
ಮುನ್ನಮೆ ರಣಕೆ ಪೋಗಿ ಪಾರ್ಥನ ತಲೆಯ ನಾವು |
ಗನ್ನದಿಂ ಕೊಂಡೊಯ್ವೆವಮ್ಮ ಪೆಂಪ್ಪಗಳಿಂದೆ |
ಭಿನ್ನವಾಗದೆ ನರರ್ಗೆ ಬಾಳ್ಕೆ ಬಾರದೆ ನರಕ ಮಂಜಬೇಡದಕೆಂದರು || ||೪೨||
ಅರಸ ಕೇಳ್ದುರ್ಬುದ್ಧಿ ದುಸ್ಸ್ವಭಾವ ರ್ಪೊರ್ದಲೆ |
ಧರೆಗೆ ಬಂದರ್ಜುನನ ತಲೆಯ ನಪಹರಿಸಿ ಕೊಂ |
ಡಿರದೆ ಬಕದಾಲ್ಭ್ಯನ ಮಹಾ ಘೋರ ನಿರ್ಜನಾರಣ್ಯದೊ ಳ್ಸುಡಲಿತ್ತ ||
ಹರಿಸದಿಂ ಶೇಷನಂ ಮುಂದಿಕ್ಕಿಕೊಂಡು ಮಣಿ |
ವೆರಸಿ ರಣಮಂಡಲಕೆ ಕಲಿ ಬಭ್ರುವಾಹನಂ |
ಬರಲಾ ಸಮಯದೊಳಾದುದು ಬಹಳ ಕಳಕಳಂ ಕಾಣದೆ ನರನ ಶಿರವನು || ||೪೩||
ಕಾಂತೆಯರೊಡನೆ ತನ್ನ ಜನನಿಯ ಕುಂಡಲದ |
ಕಾಂತಿಯಿಂ ದಾ ರಣಾಗ್ರದೊ ಳೆಸೆಯುತಿರ್ದ ನಿಜ |
ಕಾಂತನ ಶಿರವನಲ್ಲಿ ಕಾಣ ದೇನಾದು ದಾರೊಯ್ದ ರೆಲ್ಲಿರ್ಪುದೆಂದು ||
ಪ್ರಾಂತ ದೆಣ್ದೆಸೆಗಳಂ ನೋಡಿ ಹಮ್ಮೈಸಿ ವಿ |
ಭ್ರಾಂತಿ ಯಿಂದರಸಿ ಹಾಹಾ ಯೆಂಬ ರಭಸ ಮಾ |
ಶಾಂತಮಂ ತೀವ ಲಾಸಮಯ ಕಪಿಪತಿಸಹಿತ ಬಭ್ರುವಾಹಂ ಬಂದನು || ||೪೪||
ಅಕ್ಕರೊಳುಲೂಪಿ ಚಿತ್ರಾಂಗದೆಯ ರನ್ನೆಗಂ |
ಕಕ್ಕಸದ ರಣದೊಳರ್ಜುನನ ಕಾಲ್ದೆಸೆಯೊಳಿದೆ |
ಯಿಕ್ಕದೆ ರಮಣನ ತಲೆ ತನುಗಳಂ ನೋಡುತಿರ್ದವರಾಗ ಪಾರ್ಥ ಬರಲು ||
ಇಕ್ಕೆಯೊಳ್ಶಿರಮಿಲ್ಲದಿರೆ ಬೆದರಿ ನೃಪ ಮಕಿಂಪಿ |
ಮಿಕ್ಕ ಸತಿಯರ ನೆರವಿ ಗಜಬಜಿಸೆ ಕಂಡಿಳೆಯೊ |
ಳೊಕ್ಕನೊಡಲಂ ಬಭ್ರುವಾಹನಂ ಮೃತಕಲ್ಪನಾಗಿ ಪಲವೆಣಿಕೆಯಿಂದೆ || ||೪೫||

ಇಂತಾಗುತಿರಲಿತ್ತ ಲತ್ತ ಲಿಭನಗರದೊ।
ಳ್ಕುಂತಿ ಪಾರ್ಥಂ ಬಿದ್ದ ದಿನದಿರುಳ್ಕಂಡ ಳ।
ತ್ಯಂತ ಭೀಕರದ ಕನಸಂ ಸೇಳ್ದ ಳಸುರಾರಿ ಧರ್ಮಜ ವೃಕೋದರರ್ಗೆ॥
ಅಂತಕನ ದೆಸೆಗಾಗಿ ರಾಸಭಮನೇರಿ ಪೋ।
ಪಂ ತೈಲವಾಪಿ ಗತನಾಗಿ ದಾಸಣದ ಪೂ।
ವಂ ತೊಡಂ ದಾಳ್ದು ಗೋಮಯ ವಿಲಿಪ್ತಾಂಗನಾಗಿರ್ದಪಂ ವಿಜಯನೆಂದು ॥೪೬॥
ಜೆಂದಪುದು ಪಡೆ ದೆನ್ನೊಡ ಲ್ಸುಭದ್ರೆಯು ಕಂಗ।
ಳಿಂ ಮೊಸರ್ದಪುದು ಕಂಬನಿ ಕೃಷ್ಣ ನಿನ್ನ ಸಖ।
ನಿಂದು ಜೀವಂತನಾಗಿರ್ಪು ದರಿದೆಂದು ಪೃಥೆ ಹಂಬಲಿಸಿ ಮರುಗುತಿರಲು॥
ಇಂದಿರಾವಲ್ಲಭಂ ಗರುಡನಂ ನೆನೆಯಲ್ಕೆ।
ಬಂದನಾತಂ ಬಳಿಕವನ ಬೆನ್ನಡರ್ದಸಿಲ।
ನಂದನ ಯಶೋದೆ ದೇವಕಿ ಕುಂತಿಯರ್ವೆರಸಿ ಮಣಿಪುರಕೆ ನಡೆತಂದನು॥ ॥೪೭॥
ವಿಸ್ತರದ ರಾಜಭವನದ ಮಾಟ ಕೂಟ ದಯು।
ತ ಸ್ತಂಭದಿಂ ದೆಸೆವ ಸಭೆಯ ನವರತ್ನದ ಗ।
ಭಸ್ತಿಗಳ ಕೋಟಾವಲಯದ ಮಣಿಪುರಮಂ ಪೊರಗೆ ಕಾದಿ ಮಡಿದ ರಣದ॥
ಹಸ್ತಿ ಹಯ ನರ ವೃಂದಮಂ ಸುತ್ತಲುರಿವ ದೀ।
ಪ ಸ್ತೋಮಮಂ ಬಿದ್ದ ಪಾರ್ಥನಂ ನೆರೆದಿಹ ಸ।
ಮಸ್ತ ಸತಿಯರ ನಭದಿಂ ಶೌರಿ ಭೀಮಂಗೆ ತೋರಿ ಮಗುಳಿಂತೆಂದನು॥ ॥೪೮॥
ಭೀಮ ನೋಡಿಲ್ಲಿ ಪಾರ್ಥನ ದೇಹಮಿದೆ ವದನ
ತಾಮರಸಮಂ ಕಾಣೆ ನಡುಗಿದುದೊ ಬಳಸಿರ್ದ।
ಭಾಮಿನಿಯ ರಾನನ ಶಶಾಂಕ ಮಂಡಲದಿಂದೆನಲ್ಕೆ ಹರಿ ಗನಿಲಸೂನು॥
ಶ್ರೀಮನೋಹರ ನಿನ್ನ ಮೂರ್ತಿ ರವಿ ಮೂಡೆ ಸು।
ತ್ರಾಮಸುತ ನಾಸ್ಯಾಬ್ಜ ಮಪ್ರಕಾಶಿತ ಮಹುದೆ।
ಭೂಮಿಯೊಳ್ಪೇಳೆನೆ ಮುರಾರಿ ಪಕ್ಷೀಂದ್ರ ನಿಂದಿಳಿದ ನಾ ರಣದೆಡೆಯೊಳು॥ ॥೪೯॥
ಲಲಿತರತ್ನ ಪ್ರದೀಪಂಗಳಿಂ ಬಳಸಿರ್ದ।
ಲಲನೆಯರ ಭೂಷಣದ ಕಾಂತಿಯಿಂ ಕಪ್ಪುರದ।
ಮಲಯಜದ ತೈಲದ ಸೊಡರ್ಗಳಿಂ ನಡು ವಿರುಳ್ಪಗಲಂತೆ ಕಾಣಿಸುತಿರೆ॥
ಕಲಿ ಭೀಮ ದೇವಕಿ ಯಶೋದೆ ಪೃಥೆಯು ವೆರಸಿ।
ನೆಲಕಿಳಿದು ಪಾರ್ಥನ ಶರೀರಮಂ ಕಂಡಾಗ।
ಜಲಜಾಂಬಕಂ ಮರುಗು ತಾವನಿಂದಾದುದೈ ತಂದೆ ಮೃತಿ ನಿನಗೆಂದನು॥ ॥೫೦॥
ಬಂದೆನೇಳೈ ಪಾರ್ಥ ಕೃಷ್ಣನಾಂ ಕುಂತಿ ಗಭ।
ವಂದಿಸೈ ಮಾತೆಯಲ್ಲಿನೆ ನಿನಗೆ ನೀ ನಳಿಯ।
ನೆಂದು ಪರಸುವರಲ್ಲೈ ದೇವಕಿ ಯಶೋದೆಯು ಭಾಪಿಸೆ ಯಮೇಕಿಪರನು।
ಎಂದಿನಂ ತಗ್ರಜನ ನೀಕ್ಷಿಸ್ಥೆ ಭೀಮನಂ।
ತಂದೆ ಹೇಳಿಂತು ಮಾತಾಡದಿ ರ್ದಪರೆ ನೀಂ।
ಮುಂದೆ ನೃಪ ಮುಖ್ಯಮಂ ನಡೆಸುವವ ರಾರೆನುತೆ ಕನವರಿಸಿ ಹರಿ ನುಡಿದನು ॥೫೧॥

ಮರುಗಿದಂ ಮೈದುನಂ ಗಸುರಾರಿ ಮಾನವರ ।
ತೆರದಿಂದೆ ದೇವಕಿ ಯಶೋದೆಯು ವೆರಸಿ ನೈ ।
ಮರೆದ ಳಾಕುಂತಿ ನಿಜತನಯನಿರವಂ ಕಂಡು ಶೋಕದಿಂ ದಾಕ್ಷಣದೊಳು ॥
ಕರೆದು ಪಶ್ರುಗಳಾ ವೃಕೋದರನ ಕಂಗಳಿಂ ।
ತುರುಗಿ ತಳ ಲೊಡಲೊ ಳ್ಪಹೋದರನ ಮರಣ ದೊ ।
ಳ್ಸೊರೆಗೆನಿಪ್ಪಂ ಕೃಷ್ಣನೆಂದು ಮನದೊಳ್ತಿಳಿದು ಕಲಿ ಭೀಮನಿಂತೆಂದನು ॥ ॥೫೨॥
ದೇವ ರವಿಗಂಧಕಾರಮೆ ಮಾರ್ಗಮರ್ಜುನಂ ।
ಜೀವಿಸದೆ ಮಾಣ್ಬನೆ ಮರುಗ ಲೇ ಕೀಕ್ಷಿಸು ಕೃ ।
ಪಾವಲೋಕನದಿಂದೆ ಕರ್ಣಜಂ ಬಿದ್ದಿರ್ದಪಂ ನೋಡು ಪಾರ್ಥನೊಡನೆ ॥
ಭೂವಲಯ ದೊ ಳ್ತಮ್ಮ ತುರಗಮಂ ಕಟ್ಟಿಕೊಂ ।
ಡೀ ವೀರರಿರ್ವರಂ ಕೆಡಹಿದ ಪರಾಕ್ರಮಿ ಯ ।
ದಾವನೋ ಕಾಣ್ಬೆನೈಸಲೆ ಬರಲಿ ಕದನಕೆಂ ದನಿಲಜಂ ಗರ್ಜಿಸಿದನು ॥ ॥೫೩॥
ಈಸರಿಯೊ ಳನಿಲಜಂ ಕೃಷ್ಣನೊ ಳ್ಮಾತಾಡು ।
ವಾ ಸಥದೊ ಳನಿರುದ್ಧಂ ಸಾತ್ಯಕಿ ಪ್ರದ್ಯುಮ್ನ ।
ರಾಪುರದ ಮಧ್ಯದೊ ಳುಲೂಪಿ ನಿವಾಸದೊ ಳ್ಚೀತರಿಸಿಕೊಂಡು ಕೂಡೆ ॥
ಶಾಪಹತನಾಗಿ ಫಲುಗುಣನಿರ್ದ ರಣಕೆ ಬಂ ।
ದೀ ಪಂಕಜಾಕ್ಷ ಮಾರುತಿಗಳಂ ಕಂಡು ಬಳಿ ।
ಕಾ ಪಾರ್ಥನಂದನಂ ಗೆಚ್ಚರಿಸಿ ಕಾಣಿಸಿದ ರಚ್ಯುತ ವೃಕೋದರರನು ॥ ॥೫೪॥
ಜನಪ ಕೇ ಳ್ಫಲುಗುಣನ ಕೃತ್ಯಮಂ ಬಭ್ರುವಾ ।
ಹನನ ವೃತ್ತಾಂತಮಂ ಪವನಜ ಮುರಾರ್‍ಗ ।
ಳನಿರುದ್ಧ ಸಾತ್ಯಕಿ ಪ್ರದ್ಯುಮ್ನ ರರುಪಿ ಬಳಿಕಾತನಂ ಕಾಣಿಸಲ್ಕೆ ॥
ಅನುಜಂಗೆ ಮುನಿದವಂ ಪಗೆಯಾಗದಿರ್ದಪನೆ ।
ಜನಕನಂ ಕೊಂದವಂ ಪಾಪಿಯಲ್ಲನೆ ತನ್ನ ।
ನನುವರಸ ದಪ್ಪಳಿಸು ಗದೆಯೊಳಿಂ ದೆರಗಿದಂ ಪಾರ್ಥಿ ಭೀಮನ ಪದದೊಳು ॥೫೫॥
ಶಿಕ್ಷೆ ರಕ್ಷೆಗೆ ಕರ್ತೃ ವೈಷ್ಣವದ್ರೋಹಿಗ ।
ಳ್ಗಕ್ಷಮಂ ನೀನದರಿ ನರ್ಜುನಂ ಭಾಗವತ ।
ಪಕ್ಷ ಕನ್ರೀಸರಂ ತನಗೆ ಪಿತನಾತನಂ ಕೊಂದ ಕತದಿಂದೆ ಕೊಲಿಗೆ ॥
ಪಕ್ಷನಾಂ ವಿರಾಂದೊಡೆ ರಾಹುವಿನ ಕಂಠಮಂ ।
ತಕ್ಷಣದೊ ಳರಿದಂತೆ ಕತ್ತರಿಸು ಚಕ್ರದಿಂ ।
ಪಕ್ಷಿವಾಹನ ತನ್ನ ಕೊರಲ ನೆಂದಾ ಪಾರ್ಥಿ ಕೆಡೆದ ನಚ್ಯುತ ನಡಿಯೊಳು ॥ ॥೫೬॥
ಇಂತಾಗ ಳನಿಲಸುತ ಕೃಷ್ಣರ ಮನಂ ಮರುಗು ।
ವಂ ತಳಲ್ದೊಡನೆ ದೇವಕಿಯುಂ ಯಶೋದೆಯುಂ ।
ಕುಂತಿಯುಂ ಕಂಡು ಕಡುಶೋಕದಿಂ ದವರವರ ಚರಣಂಗಳೊ ಳ್ಪೊರಳ್ದು ॥
ಎಂತು ಟಿದಕಯ್ಯನಂ ಕೊಂದೆನಾಂ ನಿಮಗೆ ನೊ ।
ಮ್ಮಂ ತನ್ನನೇಕೆ ಪರಸುವಿ ರಕಟ ಪಾರ್ಥ ನೀ ।
ಮಂತಿನಿಯ ರಿರ್ದಪ ರುಲೂಪಿ ಚಿತ್ರಾಂಗದೆಯ ರಿವರ ನೀಕ್ಷಿಪುದೆಂದನು ॥ ॥೫೭॥

ಅನಿತರೊ ಳುಲೂಪಿ ಚಿತ್ರಾಂಗದೆಯು ರರ್ಜುನನ |
ಜನನಿಯಂ ಕೃಷ್ಣಮಾತೆಯರಂ ನಿರೀಕ್ಷಿಸಿ ನ |
ರನ ಪೆಂಡಿರಾವೆಂದು ಪೇಳ್ದವರ ಚರಣಂಗಳೊ ಳ್ಪೊರ ಳ್ದಳಲ್ದು ಕೂಡೆ ||
ವನಜಾಂಬಕಿಯ ರೊರಲೆ ಬಳಿ ಕನಿಬರೆಲ್ಲರುಂ |
ಘನಶೋಕದಿಂದೆ ಹಾಹಾರವಂ ಗೆಯ್ಯೆ ನಿಜ |
ತನುಜ ನಂಗದ ಮೇಲೆ ಬಿದ್ದು ದುಃಖಿತೆಯಾಗಿ ಕುಂತಿ ಹರಿಗಿಂತೆಂದಳು || ||೫೮||

ಕಂಡೆಲೈ ಕೃಷ್ಣ ಫಲುಗುಣ ನಿರವ ನಿನ್ನು ಭೂ |
ಮಂಡಲದೊ ಳೆನಗೆ ಸುತರಿರ್ದಪರೆ ನೀನಾರ |
ಬಂಡಿಯಂ ಪೊಡೆದಪೈ ತ್ರೈಲೋಕ್ಯ ವೀರನೆಂ ದೆನಿಸಿಕೊಳ್ವವ ನದಾರು ||
ಖಂಡ ಪರಶುವಿ ನುತ್ತಮಾಂಗಮಂ ಪೊಯ್ದು ಕೋ |
ದಂಡಮಂ ಪಿಡಿವ ರಾ ರನುಜಾಗ್ರಜರ ನಡುವೆ |
ಚಂಡತೇಜದೊಳೆಸೆವರುಂಟೆ ಧರ್ಮಜನಾರ ನಪ್ಪುವಂ ಪೇಳೆಂದಳು || ||೫೯||

ಈತನಂತಿರ ಲಿತ್ತ ನೋಡೆಲೆ ಮುಕುಂದ ವೃಷ |
ಕೇತು ಮಡಿದಿರ್ದಪಂ ಸೈರಿಸುವೆ ನೆಂತಿವನ |
ತಾತನಂ ಕಂಡು ಹಿಗ್ಗುವೆ ನಾರುಮರಿಯದಂ ತಾತ್ಮಜ ಸ್ನೇಹದಿಂದೆ ||
ಆತನಂ ಕೊಂದ ನೀಪಾರ್ಥ ನಂದಾ ನೋವ |
ನೀ ತರಳ ನೇಳ್ಗೆಯಿಂ ಮರೆದಿರ್ದೆ ನಿನ್ನೆಗಂ |
ಬೀತು ದೆನಗಿಂದು ಸಂತತಿ ಕರ್ಣಜನೊಳಿಂ ದಳಲ್ದ ಳಾಕುಂತಿ ಮರುಗಿ || ||೬೦||

ಆ ಸಮಯಕೈತಂದು ಕಂಡ ನಹಿಪತಿ ಪೀತ |
ವಾಸನಂ ಪೊಡಮಟ್ಟು ನುಡಿದಾಪರೆಗೆ ನುಡಿದ |
ನೀ ಸಕಲ ಲೋಕಮಂ ಪೊರೆವ ನಿನಗೀ ನರನ ಜೀವಮಂ ಪಡೆವು ದರಿದೆ ||
ಜೀಸರೀತಕೆ ದೇವ ಧರ್ಮಜನ ಕುಲಮುದು |
ಪೋಸರಿಸ ದುದ್ಧರಿಸು ನಿನ್ನ ಡಿಂಗರಿಗರ್ಗೆ |
ಲೇಸಲ್ಲ ದಘ ಶೋಕ ಭಯ ತಾಪ ದುಃಖಂಗಳಿರ್ದಪುವೆ ಪೇಳೆಂದನು || ||೬೧||

ತಾತ ನಸುವಂ ಪಡೆಯ ಲೀ ಬಭ್ರುವಾಹನಂ |
ಪಾತಾಳಕೈದಿ ಜೀವದ ರತ್ನಮಂ ಬೇಡಿ |
ಘಾತಿಸಿದ ನಹಿಗಳಂ ತಾನದಂ ಪರಿಹರಿಸಿ ನಿನ್ನ ಸಂಸ್ತುತಿಸುವೆನೆಂದು |
ಭೂತಳಕೆ ಬಂದ ನಿದೆ ಮಣಿ ತನ್ನ ಕೈಯೊಳೀ |
ಶ್ವೇತವಾಹನನ ತಲೆಯಂ ತರಿಸು ಜಗದೊಳ |
ಖ್ಯಾತನಪ್ಪುದು ನಿನಗೆ ಸರ್ವಗತನಪ್ಪೆ ನೀನೆಂದು ಫಣಿಪತಿ ನುಡಿದನು || ||೬೨||

ಶೇಷ ನಿಂತೆಂದೊಡಾಲಿಸಿ ಕೃಷ್ಣ ನಬಲೆಯರ |
ಘೋಷಮಂ ನಿಲಿಸಿ ನೀವೆಲ್ಲರುಂ ಕೇಳ್ವು ದೀ |
ಘಾಸಿಯುಂ ಬ್ರಹ್ಮಚರ್ಯದೊ ಳಿಂದ್ರಿಯಂಗಳಂ ತಾನಿನ್ನೆಗಂ ಧರೆಯೊಳು ||
ಪೋಷಿಸಿದೆ ನಾದೊಡಾ ಪುಣ್ಯದಿಂ ಕುಂಡಲ ವಿ |
ಭೂಷಿತದ ಪಾರ್ಥನ ಶಿರಂ ಬರಲಿ ಕಳ್ದುದು |
ದೋಷಿಗ ಳೆನ್ನಾಜ್ಞೆಯಿಂದೆ ಹತರಾಗ ಲಿರಿದಿಹುದು ಸಾರಿದೆ ನೆಂದನು || ||೬೩||

ಜನಪ ಕೇಳಾಶ್ಚರ್ಯಮಂ ಬಳಿಕ ಕೃಷ್ಣ ನಿಂ।
ತೆನೆ ದುಸ್ಸ್ವಭಾವ ದುರ್ಬುದ್ಧಿಗಳ ನರಿದು ಪಾ।
ರ್ಥನ ತಲೆಯನಾಕ್ಷಣಕೆ ತಂದುದು ಸುದರ್ಶನಂ ಮಣಿಪುರದ ರಣಭೂಮಿಗೆ ॥
ಜನಮೈದೆ ಕೊಂಡಾಡಿ ತುರಗಪತಿ ಹರಿಸದಿಂ।
ವಿನುತ ಸಂಜೀವಕದ ಮಣಿಯ ನಿತ್ತಂ ಮುಕುಂ।
ದನ ಕೈಯೊಳಾಗ ಹರಿ ನೋಡಿದಂ ಕೃಪೆಯಿಂದೆ ಕರ್ಣಸುತ ಫಲ್ಗುನರನು ॥ ॥೬೪॥
ತದನಂತರ ಮೊಳಂಯುದದ ಲೋಚನಂ ತಾನೆ।
ಸೊದ ಲಿನಜಸುತನ ತನು ತಲೆಗಳಂ ಕೂಡಿ ಜೀ।
ವದ ಮಣಿಯನಿದಿಯ ಮೇಲಿರಿಸಿ ಬಳಿ ಕರ್ಜುನನ ಕಾಯಕೆ ಶಿರವ ನೊಂದಿಸಿ ॥
ಹೃದಯದೆಡೆ ಗಾ ದಿವ್ಯ ರತ್ನಮಂ ಸಂಗಡಿಸಿ।
ಮುಕ ಲಿಪರೀರನಾಜ್ಞೆಯೊಳೆಂದು ಪರಸಿ ಕರು।
ಣದೊಳಪರ ನಿಕ್ಕಿಸಿದೊ ಡಭವಪ್ರಸಾದದಿಂ ಜೀವಿಸಿದ ರಾಕ್ಷಣದೊಳು ॥ ॥೬೫॥
ಲೀಲೆಯೊ ಳಜಾಂಡ ಕೋಟಿಗ ಳಳಿವ ನಾದಪ್ರು।
ಪಾಲಿಸಿದೊ ಡಿದಲ್ಪ್ರ ಗದ ಪರಮಪುರುಷನ ಕೃ।
ಪಾಲೋಕನದೊ ಳೀಶ್ವರಾದ ಮಡಿದರ್ಜುನಾದಿಗಳೆಂದು ಧರೆ ಪೊಗಳಲು ॥
ಆಲಿಗ ಳರಳ್ದ ವದ ನಸರಿ ತೊಡಲೊಳ ಗೆಸೆದ।
ಲಲಿತಮುಖ ಕಾಂತಿ ಪೊಗರೇರಿ ತನುಯಂ।
ಮೇಳೈಸುವಿದ ರೊಯ್ಯನೆ ಪಾರ್ಥ ಕರ್ಣಸುತ ರಸುರಾಶಿಯಂ ಬಿಸುತೆ ॥೬೬॥
ಅಳಿದ ಕತ್ತಲೆಯಿಂ ಬಗುಳ್ದ ನಾರಿಜದಂತೆ।
ಬಿಡದೆ ಮುಸುಕಿದ ಮೇಘಮಂ ಕಳೆದ ರವಿಯಂತೆ।
ತುಡುಕಿರ್ದ ರಾಹು ತೊಲಗಿದ ಚಂದ್ರನಂತೆ ಕರ್ಣಜ ಪಾರ್ಥರಾಸ್ಯಂಗಳು ॥
ಕಡುಚೆಲ್ವ ಕಾಂತಿ ಕೆಳೆಗಳನಾಂತುವಾಗ ಪಾ।
ಲ್ಗಡಲೊಡೆಯನಂ ಮುಂದೆ ಕಂಡು ಪದಕಮಲದೊ।
ಳ್ಪೊಡಮಡ ಲವರ್ಗಳಂ ತೆಗೆದಪ್ಪಿ ಚುಂಬಿಸುತೆ ಮೈದಡವಿದಂ ಕೃಪೆಯೊಳು ॥೬೭॥
ದುಂದುಭಿಗ ಳಭ್ರದೊಳ್ಮೊಳಗಿದವು ಸೂಸಿದುದು।
ಮಂದಾರ ದರಲ ಸರಿ ನರ ಕರ್ಣಜರ ಮೇಲೆ।
ಬಂದಪ್ಪಿದಂ ಬಳಿ ಕವರ್ಗಳಂ ಭೀಮ ನಾಲಿಂಗಿಸಿದಳಾಗ ಕುಂತಿ ॥ •
ನಂದಿಸ ಲ್ಬರಸಿದ ದೇವಕಿ ಯಶೋದೆಯು।
ಮುರ್ಂದಿರ್ದ ರಿಡನಂ ಕಾಣಿಸ ಲ್ಪೊಡಮಟ್ಟ।
ರಂ ದವ ಮರ್ದದಿಂದೆ ಹರಿ ಪಾಂಚಜನ್ಯಮಂ ಪಿಡಿದು ಸುರುಘೋಷನಾಗೆ ॥೬೮॥
ಪದುಳಿಸಿದ ನನಿರುದ್ಧ ಸಾತ್ಯಕಿ ಪ್ರದ್ಯುಮ್ನ।
ಗದ ಸಾಂಬ ಕೃತವರ್ಮ ನಿರತ ಪ್ರಮುಖರಾದ।
ಯದುವೀರ ರನುಸಾಲ್ವ ಯೌವನಾಶ್ವ ವಿತಧ್ವಜ ಹಂಸಕೇತುಗಳ್ ॥
ಮುದದೀಂ ತ್ರಸುರಾಶಿಯಂ ಕಂಡು ತಮತಮಗೆ ॥
ಪದಕೆರಗಿ ಬಿನ್ನೈಸಿದ ರ್ಬಭ್ರುವಾಹನನ।
ಕದನ ದಾಯಾಸಮಂ ನಗರದೊ ಳುಳಿಸಿ ಚಿತ್ರಾಂಗದೆಯ ರಸಗಿದುದನು ॥ ॥೬೯॥

ಹರಿ ಬಳಿಕ ಜಾಹ್ನವಿಯ ಶಾಪದಿಂ ದಾದುದೀ |
ಪರಿಭವಂ ನಿನಗೆಂದು ಪಾರ್ಥನಂ ತಿಳುಪಿದಂ |
ತರಿಸಿ ಕಾಣಿಕೆಗೊಟ್ಟುಲೂಪಿ ಚಿತ್ರಾಂಗದೆಯು ರಸುರಾರಿಯಂ ಕಂಡರು ||
ನೆರೆದು ಮುಭಯರ ಸೇನೆ ಬಹಳ ಪರಿತೋಷದಿಂ |
ಮೊರೆದು ದುತ್ಸವದಿಂದೆ ನಿಖಿಳ ವಾದ್ಯಪ್ರತತಿ |
ಪರೆದುವು ಸಮಸ್ತ ಸಂತಾಪಂಗಳೆಲ್ಲರ್ಗೆ ಕೃಷ್ಣ ದರ್ಶನದೊಳಂದು || ||೨೦||

ಪಾರ್ಥಜಂ ಬಳಿಕ ಕನಿಬರೆಲ್ಲರಂ ವಿನಯದಿಂ |
ಪ್ರಾರ್ಥಿಸಿದೊಡಲ್ಲಿಂದೆ ಮಣಿಪುರಕೆ ಬರಲಾಗಿ |
ತೀರ್ಥ ಸ್ವರೂಪ ನಹ ಕೃಷ್ಣನಂ ಶೇಷನಂ ಮಂಡಲಾಧೀಶರೆನಿಸಿಪ |
ಪಾರ್ಥಿವರ ನಳಿದಿದ್ದ ನಿಜಯನಂ ಕಂಡತಿ ಕೃ |
ತಾರ್ಥರಾದಪೆವೆಂಬ ಹರ್ಷದಿಂ ತಮತಮಗೆ |
ಸಾರ್ಥವೈಭವದಿಂ ದಲಂಕರಿಸಿ ನಗರವಂ ನಿಖಿಳ ಜನಮಿದಿರ್ಗೊಂಡುದು || ||೨೧||

ತಳಿತ ಗುಡಿಗಳ ಚೆಲ್ವಿ ನೋರಣದ ತೋರಣದ |
ಕಳಸ ಕನ್ನಡಿ ವಿಡಿದ ಕನ್ನೆಯರ ಮನ್ನೆಯರ |
ದಳದ ಪೊಡೆಪಿನ ಮೊರೆವ ಭೇರಿಗಳ ಭೂರಿಗಳ ಮೃದು ಮೃದಂಗ ಧ್ವನಿಗಳ ||
ತೊಳಗಿ ಬೆಳಗುವ ಲೋಚನಾಂತೆಯರ ಕಾಂತೆಯರ |
ಲಳಿಲುಳಿಯ ನರ್ತನದ ಕೋಪುಗಳ ರೂಪುಗಳ |
ತಳಿವ ಸೇಸೆಯ ಪೂಗಳೊತ್ತುಗಳ ಮುತ್ತುಗಳ ವಿಭವದಿಂ ಪೊಳಲೆಸೆದುದು ||೨೨||

ಈ ಸಂಭ್ರಮದೊಳೆಸೆವ ನಗರದೊಳ್ನಡೆತಂದು |
ವಾಸುದೇವಾದಿಗಳ್ ಬಭ್ರುವಾಹನ ಸದನ |
ದಾ ಸಭೆಗೆ ವಿವಿಧೋಪಚಾರ ವಿಭವಂಗಳಂ ಕೈಕೊಳುತೆ ಬಂದು ಪುಗಲು ||
ಆ ಸವ್ಯಸಾಚಿಗೆ ನಿಜಾತ್ಮಜಂ ತನ್ನ ಸಿಂ |
ಹಾಸನವನಿತ್ತಖಿಳ ರಾಜ್ಯಮಂ ಕೊಟ್ಟು ಲ |
ಜ್ಜಾಸಮನ್ವಿತನಾಗಿ ಸಮ್ಮನಿರ ಲರ್ಜುನಂ ಮಾತಾಡದಿರುತಿರ್ದನು || ||೨೩||

ರಾಯ ಕೇಳರ್ಜುನಂ ಖಿನ್ನನಾಗಿರೆ ಕಂಡು |
ವಾಯುಸುತ ಶೇಷಾದಿಗಳ್ನುಡಿದರೆಲ್ಲಿಯುಮ |
ಜೇಯನಹೆ ಧರೆಯೊಳಿಂ ದಾತ್ಮಜನ ದೆಸೆಯಿಂದೆ ನಿನ ಗಪಜಯಂ ಬಂದುದು ||
ನೋಯಲೇತಕೆ ಬರಿದೆ ಮನ್ನಿಸು ಕುಮಾರನಂ |
ಪ್ರೀಯಮಾಗಿದೆ ಮಗನ ಮೇಲಿನ್ನು ಮಕಟಕಟ |
ಹಾಯುಮಿದು ಸುರನದಿಯ ಶಾಪದಿಂದಾಯ್ತುಳಿದೆ ಕೃಷ್ಣ ಪ್ರಸಾದದಿಂದೆ || ||೨೪||

ಅರಸಿಯರುಲೂಪಿ ಚಿತ್ರಾಂಗದೆಯರಿವರ ನಾ |
ದರಿಸದೆ ನಿಜಾತ್ಮಜಂ ಬಭ್ರುವಾಹನ ನಿವನ |
ಸಿರಿಯ ನಂಗೀಕರಿಸ ದೀತನಂ ಮನ್ನಿಸದೆ ಫಲುಗುಣನಿದೇಕೆ ಬರಿದೆ ||
ಮರುಳಾದ ನಕಟ ನೀಂ ಪೇಳಲಿಲ್ಲಸೆ ಚಕ್ರ |
ಧರ ನಿನ್ನ ಮೈದುನಂಗೆಂದು ಪವನಜ ಫಣೀ |
ಶ್ವರ ಹಂಸಕೇತು ದೇವಕಿ ಕುಂತಿ ವರ ಯಶೋದಾದಿಗಳ್ಪೇಳ್ದರಂದು || ||೨೫||

ಲಜ್ಜಿಸಿದನಾ ಬಭ್ರುವಾಹನಂ ಬಳಿಕ ತ।
ನ್ನ ಜ್ಜ ಗವನೆಲ್ಲರುಂ ಕೇಳ್ವುದೀ ರಾಜ್ಯಮಂ।
ಮಜ್ಜನಕನಂಘ್ರಿಗೊಪ್ಪಿಸಿ ನಿಜ ಶರೀರಮಂ ಕೆಡಹಿ ತುಹಿನಾಚಲದೊಳು ॥
ಸಜ್ಜನರ ಗತಿವಡೆವೆ ನಲ್ಲದೊಡೆ ಗುರು ಧರ್ಮ।
ಕೃಜ್ಜನಾರ್ದನಭಕ್ತ ನೀತನಂ ಘಾತಿಸಿದ।
ಕಜ್ಜದಿಂ ದೊದವಿದ ಮಹಾಪಾತಕಂ ಪೋಗದೆನೆ ಭೀಮನಿಂತೆಂದನು ॥ ||೭೬||
ತಪ್ಪನಾಡಿದೆ ಮಗನೆ ಕೃಷ್ಣನಿರುತಿರೆ ಮುಂದೆ।
ಬಪ್ಪವೇ ಪಾತಕಂ ಗುರು ಪಿತಾಮಹ ಮುಖ್ಯ।
ರಪ್ಪವರನೆಲ್ಲರಂ ಕೊಂದೆಮಗೆ ನಿಂದುವೇ ದೋಷ ಲೇಶಂಗಳೀಗ ॥
ಒಪ್ಪುವಾದಿತ್ಯನಂ ಕಂಡ ಬಳಿಕಿರ್ದಪುದೆ।
ಕಪ್ಪಿನ ತಮಂ ಮುರುಳೆ ಹರಿಯನಾಶ್ರೈಸಿದರ।
ನಪ್ಪುವುವೆ ಕಲಿ ತಾಪ ದುಃಖ ಭಯ ಶೋಕ ನರಕಾದಿ ಪೀಡೆಗಳೆಂದನು ||೭೭||
ನಲೆ ನಿಷ್ಕೃತಿಗಳಿಲ್ಲ ದೈದುಪಾಪಂಗಳಂ।
ಕಲಿಯುಗದ ಮಾನವರ ಬಹಳ ದುರಿತಂಗಳಂ।
ತೊಲಗಿಸಿ ಭವಾಂಬುಧಿಯ ನುತ್ತರಿಪ ಹರಿಯ ನಾಮಂಗಳಾವನ ಜಿಹ್ವೆಗೆ ॥
ನೆಲೆಗೊಂಬುವಾತನಂ ಕಂಡವಂ ಶುಚಿ ನಿನಗೆ।
ಜಲರುಹಾಕ್ಷಂ ಕಣ್ಣಮುಂದಿರ ಲ್ಪಾತಕವೆ।
ಪಲವೆಣಿಕೆ ಜೇಡ ಪಾಲಿಸು ನೃಪನ ತುರಗಮಂ ಮಗನೆ ಸುಖಿಯಾಗೆಂದನು ॥ ||೭೮||
ಇಂತೆಂದು ಭೀಮನಾಡಿದೊ ಡನಿಬರೆಲ್ಲರುಂ।
ಸಂತೋಷಮಂ ತಾಳ್ದ ರರ್ಜುನಂ ತನಯನಂ।
ಸಂತೈಸಿ ಕುಳ್ಳಿರ್ದ ನಸುರಾರಿ ಪವನಜ ರ್ವೆರೆಸಿ ಸಿಂಹಾಸನದೊಳು ॥
ಕುಂತಿ ನಿಜಪುತ್ರ ಪೌತ್ರರ ವಿಭವ ಕುಬ್ಬಿದ ಳ।
ನಂತರದೊ ಳಾದುದು ಮಣಿಪುರದೊಳುತ್ಸವ ಮ।
ನಂತನಂ ಸತ್ಕರಿಸಿ ಕಳುಹಿದ ಪಾರ್ಥತಾಳ ಕಬಿಳ ಸಪಾರ್ಕಿ ಸಹಿತ ॥ ||೭೯||
ಸತ್ಯಭಾಮಾಕಾಂತ ಭೀಮ ನರ ಮುಸ್ಮೃಥಾ।
ಪಿತ್ಯಭವಸುತ ಕುಂತಿ ದೇವಕಿ ಯಶೋದೆಯರ।
ನತ್ಯಂತ ಹರ್ಷದೊ ಳುಲೂಪಿ ಚಿತ್ರಾಂಗದೆಯ ರಾದರಿಸೆ ನೃಪಗೃಹದೊಳು ॥
ನಿತ್ಯಕೃತ್ಯದ ವಿವಿಧ ಭೋಗ ವಿಭವಂಗಳಿಂ।
ನೃತ್ಯಗೀತಂಗಳ ವಿಲಾಸ ಗೋಷ್ಠಿಗಳಿಂದೆ।
ಪ್ರತ್ಯೇಕಮೆಲ್ಲರುಂ ಸಂತುಷ್ಟರಾಗಿರ್ದ ರೈದುದಿನ ಮಾಪುರದೊಳು ॥ ||೮೦||
ದಿವಸನ್ಯೈದರ ಮೇಲೆ ಚಿಂತಿಸಂ ಗಜಪುರದೊ।
ಳವನೀಶ ನೆಂದಲ್ಲಿ ಕೂಡಿದ ಸುವಸ್ತುಗಳ।
ನಿವಹಮಂ ಕುಂತಿ ಚಿತ್ರಾಂಗದೆ ಫಣೀಂದ್ರಸುತೆ ದೇವಕಿ ಯಶೋದೆಯರನು ॥
ಪವನಜನೊಡನೆ ಹಸ್ತಿನಾವತಿಗೆ ಕಳುಹಿ ಪಾ।
ರ್ಥಿವ ಪಾರ್ಥ ಸಾರ್ಥರಂ ನಲೆ ಕೂಡಿಕೊಂಡು ದಾ।
ನವಮರ್ದನಂ ತಾನೆ ಕುದುರೆಯಂ ಬಿಡಿಸಿ ರಕ್ಷೆಗೆ ನಡೆದ ನದರ ಪಿಂತೆ ॥ ||೮೧||

ಸಂಜೀವಕದ ಮಣಿಯ ಫಣಿಪತಿಯ ಕೃಷ್ಣನ ಧ |
ನಂಜಯನ ಪುಣ್ಯಪ್ರಸಂಗದಿಂ ದಪಮೃತ್ಯು |
ನಂಜು ದುಷ್ಕೃತಿ ಶತ್ರುಪೀಡೆಗಳ್ಪೊದ್ದವೆಂ ಬೀಮಹಾಮಹಿಮೆಯಿಂದೆ ||
ರಂಜಿಪ ಕಥೆಗೇಳ್ದೊಡಾಯುರಾರೋಗ್ಯ ಮತಿ |
ಮಂಜುಳ ಸುಕೀರ್ತಿ ಸುಖ ಸಂಪತ್ಸ್ವತಂತ್ರ ಸುತ |
ಸಂಜಾತ ಹರಿಭಕ್ತಿ ಸಮನಿಸುವುದು ದೇವಪುರ ಲಕ್ಷ್ಮೀರಮಣನಿಂದೆ | ||೬೨||

ಸಂಧಿ ೨೪ ಕ್ಕೆ ಪದ್ಯಗಳು ೧೬೧೦ ಕ್ಕೆ ಮಂಗಳಮಸ್ತು.

## ಇಪ್ಪತ್ತೈದನೆಯ ಸಂಧಿ.

ಸೂಚನೆ|| ಊರ್ಜಿತ ಪ್ರಬಲರಿಪು ವೀರರಂ ಗೆಲ್ದು ಕೃ |
ಷ್ಣಾರ್ಜುನರ ಸಾಹಸದೊಳೊಟ್ಟೈಸಿ ಭುಜವಿಕ್ರ |
ಮಾರ್ಜಿತ ವಿಜಯದೊಡನೆ ತಾಮ್ರಧ್ವಜಂ ತುರಗಮಂ ತಂದೆಗೊಪ್ಪಿಸಿದನು ||

ಎಲೆ ಮುನಿಪ ಸವಮಲಂ ಮೊದಲೆ ಪಾಲ್ಗಡಲದಕೆ |
ಮಲಯಾನಿಲಂ ತೀಡೆ ಜೇನ್ಗಂಗಳಂ ಪೂಜೆ |
ಲಲಿತ ಸುಮನೋವಾಸಿತಂ ಕೂಡೆ ಮೇಲಮೇಲಿಸಿದಾಗಿ ತೋರುವಂತೆ ||
ಸಲೆ ಸೊಗಸು ನಿನ್ನ ನುಡಿ ಸರಸಮುಚ್ಚರಿ ಪುಣ್ಯ |
ನಿಲಯಮೆನೆ ಕೃಷ್ಣಚರಿತಾಮೃತವ ನೀ ಕಿವಿಗ |
ಳೊಲಿದೀಂಟೆ ತಣಿದಪುವೆ ಮುಂಗತೆಯನುಸಿರೆಂದು ಬೆಸಗೊಂಡ ನವನೀಶನು ||೧||

ಕೈ ಮುಗಿಯು ತಾದರಮೊಳವನಿಪಂ ಬೆಸಗೊಳ |
ಜೈಮಿನಿ ಮುನೀಶ್ವರಂ ಪೇಳ್ದನೆಲೆ ನೃಪತಿ ಕೇ |
ಳೈ ಮುಂದಣಾಶ್ಚರ್ಯಮಂ ಭೀಮಸೇನನಂ ಗಜಪುರಕೆ ಕಳುಹಿ ಬಳಿಕ ||
ಪೈಮಾಂಬರಂ ಸಕಲ ದಳ ಸಹಿತ ಮೈದುನನ |
ಬೈಮಚ್ಚಿಕೆಗೆ ಮುಖತುರಂಗ ದೊಡನೈದಿದಂ |
ವೈಮಾನಿಕಪ್ರತತಿ ಬೆರಗಾಗೆ ಕಲಿ ಬಭ್ರುವಾಹನಂ ಕೂಡೆ ಬರಲು || ||೨||

ತುರಗಂ ನಡೆದುದು ಮಣಿಪುರದಿಂ ಶರದ್ದಿನಮೊ |
ಳರಸಂಚೆ ಸಂಚರಿಸ ತೊಡಗಿದುವು ನದಿಗಳು |
ಬ್ಬರಮಡಗಿ ತಿಳಿದು ಪರಿದುವು ಬೆಳತುವಾಗಸಂ ಮೆರೆದು ದುಡುರಾಜಿಕೂಡೆ ||
ತರಣಿ ಶಶಿಗಳ ಕಿರಣಮೈದೆ ನಿರ್ಮಲವಾದು |
ವರವಿಂದ ದಲರ ನರಸಿದು ವಳಿಗಳೆಣ್ದೆಸೆಯ |
ತರುಣಿಯರ ಗುರುಕುಚದ ಮೇಲುದಂ ಸೆಳೆದಂತೆ ಗಿರಿನಿಕರ ಮೆಸೆದಿರ್ದುದು ||೩||

ಪುಳಿನಜಘನಂ ಮತ್ಸ್ಯಲೋಚನಂ ಹಂಸಗತಿ |
ನಳಿನಾಭಿ ಕೋಕಸ್ತನಂ ಪಂಕಜಾನನಂ |
ಸೆಳೆನಡು ಸುಕಂಬುಕಂಠಂ ತರಂಗತ್ರಿವಳಿ ಶೈವಾಲರೋಮಾವಳಿ ||
ಲಲಿತ ಪ್ರವಾಹ ಲಾವಣ್ಯಲಹರಿಗಳೆಸೆಯೆ |
ತೊಳತೊಳಗಿ ಬೆಳಗುವ ನದೀವಧುಗಳುಳ್ಗದಡು |
ತಿಳಿದು ನಿಜಕಾಂತನಾಗಿಹ ಸಿಂಧುರಾಜನಂ ನೆರೆಯದಿರ ರೆಂಬೊಲಾಯ್ತು || ||೪||

ಕರೆಕರೆದ ತಮ್ಮ ಮಳೆ ವೊನಲಿಂದೆ ಶಶಿಕಾಂತ ।
ದೊರತಿವೊನ ಉರೆ ನೆಗ್ಗಳಿಸೆ ನಾಚಿ ಬೆಳ್ಪಾದ ।
ತೆರದಿಂ ಮುಗಿಲ್ಗಳಿರೆ ಬೆಳ್ದಿಂಗಳೊಪ್ಪಿದುದು ಬೆಳಸುಗಳ ಪಣ್ಬೆನೆಗಳ ॥
ಮಿರುಪ ಹೊಂಬಣ್ಣದ ಹರಿದ್ರಾನುಲೇಪನದೆ ।
ಮೆರೆವ ಮೈಸಿರಿಯ ಮಾಂಗಲ್ಯದಿಂ ಭೂದೇವಿ ।
ನೆರೆ ಶೋಭಿಸುವ ಶರತ್ಕಾಲದೊಳ್ತಿರುಗಿ ತದ್ಧ್ವರ ಹಯಂ ಧರೆಯ ಮೇಲೆ ॥ ॥೫॥
ವಿಟನಂತೆ ಕಾಂತಾ ರತ ಲಸದ್ವಿಲಾಸ ಪ ।
ರ್ಯಟನದಿಂ ದೊಪ್ಪಿದುದು ಸುಕವೀಂದ್ರನಂತೆ ಸಂ ।
ಘಟಿತ ಚಾತುರ್ಯ ಪದರಚನೆಯಿಂ ವಿವಿಧ ವಿಷಯಂಗಳೊಳ್ಕಾಣಿಸಿದುದು ॥
ಭಟನಂತೆ ಸಮ್ಯಗ್ವಿರಾಜಿತದ ಭೂಮಿ ಭೃ ।
ತ್ಕಟಕಂಗಳಲ್ಲಿ ಸಂಚರಿಸಿದುದು ಪಾಂಡವನ ।
ಪಟುತರ ಮಹಾಧ್ವರ ತುರಂಗಮಂ ಬೆಂಬಿಡದೆ ಬಹ ನೃಪರ ಸೇನೆಸಹಿತ ॥ ॥೬॥
ಪೋದುದಧ್ವರವಾಜಿ ರತ್ನಪುರವೆಂಬ ಪುಟ ।
ಭೇದನದ ಪತಿ ಮಯೂರಧ್ವಜನ ರಾಷ್ಟ್ರಕವ ।
ನಾದಿಯೊಳ್ತುರಗಮೇಧಂಗಳೇಳಂ ಮಾಡಿ ನರ್ಮದಾತಟಕೆ ಬಂದು ॥
ಸಾದರದೊಳೆಂಟನೆಯ ಮಖಕೆ ದೀಕ್ಷಿತನಾಗಿ ।
ಮೇದಿನಿಯ ಮೇಲೆ ಹಯಮಂ ಬಿಡಲ್ಕದರಾಗಿ ।
ಬೀದಿಯೊಳ್ಬರುತಿರ್ದುದಾನೃಪನಸೂನು ತಾಮ್ರಧ್ವಜನ ಕಾಪಿನಿಂದೆ ॥ ॥೭॥
ಕ್ಷೋಣೀಂದ್ರ ಕೇಳೀ ತುರಂಗ ಮಾ ಕುದುರೆಯಂ ।
ಕಾಣುತುಂ ಧ್ವನಿಗೈದು ಪರಿತಂದು ಮೊಗವ ನಾ ।
ಘ್ರಾಣಿಸಿ ಮಿಳಿರ್ಚಿ ಕಿವಿಗಳ ನೊಡನೆ ಪೆರದೆಗೆದು ಮುಂಗಾಲ್ಗಳಿಂ ದಡರ್ದು ॥
ಮೇಹೊಂದ ನೊಂ ದೊದೆದು ಹಿಂದಣ ಖುರಂಗಳಿಂ ।
ಮಾಣ ದಡಿಗಡಿಗೆ ಕಂದದ ತೀಟೆಗಳ ನಾಡಿ ।
ಮಾಣಿಕ್ಯ ಮುಕ್ತಾಳಿಗಳ ಭೂಷಣಂಗಳಂ ಪರಿದಿಕ್ಕಿ ಬಿರುಗೊಂಡುವು ॥ ॥೮॥
ಭಾರಣೆಯ ಬಲದೊಡನೆ ಕುದುರೆ ಗಾವಲೊಳಿರ್ದ ।
ವೀರ ತಾಮ್ರಧ್ವಜನ ಮಂತ್ರಿ ನಕುಲಧ್ವಜಂ ।
ದೂರದೊಳ್ಕಂಡ ನೀತೆರನಂ ವಿಚಾರಿಸಿದ ನೆತ್ತಣ ತುರಂಗವೆಂದು ॥
ಚಾರರಂ ಕಳುಹಿ ತರಿಸಿದ ನದರ ಮಸ್ತಕ ದೊ ।
ಳಾರಾಜಿಸುವ ಕನಕ ಪಟ್ಟ ಲಿಖಿತವ ನೋದಿ ।
ಭೂರಮಣ ಧರ್ಮಜನ ಬಿರುದುಗಳ ವಿಸ್ತರವ ನೊಡೆಯಂಗೆ ಕೇಳಿಸಿದನು ॥ ॥೯॥
ಕೇಳುತೆ ಕನಲ್ದು ತಾಮ್ರಧ್ವಜಂ ಕಟ್ಟಿದಂ ।
ತೋಳ ಬಲ್ಪಿಂದೆ ಪಾರ್ಥನ ತುರಗಮಂ ಬಳಿಕ ।
ಮೇಳೈಸಿ ನಿಲಿಸಿದಂ ನಿಜಬಲದ ಪೌಜುಗಳ ನರ್ಧಚಂದ್ರಾಕೃತಿಯೊಳು ॥
ಏಳಧ್ವರಂ ಪಿಂತೆ ಕೃಷ್ಣವರ್ಜಿತಮಾಯ್ತು ।
ಪೇಳಲೇಸಿದು ಕೃಷ್ಣ ಸಂಯುಕ್ತಮಾದಪುದು ।
ಕಾಳಗಂ ಕೃಷ್ಣನೊಳ್ದೊರಕೊಳ್ವು ದೀಗಳೆಂ ದುಬ್ಬೇರಿದಂ ಮನದೊಳು ॥ ॥೧೦॥

ತಂದೆಯ ಮಹಾಧ್ವರಕೆ ಕೃಷ್ಣನೊಡಗೂಡುವಂ |
ಮುಂದೆ ಪಾಂಡವ ವೀರರೊಳ್ವಾಜಿಗೆ ಕಾಳಗಂ |
ಬಂದಪುದು ಲೇಸಾದುದೆಂದು ತಾಮ್ರಧ್ವಜಂ ನಕುಲಧ್ವಜ ನೊಳಾಡಲು ||
ಮಂದಪೌರುಷ ದಲ್ಪಭಾಗ್ಯ ದತಿಕೃಶವಾದ |
ಮಂದಿ ಕುದುರೆಯು ಮೇದಿನೀಶ್ವರ ರ್ಕಾಳಗಕೆ |
ನಿಂದಪರೆ ನಿನ್ನೊಳಿದು ಪುಸಿಯೆನುತೆ ಮತ್ತವಂ ನಸುನಗೆಯೊಳಿಂತೆಂದನು ||೧೧||

ಚಪ್ಪನ್ನ ದೇಶದೊಳ್ದಿನಗೆ ಮಲೆ ತಿದಿರಾಗಿ |
ಬಪ್ಪ ಭೂಮಿಪರಿಲ್ಲ ನಿಮ್ಮಯ್ಯ ನರಮನೆಯೊ |
ಳೊಪ್ಪಂ ಬಡೆದ ನರ್ತಕೀಜನದ ನಿತ್ಯಪುಷ್ಪಾಂಜಲಿಯ ಸಂಗ್ರಹಕ್ಕೆ ||
ತಪ್ಪದೆಂದುಂ ತೆರುವ ಕಟ್ಟಳೆಯ ಮುತ್ತುಗಳ |
ಕಪ್ಪಮುಂ ಕೊಂಡು ಬಂದನೊ ಬಭ್ರುವಾಹನಂ |
ಸಪ್ಪಳಿದು ಪೊಸತೆತ್ತಣದೊ ಸೈನ್ಯಮೆನೆ ತಾಮ್ರಕೇತು ಮಗು ಳಿಂತೆಂದನು ||೧೨||

ಧಾತ್ರಿಯೊಳ್ವೀರರಿಲ್ಲೆನ್ನದಿ ರ್ನಾರದಂ |
ರಾತ್ರಿಯೊಳ್ಬಂ ದೆನ್ನೊಳಾಡಿದಂ ಧರೆ ಗತಿ |
ಕ್ಷಾತ್ರಪೌರುಷದಿಂದೆ ವರ್ತಿಪ ಬಭ್ರುವಾಹನ ಕರ್ಣತನಯರಿಂದು ||
ಗೋತ್ರಾರಿಪುತ್ರ ದಾನವ ಸೂದನ ರ್ಮನುಜ |
ಮಾತ್ರರಲ್ಲಿಯ್ಯ ನರನಾರಾಯಣ ರ್ಕಮಲ |
ನೇತ್ರ ನನು ರನಿರುದ್ಧ ಸಾತ್ಯಕಿ ಪ್ರದ್ಯುಮ್ನ ಭೋಜಾದಿ ಯದುಗಳಿಂದು || ||೧೩||

ಉಪ್ಪತ ಪರಾಕ್ರಮಿಗ ಳಿನಿಬರಿಂ ದಿವರೊಡನೆ |
ಯುದ್ಧ ಮಾದಪುದೆಮಗೆ ನಮ್ಮಖಿಳ ಸೇನೆ ಸ |
ನ್ನದ್ಧಮಾಗಿರ ಲರ್ಧಚಂದ್ರಾಕೃತಿಯೊಳೆಂದು ತಾಮ್ರಧ್ವಜಂ ಮಂತ್ರಿಗೆ ||
ಬುದ್ಧಿಗಲಿಸಿದ ನಿತ್ತ ಪಾಂಡವನ ಬಲದೊಳ್ಪ್ರ |
ಸಿದ್ಧಭಟ ರನುಸಾಲ್ವ ಕರ್ಣಸುತ ಸಾಂಬಾ ನಿ |
ರುದ್ಧ ಕೃತವರ್ಮಾದಿಗ ಳ್ಮಸಗಿದ ರ್ತುರಗಮುಂ ಬಿಡಿಸು ವುಜ್ಜಗದೊಳು || ||೧೪||

ಕುದುರೆಯುಂ ಕಟ್ಟಿ ಪಡೆಸಹಿತ ತಾಮ್ರಧ್ವಜಂ |
ಕದನಕಿದಿರಾಗ ಲಸುರಾಂತಕಂ ಕಂಡು ತೋ |
ರಿದ ನರ್ಜುನಂಗಿವಂ ಬರ್ಹಿಧ್ವಜನ ತನುಜ ನನಸೂಯಕಂ ಧೀರನು ||
ಉದಿತಕಾಮಂ ಸತ್ಯವಾದಿ ಶುಚಿ ವೈಷ್ಣವಂ |
ಪದರಮ ಲ್ಲವನೊಡನೆ ಕಾಳಗಂ ನರ್ಮದಾ |
ನದಿಯ ತೀರದೊಳಿವನ ತಂದೆ ದೀಕ್ಷಿತನಾಗಿಹಂ ಗೆಲ್ವ ದರಿದೆಂದನು || ||೧೫||

ಎಂ ದಖಿಳ ಸೇನೆಯಂ ಗೃಧ್ರ ದಾಕಾರಕ್ಕೆ |
ತಂದು ನಿಲಿಸಿದ ನಸುರಮರ್ದನಂ ಮೇ ಣದರ |
ಮುಂದೆಸೆಯ ಕೊರಲೊಳನುಸಾಲ್ವನಂ ಕಂಗಳೊ ಳ್ನೀಲಹಂಸಧ್ವಜರನು ||
ಕಂದರ್ಪ ಕಾನಿರುದ್ಧರ ನುಭಯಪಕ್ಷ ದೆಡೆ |
ಗಂದಿವಂ ದಡಿಗಳ್ಗೆ ಭೋಜ ಸಾತ್ಯಕಿಗಳಂ |
ಹಿಂದಣ ಗರಿಗೆ ಮೇಘನಾದನಂ ಕಲಿಯೌವನಾಶ್ವನಂ ಜೋಡಿಸಿದನು || ||೧೬||

ವ್ಯೂಹ ಚಂಚುಸ್ಥಾನ ಕಿರಿಸಿದಂ ಕಲಿ ಬಭ್ರು।
ವಾಹನ ವೃಷಧ್ವಜರ ನುಳಿದ ಭಟರಂ ಗೃಧ್ರ।
ದೇಹ ದವಯವ ದೆಡೆಗೆ ನೆಲೆಗೊಳಿಸಿ ಬಳಿಕದರ ಹೃದಯದೊಳ್ಫಲ್ಗುಣನನು॥
ವಾಹಿನಿಸಹಿತ ನಿಲಿಸಿ ದಾರುಕ ನೆಸಗೆ ರಥಾ।
ರೋಹಣಂಗೈದು ಮುರಮಥನಂ ಪಿಡಿದನಾ ಮ।
ಹಾಹವಕೆ ವರ ಪಾಂಚಜನ್ಯಮಂ ಘೋರ ರವದಿಂ ದಹಿತ ರೆದೆಗ ಳೊಡೆಯೆ॥ ॥೧೭॥

ಪಾಂಚಜನ್ಯಧ್ವನಿಗೆ ಜೆವರ ದುಬ್ಬೇರಿ ರೋ।
ಮಾಂಚನದೊಳಾಗ ತಾಮ್ರಧ್ವಜಂ ಶ್ರೀವತ್ಸ।
ಲಾಂಛನಂ ಗಿದಿರಾಗಿ ನುಡಿದನೆಲೆ ದೇವ ಕಟ್ಟಿದೆ ನರ್ಜುನನ ಹಯವನು॥
ವಾಂಛೆಯುಳ್ಳೊಡೆ ಬಿಡಿಸು ಪಾಲಿಸು ಕಿರೀಟಿಯಂ।
ನೀಂ ಚಕ್ರಮಂ ತುಡುಕು ಶಾರ್ಙ್ಗಮಂ ಪಿಡಿ ರಣಕೆ।
ನಾಂ ಚಲಿಸೆ ನಿದೆಯೆನ್ನ ವಾಜಿಯಂ ತಡೆ ಸತ್ವಮುಳ್ಳೊಡೆನುತಾರ್ದೆಚ್ಚನು॥ ॥೧೮॥

ಹರಿಗೆ ಕೂರ್ಗಣೆ ಮೂರು ದಾರುಕಂಗೈದು ರಥ।
ಹರಿಗಳ್ಗೆ ನಾಲ್ಕು ಸಿತವಾಹನಂ ಗಿಪ್ಪತ್ತು।
ವರಭೋಜಪತಿ ಗೆಂಟು ಶಿನಿಸುತಂಗೊಂಬತ್ತು ಹಂಸಧ್ವಜಂಗೆ॥
ತರಣಿತನಯಜ ಬಭ್ರುವಾ ಹಾನುಸಾಲ್ವಕ।
ಸ್ಮರ ಯೌವನಾಶ್ವಾ ನಿರುದ್ಧ ನೀಲಧ್ವಜ।
ರ್ಗೆರಡೆರಡು ಮೇಘನಾದಂಗೇಳು ಕೋಲ್ಗಳಂ ಕರೆದವಂ ಬೊಬ್ಬಿರಿದನು॥ ॥೧೯॥

ಅಚ್ಯುತಂ ಬೆರಗಾದ ನಾತನ ಪರಾಕ್ರಮಕೆ।
ಮೆಚ್ಚಿದಂ ಫಲುಗುಣಂ ಮಿಕ್ಕುಳಿದ ಪಟುಭಟ।
ರ್ಬೆಚ್ಚಿದ ರ್ಮಸಗಿ ವೀರಾವೇಶದಿಂದೆ ತಮತಮಗೆ ಬಳಿಕನಿರುದ್ಧನು॥
ಎಚ್ಚನೆಲವೆಲವೊ ತಾಮ್ರಧ್ವಜ ವಿಚಾರಿಸದೆ।
ಕೆಚ್ಚೆದೆಯೊಳಿದಿರಾದೆ ಮುರಹರನ ಮೊಮ್ಮನಾಂ।
ಬೆಚ್ಚುವೊಡೆ ಬಿಡು ಹಯವ ನಲ್ಲದೊಡೆ ನೋಡೆನ್ನ ಬಾಣಜಾತವ ನೆಂದನು॥ ॥೨೦॥

ಬಾಣಜಾತವನೀಗ ನೋಡಲಿದ್ದಪುದೆ ನೀಂ।
ಬಾಣಜಾತೆಯ ರಮಣ ನಂತುಮಲ್ಲದೆ ಪುಷ್ಪ।
ಬಾಣಜಾತಂ ಪೋಲೆ ತನ್ನ ಮಗಳುಷೆಗೆ ನೀಂ ಪ್ರಾಣೇಶನೆಂದು ರಣದೆ॥
ಬಾಣನುಳುಹಿದನಂದು ಕೈಗಾಯ್ದುವ ಲ್ಲೆಮ್ಮ।
ಬಾಣಂಗಳೀಕ್ಷಿಸೆಂ ದಾರ್ದು ತಾಮ್ರಧ್ವಜಂ।
ಬಾಣಾಯುತಂಗಳಂ ಸುರಿಯಲ್ಕೆ ಮಧ್ಯದೊಳ್ತರಿ ದೀತ ನಿಂತೆಂದನು॥ ॥೨೧॥

ಸಂಗರಕೆ ಸಾಹಸವೊ ಮಾತುಗಳೊ ಪೂರ್ವ ಪ್ರ।
ಸಂಗ ಮೇತಕೆ ಮರುಳೆ ತರಹರಿಸಿಕೊಳ್ಳೆನುತೆ।
ಸಂಗಡಿಸಿದವನ ರಥ ದಚ್ಚುನೊಗ ಗಾಲಿ ಟೆಕ್ಕೆಯ ಕುದುರೆ ಸಾರಥಿಗಳ॥
ಅಂಗಿ ಬಿಲ್ಬತ್ತಳಿಕೆ ಸೀಸಕಂ ಗಳ ಜಂಜ।
ಡಂಗಳೆಲ್ಲೆನಿಸಿ ಕೆಲಬಲದ ರಕ್ಷೆಯ ಚಾತು।
ರಂಗಮಂ ಸವರಿ ರಿಪುಮೋಹರಕೆ ಪೊಕ್ಕ ನನಿರುದ್ಧ ನದನೇವೇಳ್ವೆನು॥ ॥೨೨॥

ರಣದೊಳನಿರುದ್ಧನಾಟೋಪದಿಂ ಚಾಪದಿಂ |
ಕಣೆಗಳಂ ತೆಗೆದಿಸಲ್ಕರಿಗಳಂ ಹರಿಗಳಂ |
ಮಣಿಮಯ ರಥಂಗಳಂ ಕಾಲಾಳ ಮೇಲಾಳ ಸಂದಣಿಯ ಮಂದಿಗಳನು ||
ಹಣಿದುವಾಡಿದು ವಹಿತ ಬಲದೊಳಗೆ ನೆಲದೊಳಗೆ |
ಪೆಣನ ಮದೆ ಕೆಡೆಯ ಲಕ್ಷೋಹಿಣಿಯ ವಾಹಿನಿಯ |
ಗಣನೆ ಮೂರಳಿವು ದೊಂದೇ ಕ್ಷಣಕೆ ವೀಕ್ಷಣಕೆ ನೆರೆ ಭಯಂಕರಮಾಗಲು || ||೨೩||
ಒತ್ತಿ ಬಹ ರಥಿಕರಂ ವ್ಯಥಿತರಂ ಮಾಡಿದುವು |
ಮುತ್ತುವ ತುರಂಗಮದ ತುಂಗ ಮದದಂತಿಗಳ |
ಸೊತ್ತುಮಂ ಪೋಳಾಗಿ ಸೀಳಾಗಿ ಕೆಡಹಿದುವು ಕೊಡಹಿದುವು ಸಾಹಕರನು ||
ಮತ್ತೆ ಭಟರಂಗಮಂ ಭಂಗಮಂ ಪಡಿಸಿದುವು |
ಕತ್ತರಿಸಿ ತಲೆಗಳಂ ಕೊಲೆಗಳಂ ಕೊಂದು ಬಿಸಿ |
ನೆತ್ತರಂ ಪರಪಿದುವು ನೆರಪಿದುವು ಮರುಳ್ಗಳುಮ ನನಿರುದ್ಧನಸ್ತ್ರಂಗಳು | ||೨೪||
ಪೊಸ ರಥ ದೊಳ್ಕೈದಿದಂ ಮತ್ತೆ ತಾಮ್ರಧ್ವಜಂ |
ಮುಸುಕಿ ತಗಣಿತ ಚಾತುರಂಗ ಮನಿರುದ್ಧನಂ |
ಮುಸಗಿತು ತಮಸ್ತೋಮ ಮಾದಿತ್ಯಮಂಡಲದ ಗಸಣೆ ಯಿಲ್ಲೆನೆ ನಭದೊಳು ||
ವಸುಧೆ ಯುದಿರಿತು ಮೇರುಶೈಲ ಮಲ್ಲಾಡಿದುದು |
ಬಸವಳಿದ ನಹಿ ಕೂರ್ಮ ನೆದೆಗೆಟ್ಟು ನುಡುಗಿದುವು |
ದೆಸೆಯಾನೆ ಕಪ ಲುಕ್ಕಿತಾಹವಂ ಘೋರಮಾದುದು ರೋಮಹರ್ಷಣದೊಳು || ||೨೫||
ಕೋಪದಿಂ ಪ್ರಳಯಾಗ್ನಿ ಯಂದದ ಶರಂಗಳಂ |
ಚಾಪದಿಂ ತೆಗೆದಿಸು ತ್ತನಿರುದ್ಧ ನಮಿತ ಪ್ರ |
ತಾಪದಿಂ ದುಜ್ವಲಿಸುತಿರ್ದ ವಿಧೂಮ ಪಾವಕನಂತೆ ಪರಬಲದೊಳು ||
ಶ್ರೀಪತಿಯ ಪೌತ್ರನೆಂ ದಿನ್ನೆಗಂ ತಾಳ್ದ ಡಾ |
ಟೋಪಮೇ ನಿನಗೆನುತೆ ತಾಮ್ರಧ್ವಜಂ ಕನ |
ಲ್ದಾ ಪುಷ್ಪಬಾಣ ತನುಜನ ಮೇಲೆ ಕಣೆಗರೆದ ನಂಬರಂ ತುಂಬುವಂತೆ || ||೨೬||
ಪರ್ಬಿದುವು ತೆಗೆದಿ ಸಲ್ತಾಮ್ರಧ್ವಜನ ಕಣೆಗ |
ಳರ್ಬುದಂಗಳ ಸಂಖ್ಯೆಯಿಂ ದೊಡನೊಡನೆ ನರನ |
ಪೆರ್ಬಡೆಯ ಮೇಲೆ ಕವಿದುವು ನೊಂದ ನನಿರುದ್ಧನೇ ರ್ವಡೆದ ಮೂರ್ಛೆಯಿಂದೆ ||
ಸರ್ಬದಳಮುಂ ತಗುಳ್ದುವು ಬೇಸಗೆಯ ಬಿರುವೆ |
ಲರ್ಬೀಸಿ ರಜಮಂ ತೆರಳ್ಚುವಂತಾಗ ವೀ |
ರರ್ಬಿಂಕದಿಂ ಸಾತು ನಿಂದ ರನುಸಾಲ್ವಕ ಪ್ರದ್ಯುಮ್ನ ಸಾತ್ಯಕಿಗಳು || ||೨೭||
ಹಂಸಕೇತುವನೆಚ್ಚು ಕೃತವರ್ಮ ಸಾತ್ಯಕಿ ಗ |
ಳಂ ನಡೆದು ಬಭ್ರುವಾಹನ ಯೌವನಾಶ್ವರ್ಗೆ |
ಹಿಂಸೆಯಂ ಕೈಗೈದು ನೀಲಧ್ವಜಾ ನುಸಾಲ್ವಾದಿ ಭಟರಂ ಘಾತಿಸಿ ||
ಕಂಸಾರಿಸುತನಂ ಪರಾರಿಸಿ ವಿಜಯ ಮುರ |
ಧ್ವಂಸಿಗಳ ಮೇಲೆ ನಡೆತರೆ ಕಂಡು ಕರ್ಣಾತ್ಮಜ |
ನಂ ಸರಿಸ ಕಿಡಿಗಾಗ ಕತ್ತರಿಸಿ ಕೆಡಹಿದಂ ತಾಮ್ರಧ್ವಜನ ರಥವನು || ||೨೮||

ತೇರುಡಿಯೆ ಮತ್ತೊಂದು ತೇರ ನಳವಡಿಸ ಲಾ |
ತೇರ ನಿಸಲೊಡನೆ ಪೊಸತೇರೊ ಳವನೈದ ಲಾ |
ತೇರುಮಂ ಕತ್ತರಿಸೆ ತೇರ್ವೈಸದಂತಿಂತು ನೂರುತೇರಂ ಖಂಡಿಸಿ ||
ಸೇರಿಸೇರಿದ ಸೇನೆಯುಂ ಸವರಿ ಕರ್ಣಜಂ |
ಸೇರಿ ಬರೆ ತಾಮ್ರಧ್ವಜಂ ಕನ ಲ್ದವನಿಯಂ |
ಸೇರಿ ಬಾಣತ್ರಯದೊಳಾತನಂ ಘಾತಿಸಿ ರಥಾರೋಹಣಂ ಗೈದನು || ||೨೯||
ಅನಿರುದ್ಧನಂ ಗೆಲ್ದು ವೃಷಕೇತುವಂ ಕೆಡಹ |
ಲನುಸಾಲ್ವ ನಿದಿರಾದೊಡಾತನ ಪರಾಕ್ರಮವ |
ನಸುವರದೊಳುರೆ ಮುರಿದು ಕೃತವರ್ಮ ಸಾತ್ಯಕಿ ಪ್ರದ್ಯುಮ್ನರಂ ಸೋಲಿಸಿ ||
ಅನುಪಮ ಬಲಂ ಬಭ್ರುವಾಹನಂ ಕಾದ ಲವ |
ನನುವ ನೊಪ್ಪಂಗಿಡಿಸಿ ಹಂಸಧ್ವಜನ ಜಯವ |
ನನುಕರಿಸಿ ಯೌವನಾಶ್ವಾ ಸಿತಧ್ವಜರಂ ತಗುಳ್ದವಂ ಬೊಬ್ಬಿರಿದನು || ||೩೦||
ಬಲದೊಳಗೆ ಮಿಡುಕುಳ್ಳ ವೀರರೊ ಳ್ಧೀರರೊ |
ಳ್ಕಲಿತನದೊಳಿದಿರಾಗಿ ನಿಲ್ವರಂ ಗೆಲ್ವರಂ |
ಸಲೆ ಪಲಾಯನಕೆ ಮೈಗುಡುವರಂ ಬಿಡುವರಂ ವಾಹನಾಯುಧ ತತಿಯನು ||
ಫಲುಗುಣಂ ಕಾಣುತತ್ಯುಗ್ರದಿಂ ವ್ಯಗ್ರದಿಂ |
ಸೆಳೆದು ಕೋದಂಡಮಂ ತೀಡಿದಂ ಪೂಡಿದಂ |
ಪೊಳೆವ ಕೆಂಗರಿಯ ನಿಡುಗೋಲ್ಗಳಂ ಸಾಲ್ಗಳಂ ಕಟ್ಟಿದಂ ಗಗನಪಥಕೆ || ||೩೧||
ಲೇಸಾದುದೈ ಪಾರ್ಥ ಕೃಷ್ಣನ ಸಹಾಯದಿಂ |
ಮೀಸು ದಿನಮಾಹವ ದೊಳೆಲ್ಲರಂ ಗೆಲ್ದೆ ಬಿಡು |
ವಾಸಿಯುಂ ತನ್ನೊದನೆ ಗೋತ್ರಹತ್ಯಾ ದೋಷಮಂ ಕಳೆದುಕೊಂಬ ಮುಖಕೆ ||
ಏಸುಹರಿಗಳ್ಬೇಕು ನಿನಗೈಸನೀವೆ ನಾ |
ನೀ ಸರೋಜಾಕ್ಷ ನಿರಲೀತಕೆಲೆ ಮರುಳೆ ಧನ |
ವಾಸೆಯಿಂ ಧರ್ಮಮಂ ಮಾಣ್ದನಂ ತಾದೆ ಹೋಗೆನುತವಂ ತೆಗೆವೆಚ್ಚನು || ||೩೨||
ಎಲವೊ ತಾಮ್ರಧ್ವಜ ಸುವಿತ್ತದಿಂ ಧರ್ಮಮಂ |
ನಿಲಿಸಬೇಕಲ್ಲದೆ ನಿರರ್ಥಕಮೊಳಾದಪುದೆ |
ಜಲಜಾಕ್ಷನಂ ಬರಿದೆ ಸಾಕ್ಷಾತ್ಕರಿಸ ಬಹುದೆ ವಿಧಿ ವಿಧಾನದೊಳಲ್ಲದೆ ||
ಪಲವು ಮುಖದಿಂದೆ ಪರಿಪೂರ್ಣನಾಗಿಹ ಹರಿಯ |
ನೆಲೆಯ ನೀನೆಂತರಿವೆ ಮೂಢ ಫಡ ಹೋಗೆನುತೆ |
ಫಲುಗುಣಂ ತೆಗೆವೆಚ್ಚನಾತನ ವರೂಥ ಹಯ ಸಾರಥಿಗ ಳಡಗೆಡೆಯಲು || ||೩೩||
ಆರಥಂ ಮುರಿಯೆ ಪೊಸರಥವ ನವನೇರಿ ಬರ |
ಲಾರಥಂ ಪುಡಿಯಾಗೆ ನರ ನಿಸಲ್ಬಳಿ ಕಾ ಮು |
ಹಾರಥಂ ಮತ್ತೊಂದು ರಥದೊ ಳುರವಣಿಸ ಲದನರ್ಜುನಂ ತಡೆಗಡಿದನು ||
ಆರಣದೊಳಿಂತವನ ಸ್ಯಂದನ ಸಹಸ್ರಮುಂ |
ಬಾರಿಬಾರಿಗೆ ಕತ್ತರಿಸಿ ಕೆಡಹಿ ಫಲುಗುಣಂ |
ಪೂರೈಸಿದಂ ದೇವದತ್ತಮಂ ಕೊಂದ ನಿರ್ಕಲದ ಚಾತುರ್ಬಲವನು || ||೩೪||

ಅರ್ಜುನನ ಸಾಹಸಕೆ ಮೆಚ್ಚಿ ತಾಮ್ರಧ್ವಜಂ ।
ಗರ್ಜಿಸಿ ಕನಲ್ದಮನು ತಾನದೇಂ ಪೌರುಷ ವಿ ।
ವರ್ಜಿತನೆ ಫಡ ಯೆನುತೆ ತೆಗೆ ದಿಸಲ್ಬರ ಸಿಡಿಲ್ಪೊಡೆದು ಗಿರಿ ಜರಿವಂತಿರೆ ॥
ನಿರ್ಜರೇಂದ್ರನ ಸೂನು ಪೊಸಲಿಡ ಲ್ಕಿಸಿಯ ನೆ ।
ತ್ತ್ರಜೊರ್ಂಪಿಸುತೆ ನೈಮುರಿದು ಬಿದ್ದನಿಳೆಯೊ ಳ್ಪ ।
ನರ್ಜನ್ಮಮೆನೆ ಕೂಡೆ ಚೇತರಿಸಿ ನರನೆಚ್ಚು ಕಡಿದ ನಾತನ ಧನುವನು ॥ ।೩೫॥
ಬಿಲ್ಮುರಿಯೆ ಮತ್ತೊಂದು ಬಿಲ್ಗೊಂಡು ಕೋಪದಿಂ ।
ಪಲ್ಮೊರೆಯು ತೊಡನೆ ತಾಮ್ರಧ್ವಜಂ ತೆಗೆವಾ ರ್ದಿ ।
ಸ ಲ್ಮಹಿಯೊ ಳರ್ಜುನನ ತೇರೊಂದು ಯೋಜನಂ ಪೋಗೆ ತರಹರಿಸಿ ಕೊಳುತೆ ॥
ಸಿಲ್ಮೊರೆ ದೋರೆನುತೆ ಫಲುಗುಣಂ ಬೊಬ್ಬಿರಿ ದಿ ।
ಸ ಲ್ಮುಗಿಲ ಬಟ್ಟೆಯ ನಡರ್ದು ಪಾತನ ರಥಂ ।
ಬಲ್ಮೆಗೆ ಮುರಧ್ವಂಸಿ ಮೆಚ್ಚಿ ತಲೆದೂಗಿದಂ ಭೂಪ ಕೇಳದ್ಭುತವನು ॥ ॥೩೬॥
ಎಡಬಲದ ಮಂಡಲದ ಭೇದದಿಂ ಛೇದದಿಂ ।
ವಡಿಗಡಿ ಗೆಸೆವ ಪರಾಕ್ರಮದಿಂದೆ ಕ್ರಮದಿಂದೆ ।
ತುಡುವ ಬಿಡುವಂಬಿನ ತರಂಗದಿಂ ರಂಗದಿಂ ತೊಲಗ ದಗ್ಗಳಿಕೆಯಿಂದೆ ॥
ದೃಢ ಚಾಪ ಘೋಷ ಭೀಕರದಿಂದೆ ಕರದಿಂದೆ ।
ಜಡತೆ ಪೊದ್ದದ ಸಾಹಸತ್ವದಿಂ ಸತ್ವದಿಂ ।
ಕಡುಗಿ ತಾಮ್ರಧ್ವಜ ವಿಜಯರಾಗ ಜಯರಾಗ ರೆಚ್ಚಾಡಿದ ರ್ಧುರದೊಳು ॥ ॥೩೭॥
ಧಾತ್ರೀಶ ಕೇಳ್ಕೌತುಕವ ನೇಳುದಿನ ಮಹೋ ।
ರಾತ್ರಿಗಳೊಳಂ ಬಿಡದೆ ಕಾದಿದ ರ್ಪಂಕರುಹ ।
ನೇತ್ರಂ ಸಮೀಪ ದೊಳ್ನೋಡುತಿರೆ ತಾಮ್ರಧ್ವಜಾ ರ್ಜುನ ರ್ಬಳಿಕವರೊಳು ॥
ಗೋತ್ರಾರಿಸುತ ನವಂ ಮತ್ತೆ ಜೋಡಿಸಿ ತಂದ ।
ಮಾತ್ರಪೊ ಳ್ಸಾಸಿರ ರಥಂಗಳಂ ಕಡಿದ ತಿ ।
ಕ್ಷಾತ್ರದಿಂ ಕೆಡಹಿದಂ ಪಡೆಯೊ ಳಕ್ಷೌಹಿಣಿಗ ಳಿನ್ನೂರ ನಾಹವದೊಳು ॥ ॥೩೮॥
ಆ ತಾಮ್ರಕೇತು ಪಾಂಡವ ಸೇನೆಯೊಳ್ ಪ್ರಯುತ ।
ಚಾತುರಂಗಮನೈದೆ ಸಂಹರಿಸಿ ಪಾರ್ಥನಂ ।
ಘಾತಿಸಿದ ನಡಿಗಡಿಗೆ ಪಳವಿಗೆಯ ಹನುಮನಂ ಪಲ್ಗಿರಿಸಿ ಹರಿಯ ನೆಚ್ಚು ॥
ಸೂತ ವಾಜಿಗಳ ನೊಡನೊಡನೆ ಜವಗೆಡಿಸಿ ವಿ ।
ಖ್ಯಾತ ಚಾಪದ ನಾರಿಯ ಕಡಿದು ಕಲಿ ಕರ್ಣ ।
ಜಾ ತಾಸುಸಾಲ್ವ ಸಾತ್ಯಕಿ ಬಭ್ರುವಾಹನಾದಿಗಳ ನುರೆ ನೋಯಿಸಿದನು ॥ ।೩೯॥
ತೆತ್ತಿಸಿದು ವುಭಯವೀರರ ಮೈಯೊ ಳಂಬುಗ ।
ಳ್ನೆತ್ತ ರಭ್ರಕೆ ಚಿಮ್ಮಿ ಮಳೆ ವನಿಗಳಂತೆ ಹರಿ ।
ಯುತ್ತಮಾಂಗದ ಮೇಲೆ ಸೂಸಿದುವು ವಾಯು ವಶದಿಂದೆ ಕೇ ಳದ್ಭುತವನು ॥
ಮತ್ತೆ ಫಲುಗುಣ ನವನ ಧನುವ ನಿಕ್ಕಡಿಯಾಗಿ ।
ಕತ್ತರಿಸೆ ಖತಿಯೊ ಳೈತಂದು ಪಾರ್ಥನ ರಥವ ।
ನೆತ್ತಿಕೊಂ ಡಾಗಸಕೆ ಪುಟನೆಗೆದು ಧರೆಯೊ ಳಪ್ಪಳಿಸಿದಂ ತಾಮ್ರಕೇತು ॥ ॥೪೦॥

ನಭಕೆ ವಿಜಯನ ರಥವ ನೀಡಾಡಿ ಬಳಿ ಕದಂ।
ರಭಸದಿಂ ದಿಳೆಗಪ್ಪಳಿಸುವಿನಂ ಪರಿತಂದು।
ಶುಭಕರ ಕರಾಗ್ರದಿಂ ಪಿಡಿ ದಾ ವರೂಥಮಂ ಸ್ವಸ್ಥಾನವಾಗಿ ನಿಲಿಸಿ॥
ಅಭಯಮಂ ಪಾರ್ಥಂಗೆ ಮಾಡಿದಂ ಮುರಹರಂ।
ತ್ರಿಭುವನದೊಳಚ್ಯುತನ ಭಕ್ತರ್ಗೆ ಬಪ್ಪುದೆ ಪ।
ರಿಭವಮೆಂ ದನಿಮಿಷ ರ್ಕೊಂಡಾಡೆ ಬಲ ನೆರೆದಾಶ್ಚರ್ಯವಾಗೆ ಕೂಡೆ॥ ॥೪೧॥

ಘೋರಮಣ ಕೇಳ್ಬಳಿಕ ನಸುನಗುತೆ ನುಡಿದ ನಸು।
ರಾರಾತಿ ಪಾಂಡವಂ ಗಳುಕದಿ ರಧರ್ಮನೆಂ।
ದೀ ರಣದೊಳೀತನಂ ಗೆಲ್ವೊಡಾವಿರ್ವರುಂ ಸಾಹಸಂಗೈದಲ್ಲದೆ॥
ತೀರ ದಿಸು ನೀನೊಂದು ಕಡೆಯೊಳಾನಿಸುವೆ ನೀ।
ವೀರನಂ ಮತ್ತೊಂದು ದೆಸೆಯೊಳೆಂದರುಪಿ ನರ।
ನಾರಾಯಣ ರ್ಕರೆದ ರಂಬುಗಳ ನೋರೊರ್ವ ರೊಂದೊಂದು ಮುಖದೊಳಿದರ್ ॥೪೨॥

ಪಾಂಡವ ಮುಕುಂದ ರೊಂದೇಬಾರಿ ಮುಳಿದು ವರ।
ಗಾಂಡೀವ ಶಾರ್ಙ್ಗ ಚಾಪಂಗಳಂ ಕೊಂಡಬ್ಜ।
ಚಾಂಡ ಕಧಿಕ ಕ್ಷೋಭವಾಗೆ ತಾಮ್ರಧ್ವಜನ ಮೇಲೆ ತೆಗೆದಿಸುತಿರಲ್ಕೆ॥
ಕಾಂಡವಿಲ್ಲದೆ ಕವಿದು ವಂಬುಗಳಡಗಿತು ಮಾ।
ರ್ತಾಂಡ ಮಂಡಲವಾಗ ಶಿಖಿಕೇತು ನಂದನಂ।
ತಾಂ ಡಿಬಿಕಮರ್ದನ ಕಿರೀಟಿಗಳ ನಡಿಗಡಿಗೆ ಘಾತಿಸಿದ ಸಾಹಸದೊಳು॥ ॥೪೩॥

ಮೀರಿದ ಪರಾಕ್ರಮದೊಳಕ್ಷಿಗಳರಲ್ದುವು।
ಜ್ಜೇರಿ ಪುಳಕೋತ್ಸವದೊಳಾ ತಾಮ್ರಕೇತು ಕೈ।
ದೋರಿ ಬೊಬ್ಬಿರಿದು ನಸುನಗುತೆ ಕೃಷ್ಣನೊಳೆಂದ ನೆಲೆ ದೇವ ತನ್ನ ಕೂಡೆ॥
ಜೇರೆ ನೀಂ ಬಿಲ್ವಿಡಿದು ಕಾದಿ ಕೌಂತೇಯನಂ।
ಗಾರು ಮಾಡದಿ ರರ್ಜುನಂಗೆ ಸಾರಥಿಯಾಗು।
ಸಾರಿದೆಂ ಸಾಕೆಂದು ತೆಗೆದೆಚ್ಚೊಡಚ್ಯುತಂ ಮೆಚ್ಚಿ ಸೋಲೊಡಂಬಟ್ಟನು॥ ॥೪೪॥

ಹರಿ ಬಳಿಕ ತನ್ನ ರಥಮಂ ಬಿಟ್ಟು ಫಲುಗುಣನ।
ವರ ವರೂಥಾಗ್ರದೊಳ್ಚಮ್ಮಟಿಕೆ ವಾಘೆಯಂ।
ಧರಿಸಿ ತುರಗಂಗಳಂ ಚಪ್ಪರಿಸಲೆಡಬಲಕೆ ವಾಯುವೇಗದೊಳಡರ್ದು॥
ಮುರಿದು ಮಂಡಲಭೇದ ಚಳಬಳಿಕೆ ಚದು ರೋಜೆ।
ವೆರಸಿ ರಣರಂಗದೊಳ್ಕಾರಮಿಂಚಿನ ತೆರದೊ।
ಳುರವಣಿಸಿದುವು ಕೂಡೆ ಶಕ್ರಸುತ ನೆಚ್ಚ ನಡಿಗಡಿಗೆ ತಾಮ್ರಧ್ವಜನನು॥ ॥೪೫॥

ಹರಿನಂದನನ ದಿವ್ಯ ಹರಿಮಯ ವರೂಥಮಂ।
ಹರಿವೇಗದಿಂ ಪೆಸೆವ ಹರಿಚತುಷ್ಟಯಮುಮಂ।
ಹರಿಯುಮಂ ಪಳವಿಗೆಯ ಹರಿಯುಮಂ ಪಾರ್ಥನ ಲಹರಿಯುಮಂ ಧಾತು ಗಿಡಿಸಿ॥
ಹರಿಬದ ಕಲಿಗಳಂ ಪ್ರಹರಿಸಿ ತಾಮ್ರಧ್ವಜಂ।
ಹರಿನಾದಮಂ ಮಾಡಿ ಹರಿದಾಡುತಿರೆ ಕೂಡೆ।
ಹರಿಣಾಂಕ ಕುಲಜಂ ವಿಹರಿಸಿದಂ ಬಾಣದಿಂ ಹರಿಕಿರಣ ಮಡಗುವಂತೆ॥ ॥೪೬॥

ಮತ್ತೆ ಮುರಹರನ ನೀರೈದು ಕೂರ್ಗಣೆಯೊಳರು |
ವತ್ತುಮಾರ್ಗಣದಿಂದೆ ಸುರಪಸುತನಂ ಘಾತಿ |
ಸುತ್ತವಂ ಬೊಬ್ಬಿರಿಯೆ ನರ ನವನ ರೋಮರೋಮಂಗಳಂ ಛೇದಿಸ ಪೊಲು ||
ತೆತ್ತಿಸಿದ ನಂಬುಗಳ ನವಸುಮ ತ್ರಿಸುತಿರ್ದ |
ನಿತ್ತಂಡದಾಹವಂ ಸಮನಾಗಿ ಬರೆ ವಿಜಯ |
ನೊತ್ತಾಯದಿಂ ದವನ ಕುದುರೆ ಸಾರಥಿ ರಥವ ನೆಚ್ಚು ಹುಡಿಹುಡಿಗೈದನು || ||೪೭||
ಚೂರ್ಣಮಾದೊಡೆ ರಥಂ ತಾಮ್ರಧ್ವಜಂ ರೋಷ |
ಪೂರ್ಣಮುಖನಾಗಿ ಕಲಿಪಾರ್ಥನ ಸಮೀಪಮಂ |
ತೂರ್ಣದಿಂದೈದಿ ಪೊಯ್ಯಸಿತಮೊಳ್ಚರಣಾಗ್ರದಿಂದೆ ಮುರಹರನೊದೆಯಲು ||
ಜೀರ್ಣತರು ಮುರಿದು ಬೀಳ್ವಂತಿಳೆಗೆ ಬಿದ್ದೊಡನೆ |
ಕೀರ್ಣಪ್ರತಾಪದಿಂದೆದ್ದು ಮತ್ತೊಂದು ವಿ |
ಸ್ತೀರ್ಣಮಾಗಿರ್ದ ಮದಕುಂಜರ ಕಡರ್ದು ಶರ ಪಂಜರವ ನೊದವಿಸಿದನು || ||೪೮||
ಬೀದಿವರಿಸಿದ ನಾತನಾನೆಯಂ ಬಭ್ರುವಾ |
ಹಾದಿ ವೀರರ ಮೇಲೆ ಕಣೆಗಳಂ ಕರೆದ ನಿದಿ |
ರಾದ ಭಟರೆಲ್ಲರುಂ ಮೂರ್ಛೆ ಮೃತಿಯಂ ತಳೆದ ರರ್ಜುನಂ ಮೈ ಮರೆದನು ||
ಕಾದುವವರಿಲ್ಲ ಪಾಂಡವ ಬಲದೊಳಾಗ ಮಧು |
ಸೂದನಂ ಬೆರಗಾಗಿ ಕಡುಗೋಪದಿಂದೆ ತಾ |
ನೇ ದಿವ್ಯಚಕ್ರಮಂ ತುಡುಕಿ ನಡೆದಂ ಘುರಕೆ ಮೂಜಗಂ ತಲ್ಲಣಿಸಲು || ||೪೯||
ಉರಗೇಂದ್ರ ಕಮಠ ದಿಕ್ಕರಿಗಳುಂ |
ಶರಧಿಯುಂ ದೆಸೆಗಳುಂ ಧರಣಿಯುಂ ತರಣಿಯುಂ |
ಪಿರಿದು ಕಂಪಿಸ ಲಾತ್ರಿವಿಕ್ರಮಂ ಚಕ್ರಮಂ ಕೊಂಡು ಕಾಳಗಕೆ ಬರಲು ||
ಅರುಣಧ್ವಜಂ ಕಂಡು ಕೋಪದಿಂ ಚಾಪದಿಂ |
ಸರಳ ಮಳೆಯಂ ಕರೆಯು ತುರುಬಿದಂ ತರುಬಿದಂ |
ಹರಿಯ ನದ್ಭುತಮಾಗೆ ಸಂಗರಂ ಸಿಂಗರಂ ಮೆರೆಯು ಲಂತಕ ಪುರದೊಳು || ||೫೦||
ಕಟ್ಟುಗ್ರಕೋಪದಿಂ ದೈತಪ್ಪದಾನವಘ |
ರಟ್ಟನಂ ತಡೆದು ತಾಮ್ರಧ್ವಜಂ ಕಾಳಗಂ |
ಗೊಟ್ಟ ನಳವಿಗೆ ಸೇರಿತಾತನ ಚತುರ್ಬಲಂ ಸರ್ವಸನ್ನಾಹದಿಂದೆ ||
ಇಟ್ಟಣಿಸಿ ತಾಹವಂ ಬಳಿಕ ಮುರವೈರಿ ತಿರು |
ಪಿಟ್ಟ ಚಕ್ರದ ಸಲವುಧಾರೆಗಳ ಸೋಂಕಿನಿಂ |
ಘಟ್ಟುಗೆಡೆಸುದು ಪಗೆಯ ಪಡೆಯೊಳಕ್ಷೋಹಿಣಿಯ ಶತಕ ಮೊಂದೇಕ್ಷಣದೊಳು ||೫೧||
ಪಡೆ ಮಡಿಯೆ ರೋಷದಿಂದಾಗ ತಾಮ್ರಧ್ವಜಂ |
ನುಡಿದ ನಸುರಾಂತಕ ನೊಳಿಲೆ ದೇವ ಸೈನ್ಯಮಂ |
ತಡೆಗಡಿದೊ ಡೇನಹುದು ಹಿಂದೆ ಪಾರ್ಥಂಗಾಗಿ ನಿನ್ನ ಪುಣ್ಯವ ನಿತ್ತಲಾ ||
ಕುಡದಿರು ಧನಂಜಯಂಗಾಗಿ ತನಗೀಗ ನಿ |
ನ್ನೊಡಲನಿದು ನಿಕ್ಷ್ಟಯಂ ನಿನ್ನ ಕಿರೀಟಿಯಂ |
ಪಿಡಿದು ತಾತನ ಮುಖವನಾಗಿಪೆಂ ನೋಡೆಂದು ಹರಿಯಂ ಪಚಾರಿಸಿದನು || ||೫೨||

ಧರಣೀಂದ್ರ ಕೇಳ್ ಚಕ್ರಪಾಣಿಯಾಗಿರ್ದ ಪುರ |
ಹರನಂ ರಣಾಗ್ರದೊ ಳ್ಕೈಲ್ವಾಯ್ದು ತುಡುಕಿ ನಿಜ |
ಕರವೊಂದರಿಂ ದೆರಡು ಕೈಗಳಂ ಮತ್ತೊಂದು ಹಸ್ತದಿಂ ಪದಯುಗವನು ||
ಹಿರಿದು ಸತ್ವದೊಳೊತ್ತಿ ಪಿಡಿದೊಂದು ಗೂಡಿ ಹರಿ |
ಚರಣಮಂ ನೊಸಲೆಡೆಯೊಳಿಟ್ಟು ತಾಮ್ರಧ್ವಜಂ |
ಪರಿದ ನರ್ಜುನನಿದ್ದ ಬಳಿಗಾಗಿ ಸಾಹಸಕೆ ಮೂಜಗಂ ಬೆರಗಾಗಲು || ||೩೩||
ಹಿಡಿ ಗಯ್ಯೊಳಿರ್ದ ಸುರರಿಪು ಪಾರ್ಥನಂ ಕರೆದು |
ತುಡು ಮಹಾಸ್ತ್ರವನೆಂದು ನೇಮಿಸ ಲ್ಫಲುಗುಣಂ |
ಪಡಯೆನುತೆ ಬಾಣಮಂ ಗಾಂಡೀವ ದೊಳ್ಪೂಡುವನ್ನೆಗಂ ಭರದೊಳೊದಗಿ ||
ತಡೆಗಾಲೊಳಾತನಂ ಕೆಡಹಿ ಭುಜ ಯುಗ್ಮಮಂ |
ತೊಡರಿಕೊಂ ಡುಪ್ಪರಿಸಿ ನರ ಕೃಷ್ಣರಿರ್ವರಂ |
ಮಿಡುಕಲೀಯದೆ ಬಿಗಿದು ತಾಮ್ರಧ್ವಜಂ ಧರೆಗೆ ಬಿದ್ದ ನಗಧರ ನೊಡೆಯಲು ||೩೪||
ಉದ್ದಂಡ ಭುಜಬಲದೊ ಳೊರ್ವ ರೊರ್ವರನೊತ್ತಿ |
ಬಿದ್ದ ರಿಳೆಗಾಮೂವರುಂ ನೊಂದು ಮೂರ್ಛೆಗೊಂ |
ಡಿದ್ದ ರವರೊ ಳ್ಪಾರ್ಥ ಶೌರಿಗಳ್ಬಳಿಕ ತಾಮ್ರಧ್ವಜಂ ಸತ್ವದಿಂದೆ ||
ಎದ್ದು ನೋಡಿದನಲ್ಲಿ ತನ್ನೊಡನೆ ಕಾಳಗಕೆ |
ಹೊದ್ದು ವಪಟರ ನಾರುಮಂ ಕಾಣ ದೆಲ್ಲರಂ |
ಗೆದ್ದೆರಡು ಕುದುರೆಯಂ ಕೊಂ ಡುಳಿದ ಪಡೆಸಹಿತ ನಿಜನಗರಿಗೈತಂದನು || ||೩೫||
ಪಟ್ಟಣದ ಪೊರವಳಯದೊ ಳ್ಚಿತ್ರಮಯವಾಗಿ |
ಕಟ್ಟಿ ದಧ್ವರಮಂಟಪದ ನಡುವೆ ದೀಕ್ಷೆಯಂ |
ನೆಟ್ಟನೆ ಪರಿಗ್ರಹಿಸಿ ಭೂಸುರ ರ್ವೆರೆಸಿ ಕುಳ್ಳಿರ್ದ ಪಿತನೆಡೆಗೆ ಬಂದು ||
ಮುಟ್ಟಿ ಚರಣಂಗಳಂ ಸಾಷ್ಟಾಂಗದಿಂದೆ ಪೊಡ |
ಮಟ್ಟು ತಾಮ್ರಧ್ವಜಂ ಕೈಮುಗಿದು ತರಿಸಿ ಮುಂ |
ದಿಟ್ಟ ನೆರಡಶ್ವಂಗಳಂ ಬಳಿಕ ಶಿಖಿಕೇತು ನಂದನಂ ಗಿಂತೆಂದನು || ||೩೬||
ವತ್ಸರಂ ತುಂಬದೀತಕೆ ತಿರುಗಿತೀಹಯಂ |
ವತ್ಸ ಹೇಳಿದರೊಡನೆ ಮತ್ತೊಂದು ವಾಜಿ ಬಲ |
ವ ತ್ಸಮರ ಮುಖದಿಂದೆ ಜಯಿಸಿದಂತಿರ್ದಪು ದಿದೆತ್ತಣದು ನಿನಗಿಳೆಯೊಳು ||
ಮತ್ಸರದ ಕದನದಿಂದಾವ ಭೂಪನೊಳಾಯ್ತು |
ಮತ್ಸಮೀಪಕೆ ಬಂದ ಹದನಾವುದೆಂದು ಶ್ರೀ |
ಮತ್ಸಭಾ ಮಧ್ಯದೊ ಳ್ನಸುನಗುತೆ ಶಿಖಿಕೇತು ತನಯನಂ ಬೆಸಗೊಂಡನು || ||೩೭||
ಚಿತ್ತಯಿಸು ತಾತ ನೃಪವರ ಯುಧಿಷ್ಠಿರನ ಮಖ |
ದುತ್ತಮ ತುರಂಗಮಿದು ರಕ್ಷೆಗರ್ಜುನ ಕೃಷ್ಣ |
ರಿತ್ತಂಡಮುಂ ಪಡೆವೆರಸಿ ಬಂದೊಡಾನದಂ ಕಟ್ಟಿದೊಡೆ ತನಗವರೊಳು ||
ತೆತ್ತುದಾಹವಮೆಂದು ನಿಜಸುತಂ ಬಿನ್ನೈಸೆ |
ಮತ್ತೆ ಸಂಶಯದಿಂದೆ ಭೂಪಾಲಕಂ ತನ್ನ |
ಹತ್ತಿರಿಹ ನಿಜಮಂತ್ರಿ ನಕುಲಕೇತುವ ನೀಕ್ಷಿಸ ಲ್ಕಾತನಿಂತೆಂದನು || ||೩೮||

ಜೇಯ ಪುಸಿಯಲ್ಲ ಪಾಂಡವರಾಯ ನಶ್ವಮಂ |
ಕಾಯ ಬಂದಿಹ ಬಭ್ರುವಾಹನಾದಿಗಳ ನೊ |
ತ್ತಾಯದಿಂದೆಲ್ಲರಂ ಸವೆಬಡಿ ದುರುಳ್ಚಿ ಬಳಿಕೈದೆ ಕೃಷ್ಣಾರ್ಜುನರನು ||
ಸಾಯದಂ ತಡಗೆಡಹಿ ಪಿಡಿದು ಬಿಟ್ಟೊಡನೆ ಕೌಂ |
ತೇಯನ ತುರಂಗಮಂ ಕೊಂಡು ನಿನ್ನಾತ್ಮಜಂ |
ನೋಯ ದೈತಂದನೆನೆ ಮರುಗುತೆ ಮಯೂರಧ್ವಜಂ ಮಂತ್ರಿ ಗಿಂತೆಂದನು ||೫೯||

ಅಕಟ ಕಿಡಿಸಿದನಲಾ ಕಾರ್ಯಮಂ ನಮಗಿದೇ |
ತಕೆ ಯಜ್ಞಮಿನ್ನು ನಮ ಗೀಮಗಂ ಪಗೆಯಲ್ತೆ |
ಸ್ವಕರಸ್ಥನಾದ ಹರಿಯಂ ಬಿಟ್ಟು ಕಟ್ಟಿದಂ ಗರ್ದಭಾಕೃತಿ ಹರಿಯನು ||
ವಿಕಳಮತಿಯಾಗಿರ್ದ ನೀತನೇವೇಳ್ವೆ ನು |
ತ್ಸುಕದಿಂದ ಮೊಡಗೂಡಿ ಮಂಚದೊ ಳ್ಪ್ರಾಣನಾ |
ಯಕ ನಿರಲ್ಮರೆದೊರಗಿ ದಧವಾಂಗನೆಯವೊ ಲೆಂದವನಿಪಂ ಬಿಸುಸುಯ್ದನು ||೬೦||

ಮತ್ತೆ ಸುತನಂ ನೋಡಿ ಬೈದ ನೆಲವೆಲವೊ ಪೋ |
ಗತ್ತ ನಿನ್ನಂ ಮಾಳ್ಪುದೇ ನಮಲ ತುಲಸಿಯಂ |
ದುತ್ತಿ ಏಡಿದಬ್ಜಮಂ ಮಾಱ್ದು ದುತ್ತುರದ ಕುಸುಮದ ತೊಡವು ಗಟ್ಟುವಂತೆ ||
ಉತ್ತಮವಿದೆಂದು ಕೃಷ್ಣಾರ್ಜುನರ ಬಿಟ್ಟು ತಂ |
ದಿತ್ತೆ ತುರಂಗಂಗಳಂ ಸಾಕಿನ್ನು ಯಜ್ಞ ಮವ |
ರೆತ್ತಲಿರ್ದಪರೆಂಬುದಂ ಪೇಳ್ದೊ ಡುಳುಹಿದವನೆಂದು ಭೂಪತಿ ಸುಯ್ದನು || ||೬೧||

ಕಡೆಯಾದು ದಧ್ವರಕೆ ಸಾಕಿನ್ನು ತುರಗಮಂ |
ಪೊಡೆಯೆತ್ತಲಾವೊಡಂ ಮುರಮಥನ ಪಾರ್ಥರಾ |
ವೆಡೆ ತನಗದಂ ತೋರವೇಳ್ಪುದೆಂದಾ ಮಯೂರಧ್ವಜಂ ಮರುಗಿ ಮರುಗಿ ||
ಬಿಡದೆ ನಿಜತನಯನಂ ಬೈದು ಗರ್ಜಿಸಿ ತನ್ನ |
ಮಡದಿ ಸಹಿತಿರುತಿರ್ದನಾ ದಿನಂ ದೇವಪುರ |
ದೊಡೆಯ ಲಕ್ಷ್ಮೀಶನಂ ಕಣ್ಣಾರೆ ಕಾಣಬೇಕೆಂಬ ಕಡು ತವಕದಿಂದೆ || ||೬೨||

ಸಂಧಿ ೨೫ ಕ್ಕೆ ಪದ್ಯಗಳು ೧೩೬೨ ಕ್ಕೆ ಮಂಗಳಮಸ್ತು.

## ಇಪ್ಪತ್ತಾರನೆಯ ಸಂಧಿ.

ಸೂಚನೆ|| ದ್ವಿಜನಾಗಿ ಬಂದು ಬೇಡಲ್ಮಯೂರಧ್ವಜಂ |
ನಿಜಶರೀರದೊಳರ್ಧಮಂ ಕೊಯ್ದು ಕೊಟ್ಟು ದಂ |
ಕಜಪತ್ರನೇತ್ರನಂ ಮೆಚ್ಚಿಸಿ ದಯದ್ವಯಮನಿತ್ತು ಮುಖಮಂ ಮಾಣ್ದನು ||

ಘೋರಮಣ ಕೇಳ್ಕೃಷ್ಣಕಾಂಕ್ಷಿಯಾಗಿರ್ದಂ ಮ |
ಯೂರಧ್ವಜ ಕ್ಷಿತೀಶ್ವರ ನಿತ್ತ ಲತ್ತ ರಣ |
ಧಾರಿಣಿಯೊಳಸುರಾರಿಗೆಚ್ಚರಿಕೆ ತಲೆದೋರಿ ತರ್ಜುನಂ ಗರಿವಾದುದು ||
ವೀರಭಟರೆಲ್ಲರ್ಗೆ ಮೂರ್ಛೆ ತಿಳಿದುದು ಬಳಿಕ |
ನಾರಿಜಾಕ್ಷಂ ಸಕಲ ಸೇನೆಯಂ ಸಂತೈಸಿ |
ಚೋರಬುದ್ಧಿಯೊಳೊಂ ದುಪಾಯಮಂ ಕಂಡಾ ಧನಂಜಯಂ ಗಿಂತೆಂದನು || ||೧||

ನೋಡಿದೈ ಕುಂತೀಕುಮಾರ ತಾಮ್ರಧ್ವಜಂ |
ಮಾಡಿದ ವಿಘಾತಿಯಂ ನಮ್ಮೆಲ್ಲರಂ ಧುರದೊ |
ಳೀಡಿರಿ ದುರುಳ್ಚಿ ಹಯಂ ಕೊಂಡು ರತ್ನಪುರಿಗೈದಿದಂ ಪಿತನ ಬಳಿಗೆ ||
ಆಡಲೇನಹುದಿನ್ನು ಸೇನೆ ಮೆಲ್ಲನೆ ಪಿಂತೆ |
ಬೀಡಾಗಿ ನಡೆತರಲಿ ಮುಂದೆ ಪೋಪವೆ ನೆನ್ನ |
ಕೂಡೆ ಬಾ ನಿನಗೊಂದುಪಾಯಮಂ ತೋರಿಸುವೆನೆಂದ ನಸುರಾರಿ ನಗುತೆ || ||೨||
ಆಹರಿಯ ನುಡಿಗೇಳ್ದು ಫಲುಗುಣಂ ಸೇನಾ ಸ |
ಮೂಹಮಂ ಪಿಂದುಳಿಪಿ ರತ್ನನಗರಿಗೆ ಪಕ್ಷಿ |
ವಾಹನನ ಕೂಡೆ ನಡೆತಂದ ನವರಿರ್ವರುಂ ಮಾತಾಡಿಕೊಂಡು ಬಳಿಕ ||
ರೂಹುಗಾಣಿಸದಂತೆ ವಿಪ್ರವೇಷವನಾಂತು |
ದೇಹಿಕರ ತೆರದಿಂದೆ ವೃದ್ಧನಾದಂ ಶೌರಿ |
ಮೋಹದಿಂ ತನಗೆ ಕೈಗುಡುವ ಬಾಲಕ ಶಿಷ್ಯನಾದ ನಮರೇಂದ್ರಸೂನು || ||೩||
ಬಟ್ಟೆವಿಡಿದವ ರಿರ್ವರುಂ ಮಯೂರಧ್ವಜನ |
ಪಟ್ಟಣಕೆ ನಡೆತಂದ ರನ್ನೆಗಂ ದೆಸೆದೆಸೆಯೊ |
ಳಟ್ಟಣಿಸಿ ಲೋಕಮಂ ಕಂಗೆಡಿಸು ವಂಧಕಾರಂಗಳಂ ನಿಲಲೀಯದೆ ||
ಅಟ್ಟಿ ಹರಿಹರಿ ದುರೆ ಬಳಲ್ದು ಕಾಹುರದ ಕಂ |
ಗೆಟ್ಟು ಕಳೆಗುಂದಿ ಮೆಲ್ಲನೆ ನಭೋಮಾರ್ಗಮಂ |
ಬಿಟ್ಟು ಪಶ್ಚಿಮಗಿರಿಯ ತಪ್ಪಲಂ ಸಾರ್ದನೆನೆ ರವಿ ಪಡುಗಡೆಯೊಳಿಸೆವನು || ||೪||
ಮೆಲ್ಲಮೆಲ್ಲನೆ ತರಣಿ ಮುಳುಗಿದಂ ಪಡುಗಡಲೊ |
ಳಲ್ಲಿಗಲ್ಲಿಗೆ ಮೂಡಿದುವು ಸಂಜೆದಾರಗೆ ಗ |
ಳೆಲ್ಲೆಲ್ಲಿಯುಂ ತಮಂ ತುಂಬಿದುದು ತುಂಬಿಗಳೊಡನೆ ಮುಗಿದು ವಂಬುಜಾಳಿ ||
ನಲ್ಲನಲ್ಲರ ನೇಹ ಗಲಹದೊಳ್ಮನಿದು ರತಿ |
ಗೊಲ್ಲ ದೊಲ್ಲದಕಾಂತೆಯರ ಮನಂ ತರಹರಿಸಿ |
ನಿಲ್ಲನಿಲ್ಲದ ವೊಲಂಗಜ ನುರುಬ ತೊಡಗಿದಂ ಮರುಗಿದುವು ಕೋಕಂಗಳು || ||೫||
ಹೊತ್ತು ಹೊತ್ತಿಗೆ ಮತ್ತೆ ಮತ್ತೆ ಬಲವತ್ತರ ದೊ |
ಳೊತ್ತಿಡಿದು ಸುತ್ತ ಲೆತ್ತೆತ್ತಲುಂ ಕೆತ್ತವೋ |
ಲ್ಮತ್ತೆ ಮುಸುಕಿತ್ತು ಕಗ್ಗತ್ತಲೆ ಧರಿತ್ರಿಯುಂ ಮುಳ್ಳಮೊನೆ ಕೊಳ್ಳದಂತೆ ||
ಚಿತ್ತಜಂ ಕತ್ತಿಯಂ ಕಿತ್ತುಕೊಂಡೆತ್ತಿ ಹೊ |
ಯ್ಯುತ್ತೆ ಬರ ಲುತ್ತುಂಗ ವೃತ್ತ ಕುಚೆಯರ್ತಮಗೆ |
ತೆತ್ತಿರ್ದ ತೆತ್ತಿಗರ ನೊತ್ತಿಗರ ಸುತ್ತಿರ್ದರಾಗ ಳನುರಾಗದಿಂದೆ || ||೬||
ಆ ರಜನಿಯೊಳ್ಬಳಿಕ ರತ್ನಪುರಮಂ ಪೊಕ್ಕು |
ನೀರಜ ದಳೇಕ್ಷಣಂ ಕೇರಿಕೇರಿಗ ಳೊಳ್ನ |
ನಿವಾರಜನ ತಮ್ಮನಂ ಕೂಡಿಕೊಂಡೈತರುತೆ ಕಂಡ ನತಿನಿದ್ರೆಯಿಂದೆ ||
ಪೂರ ಜನಮೆಲ್ಲಮುಂ ಮರೆದೊರಗ ಲಲ್ಲಲ್ಲಿ |
ವಾರಜ ಭ್ರಮೆಯಿಂದೆ ಪೊರಮಟ್ಟು ಸಂಚರಿಪ |
ಚಾರು ಜಲರುಹವನೆಯರ ಜೇಟದಾಟದ ಪಲವುಬಗೆಯ ಚೆಷ್ಟೆಗಳನು || ||೭||

ಆಭರಣ ಮಲುಗಿದೊಡೆ ಕಣ್ಗದಿ ರ್ಲ್ಪಸಿದೊಡೆ |
ಶೋಭಿಸುವ ತನುಗಂಧ ಮುಣ್ಮಿರ್ದೊಡೆ ಜನರ ನಿ |
ದ್ರಾಭಂಗವಾಗಿ ಕಂಡಪ ರೆಂಬ ಭೀತಿಯಿಂ ದೈತಪ್ಪ್ ಕಾಮಿನಿಯುನು ||
ಸಾಭಿಲಾಷೆಯೊಳೊರ್ವ ವಿಟ ನಿದಿರ್ಪಂದು ಮ |
ತ್ತೇಭಗಾಮಿನಿ ಭೃಂಗ ನೀಲಕುಂತಳೆ ಪನ್ನ |
ಗಾಭ ಸುಂದರವೇಣಿ ಬೆದರಬೇಡೆನುತೆ ತಕ್ಕೈಸಿದ ನದೇಂ ಪ್ರೌಢನೊ || ||೮||
ತೋರ ಮುತ್ತಿನ ಹಾರಮಂ ತೊಟ್ಟು ಚಂದ್ರಮುಖಿ |
ಕಾರ ಕತ್ತಲೆಯೊ ಳಡಿಯಿಡಲಂಜಿ ಪಣೆಗೆ ಕ |
ಸ್ತೂರಿಯಂ ಕಣ್ಗೆ ಕಾಡಿಗೆಯಂ ಕೊರಲ್ಗೆ ಹರಿನೀಲ ಮಣಿಭೂಷಣವನು ||
ಸೇರಿಸಲ್ಕಮ ನೈಜಮಾಗೆ ಜಿರಗಾಗಿ ಬಳಿ |
ಕೋರೆ ದುರುಬಂ ತೆಗೆದು ಜಡೆಗಟ್ಟಿ ಪೊರಮಟ್ಟು |
ಕೇರಿಗೊಂ ಡೈದಿದ ಳ್ಸಂಕೇತ ಭವನದೊ ಳ್ಕಾದಿರ್ದಕಾಂತ ನೆಡೆಗೆ || ||೯||
ಸಂಚುವ ಸತೀ ಜನದೊ ಳಂಗಭವ ಕೇಳೀ ಪ್ರ |
ಪಂಚ ವರನೊಳ್ಸಮನಿಸಿದ ಬಳಿಕ ಮನದೊ ಳ್ಪ |
ಳಂಚುವ ಜಿವರ್ಕೆಯಂ ಬಿಟ್ಟು ನಿಜ ಭವನಮಂ ಪೊರಮಟ್ಟು ಕತ್ತಲೆಯೊಳು ||
ಮಿಂಚುವ ವಿಭೂಷಣಕೆ ಮುಸುಕಿಟ್ಟು ಸುಳಿವರ್ಗೆ |
ಹೊಂಚುವ ಚಮತ್ಕೃತಿಯ ನಳವಡಿಸಿ ನೆನಹಿಂಗೆ |
ಮುಂಚುವ ಪದನ್ಯಾಸಮಂ ಕಲಿತು ನಡೆವ ಜಾರೆಯರ ಚದುರೆಸೆದಿರ್ದುದು ||೧೦||
ಕಿಕ್ಕಿರಿ ದಡರ್ದುರವ ನಿಂಬುಗೊಂ ಡುರೆ ಬಳೆದ |
ಕಕ್ಕಸದ ಬಟ್ಟ ಬಲ್ಮೊಲೆಗ ಳೋಪನ ಕೈಗೆ |
ನೆಕ್ಕಸಂ ನೋಳ್ಪರ್ಗೆ ಕಣ್ಗಿಸು ರ್ಪುದುಗಿದೊಡೆ ಮದನಂಗೆ ಮಾನಹಾನಿ ||
ಸೊಕ್ಕು ಲೇಸಾಗದೆಂ ದೊಪ್ಪಿಡಿಯೊಳೊದಗಿ ನೋ |
ಟಕ್ಕೆ ಕಾಣಿಸದೆ ಕಾಮನ ರೂಪ ನಳವಡಿಸಿ |
ತಕ್ಕ ಬಡತನದೊಳಿರ್ದುದು ಸಣ್ಣ ಸೆಳೆನಡು ನಿಶೆಯೊಳೈದಿ ಬಹ ಜಾರೆಯ ||೧೧||
ನಿಟಿಲಮಂ ನೇವರಿಸು ತಂಗುಲಿಯ ತುದಿಯಿಂದೆ |
ತುಟಿವಿಡಿದು ನೋಡುತ್ತೆ ಮಣಿಮಣಿದು ವೃತ್ತ ಕುಚ |
ತಟಮಂ ನಿರೀಕ್ಷಿಸುತೆ ಕರ್ಣಪತ್ರದ ನಮರ್ಚುತೆ ಹಾರಮಂ ಸರಿಯುತೆ ||
ಕಟಿಗೆ ನಿರಿಯಂ ಸೇರಿಸುತೆ ನಿಮಿರ್ದ ಕ್ಷತಕೆ |
ನಿಟಿನ ನುರೆ ಬೈಯುತ್ತೆ ತಿರುಗಿ ನಿಜಮಂದಿರಕೆ |
ಕುಟಿಲ ಕುಂತಳದ ಜಾರೆಯರ್ಕೈದಿ ಬರುತಿರ್ದ ರಲ್ಲಲ್ಲಿ ಕತ್ತಲೆಯೊಳು || ||೧೨||
ಕತ್ತಲೆಯೊ ಳಸುರಾರಿ ಫಲ್ಗುಣ ರ್ಜಾರೆಯರ |
ವೃತ್ತಾಂತಮಂ ನೋಡು ತ್ತೈತರ ಲ್ಪಸಿತರೊ |
ಳ್ಪೊತ್ತಡಿಹ ಜಕ್ಕವಕ್ಕಿಗಳ ವಿರಹದ ವೆಂಕೆವೊಗೆ ಪೊಗೆದು ಮೀಂದಿನಿಯೊಳು ||
ಸುತ್ತಿ ಸುತ್ತಲು ಮಂಧಕಾರಮಾಗಿರುತಿರೆ |
ಳ್ತೆತ್ತಜಂ ತಂಪೆಲ ರೋಳಾಂಬಿದೊಡೆ ಪಜ್ಜಳಿಸಿ |
ಮುತ್ತಿರ್ದ ಕಿಚ್ಚಿ ಸೇಳಿಗೆಯಂತೆ ಮೂಡಿದಂ ಚಂದ್ರನಿಂದ್ರನ ದೆಸೆಯೊಳು || ||೧೩||

ಮುರುಗಿದುವು ಕೋಕ ಕೋಕನದಂಗಳಾಗ ಬಾ |
ಯ್ದೆರೆದುವು ಚಕೋರ ಕೋರಕ ಕುಮುದ ರಾಜಿಗ |
ಳ್ತುರುಗಿದ ತಮಿಸ್ರಮಾಲೋಕ ಲೋಕಸ್ಥಿತಿಗೆ ತೊಲಗಿದುದು ದೆಸೆ ದೆಸೆಯೊಳು ||
ನೊರೆದುದು ಸಮುದ್ರ ಮುದ್ರವದ ಪೆರ್ಚುಗೆಯಿಂದ |
ಮೊರೆತು ಮಡುಕಾಂತ ಕಾಂತ ಪ್ರತತಿ ಕುಸುಮಶರ |
ನುರುಬಿದನಗಲ್ದರಂ ಚಾಪ ಚಾಪಲಹಸ್ತನಾಗಿ ಚಂದ್ರೋದಯದೊಳು || ||೧೪||
ಪ್ರಾಚೀನಿತಂಬಿನಿಯ ಮುಖಬಿಂಬ ಪೆಳಿನಗೆಯ |
ರೋಚಿಗಳೊ ಪೆರ್ಚುಗೆಯೊಳುಬ್ಬಿದ್ದ ಪಾಲ್ಗಡಲ |
ವೀಚಿಗಳೊ ಮನ್ಮಥನ ಕೀರ್ತಿಯ ಮರೀಚಿಗಳೊ ನಿಜಕಾಂತನಂ ಕಾಣುತೆ ||
ನಾಚಿ ಬೆಳ್ಪೇರಿದಳೊ ರಾತ್ರಿ ವಧು ಚೆಲ್ಲಿದನೊ |
ಘೂಚಕ್ರ ಕಂಗಜಂ ಬೇಳುವೆಯ ಬೂದಿಯಂ |
ನಾಚಿಸುವೊ ಡರಿದೆನ ಲ್ಪಸರಿಸಿತು ಚಂದ್ರಕಿರಣಂಗಳೆಲ್ಲಾ ದೆಸೆಯೊಳು || ||೧೫||
ತವೆ ಶಾಂತ ಸಮೃತರೂಪಂ ಶೈತ್ಯವರ್ಧನಂ |
ಭುವನ ಪ್ರಕಾಶಂ ಜನಾವಲೋಕ ಪ್ರಿಯಂ |
ಧವಳ ತನುವೃತ್ತಂ ನಿರಂತರಂ ವಿಷ್ಣುಪದ ಸೇವಕಂ ಕೃಷ್ಣಾಂಕನು ||
ದಿವಿಜ ತೋಷಕನಾದ ರಾಜನಭ್ಯುದಯ ದೊ |
ಳ್ಕುವಲಯಶ್ರೀ ವಿರಾಜಿತಮಪ್ಪುದೇಂ ಕೌತು |
ಕಮೆ ಜಾರ ಚೋರರ್ಕ ಳಡಗದಿರ್ದಪರೆ ಪೇಳೆನಲಿಂದು ಮೆರೆದನಂದು || ||೧೬||
ಚಂದ್ರನುದಯಂಗೆಯ್ಯೆ ದೆಸೆದೆಸೆಗಳೆಲ್ಲಮುಂ |
ಚಂದ್ರಿಕೆಗಳಿಂದೆ ಬೆಳಬೆಳಗಿ ಬೆಳ್ಪೊಲಾಗೆ |
ಚಂದ್ರಕಾಂತಂಗಳಿಂದೊಲ್ದು ನಿರ್ಮಿಸಿದ ನವ ಸೌಧ ಸೌಧಾಗ್ರಂಗಳ ||
ಚಂದ್ರಶಾಲೆಗಳೊಳಗೆ | ರತಿಕಲಾಪ್ರೌಢಿಯಿಂ |
ಚಂದ್ರವದನೆಯ ರಂತರಂಗಮೊ ಳ್ಪದಿದ ಕೆ |
ಚ್ಚಂ ದ್ರವಿಸುವಂತೆ ರಂಜಿಸಿ ರಮಿಸುತಿಹ ಪುರುಷರಾ ಪುರದೊಳೆಸೆದಿರ್ದರು || ||೧೭||
ಕುಚಮಂಡಲದ ಮೇಲೆ ಕಾರುಣ್ಯದ ನಡುವೆ |
ಕಚಪಡೆಯೊಳಿಹ ಕೃಷ್ಣವೈಭವಂ ತನ್ನ ಬಗೆ |
ಗುಚಿತ ಮಪ್ಪುದು ನಿನ್ನ ದೇಹದೊಳಿರ್ಪ ಕೃಷ್ಣಭಾವಂ ತನಗೆ ಪರಿಚಿತವನು ||
ರಚಿಸದಿರದೆಂ ದೊರ್ವ ನಿನಿಯಳಂ ತಿಳಿಪಲ್ಕೆ |
ನಿಜಲಮಪ್ಪುದೆ ಕೃಷ್ಣ ಹೃದಯಮುಮಂ ದವಳೊವರ |
ವಚನಮೋಷಕೆ ಜೀಡಿಕೊಂಬ ಪೊಲ್ಲಾಕ್ಕರಗಿ ಸಂತೈಸಿದಂ ಪ್ರಿಯಳನು || ||೧೮||
ಅಚ್ಚಪಕ್ಕಿಂಗಳೊ ಕೃತ್ತ್ರಿವರ್ ನಿನಿಯಾಳಂ |
ನಿಚ್ಚಟಮೊಳುಳಿಪಂತೆ ನಿಜಮುಂ ಬರೆ ನಳಿಮ |
ಪಚ್ಚಳಿಸಿ ಪ್ರಿಯೆ ನಿನ್ನ ಸರ್ವಾಂಗಮುಂ ನೋಡಿ ಕೃಷ್ಣಾವಲೋಕನವನು ||
ಮಚ್ಚಿ ತಣಿಯದ ಪ್ರೊಲವರ್ಪುದೆನ್ನ ಕಂಗಳಿಂ |
ದುಚ್ಚರಿಸಲೀಕೆ ಮರುಳೆ ತಪ್ಪುನಾಡಿದೆ ದೃಷ್ಟಿ |
ಗೊಚ್ಚ ತಂಗೊಂಡು ರಂಜಿಪ ಕೃಷ್ಣರೂಪಮಿರ ಲನ್ಯಮಿನ್ನೇಕೆಂದಳು || ||೧೯||

ಅಂಗಜಶ್ರಮದಿಂದೆ ಬೆಮರ್ದ ಕಾಮಿನಿ ತನ್ನ ।
ತುಂಗ ಕುಚತಟದ ಕಸ್ತೂರಿಯೊಳ್ಸದಿ ದಿನಿಯ ।
ಸಂಗಮಂ ಕಂಡಿದೇತಕೆ ಕೃಷ್ಣರೂಪಾದೆ ನೀನೆಂದು ಬೆಸಗೊಳಲ್ಕೆ ॥
ಅಂಗನೆ ತಿಳಿಯಪಾದೆ ಪೊತ್ತಿರ್ದನೆಂದು ಕೃ ।
ಷ್ಣಂ ಗಿರಿಯನೊಂದ ನೆರಡದ್ರಿಗಳ ನೀಗ ಳಾಂ ।
ಹಿಂಗದಾಂತಿಹೆ ನೆನಗೆ ಕೃಷ್ಣಭಾವಂ ಬರ್ಪು ದಚ್ಚರಿಯೆ ಪೇಳೆಂದನು ॥ ॥೨೦॥

ಕತ್ತಲೆಯನಡಸಿ ಪಿಡಿದವರುಂಟೆ ತಾರೆಗಳ ।
ಮೊತ್ತಮಂ ಪೊಯ್ದು ಕೆಡಪಿದರುಂಟೆ ಬಟ್ಟೆಗಳ ।
ನೊತ್ತಿ ಕರದಿಂದೆ ಕದುಬಿದರುಂಟೆ ಗಗನಮಂ ತಕ್ಕೆಗೊಂದಿಸಿದರುಂಟೆ ॥
ವೃತ್ತದಿಂ ದೆಸೆವ ಶಶಿಯಂ ಚುಂಬಿಸಿದ ರುಂಟೆ ।
ಚಿತ್ರ ಜಾಹವದ ಭಟ ರಂಗವಣೆ ಪೊಸತೆಂದು ।
ಹತ್ತಿರಿಹ ಪಂಜರದ ರಾಜಕೀರಂ ಪೇಳ್ದು ದೊರ್ವನಾಯಕಿಯು ಕೂಡೆ ॥ ॥೨೧॥

ಹರಶರ ಪ್ರಥಮಾವತಾರ ಲೋಚನೆ ಮಹೀ ।
ಧ್ರರ ಚಾಪತುಂಗ ವಕ್ಷೋಜಾತೆ ಹಿಮಕರಾ ।
ಭರಣ ಮೌರ್ವೀವೇಣಿ ತಾನಿರ್ದು ಮನ್ಯಳಂ ಮದನಬಾಣಾಕ್ಷಿಯೆಂದು ॥
ಸ್ಮರ ಕಾರ್ಮುಕ ಭ್ರೂಲತಾ ಶೋಭಿಯೆಂದು ಶಂ ।
ಬರ ಮಥನ ಶಿಂಜಿನೀಲೋಲ ಕುಂತಳೆ ಯೆಂದು ।
ಕರೆದೆ ಗಡ ನೀನೆಂದು ಸವತಿಮತ್ಸರ ಕೊರ್ವ ಳೋಪನಂ ಕೋಪಿಸಿದಳು ॥ ॥೨೨॥

ಆವನಂ ಕೆಳೆಯೆಂದುರಿಯನಪ್ಪಿ ಬಾಳ್ದವಂ ।
ಪಾವಗಿದು ಬದುಕಿದವ ನಾವವಂ ಮೃ ಡನಯನ ।
ಪಾವಕಜ್ವಾಲೆಯಿಂದುರೆ ಬೆಂದು ಜೀವಿಸುವ ನಾವವಂ ತ್ರಿಭುವನದೊಳು ॥
ಈ ವಾಯು ವೀಚಂದ್ರ ನೀಪುಷ್ಪಬಾಣ ನೀ ।
ಮೂವರುಂ ವಿರಹಿಗಳ ಕೊಲೆ ಗುಳಿದ ರಕಟ ತಾ ।
ನೇಗೈವೆನೆಂ ದೋಪ ನಗಲ್ದ ಕಾಮಿನಿ ಯೊರ್ವಳಾಗ ಚಿಂತಿಸುತಿರ್ದಳು ॥ ॥೨೩॥

ವಂಚನೆಯೊಳಿಂತಿ ರುಳ್ಪುರಜನದ ನಾನಾ ಪ್ರ ।
ಪಂಚೆಲ್ಲಮಂ ನೋಡು ತಸುರಾರಿ ಫಲ್ಗುಣ ।
ರ್ಸಂಚರಿಸುತಿರ್ದ ರಾಪಟ್ಟಣದೊಳನ್ನೆಗಂ ಕಾಂತರಾಲಿಂಗನದೊಳು ॥
ಪೊಂಚಿರ್ದ ಕಾಮಿನಿಯರೆದೆ ಧಿಗಿಲೆನ ಲ್ಕೊಗ ।
ಲುಂಚದೊ ಳ್ಕೋಳಿಗ ಳ್ಕೂಟ ವೆಣೆವಕ್ಕಿಗ ।
ಳ್ಮಂಚಿದುವು ತಾವರೆಗೆ ತುಂಬಿ ವಿಂಡೆರಗಿದುದು ಕೊರಗಿದುವು ನೈದಿಲೆಗಳು ॥೨೪॥

ಬಳಿಕ ದಿನದಿನಕೊಂದು ಪರಿಯಾಗಿ ದೋಷಮಂ ।
ತಳೆದು ಸಲೆ ಪೆರ್ಚ್ಚಿದ ಕರಂಗಳಿಂ ಸಿರಿಯಿರ್ದ ।
ನಿಳೆಯುಂಗಳಂ ಬಾಧಿಸುವ ರಾಜನೈಶ್ವರ್ಯ ಮಿರ್ದಪುದೆ ಪೇಳೆನಲ್ಕೆ ॥
ತೊಲಗಿದುವು ಬೆಳ್ದಿಂಗ ಳಾದಿತ್ಯನೊ ಳ್ನೆರೆಯು ।
ಲೇಪಿಸಿ ಕುಂಕುಮದಿಂದೆ ಪೂರ್ವದಿಗ್ವನಿತೆ ಮಂ ।
ಗಳ ಮಜ್ಜನಂಗೈದ ಳೆಂಬಂತೆ ರಂಜಿಸಿತು ಮೂಡವೆಸೆ ಕೆಂಪಡರ್ದು । ॥೨೫॥

ಗಾಲಿಯೊಂದೇ ರಥಕೆ ಜೋಡಾಗಿ ಪೂಡುವೊಡೆ ।
ಸಾಲದೇಳೇಹಯಂ ನಡೆಸುವೊಡೆ ಸಾರಥಿಗೆ ।
ಕಾಲಿಲ್ಲ ಲೋಕಯಾತ್ರೆಯ ನೊಲ್ಲೆನೆಂದೊಡಾಗದೆ ತನಗೆ ತಿರುಗಲೇಕೆ ॥
ಕಾಲಗತಿಯಂ ವಿಚಾರಬಾರದಿಂತೆಂಬುದಂ ।
ಮೂಲೋಕ ಕೆಚ್ಚರಿಸುವಂತೆ ಪೂರ್ವಾಚಲದ ।
ಮೇಲೆ ಮೂಡಿದ ನೆಂದಿನವೊ ಲಬ್ಜಬಾಂಧವಂ ನಯನಾಂಧ ಮಂದಡಗಲು ॥೨೬॥
ಜನನಾಥ ಕೇಳ್ಮಯೂರಧ್ವಜ ಮಹೀಶ್ವರಂ ।
ದಿನನಾಥ ನುದಯದೊ ಳ್ವಿಮಲ ಸಂಧ್ಯಾವಿಧಿಯ ।
ನನುಕರಿಸಿ ಕೃಷ್ಣನಿದ್ದೆಡೆಗೆ ತಾಂ ಪೋಗಿ ಕಂಡಪೆನೆಂಬ ಕಾರಿಯವನು ॥
ಮನದೊಳಗೆ ನಿಶ್ಚೈಸಿ ಪೊರಮಡುವನಾಗಿ ನಿಜ ।
ತನುಜನಂ ಕರೆಸಿ ಮಂತ್ರಿಗಳೆಲ್ಲರಂ ಬರಿಸಿ ।
ವಿನುತ ಭೂಸುರ ನೃಪಾಲಸ್ತೋಮ ದೊಡಗೂಡಿ ಕುಳ್ಳಿರ್ದನೋಲಗದೊಳು ॥೨೭॥
ಅನ್ನೆಗಂ ವೃದ್ಧವಿಪ್ರಾಕಾರಮಂ ತಳೆದ ।
ಪನ್ನಗಾರಿಧ್ವಜಂ ನಿಜ ಶಿಷ್ಯಪಾರ್ಥನಂ ।
ತನ್ನೊಡನೆ ಕೂಡಿಕೊಂ ಡೊಯ್ಯನೊಯ್ಯನೆ ಹಯದ್ವಯದಿಂದೆ ಪತ್ನಿ ಸಹಿತ ॥
ರನ್ನದೊಡವುಗಳ ಕತ್ತುರಿಯ ತಿಲಕದ ನೊಸಲ ।
ಮನ್ನೆಯರ ಗಡಣದಿಂ ದ್ವಿಜ ನಿಕರದಿಂದೆ ಸಂ ।
ಪನ್ನ ದೀಕ್ಷೆಯೊಳೆಸೆವ ಭೂಪನೆಡೆಗೆಯ್ದಿ ಕೇಳ್ ಸ್ವಸ್ತ್ಯಸ್ತು ನಿನಗೆಂದನು ॥೨೮॥
ಮತ್ತೆಲೆ ಮಹೀಪಾಲ ಶಾರ್ದೂಲ ನಿನಗಾಗ ।
ಲುತ್ತರೋತ್ತರಮೆಂದು ತನಗೆ ನೀಂ ಬೇಡಿದುದ ।
ನಿತ್ತಪೆ ಮಹಾ ದಾನಿಯೆಂದು ಶಿಷ್ಯಂವೆರಸಿ ಬಂದೆನಾ ನೀಗ ನಿನ್ನ ॥
ಉತ್ತಮಾಧ್ವರಶಾಲೆಗೆಂಬ ದ್ವಿಜನಂ ಕಂಡು ।
ಚಿತ್ತದೊಳ್ಬೆದರಿ ನೃಪನಿದಿರೆದ್ದು ಪದಕೆರಗಿ ।
ವತ್ತಾರ್ಘ್ಯಪಾದ್ಯಾಸನಂಗಳಿಂ ದುಪಚರಿಸಿ ಕುಳ್ಳಿರಿಸು ತಿಂತೆಂದನು ॥ ॥೨೯॥
ಎಂದು ಪರಿಯಂತಂ ದ್ವಿಜ ರ್ಗವಜ್ಞೆಯ ನೆಸಗ ।
ರಂದು ಪರಿಯಂತ ಮೈಸಲೆ ನರರ ಬಾಳ್ಕೆ ನೀಂ ।
ಬಂದು ಪರಸಿದೊ ಡಾದುದಿಂ ದುತ್ತರೋತ್ತರಂ ತನಗೆ ನಿಶ್ಚಯ ಮಿಳೆಯೊಳು ॥
ಸಂಧಿಸಿದ ಜನದ ವಂದನೆಗೆ ಮೊದಲೇ ಸ್ವಸ್ತಿ ।
ಯೆಂದೊ ಡಾಭೂಸುರಂ ಪ್ರಿಯದೊ ಳಾಪ್ರಾಣಿಯಂ ।
ಕೊಂದನಲ್ಲದೆ ಬೇರೆ ಶಾಪಮೇತಕೆ ವಿಪ್ರ ಪೇಳೆಂದೊ ಡಿಂತೆಂದನು ॥ ॥೩೦॥
ಪರಸಲಾಗದು ನಮಸ್ಕಾರಕ್ಕೆ ಮುನ್ನ ಭೂ ।
ಸುರ ರನ್ಯರಂ ತನ್ನ ಸಂಕಟ ನಿಮಿತ್ತದಿಂ ।
ದರಸಂಗೆ ಬಿನ್ನಪಂಗೈವ ನಾಶೀರ್ವಾದಮಂ ಮೊದಲೆ ಮಾಡದಿಹನೆ ॥
ಧರಣಿಪತಿ ವಂದ್ಯನಲ್ಲವೆ ದೋಷಮೇನಿದಕೆ ।
ಪಿರಿದಾರ್ತನಾಗಿ ನಿನ್ನೆಡೆಗೆ ನಾಂ ಬಂದೆ ನ ।
ಧ್ವರಶಾಲೆಗೆಂದು ಕಪಟದ್ವಿಜಂ ನುಡಿಯಲ್ಕೆ ನರನಾಥ ನಿಂತೆಂದನು ॥ ॥೩೧॥

ದ್ವಿಜತಿಲಕ ನೀ ನನುಗ್ರಹಿಸೆನಗೆ ಧನ್ಯ ನಾಂ ।
ನಿಜಶಿಷ್ಯನಂ ಕೂಡಿಕೊಂಡು ಮಖ ಮಂಟಪಕೆ ।
ಬಿಜಯಮಾಡಿದ ಕಜ್ಜಮಾವು ದೇತರೊಳಾಸೆ ನಿನಗಾರ್ತಮೇ ಸಿದರೊಳು ॥
ತ್ಯಜಿಸಬೇಡೊಂದುಮಂ ಪೇಳ್ವು ದಾನೀವೆ ನಾ ।
ರಜ ಮಿಲ್ಲ ದೆಲ್ಲಮಂ ವಾಚಿಸೆಂಪಾ ಶಿಖಿ ।
ಧ್ವಜ ನಾಡಲಾ ವಿಪ್ರನಿಂತೆಂದು ತನ್ನ ವೃತ್ತಾಂತಮಂ ವಿವರಿಸಿದನು ॥ ॥೩೨॥

ಉರ್ವೀಂದ್ರ ಕೇಳಾಮೊದಾಂ ಧರ್ಮಪುರದೊ ಳ್ಪಿ ।
ಸರ್ವಡೆದಿಹೆಂ ಕೃಷ್ಣ ಶರ್ಮ ನೆಂದೆನಗೆ ಸುತ ।
ನೊರ್ವನುಂಟಾತನ ವಿವಾಹಕ್ಕೆ ತವ ಪುರೋಹಿತ ಸತ್ಯಶೀಲನಲ್ಲಿ ॥
ಒರ್ವ ಕನ್ನಿಕೆ ಮದುವೆ ಗಿಹಳೆಂದೊ ಡಲ್ಲಿ ಗ ।
ಕ್ಕರ್ವೆರೆಸಿ ಮಗನ ನೊಡಗೊಂಡು ಬರುತಿರ್ದೆಂ ಪೊ ।
ದರ್ವಡೆ ದಡವಿಯ ಪಥದೊಳ್ಪಿಡಿದು ದೊಂದು ಕೇಸರಿ ತನ್ನ ನಂದನನನು ॥೩೩॥

ಆ ಸಿಂಗ ಮತಿಭರದೊ ಳಿರಗಲಾ ಭೀತಿಗೆ ನೃ ।
ಕೇಸರಿ ಸ್ಮರಣೆಯುಂ ಬಿಡದೆ ನಾಸಕಟ ಹಾ ।
ಹಾ ಸೂನು ಹಾಯೆಂದು ಹಂಬಲಿಸಲದು ತನ್ನ ಘೋರ ನಖದಂಷ್ಟ್ರದಿಂದೆ ॥
ಗಾಸಿಮಾಡದೆ ಪುತ್ರನಂ ಪಿಡಿದುಕೊಂ ಡಟ್ಟ ।
ಹಾಸದಿಂ ಮಾನವರ ತೆರದಿಂದೆ ನುಡಿದು ದೆಲೆ ।
ಭೂಸುರೋತ್ತಮ ತನ್ನ ಮಾತನಾಲಿಸು ಬರಿದೆ ಹಲುಬ ಲೇನಪ್ಪುದೆಂದು ॥೩೪॥

ಮಕ್ಕಳಿಲ್ಲದವರ್ಗೆ ಲೋಕಮಿಲ್ಲೆಂಬು ದೇ ।
ನಕ್ಕಜವೆ ನಿಖಿಳ ನಿಗಮಾರ್ಥಮಿದು ತನಗೀಗ ।
ಸಿಕ್ಕಿದನಲಾ ನಿನ್ನ ತನುಸಂಭವಂ ಬಿಡಿಸಿಕೊಳಲಾರ್ಪ ರಾರು ಬರಿದೆ ॥
ಕಕ್ಕುಲಿತೆ ಜೇಡ ನಡೆ ಶಿಷ್ಯನಂ ಕರೆಕೊಂಡು ।
ಮಿಕ್ಕಸುತರುಳ್ಳೊ ಡಾರೈವುದೆನೆ ಮಗನ ಮೇ ।
ಲಕ್ಕರಾಪರಿಸಿ ಕಡುಶೋಕದಿಂ ದುಗ್ರಕೇಸರಿಗೆ ತಾ ನಿಂತೆಂದೆನು ॥ ॥೩೫॥

ಅತಿವೃದ್ಧ ನಲ್ಪದಿನಮಿರ್ಪೆನಂ ಪುತ್ರ ವ ।
ರ್ಜಿತ ನಿಸ್ನು ತಾನಿರ್ದು ಮಾಳ್ಪುದೇನೆನ್ನ ನಾ ।
ಹುತಿಗೊಂಡು ತನಗೆ ಗತಿಗುಡುವ ಸುತನಂ ಬಿಡುವುದೆಂದು ನಾಂ ಬೇಡಿಕೊಳಲು ॥
ಸ್ಮೃತಿಯು ಬಯಸುವ ದುಃಖಿಗಾವ ಕಂಟಕಮಿಲ್ಲ
ಹತವಹುದು ಸುಖದಿಂದೆ ಬಾಳ್ವಂಗೆ ಕಾಲ ಕ ।
ಲ್ಪಿತದಿಂದೆ ದೊರಕಿದ ನಿವಂ ನಿನ್ನನೊಲ್ಲೆನಾಂ ಪೋಗೆಂದು ಹರಿ ನುಡಿದುದು ॥೩೬॥

ಆ ನುಡಿಗೆ ನಡುಗಿ ತನಯನ ಮೇಲ ಣಾಸೆಯಿಂ ।
ದಾನೆಂದೆ ನಾಸಿಂಹಕೆಲೆ ಮೃಗಾಧಿಪ ತನ್ನ ।
ಸೂನುವಂ ಕಾವರಿಲ್ಲವೆ ಧರೆಯೊಳುಗ್ರತಪ ದಾನ ಧರ್ಮಂಗಳಿಂದೆ ॥
ಏನುಪಾಯಂ ಗೆಯ್ವೆನೆಂದು ಮರುಗಲ್ಕೆ ಪಂ ।
ಚಾನನಂ ಬಳಿಕ ತನಗೊಂದಾಸೆಯುಂ ಕೊಟ್ಟು ।
ಭೂನಾಥ ನಿನ್ನೆಡೆಗೆ ಕಳುಹಿದೊಡೆ ಬಂದೆ ನೆನ ಜನನೀಶ ನಿಂತೆಂದನು ॥ ॥೩೭॥

ವಿಪ್ರೇಂಪ್ರ ಕೇಳಿನ್ನ ರಾಷ್ಟ್ರದೊಳ್ಚಾರಸಿಂ।
ಹ ಪ್ರವರ್ತನ ಮಲ್ಲದೆಲ್ಲಿಯುಂ ಕ್ಷುದ್ರಸಿಂ।
ಹ ಪ್ರಸಂಗವ ನರಿಯೆನಿನ್ನೆಗಂ ನಿನ್ನ ಸುತನಂ ಪಿಡಿದ ಸಿಂಹಮುಂಟೆ॥
ಅಪ್ರಸಿದ್ಧಪ್ರೋಕ್ತಮಿದು ಸಿಂಹ ಕೆನ್ನಿಂ ದ।
ಹ ಪ್ರಯೋಜನಮುದೇಂ ಮಾಜವಂಜದೆ ತನಗೆ।
ಕ್ಷಿಪ್ರದಿಂ ಪೇಳೆಂದು ಭೂವರಂ ಬೆಸಗೊಂಡೊಡಾಪಾರ್ವ ನಿಂತೆಂದನು॥ ॥೩೮॥
ಎನ್ನೊಳಾಸಿಂಹವಾಡಿದ ನುಡಿಯ ನೀಗಳಾಂ।
ನಿನ್ನೊಳೆಂಬುದು ನೀತಿಯಾದಪುದೆ ಸುತಹೀನ।
ನಿನ್ನೇಸು ದಾರುಣವೊ ಪೇಳಬೇಕಾಗಿಹುದು ನೃಪ ಕೇಳದರ ಮಾತನು॥
ಮುನ್ನೆ ಮುದಿಗೂಡು ತಪದಿಂ ದೊಣಗಿ ತಿದನೊಲ್ಲೆ।
ನುನ್ನಿಸದಿ ರಾಪ್ಪೊಡೀವುದು ದಿವ್ಯದುಗ್ಧ ಸಂ।
ಪನ್ನ ಫಲಪುಷ್ಪವಾಗಿಹ ಮಯೂರಧ್ವಜನ ಮೈಯೊಳರ್ಧವ ನೆಂದುದು॥ ॥೩೯॥
ಈಮಗನ ಮೇಲೆ ನಿನಗಾಸೆಯುಳ್ಳೊಡೆ ಬಿಡುವೆ।
ನಾ ಮಯೂರಧ್ವಜನ ದೇಹಾರ್ಧಮಂ ಕೊಂಡು।
ಬಾ ಮಹೀಪಾಲನಲ್ಲಿಗೆ ಪೋಗು ಕೊಲ್ಲೆ ನಾನನ್ನೆಗಂ ನಡೆ ಯೆನಲ್ಕೆ॥
ಭೂಮಿಶ ನಿತ್ತಪನೆ ತನ್ನ ತನುಭಾಗಮಂ।
ಭ್ರಾಮಕ ಮಿದೆಂದು ಜರೆ ದಾಂ ತಿರಸ್ಕರಿಸೆ ಮ।
ತ್ತೀಮಾತನಾಡಿದುದು ತನ್ನೊಳಾಕೇಸರಿ ನರೇಂದ್ರ ಕೇಳ್ಕೌತುಕವನು॥ ॥೪೦॥
ಎಲೆ ಮರುಳೆ ವಿಪ್ರ ಪರಪುರುಷಾರ್ಥ ಕೆಳಸುವಂ।
ನೆಲದ ಮೇಲಣ ಬಾಳ್ಕೆಯಂ ನಿಜಶರೀರಮಂ।
ನೆಲೆಯೆಂದು ನೋಡುವನೆ ಕವಚಮಂ ಕರ್ಣಂ ದಧೀಚಿ ತನ್ನಸ್ಥಿಗಳನು॥
ಒಲಿದಿತ್ತು ಕೀರ್ತಿಯಂ ತಳೆದುದಿಲ್ಲವೆ ನಿನ್ನ।
ಕುಲಮುಳಿಯ ಬೇಕೆಂದು ಪೋಗಿ ನೀಂ ಬೇಡಿದೊಡೆ।
ಸಲೆ ಕರುಣದಿಂದಾನೃಪಂ ಕಾಯಮಂ ಕೊಯ್ದು ಕುಡದಿರಂ ಪೋಗೆಂದುದು॥ ॥೪೧॥
ಸು ತ್ಯಾಗಿ ಶುಚಿ ಶೂರ ನುಪಕಾರಿ ಕಮಲಾಕ್ಷ।
ಭೃತ್ಯ ನನಸೂಯಂ ಕೃಪಾವನಧಿ ಭುವನ ಜನ।
ಸುತ್ಯಂ ಮಯೂರಧ್ವಜಂ ತನ್ನ ಜೀವನವ ನಾದೊಡಂ ಬೇಡಿದರ್ಗೆ॥
ಅತ್ಯಂತ ಹರ್ಷದಿಂದಿತ್ತು ಸತ್ಕೀರ್ತಿಯ ನ।
ನಿತ್ಯಸಂಸಾರದೊಳ್ಪಡೆದಲ್ಲದಿರ್ದಪನೆ।
ಸತ್ಯಮಿದು ಪೋಗೆಂದು ಸಿಂಹಮೆನ್ನಂ ಕಳುಹಿದೊಡೆ ನಿನ್ನೆಡೆಗೆ ಬಂದೆನು॥ ॥೪೨॥
ರಾಯನಾಂ ಮೂಢನಲ್ಲವೆ ಸಕಲ ವೈಭವ।
ಶ್ರೀ ಯುಕ್ತಮಾಗಿರ್ದ ನಿನ್ನ ಘನಸೌಂದರ್ಯ।
ಕಾಯಮಂ ಕೊಟ್ಟು ತನ್ನಾತ್ಮಜಂ ಬದುಕಬೇಕೆಂದು ಸಿಂಹದ ಮಾತಿಗೆ॥
ನಾಯದಿಂ ಬಂದೆನಿಲ್ಲಿಗೆ ಸಾಕದಂತಿರ ಲ।
ಪಾಯಕೊಳಗಾಗಿರ್ದ ತನ್ನ ಸುತನುಳಿವುದ ಕು।
ಪಾಯಮಂ ಕಾಣೆನೆಂದಾ ಕಪಟಭೂಸುರಂ ಸುಯ್ದು ಮತ್ತಿಂತೆಂದನು॥ ॥೪೩॥

ಭೂಸುರಂ ಬ್ರಹ್ಮಚರ್ಯೆಯೊಳಿರ್ದಪುತ್ರಂ ಗ |
ತಾಸುನಾದೊಡೆ ರಾಮಚಂದ್ರಂಗೆ ಮೊರೆ ಯಿಟ್ಟೊ |
ದಾಸುತನ ಜೀವಮುಂ ಬರಿಸನೇ ಪೌರುಷದೊಳಾರಾಘವೇಶ್ವರಂಗೆ ||
ಪಾಸಟಿಯಲಾ ನೀನು ಮದರಿ ನೆನ್ನಾತ್ಮಜಂ |
ಳೀಸರಿಯ ಬಾಯ ತುತ್ತಾದ ನೀದುಃಖ ದಾ |
ಯಾಸಮಂ ನಿನಗೊರೆದೆ ನಿನ್ನಳುಹು ಮಾಣೆಂದು ಕಪಟದ್ವಿಜಂ ನುಡಿದನು || ||೪೪||
ಕೇಳ್ದ ನವರಿರ್ವರಂ ಪ್ರಚ್ಛನ್ನ ಭೂಸುರಂ |
ಪೇಳ್ದವೃತ್ತಾಂತಮಂ ಕೀರ್ತಿಸಿಲ್ಪುದು ನರರ |
ಬಾಳ್ದಿಟವಿದಲ್ಲೆಂದು ನಿಶ್ಚೈಸಿ ವಿಪ್ರನಂ ಕರೆದು ನಿನಗೀ ತನುವನು ||
ನೀಳ್ದು ಕೊಟ್ಟಪೆನೆಂ ದಭಯವಿತ್ತು ಬಳಿಕ ತಾ|
ನಾಳ್ದಿಳಿಯನಾತ್ಮಜಂಗಪ್ಪೈಸಿ ಹರ್ಷಮಂ |
ತಾಳ್ದಸಿಬರೆಲ್ಲರಂ ಮಂಟಪದೊಳಿಹುದೆಂದು ಕುಳ್ಳಿರಿಸಿ ಪೊರಮಟ್ಟನು || ||೪೫||
ತರಿಸಿ ಗಂಗಾತೋಯಮಂ ಮಜ್ಜನಂಗೈದು |
ಪರಮ ಸಾಲಗ್ರಾಮತೀರ್ಥಮಂ ಕೈಕೊಂಡು |
ತರುಣ ತುಲಸೀದಳದ ಮಾಲೆಯಂ ಕಂಧರದೊಳಾಂತು ಮಂಟಪಕೆ ಬಂದು ||
ನೆರೆದ ಭೂಸುರ ಸಭೆಗೆ ಸಾಷ್ಟಾಂಗದಿಂ ಪೆರಗಿ |
ಕರಯುಗಳಮಂ ಮುಗಿದು ನಿಂದು ಬಿನ್ನೈಸಿದಂ |
ಧರಣೀಶ್ವರಾಗ್ರಣಿ ಮಯೂರಧ್ವಜಂ ಜಗದೀಶ ಕೇಳ್ಕೌತುಕವನು || ||೪೬||
ಈ ಮಹಾಸ್ಥಾನದೊಳ್ನೆರೆ ದಖಿಳ ಭೂಸುರ |
ಸ್ತೋಮಮಂ ನಿರೀಕ್ಷಿಸುವುದೆಂದು ಬಲಿಯಧ್ವರಕೆ |
ವಾಮನಂ ಬಂದಂತೆ ತನ್ನ ಮುಖಕೀದ್ವಿಜಂ ತಾನೆ ಬಿಜಯಂಗೈದನು ||
ಶ್ರೀಮಾಧವ ಸ್ವರೂಪದೊಳೀಗ ಳರಿದು ತ |
ನ್ನೀ ಮೈಯೊಳರ್ಧಮಂ ಕೊಯ್ದು ಕೊಟ್ಟಪೆ ನತಿ |
ಪ್ರೇಮದಿಂ ದೀತಂಗೆ ಬದುಕಲೀತನ ಸುತಂ ಪೊಸತಾಗಲಿಳೆಗೆಂದನು || ||೪೭||
ಭೂನಾಥನೆಂದ ಮಾತಂ ಕೇಳ್ದು ಸಕಲ ಪ್ರ |
ಧಾನಿಗಳು ಮರಸನ ಪುರೋಹಿತರು ಮಾ ದ್ವಿಜರು |
ಮೇನಿದೆತ್ತಣ ಕೃತ್ಯಮಿ ವಿಪ್ರ ನಂತಕೋಪಮನೆಂದು ಭೀತಿಯಿಂದೆ ||
ದಾನಮೆಂಬೊಡೆ ರಾಜ್ಯ ಲಕ್ಷ್ಮಿ ಧನ ಕನಕ ಮಣಿ |
ಧೇನುಗಳ ನೀವ ರೀಕಾಯಮಂ ಕೊಯ್ದು ಕುಡು |
ವೀ ನಿಮಿತ್ತವ ನರಿಯೆವೆಂ ದೆಲ್ಲರುಂ ಕಂಪಿಸ ಲ್ನೃಪತಿ ಯಿಂತೆಂದನು || ||೪೮||
ಯಾಚಿಸಿದ ನಂಗಮಂ ಸುತನ ನುಳುಹೆಂ ದೆನಗೆ ||
ಸೂಚಿಸಿದ ನೀದ್ವಿಜಂ ತಾಂ ಕೊಡುವೆ ನೆಂದೊಡನೆ |
ವಾಚಿಸಿದೆ ನಿಂತಿದಕೆ ತಪ್ಪಿದೊಡೆ ಲೋಕದೊಳೆನ್ನಂ ಸಮಸ್ತ ಜನರು ||
ನಾಚಿಸದೆ ಮಾಣ್ದಪರೆ ಪುಸಿದೊ ಡಂತಕ ನಪ |
ರ್ಯಾಚಿಸರೆ ನರಕದೊಳ್ಬೀಳ್ವಿಯ ನರಿದೀಯ ಲಾ |
ಳೋಚಿಸ ಲದೇಕಿನ್ನು ತೊಲಗಿ ನೀವೆಂದು ನೃಪ ನನಿಬರಂ ನೈಕಿಟ್ಟನು || ||೪೯||

ಆ ಮಯೂರಧ್ವಜಂ ಬಳಿಕಲ್ಲಿ ವಿಪ್ರರಂ ।
ಹೇಮ ಮಣಿ ಗಜ ತುರಗ ವಸ್ತ್ರಭೂಷಣ ಧೇನು ।
ಭೂಮಿ ದಾನಂಗಳಿಂ ತಣಿಸಿ ನಡಿಸಿದ ನೆರಡುಕಂಬಮಂ ನಡುವೆ ತನ್ನ ॥
ಕೋಮಲ ಶರೀರಮಂ ಪುಗಿಸಿ ಕಾಂಚನಮಯ ಸು ।
ದಾಮದಿಂ ತೋಳ್ತೊಡೆಗಳಂ ಬಿಗಿಸಿಕೊಂಡು ನಿಂ ।
ದಾ ಮಹೀಸುರನ ಪದಕಮಲಂಗಳಂ ತೊಳೆದು ಸಾದರ ದೊಳಿಂತೆಂದನು ॥ ॥೫೦॥
ಭೂಸುರೋತ್ತಮ ನಿನಗೆ ತಾಂ ಕುಡುವ ದೇಹಾರ್ಧ ।
ದೀ ಸು ದಾನದೊ ಳಖಿಲ ಯಜ್ಞನಾಯಕನಾದ ।
ವಾಸುದೇವಂ ಪ್ರೀತನಾಗ ಲಸ್ಮತ್ಕುಲೋದ್ಭವರಾದ ಜೀವಿಗಳೊಳು ॥
ಲೇಸಿಂದೆ ಪಾರ್ವಂಗೆ ತನು ಧನವ ನೀವೆಡೆಯೊ ।
ಳೋಸರಿಸದಿರಲಿ ಬುದ್ಧಿಗಳೆಂದು ನೃಪತಿ ಕ ।
ಟ್ಟಾಸುರದ ಕೊಯ್ಯಾರರಂ ಕರೆಸಿ ತೆಗೆಸಿದಂ ಮಸೆದ ಕೊಯ್ಗತ್ತಿಗಳನು ॥ ॥೫೧॥
ಕುಡುವನಿರೆ ತನಗೆ ಬೇಕಾದುದಂ ಬೇಡುವಂ ।
ಬಿಡುವನೇ ಬೇಡುನಂ ಬರೆ ತನ್ನೊಳಿರ್ದುದಂ ।
ತಡೆದಪನೆ ಕುಡುವನಂ ಕುಡುವ ಬೇಡುವರೊಳಗೆ ಕುಡೆನೆಂಬ ಬೇಡೆನೆಂಬ ॥
ಎಡೆ ತಡೆಗಳಿಲ್ಲೆಂಬ ನಾಣ್ಣುಡಿಯ ನೀಪಾರ್ವ ।
ಪೊಡವೀಶರೊ ಳ್ಕಂಡೆವೆಂದು ನಡನಡುಗಿ ಮೊರೆ ।
ಯಿಡುತಿರ್ದ ದವನ ರಾಷ್ಟ್ರದ ಜನಂ ಬೆದರಿ ಕುರರೀಗಣಂಗಳ ತೆರದೊಳು ॥ ॥೫೨॥
ಪೂರ್ವಮಂ ನೆನೆದು ಕಂಬನಿಗಳಿಂ ಧ್ವನಿಗಳಿಂ ।
ಚೀರ್ವರಂ ಪ್ರಜೆಗಳಂ ಪಾಲಿಸದೆ ಲಾಲಿಸದೆ ।
ಜಾರ್ವ ಪರಿಯೆಂತೆಂ ದಳಲ್ವರಂ ನಿಲ್ವರಂ ಬೆರಗಾಗಿ ಬೆಗಡುಗೊಂಡು ॥
ಸಾರ್ವಭೌಮಕ ನಿನ್ನ ರಕ್ಷೆಯಂ ಶಿಕ್ಷೆಯಂ ।
ವಿರ್ಾವರ ಲ್ಲೆಮ್ಮ ನೀಂ ಬಿಡುವರೇ ಕುಡುವರೇ ।
ಪಾರ್ವಂ ಗಸುವನೆಂದು ಬಯ್ವರಂ ಸುಯ್ವರಂ ನೋಡಿ ನೃಪನಿಂತೆಂದನು ॥ ॥೫೩॥
ಪ್ರಜೆಗಳಿರ ನೀವಿದಕೆ ದುಃಖಿಸರೆ ಧನ್ಯನಾಂ ।
ನಿಜಶರೀರದೊ ಳರ್ಧಮಂ ಕೊಯ್ದು ಕುಡುವೆ ನೀ ।
ದ್ವಿಜನ ಹಸ್ತದೊಳಿವಂ ನೃಹರಿಯೆಂ ದೀತ ನಡವಿಯ ಸಿಂಹಕೀಯ ಲಿದನು ॥
ಗಜಬಜ ವಿದೇತಕೆ ಪರೋಪಕೃತಿಗಲ್ಲದ ಮ ।
ನುಜನ ಬಾ ಳ್ಕಣಬುರಿದ ಬೂದಿಯಂ ತಪ್ಪ ದಾ ।
ರಜ ಮಿಲ್ಲದೀಕ್ಷಿ ಸುದು ಕೌತುಕವನೆಂ ದೊಡಂಬಡಿಸಿದಂ ನರನಾಥನು ॥ ॥೫೪॥
ಮತ್ತೆ ಮನುಜೇಂದ್ರ ನಾವಿಪ್ರನಂ ಕರೆದು ನಿನ ।
ಗಿತ್ತೆ ನೀದೇಹಾರ್ಧಮಂ ಪರಿಗ್ರಹಿಸೆಂದು ।
ಚಿತ್ತದೊಳ್ಮಿಗೆ ಹರ್ಷಮಂ ತಾಳ್ದು ಪೊರೆಯೊಳಿಹ ಸೂದಕರ್ಮಜ್ಞರೊಡನೆ ॥
ಪೊತ್ತು ಕಳೆಯದೆ ತನ್ನ ತನುವನೆರಡಾಗಿ ಮಸೆ ।
ವೆತ್ತ ಕರಪತ್ರದಿಂ ಸೀಳ್ವುದೆಂ ದಾಜ್ಞಾಪಿ ।
ಸುತ್ತಿರೆ ಶಿಖಿಧ್ವಜನ ಸತಿ ಕುಮುದ್ವತಿ ನುಡಿ ದಳತಿವಿನಯದಿಂದೆ ಪತಿಗೆ ॥ ॥೫೫॥

ಸೀಂ ತಿಳಿದುದಿ ಲ್ಲರಸ ವಿಪ್ರೇಂದ್ರ ನರಿಯಂ ವ।
ನಾಂತರದೊ ಳಾಸಿಂಹನೆಂದ ನುಡಿ ಶಾಸ್ತ್ರ ಸಿ।
ದ್ಧಾಂತ ಮಂಗನೆ ಪುರುಷ ನರ್ಧಾಂಗ ಮೆಂಬುದಕೆ ನಿನ್ನ ವಾಮಾಂಗಿಯಾವ ॥
ಕಾಂತೆಯಂ ಬೇಡಿದೊಡೆ ಕೊಯ್ದು ಕಾಯವ ಸೀವ।
ಭ್ರಾಂತಿಯೇತಕೆ ತನ್ನ ಯುಸುವೆರಸಿ ಕೊಟ್ಟು ಕಳೆ।
ತಾಂ ತಳೆವೆ ನೈದೆತನದಿಂದೆ ಸದ್ಗತಿಯ ನೆಂದಾಕುಮುದ್ವತಿ ನುಡಿದಳು ॥ ॥೫೬॥
ಸಮ್ಮತಮಿ ದಹುದೆಂದ ರೆಲ್ಲರುಂ ಭೂವರಂ।
ಸುಮ್ಮನಿರೆ ಕಂಡ ಸೀತೆರಸಂ ದ್ವಿಜತ್ವಮುಂ।
ನೆಮ್ಮಿದ ಮುಕುಂದನೆಲೆ ರಾಯ ನಿನ್ನರಸಿ ನುಡಿ ಮತ್ತರವ ನೊಪ್ಪ ಬಹುದು ॥
ಸುಮ್ಮಾನದಿಂ ಜನೇಶ್ವರನ ದಕ್ಷಿಣಭಾಗ।
ಮ ಮ್ಮಲ್ವೆನೆಂದು ಪೊಕ್ಕಣಿಸಿತಲ್ಲದೆ ಸಿಂಹ।
ಸಮ್ಮೊಡನೆ ವಾಮಾಂಗ ಮೆಂದಾಡಿ ತಿಲ್ಲೆನ ಲ್ನೃಪನ ಸುತಸಿಂತೆಂದನು ॥ ॥೫೭॥
ಕರುಣಿಸೆಲೆ ವಿಪ್ರ ನಿನ್ನಂ ಬೇಡಿಕೊಂಬೆ ನಾಂ।
ತರುಣಂ ಸುಪುಷ್ಟ ವಪು ತುಷ್ಟಿ ಮೃಗಪತಿ ಗಾಗ।
ದಿರದು ತಾತನ ಋಣತ್ರಯಕೆ ಹರಿವಹುದು ರಾಘವ ಭೀಷ್ಮರಂತೆ ಕೀರ್ತಿ ॥
ಸ್ಥಿರವಹುದು ಪಿತನ ಭಾಷೆಗೆ ನಿಲ ಲ್ಜನಕ ನವ।
ತರಿಪ ನಾತ್ಮಜನಾಗಿ ತಂದೆಮಕ್ಕ ಳಿವರೊಳ।
ಗೆರವಿಲ್ಲ ತನ್ನಂಗಮಂ ತೆಗೆದುಕೊಳ್ಳೆಂದು ತಾಮ್ರಧ್ವಜಂ ನುಡಿದನು ॥ ॥೫೮॥
ಭೂಪಾಲ ಕೇಳವನ ಮಾತಿಗೆ ಮಹೀಸುರಂ।
ಕಾಪಟ್ಯಮಿಲ್ಲೆಲೆ ಕುಮಾರ ನೀನೆಂದ ನುಡಿ।
ಪಾಪಿ ಕೇಸರಿ ತನ್ನೊಳವನಿಪನ ಸತಿಯೆಂದು ಸುತನೆಂದು ಪೇಳ್ದುದಿಲ್ಲ ॥
ಆಪೊಡೆ ಮಯೂರಧ್ವಜನ ದಕ್ಷಿಣಾಂಗಮಂ।
ತಾ ಪುತ್ರನಂ ಬಿಡುವೆನೆಂದೊಡಿಲ್ಲಿಗೆ ಬಂದೆ।
ನೀ ಪರಿಯೊಳಳುಕುವರೆ ಕುಡಬೇಡ ಪೋಪೆನೆನೆ ನರನಾಥ ನಿಂತೆಂದನು ॥ ॥೫೯॥
ರಾಣಿಯಂ ಕುಡುವುದಿ ಲ್ಲಾತ್ಮಜನ ನೀವುದಿ।
ಲ್ಲೂಣೆಯಂ ತನ್ನ ಭಾಷೆಗೆ ಬಾರದಂ ತಬ್ಜ।
ಪಾಣಿ ಮೆಚ್ಚುವೊ ಲರ್ಧದೇಹಮಂ ಕೊಯ್ದು ಕೊಟ್ಟಪೆ ನೀಗ ಸೈರಿಸೆನುತೆ ॥
ಸಾಣೆವಿಡಿದಿರ್ದ ಕರಪತ್ರಮಂ ಕುಡಿಸಿದಂ।
ಪ್ರಾಣನಾಥೆಯ ಕೈಯೊ ಳಿನ್ನುತ್ತಮಾಂಗಮಂ।
ಕೇಣವಿಲ್ಲದೆ ತನುಜನಂ ಕೂಡಿಕೊಂಡು ಸೀಂಸೀಳೆಂದು ನೇಮಿಸಿದನು ॥ ॥೬೦॥
ಬಾಲಲೀಲೆಗಳಿಂದೆ ನಂದನಂ ತರುಣಿ ರತಿ।
ಕಾಲದೊ ಳ್ಸುಖದಿಂದೆ ಸೀಳಲ್ಕೆ ನೋವುದೆ ವಿ।
ಶಾಲಾಕ್ಷಿ ತನಗಿದು ವಿನೋದ ಮಸಿಪತ್ರದಿಂ ಸೂನು ಸಹಿತೀಗ ಸೀಳು ॥
ಆಲಸ್ಯಮಂ ಮಾಡ ದರಿವುದೀ ಮಸ್ತಕವ।
ಮೇಲಣಿಂದಿಳಿಯೆ ಮುಂತಾಗಿ ತನ್ನಂಗಮಂ।
ಪಾಲಿರದು ಸಮಮಾಗೆ ಗರುಡ ಹನುಮಂತರ್ಗೆ ಚಕ್ರಿ ಪಣ್ಣಿಂಚಿದಂತೆ ॥ ॥೬೧॥

ಆ ಮಹೀಪಾಲ ನೀತೆರದೊ ಳ್ಕುಮುದ್ವತಿಗೆ ।
ನೇಮಿಸೆ ಕುಮಾರನಂ ಕೂಡಿಕೊಂ ಡವಳತಿ ।
ಪ್ರೇಮದಿಂ ಕರಪತ್ರಮಂ ಕೊಂಡು ಮುನ್ನ ದೈತ್ಯನ ನಿಂತು ಸೀಳ್ದನೆಂದು ॥
ಆ ಮಹಾಸಭೆ ನಾರಸಿಂಹನಂ ನೆನೆವಂತೆ ।
ರಾಮರಾಮೆಂದು ಜಪಿಸುತೆ ಕೊಯ್ದು ಳವನಿಪ ಶಿ ।
ರೋಮಣಿಯ ಮಸ್ತಕವ ನೆರಡಾಗಿ ಸರಸದಿಂ ದೋರೆಪೋರೆ ಗಳಿಲ್ಲದೆ ॥ ॥೬೨॥

ಸ್ತಂಭಧ್ವಯದ ನಡುವೆ ನಿಂದನೃಪನಂ ತನ್ನ ।
ಸಂಭವನು ಮರಸಿಯುಂ ಪಿಡಿ ದೊಬ್ಬರೊಂದು ಕಡೆ ।
ಯಿಂ ಭಾಳಮಧ್ಯಮಂ ತೀಕ್ಷ್ಣ ಕರಪತ್ರದಿಂ ಘರಘರನೆ ಸೀಳುತಿರಲು ॥
ಜಂಭರಿಪುನಂದನನ ಮುರಾರಿಗ ಳ್ಬೆರಗಾದ ।
ರಂಭೋಥ ಘೋಷದಿಂದೆದ್ದ ಹಾಹಾಕಾರ ।
ದಿಂ ಭಯಂಗೊಂ ಡೊರಲುತಿರ್ದು ದಾಸ್ಥಾನಮೆಲ್ಲೆ ಭೂಪ ಕೇಳ್ಕೌತುಕವನು ॥ ॥೬೩॥

ಪೆಂಡಿತಿಯೊ ಳಾತ್ಮಜನೊ ಳರಸನೊ ಳ್ಮಿಗೆ ನೋಡಿ ।
ಕಂಡುದಿಲ್ಲೊಂದಿನಿಸು ಖಿಯ ಖೋಡಿಯಂ ಬಳಿಕ ।
ಪುಂಡರೀಕಾಂಬಕಂ ನೃಪನ ವಾಮಾಕ್ಷಿಯೊ ಳ್ಕಂಬನಿಗಳೊಸರುತಿರಲು ॥
ಅಂಡಲೆಯೊ ಳಳುತಳುತೆ ಕುಡುವವನ ದಾನಮಂ ।
ಕೊಂಡಪರೆ ಬುಧರಕಟ ಲೋಕದೊಳ್ಬೇಡುವಂ ।
ಭಂಡನೆನುತೊಡಮುರಿದು ತಿರುಗಿದಂ ತನಯನಂ ತಿನಲಿ ಹರಿ ಬನದೊಳೆನುತೆ ॥೬೪॥

ಬೆರಗಾದಳಾ ಕುಮುದ್ವತಿ ನುಡಿದ ಳರಸಂಗೆ ।
ಬರಿದೆ ಕೊಯ್ಸಿದೆ ನಿನ್ನ ಮಸ್ತಕವ ನೆಡಗಣ್ಣೊ ।
ಳೊರೆವ ಕಂಬನಿಗಳಂ ಕಂಡಾ ದ್ವಿಜೋತ್ತಮಂ ನೀ ನಳುತೆ ಕುಡುವೆ ಯೆಂದು ॥
ಪೊರಮಟ್ಟು ಪೋದನೊಲ್ಲದೆ ವಿಫಲ ಮಾದುದ ।
ಕ್ಕರೊಳಿತ್ತ ದಾನಮಿದ ಕೆಂತೆ ನಲ್ಭೂವರಂ ।
ಮರುಗಿ ಕರೆಸಾತನಂ ತಿಳಿಪುವೆಂ ಪೋಳ್ಗಳೆರಡಂ ಕೂಡಿ ಪಿಡಿಯೆಂದನು ॥ ॥೬೫॥

ಬಳಿಕಾ ಕುಮುದ್ವತಿ ನರೇಂದ್ರ ಮಸ್ತಕವ ಪೋ ।
ಳ್ಗಳ ನೊಂದುಗೂಡಿ ಪಿಡಿದಾಗ ನಿಜತನಯನಂ ।
ಕಳುಹ ಲವನಾ ಪಾರ್ಥನಂ ತಡೆ ದೊಡಂಬಡಿಸಿ ವಿನಯದಿಂ ಕರೆತರಲ್ಕೆ ॥
ತಿಳಿದಂ ಭೂಪನೆಲೆ ವಿಪ್ರ ಕರಪತ್ರ ಹತಿ ।
ಗಳುಕೆ ತಿಳ್ಳುಪಕಾರಕಾಯ್ತು ದಕ್ಷಿಣಭಾಗ ।
ಮುಳಿದುದು ನಿರರ್ಥಕಂ ವಾಮಾಂಗಮೆಂ ದೊಸರಿ ತೆಡಗಣ್ಣ ಜಲಮೆಂದನು ॥ ॥೬೬॥

ಮೆಚ್ಚಿದಂ ನೃಪನೆಂದಮಾತಿಗೆ ಮುರಧ್ವಂಸಿ ।
ಪೆಚ್ಚಿರ್ದರಾಯನ ಕಳೇಬರದ ಪೋಳ್ಗಳಂ ।
ಬಿಚ್ಚು ಕಾರುಣ್ಯದಿಂ ನ್ನೃದಡವಿ ತಕ್ಕೈಸಿ ನಿನ್ನಂ ಪರೀಕ್ಷಿಸಿದೆನು ॥
ನಿಚ್ಚಟದ ಭಕ್ತಿಯಂ ಕಂಡೆ ನಿವನರ್ಜುನಂ ।
ಮುಚ್ಚು ಮರೆಯೇಕಿನ್ನು ತಾನೀಗ ಕೃಷ್ಣನೆಂ ।
ದೆಚ್ಚರಿಸಿ ನಿಗನು ಪರಿಕೆಯ ತನ್ನ ಸಾಕಾರಮೂರ್ತಿಯಂ ತೋರಿಸಿದನು ॥ ॥೬೭॥

ವರ ಸುಪ್ರಸನ್ನ ವದನದ ಕಮಲನೇತ್ರದ ಮ |
ಕರಕುಂಡಲದ ಲಲಿತನಾಸಿಕದ ಪಣೆಯ ಕ |
ಸ್ತೂರಿಯ ತಿಲಕದ ಮುರಿದ ಪುರ್ಬುಗಳ ಸುಳಿಗುರುಳ ಮಣಿಮುಕುಟ ದೆಳದೊಳಸಿಯ ||
ಕೊರಲ ವನಮಾಲೆಗಳ ಕೌಸ್ತುಭ ಶ್ರೀವತ್ಸ |
ದುರದ ಚಂದನದ ನಳಿತೋಳ್ಗಳ ಘನಾಂಗ ಸೌಂ |
ದರಿಯ ದವಯುವದ ಸರ್ವಾಭರಣ ಭೂಷಿತದ ಹರಿ ನೃಪನ ಮುಂದೆಸೆದನು || ||೧೮||
ಹೇಮಾಂಬರದ ಲಲಿತ ಕಾಂತಿ ಹೊಳೆಹೊಳೆವ ಸೌ |
ದಾಮಿನಿವೊಲಿರೆ ಪೊರೆದ ಕರುಣರಸ ಪೊಸರ್ವ ಧಾ |
ರಾಮಯದ ಮಳೆವೊಲಿರೆ ನುಡಿವ ಗಂಭೀರವಾಕ್ಯಂ ಕೂಡೆ ಮೊಳಗುವೊಲಿರೆ ||
ಕೋಮಲಶ್ಯಾಮ ಲಾವಣ್ಯತನು ಮುಂಗಾರ |
ಜೀಮೂತ ದೊಡ್ಡಿನವೊಲಿರೆ ಪಿರಿದು ನಲಿಯದಿಹ |
ನೇ ಮಯೂರಧ್ವಜಂ ನೀಳಿನ ಲ್ಕೃಷ್ಣನಂ ಕಂಡು ಪುಳಕಿತನಾದನು || ||೧೯||
ಜಯಜಯ ಜಗನ್ನಾಥ ವರ ಸುಪರ್ಣ ವರೂಥ |
ಜಯಜಯ ರಮಾಕಾಂತ ಶಮಿತ ದುರಿತಧ್ವಾಂತ |
ಜಯಜಯ ಸುರಾಧೀಶ ನಿಗಮ ನಿರ್ಮಲ ಕೋಶ ಕೋಟಿಸೂರ್ಯಪ್ರಕಾಶ ||
ಜಯಜಯ ಕ್ರತುಪಾಲ ತರುಣತುಲಸೀಮಾಲ |
ಜಯಜಯ ಕ್ಷ್ಮಾಪೇಂದ್ರ ಸಕಲ ಸದ್ಗುಣಸಾಂದ್ರ |
ಜಯತುಜಯ ಯದುರಾಜ ಭಕ್ತಸುಮನೋಭೂಜ ಜಯತುಜಯ ಯೆನುತಿರ್ದನು ||೨೦||
ನೋಡಿದಂ ಕಣ್ದಣಿಯೆ ಬಳಿಕಿಳೆಗೆ ತನುವ ನೀ |
ಡಾಡಿ ದಂಡಪ್ರಣಾಮಂಗೈದು ಭೂವರಂ |
ಮಾಡಿದಂ ನಿಗಮಾರ್ಥ ದನುಪಮ ಸ್ತುತಿಗಳಂ ಮುರಹರನ ಮುಂದೆ ನಿಂದು ||
ಕೂಡೆ ತಾಮ್ರಧ್ವಜ ಕುಮುದ್ವತಿಗ ಳೆರಗಿದ |
ರ್ಮ್ಮಡಿ ದಾನಂದದಿಂ ತಮತಮಗೆ ಕೈಮುಗಿದು |
ಬೇಡಿಕೊಳುತಿರ್ದುದು ಮಹಾಸಭೆ ಮುಕುಂದನಂ ಜಯಜಯ ನಿನಾದದಿಂದೆ || ||೨೧||
ಪನ್ನಗಾರಿಧ್ವಜಂ ಬಳಿಕಾ ನೃಪಾಲನಂ |
ಮನ್ನಿಸಿ ಕೃತಾರ್ಥನಹೆ ನೀ ನರ್ಥದೇಹಮಂ |
ನನ್ನಿಯಿಂದೀಯೆ ಮೆಚ್ಚಿದೆ ನೀಗ ನಿನಗೆ ಸಂಗ್ರಾಮದೊ ಳ್ತಾಮ್ರಕೇತು ||
ನಿನ್ನೆ ಪಡೆಯೆಲ್ಲಮುಮ ನೀ ಸವ್ಯಸಾಚಿಯುಮ |
ನೆನ್ನುವಂ ಮೂರ್ಛೆಗಾಣಿಸಿ ಕೆಡಹಿ ಬಂದುದಕೆ |
ಮುನ್ನ ಹರ್ಷಿತನಾದೆ ನಿನ್ನು ಸತಿ ಸುತರೊಡನೆ ಮಾಡು ಯಜ್ಞವನೆಂದನು ||೨೨||
ಧರ್ಮಜನ ತುರಗಮಿದೆ ನಿನ್ನ ಹಯಮಿದೆ ನೀನೆ |
ನಿರ್ಮಲಾಧ್ವರ ಮೆರಡುಮಂ ಸಮಯಮಾಗಲ್ಕೆ |
ಕರ್ಮ ಕಧಿಪತಿಯಾಗಿ ಮಾಳ್ಪುದೆಂ ದಚ್ಯುತಂ ನುಡಿದೊಡೆ ಮಯೂರಕೇತು ||
ಚರ್ಮಶೃಂಗಮನಾಂತು ಮಖದೀಕ್ಷೆಯಂ ಕೊಂಬ |
ದುರ್ಮತಿಗಳುಂಟೆ ನಿನ್ನಂ ಕಂಡಬಳಿ ಕವರ |
ಮರ್ಮನುಂ ಬಲ್ಲೆನಾನೆಲೆ ದೇವ ತನ್ನ ಬಿನ್ನಪವ ನವಧರಿಸೆಂದನು || ||೨೩||

ವಿಶ್ವೇಶ ನಿನ್ನ ಶಾಶ್ವತ ಮೂರ್ತಿಯಂ ತಳೆವ ।
ವಿಶ್ವಾಸದಿಂದೆ ನಿನಗೊಪ್ಪಿಸಿದೆ ನೀಗಳೀ ।
ನಶ್ವರ ಶರೀರಮಂ ನಾ ಕದಂತಿರ ಲಿನ್ನು ತಾಂ ಕರ್ಮ ಕರ್ತೃವಾಗಿ ॥
ಅಶ್ವಮೇಧಂಗಳಂ ಮಾಡಿದೊಡೆನ ಗನೆ ನಿ ।
ನ್ನುಶ್ವಾಸದಿಂ ದೊಗೆದ ಮಂತ್ರಾಳಿಗ ಳ್ಮಾತ್ರ ।
ರಿಸ್ವ ಮಿತ್ರಜ್ವಾಲೆ ಪೊರೆಯೊಳಿರೆ ಭೇಷಜವ ನರಸುವರೆ ಹಿಮಕೆಂದನು ॥ ॥೭೪॥
ದೇವ ಚಿತ್ತೈಸೆನ್ನ ನಂದನಂ ನಿನ್ನೆ ನಮ ।
ರಾವನಿಯೊಳೊಳಗಾದ ನಿರ್ನಿಮ್ಮರ್ಪರಂ ಬಿಟ್ಟ ।
ಭಾವದಿಂ ಬಂದನಿಲ್ಲಿಗೆ ತನ್ನ ಪುಣ್ಯದಿಂ ತನ ಗನುಗ್ರಹಿಸಲೆಂದು ॥
ನೀವೆ ಬಿಜಯಂಗೈದಿ ರದರಿಂದೆ ಸಲೆ ಧನ್ಯ ।
ರಾವು ನರ ನಾರಾಯಣರ್ಕಳಂ ಕಂಡೆ ವಿ ।
ನ್ನಾವ ಕಲ್ಪಿತವೆನಗೆ ಧರ್ಮಜನೆ ಮಾಡಿ ಬಮುಕಲಿ ಮಖಂಗಳ ನೆಂದನು ॥ ॥೭೫॥
ಸುರನದಿಯು ತೋಯಮಿರೆ ನೀರಡಸಿ ಹಿಮಜಲಕೆ ।
ಪರಿವಂತೆ ನಿನ್ನ ದರ್ಶನಮಿರ್ದುವಿಾ ಮಹಾ ।
ಧ್ವರ ಕೆಳಸು ವವನಲ್ಲ ತನ್ನುಮಂ ತನ್ನ ಸತಿಸುತರುಮಂ ತನ್ನೊಳಿರ್ದ ॥
ತುರಗಂಗಳಂ ತನ್ನ ಯಜ್ಞಮಂ ಯಜ್ಞೋಪ ।
ಕರಣಂಗಳಂ ತನ್ನ ರಾಜ್ಯಮಂ ತನ್ನ ಮಂ ।
ದಿರದ ಸರ್ವಸ್ವಮಂ ನಿನ್ನ ಪದ ಕರ್ಪಿಸಿದೆ ನೆಂದವಂ ಕೈಮುಗಿದನು ॥ ॥೭೬॥
ಇಂತೆಂದು ಭೂವರಂ ನುಡಿಯೆ ಹರ್ಷಿತನಾಗಿ ।
ಕುಂತೀಸುತಂ ಗವನ ಭಕ್ತಿಯಂ ತೋರಿಸುತ ।
ನಂತರದೊಳಾನೃಪನ ನಗರದೊಳ್ಮೂರುದಿನ ಮಿರ್ದು ನಿಜಸೇನೆ ಬರಲು ॥
ಪಂತಿ ಪುರಕಲ್ಲಿಯ ಸಮಸ್ತ ವಸ್ತುಗಳೈದು ।
ವಂತೆ ನೇಮಿಸಿ ಮಯೂರಧ್ವಜಂ ಸಹಿತ ನಡೆ ।
ದಂ ತುರಗಮೆರಡುಮಂ ಬಿಡಿಸಿ ಮುಂದಕೆ ದೇವಪುರದ ಲಕ್ಷ್ಮೀಕಾಂತನು ॥ ॥೭೭॥

ಸಂಧಿ ೨೬ ಕ್ಕೆ ಪದ್ಯಗಳು ೧೪೪೯ ಕ್ಕೆ ಮಂಗಳಮಸ್ತು.

## ಇಪ್ಪತ್ತೇಳನೆಯ ಸಂಧಿ.

ಸೂಚನೆ॥ ಹರಿಗಳಂ ತಡೆಯಲ್ಕೆ ಸಾರಸ್ವತಾಖ್ಯ ಪುರ ।
ವರದೊಳಂತಕನ ವೃತ್ತಾಂತಮಂ ಕೇಳ್ದು ಸಂ ।
ಗರದೊಳಚ್ಯುತನ ಮತದಿಂ ವೀರವರ್ಮನಂ ಜಯಿಸಿದಂ ಕಲಿಪಾರ್ಥನು ॥

ಸೋಮಕುಲತಿಲಕ ಜನಮೇಜಯ ನರೇಂದ್ರ ಕೇ ।
ಳಾ ಮಯೂರಧ್ವಜಂ ತನ್ನ ನಗರದೊಳತಿ ।
ಪ್ರೇಮದಿಂ ಮೂರುದಿನ ಮರ್ಜುನ ಮುರಾರಿಗಳ ಸತ್ಕರಿಸಿ ಸೇನೆಸಹಿತ ॥
ಭೀಮಾನುಜನ ಕೂಡೆ ಪೊರಮಟ್ಟ ನನುಸಾಲ್ವ ।
ಕಾಮ ಕರ್ಣಜ ಬಭ್ರುವಾಹನ ಸುವೇಗ ನಿ ।
ಸ್ಸೀಮ ನೀಲಧ್ವಜ ಮರಾಳಧ್ವಜಾದಿಗ ಳ್ವಡೆವೆರಸಿ ನಡೆದರೊಡನೆ ॥ ॥೧॥

ತುಂಬಿತು ಮಹೀಮಂಡಲವ ನತುಲಸೇನೆ ನಡೆ ।
ಗೊಂಬು ದಿನ್ನೆಲ್ಲಿಗೆ ಮಹಾದೇವ ಕೌತುಕ ಮಿ ।
ದೆಂಬತೆರನಾಗಿ ಮುಂದಕೆ ತಳೆವ ಕುದುರೆಗಳ ಕೂಡೆ ಸೌರಾಷ್ಟ್ರಕಾಗಿ ॥
ಬೆಂಬಿಡದೆ ಬಂದು ದರ್ಜುನನ ಬಲಮಲ್ಲಿ ಸುಖ ।
ದಿಂ ಬಾಳ್ವ ಭೂವರಂ ವೀರವರ್ಮಂ ಜನಾ ।
ಡಂಬರದೊಳಿರ್ದಪಂ ಸಾರಸ್ವತಾಖ್ಯ ನಗರದೊ ಳತಿವಿಲಾಸದಿಂದೆ ॥ ॥೨॥
ನೆರೆ ನಾಲ್ಕು ಚರಣದಿಂ ಧರ್ಮ ಮಡಿಯಿಡುತಿಹುದು ।
ಮರೆದು ಕನಸಿನೊಳಾದೊಡಂ ಪಾತಕದ ಕೃತ್ಯ ।
ಕೆರಗುವವರಿಲ್ಲ ಪುರುಷ ಸ್ತ್ರೀಕದಂಬದೊ ಳ್ವ್ಯಾಧಿಗಳ ಪೀಡೆಗಳನು ॥
ಅರಿಯರಾರುಂ ದುಃಖಶೋಕ ಸಂತಾಪದಿಂ ।
ಮರುಗುವನರಂ ಕಾಣೆ ನಾ ನೃಪನ ರಾಷ್ಟ್ರದೊ ।
ಳ್ಸೆರೆಯಾಗಿ ವೈವಸ್ವತಂ ಮನೆ ಯುಳಿಯ ತನದೊಳಿರುತಿಹಂ ಭೂವರಂಗೆ ॥೩॥
ಆ ವೀರವರ್ಮ ನೀ ಪಾಂಡವನ ಕುದುರೆಗ ।
ಳ್ಕಾವ ಪಡೆಸಹಿತ ನಿಜ ರಾಷ್ಟ್ರಕೈತಂದು ವೆಂ ।
ಬೀ ವಾರ್ತೆಯಂ ಕೇಳ್ದು ನಗುತೆ ಖತಿಗೊಂಡು ಕೃಷ್ಣಾರ್ಜುನರ ಸಾಹಸವನು ॥
ನಾವರಿದುಕೊಂಬೆ ವಶ್ವಂಗಳಂ ಕಟ್ಟುವುದು ।
ನೀವೆಂದು ಕಳುಪಲಾ ನೃಪನ ಪರಿವಾರಂ ಮ ।
ಹಾ ವಿಭವದಿಂದೆ ಕರಿ ತುರಗ ರಥ ಪಾಯದಳ ಮೊತ್ತರಿಸೆ ಪೊರಮಟ್ಟುದು ॥೪॥
ಸುಲಭನೆಂ ದನುಪಮ ಸುಫಾಲನೆಂ ದುನ್ನತ ಕು ।
ವಲನೆಂದು ನೀಲನೆಂದಗ್ಗದ ಸರಳನೆಂದು ।
ಬಲವಂತ ರಿವರೈವ ರಾನೃಪನ ಸೂನುಗ ಳ್ಪೊರಮಟ್ಟು ಸೇನೆಸಹಿತ ॥
ಕೆಲ ವರಿ ದಡರ್ದು ಕೈ ದುಡುಕಿ ತುಸ ಮಾತ್ರಮೆನೆ ।
ಫಲುಗುಣನ ತುರಗಂಗಳಂ ತಂದು ನಿಮಿಷ ದೊ ।
ಳ್ನಿಲಿಸಿದ ರ್ಪಿತನ ಸನ್ನಿಧಿಯೊಳದ ನರ್ಜುನನ ಪಡೆ ಕಂಡು ಕವಿದುದೊಡನೆ ॥೫॥
ಮೋಹರದ ಮುಂದೆ ನಡೆತರುತಿರ್ದ ಕಲಿ ಬಭ್ರು ।
ವಾಹನಂ ಕೇಳ್ದು ಕಡುಗೋಪದಿಂ ದೊದಗಿ ಬಂ ।
ದಾಹವಕೆ ಶಂಖನಾದಂ ಗೈಯೆ ಬೆದರಿತು ಜಗತ್ರಯಂ ಪರಬಲದೊಳು ॥
ಸಾಹಸಿಗ ಳುಡುಗಿದ ರ್ಬಳಿ ಕೆರಡು ಚೂಣಿಗಳ ।
ಕಾಹುರದ ಕಲಿಗ ಳೊಡವೆರೆಸಿ ಹೊಯ್ದಾಡಿ ದ ।
ರ್ಬಾಹು ಸಖ ಮುಷ್ಟಿ ಕೇಶಾಕೇಶಿ ಮಲ್ಲಯುದ್ಧದ ಹತಾಹತಿಗಳಿಂದೆ ॥ ॥೬॥
ಬಳಿಕೆರಡು ಕಡೆಯ ಭಟ ರುಬ್ಬರದೊ ಳಬ್ಬರದೊ ।
ಳೆಳಸಿ ಹೊಯ್ದಾಡುತಿರ ಲಾಚೆಯಿಂ ದೀಚೆಯಿಂ ।
ತಳತಂತ್ರ ಮೊಡನೊಡನೆ ಮುಗ್ಗಿದುದು ಮಗ್ಗಿದುದು ಬಹಳ ಕೋಲಾಹಲದೊಳು ॥
ಖಳಿ ಖಟಲು ಖಟಲೆಂಬ ರವದಿಂದೆ ಜವದಿಂದೆ ।
ಕಳಿವರಿದು ಘೋರಪ್ರಹಾರದಿಂ ವೀರದಿಂ ।
ಬಳಸಿ ಬಿದ್ದುದು ಮಂದಿ ಹೆಣಮಯದ ರಣಮಯದ ರೌಕುಳದ ರಚನೆ ಮೆರೆಯೆ ॥೭॥

ಮತ್ತೆ ಪುರದಿಂ ದಯುತ ನಿಯುತ ಸಂಖ್ಯೆಯ ರಥವ |
ನೊತ್ತದಿಂ ಕುದುರೆ ಮಂದಿಗಳ ಸಂದಣಿಗಳಿಂ |
ಮತ್ತಗಜ ಘಟೆಗಳಿಂ ದಾನೃಪನ ಸುತ ರೈವರುಂ ಪಚಾರಿಸುತೆ ಬಂದು ||
ಒತ್ತಾಯಮಂ ಮಾಡೆ ಬಭ್ರುವಾಹಂ ಕನ |
ಲ್ದುತ್ತುಂಗ ಚಾಪದಿಂ ಕಣೆಗರೆಯುತಿರೆ ಲನಿಬ |
ರೆತ್ತ ಲಡಗಿವರೊ ಪೇಳಿಸೆ ಮಡಿದು ಪರಿಚಾತುರಂಗ ಮವನೇವೇಳ್ವೆನು || ||೮||
ಕಲಿ ಬಭ್ರುವಾಹನನ ಕೋಲ್ಗಳಿಂ ನಿಜಸೇನೆ |
ಖಿಲಮಾಗುತಿರೆ ಕೇಳ್ದು ವೀರವರ್ಮಂ ತಾನೆ |
ಬಲಸಹಿತ ಪೊರಮಟ್ಟು ತನ ಗಳಿಯನಾಗಿರ್ದ ಕಾಲಂಗೆ ತೋರಿಸಲ್ಕೆ ||
ಕೊಲತೊಡಗಿದಂ ಬಳಿಕ ಧರ್ಮರಾಜಂ ಮುಳಿದು |
ಫಲುಗುಣನ ತಳತಂತ್ರಮಂ ತನ್ನ ಮಾವಂಗೆ |
ಗೆಲವಾಗಬೇಕೆಂದು ಜೀವಿಗಳ ವಧೆಗೆ ಜವ ನಳುಕುವನೆ ಜಗದೊಳೆನಲು || ||೯||
ಎಂದಿರ್ದೊಡಂ ಪ್ರಾಣಿಗಳ ನೆಲ್ಲರಂ ಕೊಲ್ವ |
ದಂದುಗಂ ತನಗೆ ಬಿಡದೆಂದು ಮುಳಿ ದಂತಕಂ |
ಬಂದು ಪೊಕ್ಕನೊ ಕಿರೀಟಿಯ ದಳವನೆನೆ ಹತಾಹತಿಗಳಂ ಮಾಡುತಿರಲು ||
ನಿಂದು ಕಾದುವರಿಲ್ಲದಂ ಕಂಡು ಪಾರ್ಥಂ ಮು |
ಕುಂದನಂ ಬೆಸಗೊಂಡ ನೆಲೆ ದೇವ ಸೈನ್ಯಮಂ |
ಮುಂದುಗೆಡಿಸುವ ಪರಾಕ್ರಮದ ಕಟ್ಟಾಸುರದ ವೀರ ನಿವನಾವನೆಂದು || ||೧೦||
ತಾತ ಕೇಳೈ ಪಾರ್ಥ ನಿನಗೆ ಹಿರಿಯಯ್ಯ ನಹ |
ನೀತಂ ಕಣಾ ಧರ್ಮರಾಜ ನೀ ನೃಪನ ಜಾ |
ಮಾತನಾಗಿರ್ದಪಂ ಮಾವಂಗೆ ಹಿತಮಾಗಿ ನಮ್ಮ ಚಾತುರ್ಬಲವನು ||
ಘಾತಿಸುವನೆಂದು ಹರಿ ನುಡಿದೊಡೆ ಧನಂಜಯ ನಿ |
ದೇತಕೆ ಮಹೀಪತಿಗೆ ತಾ ನಳಿಯನಾದ ನೀ |
ಭೂತಳದೊ ಳಿದನರುಪ ಬೇಕೆಂದು ಬೇಡಿಕೊಳ ಲಸುರಹರ ನಿಂತೆಂದನು ||೧೧||
ಆಲಿಸಾದೊಡೆ ಪಾರ್ಥ ವೀರವರ್ಮಕ ಮಹೀ |
ಪಾಲಕನ ತನುಜೆ ಮಾಲಿನಿ ಯೆಂಬ ನಾಮದಿಂ |
ದಾಲಯದೊ ಳಿರುತಿರ್ದೊಡಾಮದಾ ಕನ್ನಿಕೆಗೆ ಯೌವನಪ್ರಾಪ್ತಿ ಬಳಿಕ ||
ಬಾಲಕಿಗೆ ಪತಿಯಾಗಬೇಕೆಂದು ನರನಾಥ |
ನಾಲೋಚಿಸಿದೊ ಡಾಕೆ ಪಿತನೊಡನೆ ಮಾನವರ |
ಮೇಳೆನಗೆ ಮನವೆರಗ ದೆಸಲವಂ ಮತ್ತೆ ವರ ನಾರೆಂದೊ ಡಿಂತೆಂದಳು || ||೧೨||
ಬೊಪ್ಪ ಕೇಳ್ಮನುಜರ್ಗೆ ಮರಣ ಮೆಂ ದಿರ್ದೊಡಂ |
ತಪ್ಪ ದದರಿಂದೆ ಮಾನವರ ಪಾಣಿಗ್ರಹಣ |
ಕೊಪ್ಪೆನಾಂ ಪತಿಯೊ ಳುರಿವುಗವೇ ಳ್ಪುದಲ್ಲದೊಡೆ ವಿಧವೆಯಾಗಿರ ವೇಳ್ಪುದು ||
ಅಪ್ಪೊಡೆ ನಿಜಕಾಂತ ನಿಲ್ಲದೊಡೆ ಮನ್ಮಥಂ |
ನಿಪ್ಪಸರದಿಂ ದಿಸುವ ಕುಸುಮಾಸ್ತ್ರ ಕನ್ಯರಂ |
ಬಪ್ಪ ನರಕವ ನರಿಯದೊಡಗೂಡವೇಳ್ಪು ದಿದ ಕಂಜುವೆಂ ತಾನೆಂದಳು || ||೧೩||

ನಿಜನಾಥನಿರ್ದಲ್ಲಿ ಮರಣಮಾದೊಡೆ ಪುಣ್ಯ |
ಮಜ ನಾದರಿಪ ನವನ ಕೂಡೆ ತನ್ನಂಗಮಂ |
ತ್ಯಜಿಸಿದೊಡೆ ವಿಧವೆಯಾದೊಡೆ ಸತಿಗೆ ಪಾತಕಂ ಬಂದಲ್ಲದಿರದು ಬಳಿಕ ||
ಪ್ರಜೆಗಳಂ ಪಡೆದು ಸದ್ಗತಿ ಗೈದವೇಳ್ವುದಿದು |
ರುಜುವಲ್ಲ ಮಾನುಷ್ಯಮಾರ್ಗಮಿದಕಾರ ದಾಂ |
ಭಜಿಸುವೆಂ ಧರ್ಮರಾಜನ ನೆನ್ನ ನಾತಂಗೆ ಕುಡು ಮದುವೆ ಯಹೆನೆಂದಳು ||೧೪||

ಮೃತರಾದೊ ಡವನ ಪೊರೆಗೈದುವ ಸುಕೃತ ದು |
ಷ್ಕೃತವ ನಾತನೆ ಬಲ್ಲ ನವರಿಂದೆ ತನಗೆ ರವಿ |
ಸುತನೆ ವರನಾದಪಂ ವ್ರತ ದಾನ ಜಪ ತಪ ದೊಳಾತನಂ ಮೆಚ್ಚಿಸುವೆನು ||
ಅತಿಶಯುಮಿ ದೆನ್ನದಿ ರ್ನಿನ್ನ ಪುಣ್ಯದ ಫಲಂ |
ಪ್ರತಿಕೂಲ ಮಾಗ ದೆನಗಿನ್ನು ವೈವಸ್ವತಂ |
ಪತಿಯಾಗದಿರ ನವನ ಕಾಯಮಂ ತಳೆದು ಜಸ ವಡೆದಪೆಂ ತಾನೆಂದಳು || ||೧೫||

ಇಂತೆಂದು ಮಾಲಿನಿ ಮಹೀಪತಿಗೆ ವಿನಯ ದಿಂ |
ದಂತಸ್ಥಮಾ ಗಿಹ ಮನೋರಥವ ನೊರೆದಿನ್ನು |
ಸಂತತಂ ಬಿಡದೆ ನಾನಾ ವಿಧದ ಪುಣ್ಯಕರ್ಮಂಗಳಂ ನೀನೆ ರಚಿಸಿ ||
ಎಂತಾದೊಡಾಂ ಧರ್ಮರಾಜಂಗೆ ಮದುವೆ ಯ |
ಪ್ಪಂತೆ ಮಾಡೆಂದು ಕಾಲ್ಗೆರಗಿದೊಡೆ ತನುಜೆಯಂ |
ಸಂತೈಸಿ ತೊಡಗಿದಂ ಯಮಸೂಕ್ತದಿಂದೆ ವೈವಸ್ವತ ಪ್ರಾರ್ಥನೆಯನು || ||೧೬||

ಅಂದು ಮೊದಲಾಗಿ ಮಾಲಿನಿ ದಿವಾರಾತ್ರಿ ಯೊ |
ಳ್ಕಂದದೆ ಕೃತಾಂತನಂ ನಾನಾ ವಿಧಾನಂ ಗ |
ಳಿಂದೆ ಪೂಜಿಸುತಿರ್ದ ಳನ್ನೆಗಂ ದಿನದಿನಕೆ ಯೌವನಂ ಪ್ರಬಲಮಾಗೆ ||
ಇಂದುವದನೆಯ ನೆನಹಿಗೊಳಗಾಗಿ ತರಣಿಜಂ |
ಬಂದು ಮೈದೋರದಿರೆ ಧರ್ಮದ ಸಹಾಯಕ್ಕೆ |
ಮುಂದುವರಿ ವಮರಮುನಿ ನಾರದಂ ತಿಳಿದ ನೀ ವೃತ್ತಾಂತಮಂ ಮನದೊಳು ||೧೭||

ನಾರದಮುನೀಶ್ವರಂ ಕಾಲನಲ್ಲಿಗೆ ಬಂದು |
ವೀರವರ್ಮಕ ನೃಪನ ತನುಜೆ ಮಾಲಿನಿಯಂ ವಿ |
ಚಾರಿಸದೆ ಸುಮ್ಮನಿರ್ದಪರೆ ನೀಂ ಧರೆಯ ಮಾನವರ ನೊಲ್ಲದೆ ನಿನ್ನನು ||
ಪ್ರಾರ್ಥಿಸಿ ಪತಿಯಾಗಬೇಕೆಂದು ಭಜಿಸುವ |
ಳ್ಚಾರಿತ್ರಗುಣ ಶೀಲ ಸತ್ಯ ಧರ್ಮಂಗಳಿಂ |
ಸಾರಸ್ವತಾಖ್ಯ ಪುರಮಂ ಪಾವನಂಗೈವಳಾಕೆಯಂ ವರಿಸೆಂದನು || ||೧೮||

ನಿಜವಾಗಿ ಮನದೊಳನ್ಯರ ನುಳಿದು ತನ್ನನೇ |
ಭಜಿಪ ಶರಣಾಗತರ ನಾದರಿಸ ದಿರ್ದಪರೆ |
ಸುಜನರೆಲೆ ತರಣಿಸುತ ನಾಲ್ಕು ಚರಣವನೂರಿ ನಡೆವ ಧರ್ಮ ದೊಳಿರ್ದಪರ ||
ಪ್ರಜೆಗಳಿಂ ದೆಸೆವ ಸರಸ್ವತ ಪುರಕ್ಕೆ ನಾ |
ನುಷನೇಪಮಂ ತಾಳ್ದು ನೀಂ ಪೋಗಿ ನಿಲಿಸು ಭೂ |
ಭುಜನ ಕುವರಿಯನೆಂದೊ ಡೊಪ್ಪಿ ವೈವಸ್ವತಂ ಕಳುಹಿದಂ ಸುರಮುನಿಯನು ||೧೯||

ಅಸ್ವಭಾವಕಮಲ್ಲ ನೈಜಮಿದು ತನಗೆನೆ ತ।
ಪಸ್ವಿಗಳ ಮೌಳಿಮಣಿ ನಾರದಂ ಪೋಗಿ ವೈ।
ವಸ್ವತಂ ಗರುಪಿ ಮಾಲಿನಿಯ ಭಾವವನಲ್ಲಿ ಬೀಳ್ಕೊಂಡು ಖೇಚರಮೊಳು ॥
ಸುಸ್ವರದ ವೀಣೆ ವಿಡಿ ದಾಸಂದದಿಂದೆ ಸಾ।
ರಸ್ವತಪುರಕೆ ಬಂದು ಕಾಲನಾಡಿಮುದಂ ಯ।
ಶಸ್ವಿಯಾಗಿಹ ವೀರವರ್ಮನಂ ಕಂಡು ಸತ್ಕೃತನಾಗಿ ವಿವರಿಸಿದನು ॥ ॥೨೦॥
ಧರ್ಮರಾಜನ ಪೊರೆಗೆ ಪೋಗಿರ್ದೆನೆಲೆ ವೀರ।
ವರ್ಮ ಕೇಳಿನ್ನಗಂ ನೀನಾರ್ಜಿಸಿದ ಪುಣ್ಯ।
ಕರ್ಮಫಲದಿಂದೆ ವೈಶಾಖಮಾಸದ ಶುಕ್ಲಪಕ್ಷದೊ ಳ್ಛರೆಗೆ ಬಂದು ॥
ನಿರ್ಮಲ ಚರಿತ್ರೆ ತವ ತನುಜೆ ಮಾಲಿನಿಯಂ ಜ।
ನರ್ಮಿಚ್ಛೆ ಮದುವೆಯಾವಪೆನೆಂದ ನಂತಕಂ।
ಪೆರ್ಮೆಯಿಂ ದಾದರಿಸುವಂತೆ ಸಂಪಾದಿಸುವುದೆಂದು ಮುನಿಪತಿ ನುಡಿದನು ॥೨೧॥
ಸುರಮುನಿಯ ವಾಕ್ಯಮಂ ಕೇಳಿದಂ ತಾಳಿದಂ।
ಪರಿತೋಷಮಂ ಭೂಪನೊಲವಿಂದೆ ಸಲವಿಂದೆ।
ಪುರವರವ ನೈದೆ ಸಿಂಗರಿಸಿದಂ ತರಿಸಿದಂ ಬೇಕಾದ ವಸ್ತುಗಳನು ॥
ಸರಸಗುಣ ಸೌಂದರ್ಯಶಾಲಿನಿಗೆ ಮಾಲಿನಿಗೆ।
ತರಣಿಜನ ಕೂಡೆ ವೈವಾಹಮುಂ ಮೋಹಮುಂ।
ದೊರಕೊಂಬುದೆಂದು ವಿಸ್ತರಿಸಿದಂ ಬರಿಸಿದಂ ಭಾಂಧವರ ನುತ್ಸವದೊಳು ॥ ॥೨೨॥
ರಿಪುಮಥನ ಕೇಳಿತ್ತ ಮಾಲಿನಿಯ ಪರಿಣಯಕೆ।
ತಪನಜಂ ಪೊರಮಟ್ಟು ತನ್ನ ಮನ್ನಣೆಯವರ।
ನಪರಿಮಿತ ಪರಿವಾರಮಂ ಕರೆಸಿ ಬಹುದು ನೀ ವೆಮ್ಮೊಡನೆ ಮದುವೆಗೆನಲು ॥
ಕುಪಿತ ವದನದ ಕೋರೆದಾಡೆಗಳ ಕಾ ರೊಡಲ।
ವಿಪರೀತ ವಿಕ್ರಮ ಭಯಂಕರದ ವೀರಭಟ।
ರುಪಮಿಸುವೊ ಡರಿದೆನಲ್ ಕ್ಷಯನೆಂಬ ಮಂತ್ರಿಯೊಡನೈತಂದರಾಕ್ಷಣದೊಳು ॥೨೩॥
ದುರಿತಕೋಟಿಗಳೊಡನೆ ಪಂಚಪಾತಕ ಮುಖ್ಯ।
ದೊರೆಗ ಳಿಟ್ಟಣಿಸ ಲಗಣಿತ ರೋಗ ಸಂಕುಲಂ।
ಬೆರೆಸಿ ಮಿಗೆ ರಾಜಯಕ್ಷ್ಮಾದಿ ಸಿಮಿಳ ವ್ಯಾಧಿನಾಯಕ ರ್ಬಳಿಸಂದರು ॥
ಉರುತರದ ರುಜೆಗ ಳರಸಿಯ ರಸಂಖ್ಯಾತದಿಂ।
ನೆರೆದ ರ್ವಿಷೂಚಿ ಸಂಗ್ರಹಣಿ ಮೊದಲಾದ ಛೀ।
ಕರ ವದನೆಯರ ಕೂಡೆ ಬಳಿ ಕಂತಕಂಗೆ ಬಿನ್ನೈಸಿದಂ ಕ್ಷಯ ಸಚಿವನು ॥ ॥೨೪॥
ದೇವ ನಿಮ್ಮೊಡನೆ ಮದುವೆಗೆ ಬಂದೊ ಡೆಮಗೆ ನೇ।
ದಾವಳಿಯ ಘೋಷ ಶ್ರವಣ ಮಹುದು ಹೋಮ ಧೂ।
ಮಾವಲೋಕನ ಮಹುದು ಪುಣ್ಯ ಕರ್ಮಿಗಳ ಸೋಂಕಿನಗಾಳಿ ಮೇಲೆ ಬಹುದು ॥
ಆ ವೀರವರ್ಮಕಂ ಧಾರ್ಮಿಕಂ ಗೋ ವಿಪ್ರ।
ಸೇವಕಂ ಪ್ರಜೆಗಳಂ ದ್ವಿಜಹಿತವ ರತಿಶುಚಿ ಗ।
ಳಾವೆಂತು ಬಹೆವಲ್ಲಿಗೆಂದೊಡೆ ಕೃತಾಂತಂ ಕ್ಷಯಂಗೆ ಮಗುಳಿಂತೆಂದನು ॥ ॥೨೫॥

ಕ್ಷಯ ಕೇಳ್ಸಮಸ್ತ ಪಾತಕ ರೋಗನಾಯಕ |
ರ್ಜಯಮಯಾಕಾರಂಗಳಂ ಬಿಟ್ಟು ದಿವ್ಯಾ ಕೃ |
ತಿಯನಾಂತು ತನ್ನ ಪಟ್ಟಣದೊಳಂ ತನವರತ ಮಿರುತಿರ್ಪರಂ ತನಿಬರು ||
ಪ್ರಿಯದಿಂದೆ ಬರ ಲಿವೊಡನೆ ಮದುವೆ ಗಾ ಪುರಾ |
ಶ್ರಯದ ನರರೆಲ್ಲರುಂ ಪುಣ್ಯಕರ್ಮಿಗ ಳವರ |
ನಯನಾವಲೋಕನಕೆ ಸೊಗಸಾಗಬೇಕೆಂದು ವೈವಸ್ವತಂ ನುಡಿದನು || ||೨೬||
ಆಲಿಸುವುದೆಲ್ಲರುಂ ಪಾಪಿಗಳ ಕಣ್ಗೆ ತಾಂ |
ಕಾಲಾಗ್ನಿ ಸದೃಶನಾಗಿರ್ದಪೆಂ ಪುಣ್ಯಾತ್ಮ |
ರಾಲಿಗ ಳ್ಗತಿಸೌಮ್ಯನಾಗಿಹೆಂ ನೀವು ಮೆನ್ನಂತೆ ರಮಣೀಯಮಾದ ||
ಶಾಲಿಸೌಂದರವ ರೂಪಂಗಳಂ ತಳೆದು ದಿ |
ವ್ಯಾಲಂಕೃತಿಗಳಿಂದೆ ವೀರವರ್ಮಕ ಧರಾ |
ಪಾಲಕನ ಪಟ್ಟಣಕೆ ಬಹುದೆಂದು ಭೃತ್ಯರ್ಗೆ ತರಣಿಜಂ ನೇಮಿಸಿದನು || ||೨೭||
ವಿಜಯ ಕೇಳಿಂತೆಂದು ಬಳಿಕ ದಿವ್ಯಾಕೃತಿಯ |
ನಿಜಭೃತ್ಯರೊಡನೆ ಶಮನಂ ವೀರವರ್ಮ ಭೂ |
ಭುಜನ ಪಟ್ಟಣಕೆ ಬರ ಲಾನೃಪ ನಿದಿರ್ಗೊಂಡು ನಾರದಂ ಮೊದಲಾಗಿಹ ||
ದ್ವಿಜರ ಮುಂ ದಗ್ನಿಸಾಕ್ಷಿಕದೊ ಳಾತಂಗೆ ಪಂ |
ಕಜವದನೆ ಮಾಲಿನಿಯ ನಿತ್ತು ವಿಧಿ ವಿಹಿತದಿಂ |
ತ್ರಿಜಗ ಕಿಮ ಪೊಸತೆನೆ ವಿವಾಹಭವನದೊಳಂದು ಮದುವೆಯಂ ಮಾಡಿಸಿದನು ||೨೮||
ಅಚ್ಚರಿಯೊಳಾದ ವೈವಾಹಮುತ್ಸವಕೆ ಸಲೆ |
ಮೆಚ್ಚಿ ವೈವಸ್ವತಂ ನುಡಿದನೆಲೆ ರಾಯ ನಿ |
ನ್ನಿಚ್ಛೆಯಾವುದು ಬೇಡು ಕುಡುವೆ ನಿನ್ನಲ್ಪಕಾಲಕೆ ಬಹುದು ಮೃತ್ಯು ನಿನಗೆ ||
ಎಚ್ಚರಿಂ ದರಿದಿರ್ಪುದೆನೆ ವೀರವರ್ಮಕಂ |
ನಿಚ್ಚಟದೊ ಳೀಮಗಳನಿತ್ತು ಮಗುಳೀಸಿಕೊಂ |
ಬಚ್ಚಗದ ವರಮಿದೇಕೆನಗೆ ಕನ್ಯಾಶುಲ್ಕ ಮತಿದೋಷಕರ ಮೆಂದನು || ||೨೯||
ಎಂದೊಡಂತಕ ನೆಂದ ನೆಲೆ ಮಹೀಪಾಲ ನಿನ |
ಗಿಂದು ಪುರುಷಾರ್ಥಮಲ್ಲೀವರಂ ಕರೆದು ಲೇ |
ಸಿಂದೆ ಕೊಟ್ಟಾತನಂ ಮಿಗೆ ಪರಸದಿರ್ದಪನೆ ತೆಗೆದುಕೊಂಡವ ನಿಳೆಯೊಳು ||
ಹಿಂದುಗಳೆಯದಿರೆನ್ನ ಮಾತನೆನೆ ಭೂವರಂ |
ಮುಂದೆ ತನಗಲ್ಪಕಾಲಕೆ ಮೃತ್ಯು ಬಹುದ ನರಿ |
ದೊಂದುಪಾಯಾಂತರವ ನೆಣಿಸಿ ನಸುನಗುತೆ ಶಮನಂಗೆ ಬಳಿಕಿಂತೆಂದನು ||೩೦||
ಅದೊಡಿಲ್ಲಗೆ ಬಗಲಿ ನಿನ್ನ ಕೃಪೆಯಿಂದೆ ಮಘ |
ವಾಪನಂ ತನಗನ್ನೆಗಂ ಮರಣವಾಗದಿರ |
ಲಾ ದೈತ್ಯಮಥನನಂ ಕಾಣ್ಬ ಪರಿಯಂತರಂ ನೀನುಮೆನ್ನಾಪುರದೊಳು ||
ಕಾದುಕೊಂಡಿಹು ದೆನ್ನ ನೀವುದೀ ವರವನೆನೆ |
ಸಾದರದೊಳಿತ್ತಂದು ಸೊಪಲಾಗಿ ನಾನಾ ವಿ |
ನೋದದಿಂ ಪಾಲಿಸಿಯೊಡನೆ ರಮಿಸುತಿರ್ಪ ನೀ ಪಟ್ಟಣದೊಳಿನತನುಜನು ||೩೧||

ಇನ್ನರಿದೆಲೈ ಪಾರ್ಥ ರವಿತನಯ ನೀಪುರ ದೊ |
ಳಿನ್ನೆಗಂ ಬಂದಿರ್ದ ವೃತ್ತಾಂತಮಂ ನೋಡು |
ತನ್ನವಾವನ ಸಹಾಯಕೆ ನಮ್ಮ ಸೇನೆಯಂ ಸಂಹರಿಸು ತಿಹನಿತ್ತಲು ||
ಸನ್ನದ್ಧನಾಗಿ ತನ್ನಂ ಕಾಣ್ಬ ಲವಲವಿಕೆ |
ಯಿಂ ನಡೆತಹಂ ನೀರವರ್ಮ ನೀಕ್ಷಿಸು ಧುರಕೆ |
ನಿನ್ನ ಕೋದಂಡಮಂ ನುಡಿಸೆನುತೆ ಹರಿ ಧನಂಜಯನ ರಥಕೈತಂದನು || ||೩೨||
ನೀರವರ್ಮನ ಕಾಳಗಕ್ಕೆ ಹರಿ ಫಲುಗುಣನ |
ತೇರನೇರಲ್ಕಂಡು ತಮತಮಗೆ ಕವಿದ ರ್ಮ |
ಯೂರಧ್ವಜಾದಿ ಭೂಪಾಲಕ ರ್ಕೊಲಗಹೇ ಳಂತಕಂ ತಾನಾದೊಡೆ ||
ನಾರಕಿಗಳಂ ಬಾಧಿಸುವುದಲ್ಲ ದಸುರ ಸಂ |
ಹಾರಕನ ಸೇನೆಯಂ ಮಾಡುತಿಹ ನಮ್ಮ ಪರಿ |
ವಾರಮಂ ಕೊಲ್ವೊಡಧಿಕಾರ ಮೆತ್ತಣದೆನುತೆ ಮುಂಕೊಂಡು ಕವಿದೆಚ್ಚರು ||೩೩||
ಅನಿರುದ್ಧ ಸಾತ್ಯಕಿ ಪ್ರದ್ಯುಮ್ನ ಕೃತವರ್ಮ |
ರಿನಜಸುತ ಗದಸಾಂಬ ಹೈಡಿಂಬಿ ಬಭ್ರುವಾ |
ಹನ ಯೌವನಾಶ್ವ ಪ್ರವೀರ ಹಂಸಧ್ವಜ ಸುವೇಗ ಕಲಿ ನೀಲಕೇತು ||
ಅನುಸಾಲ್ವ ತಾಮ್ರಕೇತನ ಮಯೂರಧ್ವಜ |
ರ್ಜನತನಗೆ ಕಣೆಗರೆಯಲಾ ನೀರವರ್ಮ ನೆ |
ಚ್ಚನಿಬರಂ ಮುರಿದು ಕೃಷ್ಣಾರ್ಜುನರ ಸರಿಸದೊಳ್ನಿಂದು ನಗುತಿಂತೆಂದನು ||೩೪||
ಈ ನೀರರೊರ್ವರುಂ ತನಗೆ ಪಾಡಲ್ಲ ರಾ |
ಜೀವಲೋಚನ ನಿನ್ನೊಳೀ ನರನೊಳೀ ಧ್ವಜದ |
ಪಾವನಿಯೊಳುರಿ ಕಾವಿ ಮುದ್ಭುಜದ ಕಂಡೂತಿಯಂ ಕಳೆಯ ವೇಳ್ಪುದೀಗ ||
ಮೂವರುಂ ತೊಲಗದಿರಿ ಸಾಕೆನುತೆ ಕೃಷ್ಣ ಗಾಂ |
ಡೀವಿ ಪವನಜರ ನಾರೇಳೆಂಟು ಸರಳ ನೆ |
ಚ್ಚಾ ವಸುಮತೀಶ ನುಳಿದವರ ನೈದೈದು ಬಾಣಂಗಳಿಂ ಘಾತಿಸಿದನು || ||೩೫||
ಈತನೀಗೆಲೆ ದೇವ ನೀರವರ್ಮಕ ನೆಂಬ |
ಭೂತನಾಥನಸಾಮೊ ಡೊಳ್ಕೈತಿಪ ನತಿಬಲಂ |
ಮಾತುಳನಲಾ ಧರ್ಮರಾಜಂಗೆ ಕಟ್ಟಿಕೊಳ ಬಹುದಿವಂ ಕುದುರೆಗಳನು ||
ಘಾತಿಸಿದೊಡೆಮಗೆ ತಪ್ಪಿಲ್ಲಲಾ ಬೆಸಗೊಂಬ |
ಮಾತಾಪ್ರ ದಕ್ಷಂಗಳಂ ಬಿಡದೆ ಭುಜದ ಕಂ |
ಡೂತಿಯಂ ಕಳೆದಪಂ ಗಡ ನೋಳ್ಪೆನೆನುತೆ ನರನೆಚ್ಚನಾ ಭೂಪತಿಯನು || ||೩೬||
ಕಟಕಿ ಯೇಕೆಮ್ಮೊಡನೆ ಪಾಂಡುಸುತ ನೀನೆ ಪಟು |
ಭಟನಪ್ಪೆ ಮೂಜಗಕೆ ಕೃಷ್ಣನ ಸಹಾಯದಿಂ |
ಘಟಿಸಿ ದಗ್ಗಳಿಕೆ ಗೇತಕೆ ಬೆರೆವೆ ಸೈರಿಸೆನು ತಾನೃಪಂ ಕೋಪದಿಂದೆ ||
ಜಟುಲ ಚಾಪದೊ ಳುರುಳ್ಚಿದ ನಂಬ ನಷಿಳ ದಿ |
ಕ್ತಟದೊಳ್ಗಗನಮಂಡಲದೊ ಳಖಿತ ಬಲದೊ ಳು |
ತ್ಕಟ ಬಾಣಮಯವಾಗೆ ಹರಿ ನರ ಕಪೀಂದ್ರ ರಥವಾಜಿಗಳ್ ಭ್ರಮಿಸುವಂತೆ ||೩೭||

ನೆರೆ ಮಂತ್ರಿ ಮಂತ್ರದಿಂ ದಹಿತ ರುತ್ಸಾಹಮಂ ।
ಬರಿಗೈವ ತೆರದಿಂದೆ ಸರ ನವನ ಕಣೆಗಳಂ ।
ತರಿದೊಟ್ಟು ತಿದರೊಳೇನಾದಪುದು ಸಾಕಿನ್ನು ಬಿಃಡು ನಮ್ಮ ಕುದುರೆಗಳನು ॥
ಬಿರುಸರಳ ಬಿಡೆಯ ಕೆಡೆಗುಡ ದಿರೊಡಲಂ ಕಡೆ ಯೊ ।
ಳುರುಜಿಗೆರಗದೆ ಹರಿಯ ವರಿದುಕೊಳ್ಳೆನುತೆ ಕೋ ।
ಲ್ಗರೆದೊಡಾನೃಪತಿ ಪಾರ್ಥನ ಬಾಣಮಂ ಕಡಿದು ನಸುನಗೆಯೊಳಿಂತೆಂದನು ॥೩೮॥
ಎಲೆಪಾರ್ಥ ವಿನಯದಿಂ ನೀಂ ಬೇಡಿಕೊಂಡೊಡೆ ಮೊ ।
ದಲೆ ಬಿಡುವೆ ನಶ್ವಂಗಳಂ ಬರಿದೆ ಕಾಳಗಕೆ ।
ಬಲಸಹಿತ ಬಂದೆಮ್ಮೊಡನೆ ಕೆಣಕಿ ರಣದೊಳಗೆ ಕುದುರೆಯಂ ಬೇಡಲೇಕೆ ॥
ಕಲಿತನದ ಪಂತಮುಂಟಾದೊಡಿದು ಸಮಯ ಮೈ ।
ಸಲೆ ಕಾಣಬಹುದೆನುತೆ ಕಣೆಗ ಳರುವತ್ತರಿಂ ।
ಫಲುಗುಣ ಮುರಧ್ವಂಸಿ ವಾನರ ಹಯಂಗಳಂ ಕೆಡೆಯೆಚ್ಚು ಬೊಬ್ಬಿರಿದನು ॥೩೯॥
ಅರಸ ಕೇಳವನ ಬಾಣದ ಘಾತಿ ಗರ್ಜುನಂ ।
ಕೊರಗಿದಂ ಮೇಲೆ ಪಲ್ಗಿರಿದ ನಾಕಪಿ ಚಕ್ರ ।
ಧರನೈದೆ ಕೈಮರೆದು ವಾಘೆಯಂ ಸಡಿಲಿಸೆ ರಥಾಶ್ವಂಗ ಳಸ್ತ್ರಹತಿಗೆ ॥
ತರಹರಿಸ ಲರಿಯ ದೋಡಿದುವೊಂದು ಕಡೆಗೆ ಬಳಿ ।
ಕುರವಣಿಸಿ ಪಾಂಡವ ಪತಾಕಿನಿಯ ಸುಭಟ ಪ್ರ ।
ಕರವ ನರೆಯಟ್ಟಿದಂ ತಿರುತಿರುಗಿ ಚಾರಿವರಿ ದೇಪೇಳ್ವೆನದ್ಭುತವನು ॥ ॥೪೦॥
ಅಭ್ರದೊಳ್ಮಿಂಚು ಸುಳಿವಂತೆ ಪರಬಲದೊಳ್ಪ ।
ರಿಭ್ರಮಿಸಿತವನ ರಥಮೆರಗುತಿಹ ಸಿಡಿಲಂತೆ ।
ವಿಭ್ರಾಜಿಸಿತು ಘೋಷಮೊಡನೆ ಬಿರುವಳೆಯಂತೆ ಕರೆದು ವಂಬಿನ ಸರಿಗಳು ॥
ಬಭ್ರುವಾಹನ ಮಯೂರಧ್ವಜಾದಿಗ ಳಾಹ ।
ವಭ್ರಷ್ಟರಾದರಿದ ಕರ್ಜುನಂ ರೋಷ ಬ ।
ದ್ಧಭ್ರುಕುಟಿ ಮುಖಭಯಂಕರನಾಗ ಲಸುರಾರಿ ಕಂಡು ಬಳಿಕಿಂತೆಂದನು ॥ ॥೪೧॥
ಖಾತಿ ಬೇಡೆಲೆ ಪಾರ್ಥ ನಿನಗೆನಗೆ ಮಣಿಯಂ ಮ ।
ಹಾತಿಬಲ ನೆಲ್ಲರಂತಲ್ಲ ದಟುವಾಯಂಗ ।
ಳೀತನೊ ಳ್ಕೊಳ್ಳದು ಜಯದ್ರಥನ ತಲೆಯನರಿ ದಂಬಿವನೆಡೆಗೆ ಪೋಗದು ॥
ಸೂತಜನ ರಥದ ಗಾಲಿಗೆ ಸಿಲ್ಕನಿಕ್ಕಿದ ಮ ।
ಹೀತಳದೊಳೆಡರಿಲ್ಲಿವಂಗೆ ನಾಂ ಮುಳಿದೊಡೆ ಸು ।
ನೀತನ ಶಿರಚ್ಛೇದನಂಗೈದ ಚಕ್ರಮಿವನಂ ಮುಟ್ಟದೇಪೇಳ್ವೆನು ॥ ॥೪೨॥
ಇಂತೆಂದು ಹರಿ ಪಾರ್ಥನಂ ಸಿಲಿಸಿ ನೋಡಿ ಹನು ।
ಮಂತನಂ ಕರೆದು ನೀನೀತನ ವರೂಥಮಂ ।
ತೊಂತಿ ವಾಲಾಗ್ರದಿಂ ಗಗನದೊಳ್ತಿರಿಪಿಡು ಮಹಾರ್ಣವಕೆ ಪೋಗಲೆನಲು ॥
ಎಂತಿವನ ರಥಮನೀಡಾಡುವೆಂ ದಶವದನ ।
ಸಂತೆಯುಂ ಜಂಬುಮಾಲಿಯುಪೋಲುಂ ರಾಮ ಸೀ ।
ಮಂತಿನಿಗೆ ಕಾವಲಿ ರ್ದಸುರೆಯರ ತೆರದೊಳಂ ಖಳ ನೀತನಲ್ಲೆಂವನು ॥ ॥೪೩॥

ವಾಯುಸುತ ಶಂಕೆ ಬೇಡೆನ್ನಾಜ್ಞೆ ಧರ್ಮದ ಸ।
ಹಾಯುಮಿದು ನಿನಗೆಮಗೆ ಬೇಕಾದ ಕಜ್ಜಮೆಂ।
ದಾ ಯದುಕುಲಾಧಿಪಂ ನೇಮಿಸಿದೊಡಾ ಕಪಿವರಂ ತನ್ನ ವಾಲಧಿಯನು॥
ಆಯತಂಗೈದು ಸಾರಥಿ ಕುದುರೆಗಳ್ಸಹಿತ।
ಜೇಯನಾಗಿಹ ನೃಪನ ರಥಮಂ ತೊಡರ್ದಾಂಜ।
ನೇಯಂ ನಭಸ್ಥಳಕೆ ಚಿಗಿದಂ ಪಯೋನಿಧಿಗೆ ಬಿಸುಡು ವುದ್ಯೋಗದಿಂದೆ॥ ॥೪೪॥
ಆನ್ನೆಗಂ ತನ್ನ ರಥಮಂ ಬಿಟ್ಟು ವೀರವ।
ರ್ಮ್ಮನ್ನರನ ಮಣಿಮಯ ವರೂಥಮಂ ತೆಗೆದುಕೊಂ।
ಡುನ್ನತ ಪರಾಕ್ರಮಮೊಳಾಗಸದೆಡೆಗೆ ಚಿಗಿದು ಬಂದೆಲೈ ವಾನರೇಂದ್ರ॥
ನಿನ್ನೊಳಿರ್ದಪುದು ಬರಿದೇರೆನ್ನ ಕೈಯೊಳಿದೆ।
ಪನ್ನಗಾರಿಧ್ವಜ ಕಿರೀಟಿಗಳ್ಪೆರೆಸಿರ್ದ।
ಸನ್ನುತ ಸ್ಯಂದನಂ ನೋಡೆಂದು ಗಗನದೊಳ್ಕಪಿಯಂ ಪಚಾರಿಸಿದನು॥ ॥೪೫॥
ಎಲ್ಲಿಗೆನ್ನ ವರೂಥವಂ ಬೀರ್ವೆ ಕೀಶ ನೀ।
ನಲ್ಲ ಗೀಡಾಡುವೆಂ ಸವ್ಯಸಾಚಿಯ ರಥವ।
ನಲ್ಲದೊಡೆ ವಾಲ್ಗಡಲ ಶೇಷತಲ್ಪದೊಳೆ ಮೆರೆವಿಂದಿರಾ ದೇವಿ ತನ್ನ॥
ವಲ್ಲಭ ನಗಲ್ದು ಪಾರ್ಥನ ಭಕ್ತಿಗೊಲಿದಿರ।
ಲ್ಲಲ್ಲಣಿಸಿ ವಿರಹದಿಂ ತಪಿಸುತಿಹ ಳಾರಮೆಗೆ।
ನಲ್ಲ ನೊಡಗೂಡುವಂ ತಮೃತಾಬ್ಧಿ ಗಿಡುವೆನೆಂ ದ್ಬುಬ್ಬಿದಂ ಭೂಪಾಲನು॥ ॥೪೬॥
ಸಾಗರಕೆ ಲಂಘಿಸಿದ ಸಾಹಸಕೆ ಬೆರೆವ ನೀ।
ನಾಗಸದೊ ಳಾದಿತ್ಯನಿಂ ಚಂದ್ರನೊಪ್ಪುವನೆ।
ಪೋಗೆಲೆ ಮರುಳೆ ತನ್ನ ಮುಂದಣ ಪರಾಕ್ರಮಿಗಳುಂಟೆ ಮೂಜಗ ದೊಳೆನುತೆ॥
ತಾಗಿದಂ ನೃಪತಿ ಹನುಮಂತನಂ ಬಳಿಕ ನಾ।
ನೀಗ ಳವರಂತಲ್ಲ ತಾನೆ ತನ್ನಂ ಪೊಗಳ್ವ।
ನೀ ಗರುವಿಕೆಯ ನರಿಯೆ ವತಿವೃದ್ಧರೆಂದೆರಗಿದಂ ಕಪಿ ಮಹೀಶ್ವರನನು॥ ॥೪೭॥
ಆ ವೀರವರ್ಮಂ ಕನಲ್ದಾಗ ಪಾರ್ಥ ರಾ।
ಜೀವಾಕ್ಷ ಕಪಿಗಳಂ ಕರೆದು ಲೋಕತ್ರಯಕೆ।
ಮೂವರುಂ ನೀವತಿ ಪರಾಕ್ರಮಿಗಳಾನೊರ್ವ ನಾಹವದೊಳಿನ್ನ ಕೂಡೆ॥
ಸಾವಧಾನದೊಳೊದಗಿದೊಡೆ ಕಾಣಬಹುದೆನುತೆ।
ಪಾವನಿಯ ನಡಸಿ ಪೊಯ್ದೊಡೆ ಮುಷ್ಟಿಘಾತದಿಂ।
ದಾವಾಮುಜಂ ತೊಲಗ ಲಸುರಹರ ನಾನೃಪನ ವಕ್ಷಸ್ಥಳವ ನೊದೆದನು॥ ॥೪೮॥
ಹರಿಯ ಪದಘಾತಿಗಾನೃಪತಿ ಮೂರ್ಛಿತನಾಗಿ।
ಧರೆಗುರುಳ್ದೊಡನೆ ಚೇತರಿಸು ತೆಲೆ ವೀರ ಕರ್ಣ।
ೀರ ನೀವು ಮೂವರಾ ನೊರ್ವನೆಂ ದಾಹವದೊಳುರವಣಿಸಬೇಡಿ ಬರಿದೆ॥
ಮುರಹರನ ದರ್ಶನಂ ದೊರೆಕೊಳ್ವಿನಂ ತನಗೆ।
ಮರಣಮಿಲ್ಲಂತಕನ ವರದಿಂದೆ ಬಳಿಕೀಗ।
ಪುರುಷೋತ್ತಮನ ಪದಸ್ಪರ್ಶಮಾಯ್ತೆನಗಿನ್ನು ಮೃತ್ಯುವೆತ್ತಣದೆಂದನು॥ ॥೪೯॥

ಎಂದೊ ಡಸುರಾಂತಕಂ ನೋಡಿದಂ ಕಾರುಣ್ಯ |
ದಿಂದೆ ನಿಜ ರಥದೊಳಿದಿರಾಗಿ ಸಮರಕೆ ಮತ್ತೆ |
ನಿಂದಿಹ ನರೇಂದ್ರನಂ ನುಡಿದಂ ಕಿರೀಟಿಗೆಲೆ ಪಾರ್ಥ ನಿನಗೆನ ಗಿವನೊಳು ||
ಕುಂದದೆ ಸಹಸ್ರವರ್ಷಂ ಪೋಣರ್ಸೊಡೆ ತೀರ |
ದೆಂದಿಗುಂ ಲಘುಹಸ್ತ ನತಿಬಲಂ ಶಸ್ತ್ರಾಸ್ತ್ರ |
ದಿಂ ದಧಿಕ ನಖಿಳ ವೀರರ್ಕಳಂ ಗೆಲ್ದನಿವ ನಾಂ ತೋಷಿಸುವೆನೆಂದನು || ||೫೦||
ದೇವ ನೀನಾವನಂ ತೋಷಿಸುವೆ ಜಗದೊಳವ |
ನೇ ವಿಜಯಿ ಮೇಣವನೆ ಬಲವಂತನೆಂದೊ ಡಿ |
ನ್ನೀ ವಸುಮತೀಶ್ವರಂ ಧುರದೊಳೆನ್ನಾ ಕ್ಷಣಕೆ ಸೋಲ್ದವನೆ ಸಾಕಿದೆಂದು ||
ಶ್ರೀವಲ್ಲಭನೊ ಳರ್ಜುನಂ ಪೇಳ್ದೊಡಾ ನೂತ |
ನಾ ವೀರವರ್ಮಕಂ ಕೇಳ್ದು ಮಿಗೆ ಮೆಚ್ಚಿ ಗಾಂ |
ಡೀವಿಗಭಿವಂದಿಸಿ ಬೆರಳ್ಗೊನೆಯ ನೊಲೆದೊಲೆದು ಕೊಂಡಾಡುತಿಂತೆಂದನು ||೫೧||
ಎಲೆ ಧನಂಜಯ ಚರಾಚರವೆಲ್ಲಮಂ ಬಾಹು |
ಬಲದಿಂದೆ ಗೆಲ್ವೆನೆಂ ಬಗ್ಗಳಿಕೆಯುಂ ಬಿಟ್ಟು |
ಜಲಜಾಯತಾಕ್ಷನಾಡಿದ ಮಾತಿ ಗನುಸಾರಿಯಾಗಿ ನೀನೆಂದ ನುಡಿಗೆ ||
ಸಲೆಸೊಗಸಿತೆನ್ನ ಮನಮಿನ್ನು ಕಾದುವೆನೆಂಬ |
ಛಲಮಿಲ್ಲ ತನಗೆನುತೆ ಕರದ ಚಾಪವ ನಿಳುಹಿ |
ನಲವಿಂದೆ ಬಂದು ಕೃಷ್ಣನ ಪಾದಕೆರಗಿದಂ ವೀರವರ್ಮಂ ಪ್ರಿಯದೊಳು || ||೫೨||
ತಾಮರಸಲೋಚನಂ ತೆಗೆದು ಬಿಗಿದಪ್ಪಿದಂ |
ಪ್ರೇಮದಿಂ ದಾನೃಪನ ನರ್ಜುನಂ ಮನ್ನಿಸಿದ |
ನಾ ಮಯೂರಧ್ವಜಾದಿಗಳೆಲ್ಲರುಂ ಕೂಡೆ ಭಾವಿಸಿದ ರುಚಿತದಿಂದೆ ||
ಜಾಮಾತನಾಗಿರ್ದ ವೈವಸ್ವತಂ ಬಂದು |
ಭೂಮಿಾಶನಂ ಮುಕುಂದನ ಕೈಯೊಳಿತ್ತು ಸು |
ತ್ರಾಮಸುತ ಮುಖ್ಯ ರಭಿವಂದಿಸ ಲ್ವರಸಿ ನಿಜನಗರಕ್ಕೆ ಬೀಳ್ಕೊಂಡನು || ||೫೩||
ಬಳಿಕವಂ ತನ್ನ ತನು ದೇಶ ಕೋಶಂಗಳಂ |
ಬಳುವಳಿಗಳಂ ಮಾಡಿ ತುರಗಂಗಳಂ ತರಿಸಿ |
ನಳಿನೋದರನ ಕೈಯೊಳಿತ್ತು ಮಿಗೆ ಭಕ್ತಿಯಿಂ ದುಪಚರಿಸಿ ಮುರಹರನನು ||
ಉಳಿದ ನೃಪರೆಲ್ಲರಂ ಸತ್ಕರಿಸಿ ವಿನಯದಿಂ |
ಪೊಳಲೊ ಳರುದಿನ ಮಿರಿಸಿಕೊಂಡಿರ್ದು ಪಾರ್ಥನಂ |
ದಳಸಹಿತ ಪೊರಮಟ್ಟ ನುತ್ಸವದೊ ಳಶ್ವರಕ್ಷೆಗೆ ಧನಂಜಯನ ಕೂಡೆ || ||೫೪||
ಭದ್ರಲಕ್ಷಣದಿಂದೆ ಶುಭ್ರವಾಗಿಹ ಕರಿ ಗ |
ಳದ್ರಿಸಮಮಾದು ವೆಪ್ಪತ್ತೊಂದುಸಾವಿರವ |
ನುದ್ರೇಕ ದತಿವೇಗದೇಕ ಕರ್ಣಶ್ಯಾಮ ದಗಣಿತ ಸುವಾಜಿಗಳನು ||
ವಿದ್ರುಮಾಧರೆಯರ ಸಹಸ್ರಮಂ ನವ ವಿಧದ |
ಸದ್ರತ್ನರಾಜಿಗಳ ನೆಂಟೆಡೆಯೊ ಳೊಗೆದ ವಿಲ |
ಸದ್ರುಚಿರ ಮುಕ್ತಾಫಲಂಗಳಂ ಕೊಟ್ಟು ನರನೊಡನಂ ಪೊರಮಟ್ಟನು || ||೫೫||

ಸಾರಸ್ವತಾಖ್ಯ ಪುರದಿಂದೆ ಬಳಿ ಕರ್ಜುನಂ |
ವೀರವರ್ಮಕ್ಷಿತಿಪನಂ ಕೂಡಿಕೊಂಡಾ ಮ |
ಯೂರಧ್ವಜಾದಿಗಳ್ವೆರಸಿ ಪಡೆಸಹಿತ ಕುದುರೆಗಳೊಡನೆ ನಡೆಯೆ ಮುಂದೆ ||
ಘೋರ ನಕ್ರಾಕುಲದ ಪೆರ್ಮಡುಗಳಿಂದೆ ಗಂ |
ಭೀರವಾಗಿಪ ಮಹಾನದವಿರ್ದು ದೊಂದದಂ |
ಭೂರಿ ಪೋತಪ್ರಕರದಿಂ ಕಳೆದ ನಮರ ನಗರೀಶ್ರೀಶ ಸಾಜ್ಞೆಯಿಂದೆ || ||೫೬||

ಸಂಧಿ ೨೭ ಕ್ಕೆ ಪದ್ಯಗಳು ೧೫೦೫ ಕ್ಕೆ ಮಂಗಳಮಸ್ತು.

## ಇಪ್ಪತ್ತೆಂಟನೆಯ ಸಂಧಿ.

ಸೂಚನೆ| ಇಂದ್ರಜಂ ತುರಗಂಗಳಂ ಕಾಣದಿರೆ ನಾರ |
ದಂ ವೃಷ್ಟಿಗೋಚರಕ್ಕೈದಿ ವಿಸ್ತರಿಸಿದಂ |
ಚಂದ್ರಹಾಸ ಕಥಾ ವಿಶೇಷಮುಂ ಕರ್ಣಪಿಯ್ಯೂಷಮಂ ಪ್ರೀತಿಯಿಂದೆ ||

ಭೂಮಿಪತಿ ಕೇಳ್ಬಳಿಕ ಸೌರಾಷ್ಟ್ರದಿಂದೆ ಸು |
ತ್ರಾಮಸುತ ನಸುರಾರಿ ಸಹಿತ ಕುದುರೆಗಳ ಕೂ |
ಡಾ ಮಹಾನದವ ನುತ್ತರಿಸಿ ನಡೆತರುತಿರ್ದ ನಾ ಪಥದೊ ಳೈಕಿಲಿಂದೆ ||
ಹೇಮಂತ ಶೈಶಿರದ ವಾಗಿ ಮಡಲಿಡೆ ತರಣಿ |
ಸೋಮನಂತಿರೆ ಬಿಸಿ ಲ್ಬೆಳ್ದಿಂಗಳ ವೊಲಾಗೆ |
ತಾಮರಸರಾಜಿ ನಸಿದುವು ಕುಗ್ಗಿದುವು ಕೋಗಿಲೆಯ ಕಂಠಕಲರವಗಳು || ||೧||
ಬಾಲೆಯರ ಕಡೆಗಣ್ಣ ಬಾಣದಿಂ ದಂಗಜಂ |
ರೋಲಂಬರಾಜಿ ಸೊಕ್ಕಾನೆಗಳ ಸೊಗಡಿಂದೆ |
ಕಾಲಮಂ ಕಳೆವೊ ಲಾದುದು ಪೂಗಳಿಲ್ಲದೆ ಮುಸುಳ್ದು ವಿನ ಶಶಿ ರುಚಿಗಳು ||
ಜ್ವಾಲೆ ಶೀತಳವಾದು ದಗ್ನಿಯಂ ಬಿಟ್ಟು ಕಾಂ |
ತಾ ಲಿಂಗನವನೆ ಬಯಸಿದುದು ಕಾಮುಕ ಜನಂ |
ಮೂಲೋಕವುಂಮಾಗಿ ನಡುಗಿಸಿತು ಮೇಣುಡುಗಿಸಿತು ಪೆರ್ಚ್ಚಿ ದೈಕಿಲಿಂದೆ || ||೨||
ಉತ್ತಮಾಂಗದ ಗಂಗೆಯಂ ಸಾಗರಕೆ ಕಳುಹಿ |
ಪೊತ್ತ ಶಶಿಕಲೆಯ ನಂಬರಕಿಟ್ಟು ತನ್ನ ನಡು |
ನೆತ್ತಿಗಣ್ಣೊ ಳ್ಕಯ್ಯೊಳಗ್ನಿಯಂ ತಾಳ್ದುದಲ್ಲದೆ ಕಾಂತೆ ಗರೆಮೈಯನು ||
ತೆತ್ತು ಬಿಡ ದಪ್ಪಿಕೊಂಡಿರ್ಪ್ಪ ನೀಶ್ವರ ನೆನ |
ಲ್ಕತ್ತೆ ಕಾಮಿನಿಯರ ಕುಚಾಲಿಂಗನವ ನುಳಿದೊ |
ಡೆತ್ತಣದು ಹಿಮಕೆ ಭೇಷಜಮೆಂದು ವಿರಹಿಗ ಳ್ಕಾರ್ಪರ ನರಸುತಿರ್ದರು || ||೩||
ನೆರೆ ಲೋಭಿ ವಿತ್ತಮಂ ಸುಯ್ದಾನಮಂ ಮಾಳ್ಪ |
ತೆರದಿಂದೆ ಕಾಮಿನೀ ಪ್ರಣಯಮಂ ನಂಬಿರ್ಪ |
ನರಿವಿನಂ ತಿಡಿದ ಶೈಶಿರದ ಶೀತಕೆ ಪಗಲಿರು ಳ್ತಮ್ಮ ಗೂಡುಗಳನು ||
ಪೊರಮಟ್ಟು ಪಾರಲೊಲ್ಲದೆ ವಾಯಸ ಪ್ರತತಿ |
ಗರಿಗಳಂ ಪೊದಿಸಿ ಮುಗ್ಗಿ ಲೊಳಿಟ್ಟು ಕೋಗಿಲೆಯ |
ಮರಿಗಳಂ ಮೈಯೊಳ್ಪುದುಗಿಕೊಂಡು ಮರುಕದಿಂಪೈದೆ ಪಾಲಿಸುತಿರ್ದುವು || ||೪||

ಭುವನವುಂ ತೀವಿರ್ದ ಹಿಮುಮುಮುಂ ತಮುಮುಮುಂ |
ತವಿಸುವ ತವಕದಿಂದ ಮುವಗಡಿಸಿ ಜವಗೆಡಿಸಿ |
ಬವಣಿಗೊಂ ಡಭ್ರದೊ ಳ್ತೊಳಲುತ್ತೆ ಬಳಲುತ್ತೆ ಬಂದೊಡಂ ವುತ್ತೆ ಬಿಡದೆ ||
ಕವಿಯಲ್ ಪ್ರತಾಪದೇಳಿಗೆ ನಂದಿ ಮಿಗೆ ಕುಂದಿ |
ರವಿ ತಣ್ಣಗಾದನೆನೆ ಕಾಣಿಸಿತು ವಾಣಿಸಿತು |
ತವೆ ತಕ್ಕೆಯೊ ಳ್ನಿರೆಯ ಬಲ್ಲರೊ ಳ್ನಲ್ಲರೊ ಳ್ಮುನಿಸ ನಾ ಕ್ಯೆಶಿರದೊಳು || ||೫||
ಉರ್ವೀಶ ಕೇಳ್ಬಳಿಕ ಸೇನಾ ಸಮುಗ್ರದಿಂ |
ಗೀರ್ವಾಣಪತಿ ನಂದನಂ ಬಹಳ ದೇಶ ವನ |
ಪರ್ವತ ನದೀನದಂಗಳ ನುತ್ತರಿಸಿ ಕುದುರೆಗಳ ಹಿಂದುಗೊಂಡು ಬರಲು ||
ತರ್ವಾಯೊಳವು ಹಾಯ್ದು ವನಿಲ ಜವದಿಂ ಪಡೆಯೊ |
ಳೊರ್ವರು ಮರಿಯದಂತೆ ಕುಂತಳ ನಗರಕೆ ಬಲ |
ಗರ್ವಿತಂ ಚಂದ್ರಹಾಸಾಖ್ಯ ನರಸಲ್ಲಿಗವನಾ ಹರಿಗಳಂ ತಡೆದನು || ||೬||
ಬೆಂಗಾವಲಾಗಿರ್ದ ಪಟುಭಟ ರ್ಮಿರ್ಗರಿದ ತು |
ರಂಗಯುಗಮಂ ಕಾಣದೈತಂದು ಸಿತವಾಹ |
ನಂಗೆ ಬಿನ್ನೈಸಿದ ರ್ಜೀಯ ಪೋದುವು ಹರಿಗ ಳರಸಿದೊಡೆ ಗೋಚರಿಸವು ||
ಮುಂಗೈವ ಕಜ್ಜಮಂ ಬೆಸಸೆನೆ ಧನಂಜಯಂ |
ಮಂಗಳಾತ್ಮಕನ ಮೊಗನೋಡಿ ಚಿಂತಿಸುವಿನಂ |
ಕಂಗೊಳಿಸಿ ತಾಗಸ ದೊಳೊಂದು ಬೆಳ ಗೆರಡನೆಯ ದಿನಮಣಿಯ ತೇಜದಂತೆ ||೭||
ಕ್ರೀಡೆಯಿಂ ಮಾಧವನುತ ಪ್ರಸಂಗವ ನುಂಟು |
ಮಾಡುತ್ತೆ ಸುಮನೋನುರಾಗದಿಂ ದಿರವೆ ನಲಿ |
ದಾಡುತ್ತೆ ಕುಜವಂಶ ಛೇದನಂಗೈಯುತ್ತೆ ಸಾಮುಜೋಲ್ಲಾಸದಿಂದೆ ||
ಪಾಡುತ್ತೆ ವಿಷ್ಣು ಪದ ಕಮಲ ಮಧುಕರನೆಂಬ |
ರೂಢಿಯಂ ನಿಜವಾಗಿ ಕಾಣಿಸುವ ತೆರದಿಂದೆ |
ನೋಡುವರ ಕಣ್ಗೆ ಗೋಚರಿಸಿದಂ ನಾರದ ಮುನೀಶ್ವರಂ ಬಾಂದಳದೊಳು || ||೮||
ಕೆಂಜಡೆಯ ಸುಲಿಪಲ್ಲ ಚೀರ ಕೃಷ್ಣಾಜಿನದ |
ಮಂಜುಲ ತುಲಸಿಯ ದಂಡೆಯ ಕೊರಳ ತಾವಡದ |
ರಂಜಿಸುವ ಪದ್ಮಾಕ್ಷಗಳ ಲಲಿತ ಮೇಖಲೆಯ ಚಾರುತರ ದುಪವೀತದ ||
ಕಂಜನಾಭ ಧ್ಯಾನ ದಮಲ ವೀಣಾ ಕ್ವಣಿತ |
ಸಂಜಾತ ಗಾನಸುಖ ದೆಸೆವ ತೇಜೋಮಯದ |
ಪುಂಜವೆನಿ ಪಮರಮುನಿ ನಾರದಂ ಪಾರ್ಥಾದಿಗಳ ಕಣ್ಗೆ ಕಾಣಿಸಿದನು || ||೯||
ಅಂಭೋಜಮಿತ್ರ ನಾಸದೊ ಳಾಗಸವ ನುಳಿದು |
ಕುಂಭಿನಿಗೆ ಬಂದಪನೊ ಪೇಳೆನ ಲ್ಗಗನ ಪಥ |
ದಿಂ ಭಾಸುರ ಪ್ರಭೆಯೊಳಾ ಮುನಿಪ ನಿಳಿತಂದೊ ಡಸುರಾಂತಕಾದಿ ನೃಪರು ||
ಸಂಭಾವಿಸಿದ ರಾತಪೋನಿಧಿಯ ನತಿವಿನಯ |
ಗಂಭೀರವಾಕ್ಯದಿಂ ಬೆಸಗೊಂಡ ರುಪಚರಿಸಿ |
ಜಂಭಾರಿ ನಂದನಂ ನಾರದ ನಖಿಳ ಲೋಕಸ್ಥಿತಿ ವಿಶಾರದನನು || ||೧೦||

ಎಲೆ ಮುನೀಶ್ವರ ತನ್ನ ಕುದುರೆಗ ಳ್ಳೀಪುವೀ ।
ನೆಲದೊಳಾ ವೆಡೆಯೊಳಿರ್ದಪುವೆಂ ದರಿಯೆನಿನ್ನು ।
ಬಲವಂತ ರೀಸ್ಥಳದೊಳಿಲ್ಲಲೇ ಕಂಡುದಂ ತನಗೊರೆಯು ವೇಳ್ಪುದೆಂದು ॥
ಫಲುಗುಣಂ ಕೇಳ್ದೊಡಾನಾರದಂ ನಸುನಗುತೆ ।
ಸುಲಲಿತಾಶ್ವಂಗಳೈದಿದುವು ಕುಂತಳಪುರಕೆ ।
ಕಲಿ ಚಂದ್ರಹಾಸಾಖ್ಯ ನರಸಲ್ಲಿಗಾನೃಪಂ ಕಟ್ಟಿಕೊಂಡಿಹನೆಂದನು ॥ ॥೧೧॥
ಹಿಂದಣರಸುಗಳ ಬಲಮಿವನ ಹದಿನಾರರೊಳ ।
ಗೊಂದು ಕಳೆಯಲ್ಲಿವಂ ಪರಮ ವೈಷ್ಣವ ನಿವನ ।
ಮುಂದ ದಟರಂ ಕಾಣೆ ಸಾಹವದೊಳೀತನ ಚರಿತ್ರ ಮತಿ ಚಿತ್ರಮೆಂದು ॥
ಮಂದಸ್ಮಿತದೊ ಳಾತಪೋಧನಂ ಪೇಳ್ದೊಡೆ ಪು ।
ರಂದರಾತ್ಮಜ ನವನ ವರ್ತನವ ನಾದ್ಯಂತ ।
ದಿಂದೆನಗೆ ವಿಸ್ತರಿಸಿ ಪೇಳ್ವುದೆನ ಲರ್ಜುನಂಗಾ ತಪೋನಿಧಿ ನುಡಿದನು ॥ ॥೧೨॥
ಸಮಯಮಲ್ಲಿದು ನಿನಗೆ ಪಾರ್ಥ ಸಿಕ್ಕಿರ್ದಪುವು ।
ವಿಮಲ ಮಖವಾಜಿಗ ಳ್ಚಿಂತಿಸುತಿಹಂ ಮಹೀ ।
ರಮಣ ನಿಭಪುರದೊಳಿನೆ ಫಲುಗುಣಂ ನರರ ಬಾ ಳ್ಚಿರಕಾಲ ಮಿಪ್ಪುದಿಲ್ಲ ॥
ಕ್ರಮೆಯಿಂದೆ ಕೇಳದಿರಬಹುದೆ ವೈಷ್ಣವ ಕಥೆಯ ।
ಸಮಮು ತನಗಾವಪೊ ಳ್ತುಥಯು ಬಲಮಧ್ಯಮೊ ।
ಳ್ಕಮಲಾಕ್ಷ ನೊರೆದ ಗೀತಾ ಮೃತವ ನಾಲಿಸಲ್ಕಿನೆ ಮುನಿಪ ನಿಂತೆಂದನು ॥ ॥೧೩॥
ಇನ್ನೊರೆವೆ ನಾಲಿಸಾಡೊಡೆ ಪಾರ್ಥ ಧಾರ್ಮಿಕಂ ।
ಮುನ್ನೊರ್ವನುಂಟು ಕೇರಳದೇಶ ದವನಿಪಂ ।
ಸನ್ನುತ ಗುಣೋದಯಂ ಮೇಧಾವಿಯೆಂಬವಂ ಬಲಯುತಂ ಬಳಿಕವಂಗೆ ॥
ತನ್ನ ಪಟ್ಟದ ರಾಣಿಯೊ ಳ್ಬಹಳ ಭಾಗ್ಯ ಸಂ ।
ಪನ್ನ ನಡೆದಂಘ್ರಿ ಗರುವೆರಳಾಗಿ ದಿವಮೊಳು ।
ತ್ಪನ್ನನಾದಂ ಮೂಲನಕ್ಷತ್ರದಿಂ ದರಿಷ್ಟಾಂಶದೊ ಳ್ಸುಕುಮಾರನು ॥ ॥೧೪॥
ಪುತ್ರೋತ್ಸವಂ ಮಾಡಿ ಕೆಲವು ದಿನಮಿರೆ ನೃಪಂ ।
ಶತ್ರುಗಳ್ಬಂದು ನಿಜನಗರಮಂ ಮುತ್ತಿದೊಡೆ ।
ಕ್ಷತ್ರಧರ್ಮದೊ ಳವರೊಡನೆ ಯುದ್ಧರಂಗದೊ ಳ್ಪೊಯ್ದಾಡಿ ಮಡಿಯೆ ಕೇಳ್ದು ॥
ಚಿತ್ರಭಾನು ಪ್ರವೇಶಂಗೈದಳಂದು ಶತ ।
ಪತ್ರಲೋಚನೆ ಪತಿವ್ರತೆಯಾಗಿ ಬಳಿಕೆಲೆ ಧ ।
ರಿತ್ರೀಶ್ವರನ ರಾಜ್ಯಮಂ ತೆಗೆದುಕೊಂ ಡಹಿತ ರಾಳ್ದರದನೇವೇಳ್ವೆನು ॥ ॥೧೫॥
ಬಳಿಕೊರ್ವ ದಾದಿ ಶಿಶುವಂ ಕೊಂಡು ಪೊರಮಟ್ಟು ।
ತೊಳಲಿ ಬಳಲುತೆ ಮೆಲ್ಲಮೆಲ್ಲ ನೈತಂದು ಕುಂ ।
ತಳ ನಗರಮಂ ಪೊಕ್ಕಳಲ್ಲಿ ಸಾಕಿದ ಳರ್ಭಕನ ನತಿಪ್ರೇಮದಿಂದೆ ॥
ಎಳೆಯಂಗೆ ಬೇಕಾದುದಿಲ್ಲದಿರೆ ಮರುಗುವ ।
ಳ್ಪೊಳಲೊಳಗೆ ತಿರಿದು ಹೊರೆ ದಳಲುವ ಳ್ಬುದ್ಧಿಸಿ ಪ ।
ಸುಳೆಯ ಬಿನದಂಗಳ್ಗೆ ಹಿಗ್ಗಿ ಬಿಸುಸುಯ್ವಳವ ಳನುದಿನದೊ ಳಾರ್ತೆಯಾಗಿ ॥ ॥೧೬॥

ಇಡೆ ತೊಟ್ಟಲಿ ಲ್ಲಾಡಿಸುವರಿಲ್ಲ ನಿನಗೆ ಪೊಂ।
ಗೊಡಿಗೆಯಿ ಲ್ಲರೆ ನಿಳಯಮಿಲ್ಲ ಬಿಡದೆರೆವ ನೀ।
ರ್ಕುಡಿ ಪಾಲ್ಗ ಳೆಣ್ಣೆ ಬೆಣ್ಣೆಗಳಿಲ್ಲ ಲಾಲಿಸಿ ನಲಿವ ತಂದೆತಾಯ್ಗಳಿಲ್ಲ ॥
ಪೊಡವಿಪತಿ ಕೇರಳಾಧೀಶ್ವರಂ ಪರಕೆಯೊಳ್।
ಪಡೆದನೀಗ ನಿನ್ನಂ ನೋಡುವೆನ್ನ ಕ।
ಣ್ಣೊಡೆಯ ದಕಟಕಟೆಂದು ಬಿಸುಸುಯ್ದಳಲ್ದು ಮರುಗುವಳಾಕೆ ದಿನದಿನದೊಳು ॥೧೭॥
ಪೊಳೆವ ಲ್ಲುಗುವಜೊಲ್ಲು ದಟ್ಟೆತಡಿ ತೊದಲ ನುಡಿ।
ತೊಳತೊಳಗುತಿಹ ಸೊಬಗು ಮೆರೆವ ನಗೆಮೊಗದ ಬಗೆ।
ಪೊಳೆವಕ ಣ್ಮಿಸುಪ ನುಣ್ಗದಪಿನೆಣೆ ಚೆಲ್ವಪಣೆ ಕುರುಳ ಜೋಲ್ವಂಬೆಗಾಲು ॥
ಸುಳಿನಾಭಿ ಮಿಗೆ ಶೋಭಿಪಧರವೆಡೆ ಬಟ್ಟೆದೊಡೆ।
ನಳಿತೋಳಿಡಿದಧೂಳಿ ಸೊಗಯಿಸುವ ವರ ಶಿಶುವ।
ನಲಿ ಪಾಡಿಸುವ ರೂಡಿಯಿಲ್ಲೆಂದು ನೆರೆ ನೊಂದು ಮರುಗುವ ಳಜಸ್ರಮವಳು ॥ ॥೧೮॥
ಬಾಲಕನ ಲೀಲೆಯಂ ಕಂಡು ಹಿಗ್ಗುವಳೊಮ್ಮೆ।
ಲಾಲನೆಗಳಿಲ್ಲೆಂ ದಳಲ್ದು ಮರುಗುವಳೊಮ್ಮೆ।
ಪಾಲಿಸಿದಳಿಂತು ನಡೆನುಡಿಗಳಂ ಕಲಿವಲ್ಲಿಪರಿಯಂತಮಾ ಶಿಶುವನು ॥
ಮೇಲೆ ರುಜೆ ಬಂದಡಸಿ ವಿಧಿವಶದೊ ಳಾಧಾತ್ರಿ।
ಕಾಲನರಮನೆ ಗೈದಿದ ಳ್ಬಳಿಕ ಪಸುಳೆಗೆ ನಿ।
ರಾಲಂಬ ನಾಗಲಾ ಪಟ್ಟಣದೊಳೆಲ್ಲರ್ಗೆ ಕಾರುಣ್ಯ ಕೇಡಾದನು ॥ ॥೧೯॥
ಚೆಲ್ವಶಿಶು ಬೀದಿಯೊಳ್ಬಂದು ದೇಸಿಗನಾಗಿ।
ನಿಲ್ವಿನಂ ಕಂಡಕಂ ಡಬಲೆಯ ರ್ಕರೆಕರೆದು।
ಮೆಲ್ವ ತನಿವಣ್ಗಳಂ ಕಜ್ಜಾಯ ಸಕ್ಕರೆಗಳಂ ಕುಡುವ ರೆತ್ತಿಕೊಂಡು ॥
ಸೊಲ್ವಮಾತುಗಳ ನಾಲಿಸಿ ಮುದ್ದಿಸುವ ರೀವ।
ರೊಲ್ವುದಂ ಮಜ್ಜನಂಗೈಸಿ ಮುಡಿಯಂ ಪೊದಿಸಿ।
ಮೆಲ್ಪಾಸಿನೊ ಳ್ಮಲಗಿಸುವ ರಕ್ತಿಯಿಂದೊಸೆದು ತಂತಮ್ಮ ಮಕ್ಕಳೊಡನೆ ॥ ॥೨೦॥
ಪರಪುಟ್ಟನಾಗಿ ಪಟ್ಟಣದ ಬೀದಿಗಳೊಳಗೆ।
ತಿರುಗುತಿಹ ಬಾಲಕನ ರೂಪಮಂ ಕಂಡು ಕರೆ।
ಕರೆದು ಭವನಂಗಳ್ಗೆ ಕೊಂಡೊಯ್ದು ಗಣಿಕೆಯ ರ್ತಮತಮಗೆ ಮೋಹದಿಂದೆ ॥
ಸರಸ ಪರಿಮಳ ಸುಗಂಧಂಗಳಂ ತಿಗುರಿ ಕ।
ಸ್ತುರಿಯ ತಿಲಕವನಿಟ್ಟು ಕಂಮಲರ್ಮುಡಿಸಿ ಕ।
ರ್ಪುರವೀಳೆಯಂಗೊಟ್ಟು ಮುಡಿತೊಡಂಗಳೊಳ್ಮೆದೆ ಸಿಂಗರಿಸಿ ಕಳುಹುತಿಹರು ॥ ॥೨೧॥
ಆಡುವೆಳೆ ಮಕ್ಕಳೊಡ ನಾಡುವಂ ಲೀಲೆ ಮಿಗೆ।
ನೋಡು ವಚ್ಚರಿಗಳಂ ನೋಡುವಂ ಬಾಲಕರ।
ಕೂಡೆ ಮನೆಮನೆಗ ಳೊಳಗೂಡುತಿಹ ನೆಲ್ಲರ್ಗೆ ಮುದ್ದಾಗಿ ಮೋಹಿಸುವನು ॥
ಪಾಡುವರ ನೋಡುವರ ನಾಡೆ ಸಾಧನೆಗಳಂ।
ಮಾಡುವರ ನೆರವಿಯೊಳ್ ಕ್ರೀಡಿಸುವನಾಪುರದ।
ರೂಡಿಸಿದ ಬೀದಿಯೊಳ್ಕೂಡ ಪೆಲ್ಲೆಡೆಯೊಳಂ ಪಸುಳೆ ಪರಪುಟ್ಟನಾಗಿ ॥ ॥೨೨॥

ಬಟ್ಟೆಯೊಳ್ಪುಣ್ಯವಶ ದಿಂದರ್ಭಕನ ಕಣ್ಗೆ |
ಪುಟ್ಟಸಾಲಗ್ರಾಮ ಮೊಂದು ರಮಣೀಯ ಶಿಲೆ |
ಕಟ್ಟಸಕದಿಂದೆ ಕಾಣಿಸಲದಂ ತಾನೆತ್ತಿಕೊಂಡು ಕೆಳೆಯರ್ಗೆ ತೋರಿ ||
ಬಟ್ಟಗಲ್ಲಿಂತು ವರ್ತುಳದಿಂದೆ ಚೆಲ್ವಾಗಿ |
ಪುಟ್ಟುವುದೆ ಪೊಸತೆಂದು ಪಿಡಿ ದಾಡುತೊಡನೆ ಬೈ |
ತಿಟ್ಟು ಕೊಂಬಂ ಬಾಯೊ ಳನವರತ ಮಿರಿಸಲ್ಕೆ ತನಗೆ ಮನೆಯಿಲ್ಲವಾಗಿ || ||೨೩||
ತೊಳಪ ಸಾಲಗ್ರಾಮ ಫಲದಿಂದೆ ಬಾಲಕಂ |
ಕೆಳೆ ವಕ್ಕಳೊಡನಾಟ ವಕ್ಕಗೋಳಕ ಮೆಂದು |
ತಿಳಿ ವಣ್ಣಿಕ ಲ್ಲೊಡ್ಡುಗಳ ನಾಡು ತವರಿಂದೆ ಗೆಲ್ದೆಲ್ಲರಂ ಜರೆಯುತೆ ||
ಕಳಕಳಿಸಿ ನಗು ತತಿಸ್ನೇಹದಿಂ ಕ್ರೀಡೆಯಂ |
ತಳೆ ವಾಗ ಳುಣಿಸುಗಳ ನುಂಬಲ್ಲಿ ತನ್ನ ಕೈ |
ವಳಕೆ ತಂ ದುಳಿದ ಪೊಳ್ತಿನೊಳಾವಗಂ ಬಾಯೊಳಿರಿಸಿಕೊಂ ಡಿರುತಿರ್ಪನು || ||೨೪||
ಕುಂತೀಕುಮಾರ ಕೇಳಾ ಮಹಾಪತ್ತನ ದೊ |
ಳಂ ತರ್ಭಕರೊ ಳಾಡುತಿಹ ಪಸುಳೆ ಗೈದು ಬರಿ |
ಸಂ ತುಂಬಿತಾ ಸಮಯದೊಳ್ತ್ರಬಲದಿಂ ಪ್ರವರ್ತಿಪ ದುಷ್ಟಬುದ್ಧಿಯೆಂಬ ||
ಕುಂತಳೇಂದ್ರನ ಮಂತ್ರಿ ತನ್ನ ಮನೆಯೊಳ್ವಿಪ್ರ |
ಸಂತರ್ಪಣಂ ಗೈಯಲಾ ದ್ವಿಜ ರ್ಭೋಜನಾ |
ನಂತರದೊಳೈದೆ ಸತ್ಕೃತರಾಗಿ ಕುಳ್ಳಿರ್ದು ಪರಸು ತಲ್ಲಿರುತಿರ್ದರು || ||೨೫||
ಅಲ್ಲಿ ಕೆಳೆಯರೊ ಳಾಡುತಿರ್ದ ಶಿಶುವಂ ಕಂಡ |
ರುಲ್ಲಾಸದಿಂದೆಸೆವ ಭೂಸುರ ರ್ಬಾಲಕನ |
ಸಲ್ಲಲಿತ ರಾಜಲಕ್ಷಣಕೆ ಬೆರಗಾದ ರವನಂಗಮಂ ನೋಡಿನೋಡಿ ||
ಸಿಲ್ಲ ದನುರಾಗದಿಂದಾರ ಸುತ ನೀತರುಣ |
ನೆಲ್ಲಿಂದ ಬಂದನೆಂದಾ ದುಷ್ಟಬುದ್ಧಿಯಂ |
ಮೆಲ್ಲನೆ ವಿಚಾರದಿಂ ಕೇಳ್ದೊಡಾ ವಿಪ್ರರ್ಗೆ ನಗು ತಾತನಿಂತೆಂದನು || ||೨೬||
ಈಪರಿಯೊಳೆನಿತಿ ಲ್ಲನಾಥರಾಗಿಹ ಬಾಲ |
ರೀಪುರದೊಳೆತ್ತಣವ ನಾವ ಸುತನೆಂ ದರಿಯೆ |
ವೀ ಪಸುಳೆಯಂ ರಾಜಕಾರ್ಯದೊಳಗಿದೆ ಪೆಪರ ಚಿಂತೆ ನಮಗೇತ ಕೆನಲು ||
ಆಪಾರ್ವರೆಂದಿರ್ದೊಡಂ ಚಾರುಲಕ್ಷಣದೊ |
ಳೀಪೊಳಲ್ಗೀ ಕುಂತಳಾಧೀಶ ನಾಳ್ವನ |
ವಿಮ್ಮಪೊಡವಿ ಗೊಡೆಯನಹ ನೀತನಂ ನೀನಿರಿಸಿಕೊಂಡು ರಕ್ಷಿಪುದೆಂದರು || ||೨೭||
ಕ್ರೂರ ನಕ್ರಾಕುಲದೊ ಳಿಡಿದಿರ್ದ ಪೆರ್ಮಡು ಗ |
ಭೀರ ನಿರ್ಮಲ ಜಲದೊಳೆಸೆವಂತೆ ಮನದೊಳ್ಕ |
ಠೋರತರ ಭಾವಮಂ ತಳೆದು ಬಹಿರಂಗದೊಳ್ವಿನಯ ಮುಳ್ಳಾತನಾಗಿ ||
ಚಾರುಲಕ್ಷಣದ ಶಿಶುವಂ ನೋಡಿ ಧರೆಯ ಬ್ರಹ್ಮ |
ದಾರಕರ ನುಡಿಗೊಪ್ಪಿದ ವೊಲಿರ್ದು ಬಳಿಕ ಸ |
ತ್ಕಾರದಿಂದಾ ವಿಪ್ರರಂ ಕಳುಹಿದಂ ದುಷ್ಟಬುದ್ಧಿ ನಿಜ ಭವನದಿಂದೆ || ||೨೮||

ಈ ಕುಂತಳೇಂದ್ರಂಗೆ ಸುತರಿಲ್ಲ ರಾಜ್ಯಮೆನ |
ಗೇಕಾಧಿಪತ್ಯಮಾಗಿರ್ದಪುದು ಮುಂದಿವಂ |
ಭೂಕಾಂತನಾದಪಂ ಗಡ ವಿಪ್ರರೆಂದ ನುಡಿ ತಪ್ಪದೆ ನ್ಮಾತ್ಮಜರ್ಗೆ ||
ಬೇಕಾದ ಸಂಪದಂ ಬಯಲಾಗಿ ಪೋಪುದೆಂ |
ದಾ ಕುಮತಿ ಬೇರೊಂ ದುಪಾಯಮಂ ಚಿಂತಿಸಿ ಭ |
ಯಾಕಾರ ದೊಡಲ ಚಂಡಾಲರಂ ಕರೆಸಿ ಬೆಸಸಿದ ನಾರು ಮರಿಯದಂತೆ || ||೨೯||

ಕಾನನಾಂತರದೊಳೀ ತರಳನಂ ಕೊಂದು ನೀ |
ವೇನಾದೊಡಂ ಕುರುಪ ತಂದೆನಗೆ ತೋರ್ಪುದೆಂ |
ದಾನರೇಂದ್ರನ ಮಂತ್ರಿ ಬೆಸಸಿದೊಡೆ ಪಶು ಘಾತಕಿಗ ಳಾಡುತಿಹ ಶಿಶುವನು ||
ಹೀನ ದಯದಿಂದೆ ಪಿಡಿದೆತ್ತಿ ಕೊಂಡೊಯ್ದ ರ್ಭ |
ಯಾನಕ ದೊಳಂದು ಕೊಲೆಗೆಳಸಿ ಪ್ರಹ್ಲಾದನಂ |
ದಾನವೇಶ್ವರ ನಾಜ್ಞೆಯಿಂ ಕಾಳರಕ್ಕಸ ರ್ಬಂದು ಕೈಮುಡುಕಿದಂತೆ || ||೩೦||

ಪಾತಕಿಗ ಳೊಡಲೊಳಿಹ ಪರಮಾತ್ಮನಂತೆ ಯಮ |
ದೂತ ರೆಳೆತಪ ದಜಾಮಿಳನಂತೆ ಕಾಕ ಸಂ |
ಘಾತದೊಳ್ ಸಿಕ್ಕಿರ್ದ ಕೋಗಿಲೆಯ ಮರಿಯಂತೆ ಸಲುಗಿ ಕತ್ತಲೆಯೊಳಿರ್ದ ||
ಶೀತಳ ಮರೀಚಿ ಲಾಂಛನದಂತೆ ಬಹಳ ಕೋ |
ಪಾತಿಶಯದೊಳಗಿಹ ವಿವೇಕದಂತಾಗ ಪಶು |
ಘಾತಕಿಗ ಳೆತ್ತಿಕೊಂಡುಯ್ವ ಬಾಲಕನಿರ್ದ ನವರೆಡೆಯೊ ಳಂಜುತಳುತೆ || ||೩೧||

ಪೆಗಲೊಳೇರಿಸಿ ಬನಕೆ ಚಂಡಾಲ ರೊಯ್ಯುತಿರೆ |
ಮಿಗೆ ಬೆದರಿ ಭಯದಿಂದೆ ಬಾಲಕಂ ಬಾಯೊಳಾ |
ವಗಮಿರಿಸಿಕೊಂಡಿರ್ಪ ದಿವ್ಯಸಾಲಗ್ರಾಮ ದುಪಲ ದತಿಮಹಿಮೆಯಿಂದೆ ||
ಬಗೆದೋರಲಾಗ ಮುರಹರ ಕೃಷ್ಣ ಕಮಲಾಕ್ಷ |
ಖಗರಾಜಗಮನ ಸಲಹೆಂದು ಚೀರಿದೊ ಡವನ |
ಮೊಗನೋಡಿ ಕರುಣದಿಂ ಕಡಿಗ ರೆದೆ ಕರಗಿದು ದಪೆಂತೊ ಹರಿನಾಮದೇಳ್ಗೆ || ||೩೨||

ಒಯ್ದು ಪಸುಳೆಯ ನರಣ್ಯದೊಳಿರಿಸಿ ಮರುಗಿ ಬಿಸು |
ಸುಯ್ದು ಪಶುಘಾತಕಿಗಳಾ ದುಷ್ಟಬುದ್ಧಿಯಂ |
ಬಯ್ದು ಶಿಶುವಧೆಗಳ್ಕಿ ನಿಂದು ನೋಡುತೆ ಕಂಡ ರರ್ಭಕ ನೆಡದ ಕಾಲೊಳು ||
ಅಯ್ದಲ್ಲದೊಂದು ಬೆರಲಿರ್ಪುದಂ ಬಳಿಕದಂ |
ಕೊಯ್ದು ಕುರುಪಂ ಕೊಂಡು ತಮ್ಮ ದಾತಾರ ನೆಡೆ |
ಗೆಯ್ದಿ ತೋರಿದೊಡವನ ನವರ್ಗಳಂ ಮನ್ನಿಸಿ ಮಹೋತ್ಸವದೊಳಿರುತಿರ್ದನು || ||೩೩||

ಇತ್ತಲಾ ವಿಪಿನದೊಳ್ತನ್ನ ವದನ ದೊಳಿರ್ದ |
ವೃತ್ತಸಾಲಗ್ರಾಮ ಶಿಲೆಯ ಪ್ರಭಾವದಿಂ |
ದುತ್ತಮ ಶ್ಲೋಕನಂ ಭಜಿಸೆ ದಯೆಗೆಯ್ದಿಡದ ಕಾಲ ಷಷ್ಠಾಂಗುಳಿಯನು ||
ಕತ್ತರಿಸಿಕೊಂಡುಳುಹಿ ಪೋದ ರಂತ್ಯರ್ಬಳಿಕ |
ಮುತ್ತಿಸಿದ ರಾಹು ತೊಲಗಿದ ಶಶಿವೊಲಿರ್ದ ನವ |
ನೆತ್ತರಿನ ಬಾಧೆಗ ಳ್ನರ ನಿಸ್ಸ ಪುತ್ರನಂ [illegible] ಬೇಡಿಗಳ್ಗೆ || ||೩೪||

ಬಸಿನ ನೆತ್ತರಗಾಯ ಡೆಡದಡಿಯ ವೇದನೆಗೆ ।
ಪಸುಳೆ ಹರಿಹರಿ ಯೆಂದೊರಲ್ದಳುತಿರ ಲ್ಕಣ್ಣೊ ।
ಳೊಸರ್ವ ಬಾಷ್ಪಂಗಳಂ ಕಂಡು ಮಿಗಪಕ್ಕಿಗ ಳ್ಕೊಂದು ಕಡುಶೋಕದಿಂದೆ ॥
ಪಸಿವು ನೀರಡಿಕೆಯುಂ ತೊರೆದಲ್ಲಿ ನಿಂ ದುಪಚ ।
ರಿಸುತಿರ್ದುವಾ ಶಿಶುವನೆಂದೊ ಡೆಲೆ ಪಾರ್ಥ ಕೇ ।
ಳ್ವ ಸುಮತಿಯೊಳಾರ್ತರಂ ನೋಡಿ ಮಿಗೆ ಮರುಗದಿಹ ಮಾನವಂ ಪಾಪಿಯಲ್ತೆ ॥೩೫॥
ಗಂಗೆದರಿ ಕೊಡೆ ವಿಡಿದು ನಿಂದುವು ಬಿಸಿಲ್ಗೆ ನವಿ ।
ಲೆರಕೆಯಂ ಬೀಸಿ ಬಿಜ್ಜಣವಿಕ್ಕಿ ತಂಚೆ ತುಂ ।
ತುರ ನುದಿರ್ಚಿತು ಸಾರಸಂ ಸಲಿಲ ದೊಳ್ನನೆದ ಪಕ್ಕಂಗಳಂ ಬಿದಿರ್ಚಿ ॥
ಮರುಗಿ ಮೆ ಲ್ನುಡಿಯೊ ಳುಪಚರಿಸಿದುವು ಗಿಳಿಗ ಳ ।
ಕ್ಕರೊ ಳಳಿಗ ಳರ್ಭಕನ ರೋದನದ ಕೂ ಡಳುವ ।
ತೆರದೊ ಳ್ಮೊರೆದುವಲ್ಲಿ ಕರುಬ ರಿದ್ದೂರಿಂದೆ ಕಾಡೊಳ್ಳಿ ತೆನಿಸುತೆ ॥ ॥೩೬॥
ನಿಲ್ಲದೆ ನರಳ್ವ ಪಸುಳೆಯು ನಿರ್ಮ ಲಾಸ್ಯಮಂ ।
ಪುಲ್ಲೆಗಳ್ಕಂಡು ಕಾನನಕೆ ಕಾಮಿಸಿ ತಮ್ಮ ।
ಸಲ್ಲ ನೈತರ ಲುಮ್ಮಳಿಸಿ ವಾಹನವ ನರಸಬಂದ ಪೂರ್ಣೇಂದುವೆಂದು ॥
ವಲ್ಲಭ ಸ್ವಾಮಿಯಂ ಬೇಡಿಕೊಳು ತಿರ್ಪುವೆನೆ ।
ಮೆಲ್ಲಮೆಲ್ಲನೆ ಪೊರೆಗೆ ಪೊದ್ದಿ ಬಾಲಕ ನಂಘ್ರಿ ।
ಪಲ್ಲವದ ರುಧಿರಮುಂ ಕುಡಿ ನಾಲಗೆಗಳಿಂದೆ ಮಿಗೆ ಲೇಪನಂಗೈದುವು ॥ ॥೩೭॥
ಕೋಗಿಲೆಯ ನಿಡುಸರಂ ಪಾರಿವದ ಕಲ್ಲುಣಿಸು ।
ಗೂಗೆಗಳ ಕಣ್ದೊಳಸು ಬಕನ ಮೌನದ ಬೆರಗು ।
ನಾಗದ ನಿರಾಹಾರ ಮಳಿಗಳ ಪರಿಭ್ರಮಣ ವಿಭದ ಸೀತ್ಕಾರಂಗಳು ॥
ಪೋಗ ಲಡಿಯಿಡ ಲರಿಯದಾರೈವ ಜನಮಿಲ್ಲ ।
ವಾಗಹನ ಗಹ್ವರದೊ ಳಳುವ ಶಿಶುನಂ ನೋಡ ।
ಲಾಗಿ ಬಂ ಪೆಡೆಗೊಂಡ ದುಃಖಾತಿರೇಕ ಮೆಂಬಂತೆ ಕಾಣಿಸುತಿರ್ದುದು ॥ ॥೩೮॥
ಬಾಲಕನ ರೋದನದ ಕೂಡೆ ಬನದೇವಿಯ ।
ಗರ್ಾಳ ತೀಡಿದೊಡೆ ಘೋರಂಬ ತರುಲತೆಗಳಿಂ ।
ಗೋಳಿಟ್ಟ ರಗ್ನಿ ಜಲ ಭೂ ಗಗನ ವಾಯು ರವಿ ಶಶಿ ಗಳೆಣ್ದೆಸೆವೆಣ್ಗಳು ॥
ಹೇಳಲೇ ನಡವಿಯ ಚರಾಚರಂಗಳ ಜೀವ ।
ಜಾಲಂಗ ಳುರೆ ಮರುಗುತಿರ್ದು ವನಿತರೊಳೊಂದು ।
ಕೋಲಾಹಲದ ಘೋಷಮೆಲ್ಲಿಯುಂ ಕಿವಿಗಿಡಿದು ದಾ ಮಹಾ ಕಾನನದೊಳು ॥ ॥೩೯॥
ದಿನಪ ನುಪಟಳದಿಂದೆ ನೆಲೆಗೆಟ್ಟು ಪಲವು ರೂ ।
ಪನೆ ತಾಳ್ದು ವನವಾಸ ದುರು ತಪದ ಸಿದ್ಧಿಯಿಂ ।
ಘನತೆಯಂ ಪಡೆದು ಮಿಗೆ ಪಗೆಯಾದ ಪಗಲಂ ತೊಲಗಿ ಪಂಧಕಾರಮೆನಲು ॥
ಅನುಪಮದ ಕಾರೊಡಲ ಬೇಡನಡೆ ಬೇಂಟೆಗೆ ವಿ ।
ಪಿನದೊ ಳೈತರುತಿರ್ದು ದಬ್ಬರದ ಬೊಬ್ಬೆಗಳ ।
ನಿನದದಿಂ ಜೀವಿಗಳ ಕೊಲೆಗೆಳಸಿ ದಂತಕನ ದೂತ ಸಂಘಾತವಂತೆ ॥ ॥೪೦॥

ತಪ್ಪತಪ್ಪಲೊಳಲ್ಲಿಗಲ್ಲಿಗೆ ಪಂಜುಗಳಿಸೆವ |
ಕಪ್ಪಕಪ್ಪನೆಯ ಗಿರಿಗಳ ಪರ್ಬುಗೆಗಳಂತೆ |
ಬಪ್ಪ ಬಪ್ಪೆಳನಾಯ್ಗಳಂ ಹಾಸೊಳಾಂತು ಬಂದುದು ಶಬರ ಸೇನೆ ಬಳಿಕ |
ಸೊಪ್ಪುಸೊಪ್ಪುಗಳ ಮೆಳೆಮೆಳೆಗಳಂ ಸೋವುತ್ತೆ |
ತಪ್ಪತಪ್ಪದೆ ಶರಶರಂಗಳಂ ತೆಗೆದೆಚ್ಚು |
ತೊಪ್ಪತೊಪ್ಪನೆ ಮೃಗಮೃಗಂಗಳಂ ಕೆಡಹಿದ ಕರ್ಾನನದೊಳೇಪೇಳ್ವೆನು ‖ ‖೪೧‖
ಚಾಪಬಾಣಂಗಳೇತಕೆ ಬೇಂಟೆ ಗಂಗಜನ |
ಚಾಪಬಾಣಂ ಗಳಿರ್ದಪು ವೆಮ್ಮೊಳೆಂಬೊ ಲಿಹ |
ಚಾಪಲ ಭ್ರೂಲತೆಯ ಚಂಚ ಲಾಪಾಂಗದ ಪುಳಿಂದಿಯ ರ್ತಮ್ಮ ತಮ್ಮ ‖
ಓಪರಂ ಬಳಿವಿಡಿದು ಬರುತಿರ್ದ ರಾಗ ಸ |
ಲ್ಲಾಪದಿಂ ದೆಸೆವ ಹರಿ ಹರಿಣ ಕರಿ ಚಮರಿಗಳ |
ರೂಪಂಗಳವಯವದೊ ಳಾರಾಜಿಸ ಲ್ಕವಕೆ ತಾವೆ ದೇಹಂಗಳೆನಲು ‖ ‖೪೨‖
ಸೊಕ್ಕಾನೆಗಳ ಸೊಗಡ ಸುರ್ವ ಕತ್ತುರಿಯ ಮೃಗ |
ದಿಕ್ಕೆಗಳ ಸಲ್ಲಲ್ಲಿ ಪುಣುಗಿನ ಜವಾದಿಗಳ |
ಬೆಕ್ಕುಗಳ ಬಿಡೆಯೆ ದಾಡುಂಬೊಲನ ನರಸುವ ಕಿರಾತ ರಂಗಚ್ಛವಿಗಳು ‖
ಅಕ್ಕರಿಂ ದವರವರ ತನು ಪರಿಮಳಂಗಳ್ಗೆ |
ತುಕ್ಕು ವೆಳೆದುಂಬಿಗಳ ಬಳಗಂಗ ಳೆಂಬಂತೆ |
ಪೊಕ್ಕುಪೊ ಕ್ಕಡವಿಯೊ ಳ್ಕಣ್ಗೆ ಕಾಣಿಸುತಿರ್ದುವೇನೆಂಬೆ ನಚ್ಚರಿಯನು ‖ ‖೪೩‖
ಇದೆ ಪಂದಿ ಕೆದರಿದ ನೆಲಂ ನೋಡಲಿದೆ ದಂತಿ |
ಕವಡಿದ ಕೊಳಂ ತೋರಲಿದೆ ಪುಲಿಯುಗಿದ ಮೃಗವ |
ಮಿದು ಕಿತ್ತಲಿದೆ ಸಿಂಗಮೆರಗಿ ದಾನೆಯ ತಲೆಯ ಮುತ್ತುದುರಿ ಸೆತ್ತರೊಡನೆ ‖
ಇದೆ ವನಮಹಿಷ ಸುದ್ದಿಕೊಂಡ ಮರದಿಗು ಡಿತ್ತ |
ಲಿದೆಕೊ ಸಾರಂಗ ಮಿಕ್ಕಡಿಗೈದ ಪಾವಿತ್ತ |
ಲಿದೆ ಪುಲ್ಲೆಗಳ ಪಕ್ಕೆ ಮರಿಗಳಕ್ಕೆಗಳೆಂದು ಪರಿವ ರ್ಪುಳಿಂದರಂದು ‖ ‖೪೪‖
ನಡೆ ಪಜ್ಜೆವಿಡಿ ಪೋಗು ತಡೆ ನಿಲ್ಲು ಜಡಿ ಬೊಬ್ಬೆ |
ಗುಡು ಪೊದರೊಳಡಗು ಕೈಗಿಡದಿರಿಸು ನಿಡು ಸರಳ |
ತುಡು ಕೆಲಕೆ ಸಿಡಿಯದಿರ್ಪೊಡೆ ಸಾರ್ಚು ತುಡುಕು ಮೊಗಸಡಗು ಮರಕಡರೊಡರ್ಚು ‖
ಅಡಗಿ ಪೊಯ್ಯಡಿ ಕೋಲನಿಡು ಮುಂದುಗಡೆ ನಾಯ |
ಬಿಡು ಕೂಡೆ ಪಡಿತಳಿಸು ಸೆಡೆಯದಿ ರ್ಕೆಡಪೆಂಬ |
ನುಡಿಗ ಳಡಿಗಡಿಗೆ ಕಿವಿಗಿಡಿದು ವೆಳ್ಳಿಡೆಯೊಳಂ ದಡವಿಯೊ ಳ್ಕಡುಪೊಸತೆನೆ ‖೪೫‖
ಉಬ್ಬಿದುರದೇರ ದೆಗೆಮೊಡಲ ಬಾಗಿದ ಬೆನ್ನ |
ಹಬ್ಬುಗೆಯ ಪಚ್ಚಳದ ಸೆಳೆದ ಬಾಲದ ಕೊನೆಯ |
ಕೊಬ್ಬಿದ ಕೊರಳ ಸಣ್ಣ ಜಂಘೆಗಳ ಕೊಂಕುಗುರ ಮುಡಿಗಿವಿಯ ಕಿಡಿಗಣ್ಗಳ ‖
ಪೆಬ್ಬಲ್ಲ ಬಿಡುವಾಯ ಜೋಲ್ವ ಕೆನ್ನಾಲಗೆಯ |
ಗಬ್ಬಿನಾಯ್ಗಳ ಹಾಸ ನುಗಿದು ಬಿಡೆ ಪಂದಿಗಳ |
ನಬ್ಬರಿಸಿ ತುಡುಕಿದುವು ಕೇಸರಿಗಡರ್ದು ಮೇಲ್ವಾಯ್ದು ಪುಲಿಯಂ ಕೊಂದುವು ‖೪೬‖

ಬಿಡದೆ ಕುತ್ತುರುಗಳಂ ಸೋವಿದ ರ್ತೀವಿದ |
ಗಿಡಗಳ ಪೊದರ್ಗಳಿಂ ದೆಬ್ಬಿಸಿದ ರುಬ್ಬಿಸಿದ |
ರೊಡನೊಡನೆ ಖಗ ಮೃಗವ್ರಾತಮಂ ಪಾತಮಂ ಮಾಡಿದ ರ್ಕೂಡೆಕೂಡೆ ||
ಸಿಡಿಗುಂಡು ಬಡಿಕೋಲ್ಗ ಳುರುಬೆಯಿಂ ದಿರುಬೆಯಿಂ |
ದಿಡು ಗವಣೆ ನೇಣುರುಲ್ಗೊಲೆಗಳಿಂ ಬಲೆಗಳಿಂ |
ಜಡಿದಾರ್ದ ಬೊಬ್ಬೆ ಯುಬ್ಬರದಿಂದೆ ಶರದಿಂದೆ ಕಾಡೊಳ್ಕಿರಾತ ರಂದು || ||೪೭||
ಕುತ್ತುರೊ ಳ್ಪುದುಗಿರ್ದ ಪುಲಿ ಪೊರಮಡ ಲ್ಕಂಡು |
ಕಿತ್ತು ಕೂರ್ಗಣೆಗಳಂ ಪೂಡಿ ಲುಬ್ಧಕ ರಿರ್ವ |
ರಿತ್ತತ್ತಲಿರ್ದು ಸರಿಸ ದೊಳೆಚ್ಚೊ ಡವದೊಡಲ ನುಚ್ಚಳಿಸಿದಂಬು ತಾಗಿ ||
ಇತ್ತಂಡಮಂ ವ್ಯಾಘ್ರದೊಡ ನಿಳೆಗುರುಳ್ದು ದು |
ವ್ವೃತ್ತದಿಂ ದುಭಯ ಜನಮೇಕಾರ್ಥ ಕೆಳಸಿದೊಡೆ |
ಮತ್ತೆ ಲೇಸಾದಪುದೆ ಜಗದೊಳೀ ಮೂವ ರುಪಹತಿ ಚಿತ್ರಮಲ್ಲೆಂದನು || ||೪೮||
ನಳಿತೋಳ ಬಲ್ಮೊಲೆಯ ಸೊಕ್ಕು ಜವ್ವನದ ಪರಿ |
ಮಳ ಗಾತ್ರ ದಳಿಕುಂತಳದ ಮೆಲ್ನಡೆಯ ಶಬರಿ |
ಹೆಳುವದೊ ಳ್ತನ್ನ ಕಾಂತನ ಬಳಿಯೆ ಬರಲೊಂದು ಸಿಂಗ ಮತಿಭರದೊಳೆರಗಿ ||
ಬಳಿಕವಳ ಮಧ್ಯಮಂ ಕಂಡು ಸಾಮಾನ್ಯಮಂ |
ತಳೆದು ಮತ್ತಾಕೆಯ ಚಲಾಪಾಂಗಮಂ ನೋಡಿ |
ಮುಳಿವಡರಲಾ ಕೇಸರಿಯನೆಚ್ಚು ಕೆಡಹಿದಂ ಕ್ರೋಧದಿಂ ದಾವ್ಯಾಧನು || ||೪೯||
ಮರಿಗೆ ಮರೆಯಾಗಿ ಮೈಯೊಡ್ಡಿ ಮಡಿದುವು ಕೆಲವು |
ಬರಿಯ ಬಿಲ್ದನಿಗೆ ರಮಣನ ತಾಗಿತಂಬೆಂದು |
ನೆರೆ ಮೋಹದಿಂ ಪೊರಳ್ದುವು ಕೆಲವು ರಾಪುಗೊಂಡೊಂದಿ ದಿನಿಯನ ನಗಲ್ದು |
ಮರುಗಿ ಮದನಾಸ್ತ್ರದಿಂದಿರದೆ ಬಿದ್ದುವು ಕೆಲವು |
ಬಿರುಸರಲ್ತಮ್ಮ ಕೂರ್ಪರ ಮೇಲೆ ಬರಲದಕೆ |
ಗುರಿಯಾಗಿ ತೊರೆದು ವಸುವಂ ಕೆಲವು ಪುಲ್ಲೆಗಳ್ಬೇಡ ರಿಸು ವಿಸುಗೆಯಿಂದೆ ||೫೦||
ಕರಿಯ ಕುಂಭಸ್ಥಳದ ಮುಕ್ತಾಫಲಂಗಳಂ |
ಬರುಹಿಗಳ ಗರಿಗಳಂ ಚಮರಿ ವಾಲಂಗಳಂ |
ದ್ವಿರದ ನವದಂತಾಂಕುರಂಗಳಂ ಮೃಗಸಾರ ಮೃತ್ತಿಕೆಗಳಂ ಬನದೊಳು ||
ಇರದೆತ್ತಿಕೊಂಡು ಬರುತಿರ್ದಪರೊ ಶಬರಿಯು |
ರ್ದರಹಾಸ ಕಬರಿಕುಂತಳ ಕುಚ ಶ್ಯಾಮ ತನು |
ಪರಿಮಳಂಗಳನಾಂತು ಬಂದಪರೊ ತಿಳಿಯಲರಿದೆಂಬಂತೆ ಕಾಣಿಸಿದರು || ||೫೧||
ಪುಲಿ ಕರಡಿ ಕರಿ ಸಿಂಗ ಸಾರಂಗ ಮರಿ ಪಂದಿ |
ಮೊಲ ಪುಲ್ಲೆ ಕಾಡೆಮ್ಮೆ ಚಮರಿಗಳ್ಮೊದಲಾದ |
ಪಲವು ಮೃಗಜಾತಿಯಂ ಕ್ರೌಂಚ ಶಿಖಿ ತಿತ್ತಿರಿ ಕಪೋತಾದಿ ಪಕ್ಷಿಗಳನು ||
ಕೊಲುತ್ತೆ ಬಹ ಜೀವರ್ಗೆ ಸಿಕ್ಕಿ ಮೋಡಿದು ಮೊಂದೆ |
ಬಳಿ ಕುರಂಗಕನೆಂಬ ಮೊರೆ ಕಂಡು ತನ್ನ ಜಾ |
ಪಲ ಪಯುದಿಂ ಕದರ ಬಣಿಸಂದ ನಯನಂಗಳಿಂ ಬಿಲ್ಲಿಡಿದು ಕೊಲ್ವೆನೆಂದು || ||೫೨||

ಆ ಕುಳಿಂದಂ ದುಷ್ಟಬುದ್ಧಿಯ ನಿಯೋಗದಿಂ |
ಪಾಕಾನನದ ನಾಡ ವಳಿತಮಂ ಕೈಕೊಂಡು |
ಭೂಕಾಂತನಾಗಿಹಂ ಚಂದನಾವತಿಯೆಂಬ ಪುರದೊಳಪ ನಕ್ಷತ್ರಯಿಂದೆ ||
ಈ ಕಿರಾತಪ್ರಕರದೊಡನೆ ಪೊರಮಟ್ಟು ಮೃಗ |
ಜಾ ಕಾಮುನಾಗಿ ಬಂದಿರ್ದವಂ ಸಿಡಿದೋಡು |
ವಾ ಕುರಂಗದ ಬೆನ್ನ ನೈದಿದಂ ತೇಜಿಯ ಜವಂ ಗಾಳಿಯಂ ಮುಂಚಲು || ||೫೩||
ಹರಿಣನಂ ಬೆಂಬತ್ತಿ ಬರಲಾ ಕುಳಿಂದಕಂ |
ಹರಿಯುನೇ ಜಪಿಸು ತಳುತಿಹ ಬಾಲನಂ ಕಂಡು |
ಹರಿಯ ನಲ್ಲಿಯೆ ನಿಲಿಸಿ ನೋಡಿ ನಿಜಶಿರವ ನಲ್ಲಾಡಿ ತಾಂ ಮೃಗದ ಕೊಲೆಗೆ ||
ಹರಿತಂದ ಪಾಪ ಮತಿಪುಣ್ಯ ಮೊದನಿಸಿತು ಸುವಿ |
ಹರಿಸುವೊಡೆ ಶಿವಶಿವಾ ಪೊಸತೆಂದು ಹರ್ಷದ ಲ |
ಹರಿಯೊ ಳೋಲಾಡಿದಂ ಕಡವರವ ನೆಡಹಿ ಸಂಧಿಸಿದ ಕಡು ಬಡವನಂತೆ || ||೫೪||
ಇಳಿದು ನಿಜವಾಜಿಯಂ ಸಾರ್ದು ನೈದಪನಿ ಬರಿ |
ಸೆಳೆದು ಬಿಗಿಯಪ್ಪಿ ಕಂಬನಿ ದೊಡೆದು ಕೂಡೆ ಸ |
ಗ್ಗಳೆಯ ನೀರಿಂದೆ ಕಾಲ್ದುದಿಯೊ ಳ್ಬಸಿವ ನೆತ್ತರಂ ತೊಳೆದು ಮೋಹದಿಂದೆ ||
ಗಳದೊಳುಬ್ಬುವ ಗದ್ಗದಂಗಳಂ ನೈತಿಟ್ಟು |
ತಿಳಿಪಿ ಲಾಲಿಸಿದಂ ಕುಳಿಂದಕಂ ಸೌಭಾಗ್ಯ |
ನಿಳಯ ಪರಕೆಯ ವಸುವ ನೊದವಿ ದಗ್ಗದ ಪುಣ್ಯದೊಡಲಸುವನಾ ಸಿಸುವನು ||೫೫||
ಎಡ ಬಲದೊಳಿಹ ತನ್ನವರೊಳಾ ಕುಳಿಂದಕಂ |
ನುಡಿದ ನೀಬಾಲಕಂ ತನ್ನ ತಾಯ್ತಂದೆಗಳ |
ನೊಡಹುಟ್ಟಿದವರ ಹಂಬಲಿಸದೆ ಮುರಾರಿಯಂ ನೆನೆವ ನವರಿಂದಿವಂಗೆ ||
ಒಡೆಯನಚ್ಯುತನಾದ ಕಾರಣಂ ಮೃತನಾಗ |
ದಡವಿಯೊ ಳ್ಜೀವಿಸಿದ ನೆಲ್ಲರ್ಗೆ ತನುಜರಂ |
ಕುಡುವವಂ ಕೃಷ್ಣನೈಸಲೆ ತನಗೆ ಮಕ್ಕಳಿ ಲ್ಲೀತನೇ ಸುತನೆಂದನು || ||೫೬||
ಪತ್ತುವಿಧಮುಂಟು ಸುತ ರದರೊಳೌರಸ ಪುತ್ರ |
ನುತ್ತಮಂ ಮೇಣಾತನಿಲ್ಲದೊಡೆ ಬಳಿಕ ಮೊಂ |
ಬತ್ತು ಬಗೆಯೊಳಗೊಂದು ತೆರದ ಮಗ ನಾದೊಡಂ ಬೇಕಲಾ ಮಾನವರ್ಗೆ ||
ತತ್ತನಯರೊಳ್ಪತನಗೆ ತಾನೆ ದೊರಕೊಂಡವಂ |
ತತ್ತನಂದನ ನಿವಂ ತನಗೆಂದವಂ ಮುದ ದೊ |
ಳೆತ್ತಿ ಕೊಂಡಶ್ವವನಡರ್ದು ಪರಿಜನ ಸಹಿತ ನಿಜಪುರಕೆ ಬರುತಿರ್ದನು || ||೫೭||
ಮೃಗಯಾ ವ್ಯಸನದಿಂದೆ ಕಾನನಕೆ ತಾಂ ಕೃಷ್ಣ |
ಮೃಗದ ಕೂ ಡೈದಿದೊಡೆ ದೊರಕೊಂಡ ನೀಕೃಷ್ಣ |
ಮೃಗಭಾವ ದರ್ಶಕಂ ಪಾಪಕೆಳಸಿದೊಡಾಯ್ತು ಪುಣ್ಯಮೆನುತ ಲ್ಲಿಮಡಿವ ||
ಮೃಗಜಾತಿಗಳ ನವರವರ್ಗೆ ಪೆಚ್ಚಿಸಿ ನೆರೆವ |
ಮೃಗಜೀವಿಗಳ ನೆಲ್ಲರಂ ಕಳುಹಿ ನಿಜಪುರಕೆ |
ಮೃಗಧರನೊಲಿಸಿವ ಶಿಶುವಂ ಕೊಂಡು ಪರಿಜನದೊಡನೆ ಬಂದ ನುತ್ಸವದೊಳು ||೫೮||

ಮುಂದೆ ಪರಿತಂದು ಚರ ರರುಪೆ ಸಿಂಗರಿಸಿದ |
ರ್ಚಂದನಾವತಿಗೆ ಸಂಭ್ರಮದಿಂ ಕುಳಿಂದಕಂ |
ಬಂದು ನಿಜಭವನಮಂ ಪುಗ ಲಿದಿರ್ವಂದು ನಲಿ ದವನ ಸತಿ ಮೇಧಾವಿನಿ ||
ಕಂದನಂ ತೆಗೆದೆತ್ತಿಕೊಳುತೆ ಬಿಗಿಯಪ್ಪಿ ಸಾ |
ನಂದದಿಂ ಪೊರೆಯೇರಿದ ಳ್ತನ್ನ ಬಂಜೆತನ |
ಮಿಂದು ಪೋದುದು ಪುತ್ರವತಿಯಾದೆ ನೆನ್ನ ಪುಣ್ಯದ್ರುಮಂ ಫಲಿಸಿತೆಂದು || ||೫೯||
ಬಳಿಕ ನಗರದೊಳಾದು ದುತ್ಸವಂ ಪಾರ್ವರ್ಗೆ |
ನಿಳಿಯದ ಸಮಸ್ತ ವಸ್ತುಗಳ ನೊಲಿದಿತ್ತ ನೊಂ |
ದುಳಿಯದೆ ವಿಹಿತ ಜಾತಕರ್ಮಮಂ ಮಾಡಿಸ ಲ್ಬುಧ ರುತ್ತರೋತ್ತರವಸು ||
ತಿಳಿದು ನಿರ್ಮಲ ಮುಖಾಂಬುಜದಿಂ ಶಶಾಂಕನಂ |
ಕಳಕಳಿಸಿ ನಗುವ ನದರಿಂ ಚಂದ್ರಹಾಸ ನೆಂ |
ದಿಳೆಯೊಳೀತಂಗೆ ಪೆಸರಾಗಲೆಂ ದುಚ್ಚರಿಸಿ ನಾಮಕರಣಂಗೈದರು || ||೬೦||
ಪಸುಳೆತನದಂದಿಂದೆ ವೃದ್ಧಾಪ್ಯದನ್ನೆಗಂ |
ಬಿಸಜನಾಭನ ಭಕ್ತಿ ದೊರೆಕೊಳದ ಮನುಜರಂ |
ನಸು ನಗುವಧವಳದೊಳ್ಪಿಂ ಚಂದ್ರಹಾಸ ನಿವನಖಿಳ ಭೂಮಂಡಲದೊಳು ||
ಪಸರಿಸುವ ಜಸದ ಬೆಳ್ಪಿಂ ಚಂದ್ರಹಾಸ ನಿವ |
ನಸಮ ನಕ್ಷೀಣ ನಕಳಂಕ ನತಿಶಾಂತ ನೆಂ |
ಬೆಸೆವ ಸದ್ಗುಣದೇಳ್ಗೆಯಿಂ ಚಂದ್ರಹಾಸನಿವ ನಹುದೆಂದು ಬುಧರೊರೆದರು || ||೬೧||
ಮಂಜು ಮಹಿಮಾಸ್ಪದಂ ಚಾರುವೃತ್ತಂ ಕಲಾ |
ಪುಂಜಂ ಸದಾ ನಭೋಗಂ ಕುವಲಯಪ್ರಿಯಂ |
ರಂಜಿಸುವ ರಾಜನೆನ್ನ ಪ್ರೋಲಾದೊಡಂ ಮಿತ್ರತೇಜ ಕಳವಳಿದು ಪಗೆಯ ||
ಭಂಜನೆಗೆ ಸಿಕ್ಕಿ ಬಡತನವಟ್ಟು ಕಂದಿ ಪಳಿ |
ವಂ ಜಗವರಿಯೆ ಪೊತ್ತನೆಂದು ಬಿಡ ದಮೃತಾರ್ಚಿ |
ಯಂ ಜರೆದು ನಗುವ ನವರಿಂ ಚಂದ್ರಹಾಸ ನಿವನಹ ನೆನೆ ಪೆಸರ್ವೆರೆದುದು || ||೬೨||
ಕತ್ತಲೆಯ ಮನೆಗೆ ಮಣಿದೀಪವಾದಂತೆ ಸಲೆ |
ಬತ್ತಿದ ಸರೋವರಕೆ ನವಜಲ ಮೊದವಿದಂತೆ |
ಬಿತ್ತರದ ಕಾವ್ಯರಚನೆಗೆ ದೇವತಾಸ್ತುತಿ ನೆಗಳ್ದಂತೆ ಭೂತಳದೊಳು ||
ಮತ್ತೆ ಸಂತಾನಮಿಲ್ಲದ ಕುಳಿಂದನ ಬಾಳ್ಕೆ |
ಗುತ್ತಮ ಕುಮಾರನಾದಂ ಚಂದ್ರಹಾಸನೆನ |
ಲುತ್ತರೋತ್ತರ ಮಪ್ಪುದಚ್ಚರಿಯೆ ಸುರಪುರದ ಲಕ್ಷ್ಮೀವರನ ಭಕ್ತರು || ||೬೩||

ಸಂಧಿ ೨೮ ಕ್ಕೆ ಪದ್ಯಗಳು ೧೫೬೮ ಕ್ಕೆ ಮಂಗಳಮಸ್ತು.

## ಇಪ್ಪತ್ತೊಂಬತ್ತನೆಯ ಸಂಧಿ.

ಸೂಚನೆ॥ ಮಂತ್ರಿ ಮತ್ಸರದಿಂದೆ ಮುಂದೆ ತಪ್ಪುವ ದೈವ ।
ಯಂತ್ರಭೇದವ ನರಿಯ ದಿಂದುಹಾಸನ ಮೇಲೆ ।
ತಂತ್ರಮಂ ಪಣ್ಣಿ ಕೊಲಿಸುವನೆಂದು ಕಳುಹಿದಂ ಕುಂತಳೇಂದ್ರನ ನಗರಿಗೆ ॥

ಧ್ರುವ ನಂಬರಸ್ಥಳದೊಳಸ್ಮತ್ಪಿತಾಮಹಂ ।
ವಿವರದೊಳ್ವಿಭೀಷಣಂ ಲಂಕೆಯೊಳ್ಪಾತಾಳ ।
ಭುವನದೊಳ್ಬಲಿ ವಿಷ್ಣುಭಕ್ತರಂ ಕಾಣ್ಬರಾ ರೀಚಂದ್ರಹಾಸನಿಂದೆ ॥
ಅವನಿ ಪಾವನ ಮಪ್ಪುದಾತನಂ ಸಂಧಿಸುವ ।
ಲವಲವಿಕೆಯಾ ಗಿರ್ಪುದೆಲೆ ತಪೋಧನ ತನಗೆ ।
ವಿವರಿಸೀತನ ಕಥೆಯನೆಂ ದರ್ಜುನಂ ಕೇಳ್ದೊಡಾ ಮುನಿಪ ನಿಂತೆಂದನು ॥ ॥೧॥
ಆಲಿಸೆಲೆ ಫಲುಗುಣ ಕುಳಿಂದಕನ ಭವನದೊಳ್ ।
ಬಾಲಕಂ ಪೆರ್ಚುವ ಸುಧಾಂಶು ಕಳೆಯಂ ನಗುವ ।
ಲೀಲೆಯಿಂ ಚಂದ್ರಹಾಸಂ ತಪ್ಪನೆಂಬಂತೆ ದಿನದಿನಕೆ ವರ್ಧಿಸುತಿರೆ ॥
ಮೇಲೆಮೇ ಲೆಸೆದುದಾ ಪೊಳಲ ಸಿರಿ ವಿಮಲ ಗುಣ ।
ಶೀಲದಿಂ ಮೆರೆದುದೆಲ್ಲಾ ಜನಂ ಬಿಡದೆ ಕೊಡ ।
ವಾಲಂ ಕರೆದು ವಾಕ ಳುತ್ತುಬಿತ್ತದೆ ಬೆಳೆಯುತೊಡಗಿ ತಿಳಿ ಮಳೆಗಳಿಂದೆ ॥ ॥೨॥
ಸೂಚಿತದ ಪೂರ್ವಜನ್ಮದ ಪುಣ್ಯಫಲದಿಂದ ।
ಯಾಚಿತದೊಳನುಪಮದ ಶಿಶುನಿಧಾನಂ ತನಗೆ ।
ಗೋಚರಿಸಿತೆಂದು ನಲಿ ದಾಕುಳಿಂದನು ಮವನ ರಾಣಿಯುಂ ದಿನದಿನದೊಳು ॥
ಲೋಚನಂ ತಣಿಯೆ ನೋಡುತೆ ಹರ್ಷವಾರಿಧಿಯ ।
ವೀಚಿಯೊಳ್ಮುಳುಗಾಡಿ ಪುತ್ರವಾತ್ಸಲ್ಯದಿಂ ।
ದಾ ಚಂದ್ರಹಾಸ ನಭ್ಯುದಯಮೊಳ್ಪೆರ್ಚಿದ ರನೇಕಸಂಪದ ಮೊದವಲು ॥ ॥೩॥
ಲಕ್ಷಣದೊಳೆಸೆವ ಸುಕುಮಾರನಂ ನಗರಿ ಗ ।
ಧ್ಯಕ್ಷನಾಗಿಹ ಕುಳಿಂದಂ ಕೆಲವುದಿನದ ಮೇ ।
ಲಕ್ಷರಾಭ್ಯಾಸ ಕಿರಿಸಿದೊಡೆ ಹರಿ ಯೆಂಬೆರಡುವರ್ಣಮಲ್ಲದೆ ಪೆರತನು ॥
ಅಕ್ಷಿಯಿಂ ದೀಕ್ಷಿಸದೆ ವಾಚಿಸದಿರಲ್ಕೆ ಗುರು ।
ಶಿಕ್ಷಿಸಿ ಕನಲ್ದು ಬರೆಯೆಂದೊಡಂ ಕೇಳದಿರೆ ।
ತತ್ಕ್ಷಣದೊ ಳಾತನೈತಂ ದವನ ತಾತಂಗದಂ ಪೇಳ್ದೊಡಿಂತೆಂದನು ॥ ॥೪॥
ಈತನೇಕಾದಶಿಯೊ ಳುಪವಾಸಮಂ ಮಾಳ್ಪ ।
ನೀತನಂ ಕಂಡು ನಾವೆಲ್ಲರು ಮನುಸರಿಸುವೆ ।
ನೀತ ನಚ್ಯುತಭಕ್ತ ನೀತನಿಂದೆಸೆವ ಗಪ್ಪುದಭ್ಯುದಯ ಮಿಹಪರದೊಳು ॥
ಈತನಲ್ಲದೆ ಪೆರರ ತನುಜಾತರಿಲ್ಲ ತನ ।
ಗೀತನಲ್ಲದೆ ಜೀವವಾಗಿರ್ಪ ನಾ ನವರಿ ।
ನೀತನಂತಾದೊಡಿರ ಲೀತಂಗೆ ಶಿಕ್ಷೆ ಬೇಡೆಂದಂ ಕುಳಿಂದನಂದು ॥ ॥೫॥

ಅಂದುಮೊದಲಾಗಿ ತನ್ನಿಚ್ಛೆಯಿಂ ಚಂದ್ರಹಾ|
ಸಂ ದಾನವಾರಿಯಂ ಬಿಡದೆ ಬಾಲಕ್ರೀಡೆ|
ಯಿಂದುತ್ಸವಂಗಳಂ ಮಾಡಿ ಕೆಳೆಯರ್ವೆರಸಿ ಕೊಂಡಾಡಿ ಭಕ್ತಿಯಿಂದೆ ||
ತಂಡು ಫಲವರ್ಗಮಂ ಪೂಜೆಗೈ ದುಪವಾಸ|
ದಿಂದೆ ಜಾಗರಣದಿಂ ದೇಕಾದಶೀ ವ್ರತವ|
ನಂದದಿಂ ದಾಚರಿಸ ನಖಿಳ ಜನ ಕುಪದೇಶಿಪಂತೆ ಹರಿಮಹಿಮೆಗಳನು || ||೬||
ಮೆಲ್ಲ ನಂತಿರ ಲೆಂಟನೆಯ ಬರಿಸವಾಗಲ್ಕೆ|
ನಿಲ್ಲ ದುಪನಯನಮಂ ವಿರಚಿಸಿ ಕುಳಿಂದಂ ಸ|
ಮ್ಮುಲ್ಲಾಸಮಂ ತಾಳ್ದ ಸಂಗಸಹಿ ತಖಿಳ ವೇದಂಗಳಂ ನೀತಿಗಳನು ||
ಸಲ್ಲಲಿತ ಶಬ್ದಾದಿ ಶಾಸ್ತ್ರಸಿದ್ಧಾಂತಂ ಗ|
ಳೆಲ್ಲಮಂ ಗುರುಮುಖದೊ ಳಧಿಕರಿಸಿ ಬೇಕಾದ|
ಬಿಲ್ಲ ವಿದ್ಯೆಯನರಿದು ಗಜ ತುರಗ ದೇರಾಟದೊ ಳ್ಚತುರನಾದ ನವನು || ||೭||
ವಿದಿತ ವೇದಾರ್ಥಮಂ ವಿಷ್ಣುವೆಂದರಿದು ಬಹು|
ವಿಧ ಶಾಸ್ತ್ರತತಿಗೆ ಹರಿ ಗತಿಯೆಂದು ತಿಳಿದು ತಾ|
ನಧಿಕರಿಸಿ ಬಳಿಕ ನಿಜಭಕ್ತಿ ಚಾಪಕೆ ಸತ್ವ ಗುಣವ ನಳವಡಿಸಿ ತನ್ನ ||
ಸುಧಿಯ ಶರಮಂ ಪೂಡಿ ಕೃಷ್ಣನಂ ಗುರಿಮಾಡಿ|
ವಿಧುಹಾಸ ನನುಪಮ ಧನುರ್ವಿದ್ಯೆಯಂ ಜಗದೊ|
ಳಧಿಕತರವಾಗೆ ಸಾಧಿಸಿ ಪರಮಭಾಗವತ ಕಲೆಗಳಿಂ ದೆಸೆದಿರ್ದನು || ||೮||
ಷೋಡಶಪ್ರಾಯದೊ ಳವಂ ಪ್ರಬಲ ಬಲನಾಗಿ|
ಮೂಡಿದಗ್ಗಳಿಕೆಯಿಂ ದೈದೆ ರಥಿಕರ್ಗಳಂ|
ಕೂಡಿಕೊಂಡೈದಿ ನಿಜತಾತಂಗೆ ಮಲೆವ ಮನ್ನೆಯರೆಲ್ಲರಂ ಘಾತಿಸಿ ||
ಮಾಡಿದಂ ದಿಗ್ವಿಜಯಮಂ ಕುಳಿಂದಕ ನಾಳ್ವ|
ನಾಡಲ್ಲ ದೆಣ್ದೆಸೆಯ ಸೀಮೆಗಳ ನೊತ್ತಿದಂ|
ಪೂಡಿಸಿದ ನವರವರ ಮನೆಗಳ ಸುವಸ್ತು ಜಾಲಂಗಳಂ ತನ್ನ ಪುರಕೆ || ||೯||
ಹರಿಯ ನಾರಾಧಿಸದೆ ರಾಜ್ಯಮದದಿಂ ಸೊಕ್ಕಿ|
ದರಿಭೂಪರಂ ಗೆಲ್ದು ಮಣಿ ಕನಕ ಮುಕ್ತಾಳಿ|
ಕರಿ ತುರಗ ಮೊದಲಾದ ಮುಖ್ಯವಸ್ತುಪ್ರತತಿ ಸಹಿತ ಪಟ್ಟಣಕೆ ಬರಲು ||
ಪುರದ ಸಿಂಗರದ ಮಂಗಳವಾದ್ಯರವ ದಬಳೆ|
ಯರ ಸೊಡ ರ್ವೆಳಗಿ ನಾರತಿಗಳ ಮಹೋತ್ಸವದ|
ಸಿರಿಯೊ ಳ್ಕುಳಿಂದಂ ಕುಮಾರನ ನಿದಿರ್ಗೊಳಿಸಿ ಮತ್ತೆ ಕಾಣಿಸಿಕೊಂಡನು || ||೧೦||
ತಾಯಿ ತಂದೆಗಳೀಗ ಳಿಂದಿರಾದೇವಿ ನಾ|
ರಾಯಣ ರ್ತನಗೆಂದು ಭಾವಿಸಿ ನಮಿಸ ಲವ|
ರ್ಪ್ರಿಯದಿಂ ತನಯನಂ ತೆಗೆದಪ್ಪಿದ ರ್ಬಳಿಕ ಪುರವೀಧಿಯೊ ಳ್ಬರುತಿರೆ ||
ಆಯತಾಕ್ಷಿಯರಾಗ ಳಲರ್ಗಳಂ ಚೆಲ್ಲಿದ|
ರ್ಕಾಯಜಾಕೃತಿಯೊ ಳೈತಹ ಚಂದ್ರಹಾಸನ ಪಿ|
ಡಾಯಮಂ ನೋಡುವ ಕಟಾಕ್ಷದ ಮರೀಚಿಗಳ ವೀಚಿಗಳ ವಿಕಿರದೊಡನೆ || ||೧೧||

ನಿಳಯಕ್ಕೈತಂದ ನುತ್ಸವದಿಂ ಕುಳಿಂದಕಂ ।
ಬಳಿಕ ತನ್ನಾಧಿಪತ್ಯವ ನಾತ್ಮಜಂಗೆ ಮುಂ ।
ಗಳ ಮುಹೂರ್ತದೊಳಿತ್ತು ಸಂದನಿಂ ಚಂದ್ರಹಾಸಂ ಪಾಲಿಸುವ ನಿಳೆಯನು ॥
ತುಳುಕಾಡಿ ತಾನಾಡ ಸಿರಿ ಚಂದನಾವತಿಯು ।
ಪೊಳಲ ಸೌಭಾಗ್ಯ ಮಭಿವರ್ಧಿಸಿತು ವೈಷ್ಣವಂ ।
ಬೆಳವಳಿಗೆಯಾದು ದೆಲ್ಲಾ ಜನದೊಳಾಚಾರ ಗುಣ ದಾನಧರ್ಮದಿಂದೆ ॥ ॥೧೨॥
ದಶಮಿಯ ಮಹೋತ್ಸವಂ ಪೆರ್ಚಿ ತೇಕಾದಶಿ ಯೊ ।
ಳಶನಮಂ ತೊರೆದ ರಚ್ಯುತ ಪರಾಯಣರಾಗಿ ।
ನಿಶಿಯೊಳ್ನಿರಂತರಂ ನಿದ್ರೆಯುಂ ಬಿಟ್ಟರಾ ಮರುದಿನಂ ದ್ವಾದಶಿಯೊಳು ॥
ಕುಶಶಯನ ಪೂಜೆಯಂ ಮಾಡಿ ಭುಂಜಿಸರಿಂ ತ ।
ಳಿಶಯಮಾದುದು ಮೇಲೆ ಮೇಲೆ ಮಾಧವ ಭಕ್ತಿ ।
ವಿಶದಗುಣನಿಧಿ ಚಂದ್ರಹಾಸನಾಜ್ಞೆಯೊಳವನ ದೇಶದ ಸಮಸ್ತ ಜನಕೆ ॥ ॥೧೩॥
ಜಲಜಾಕ್ಷ ಭಕ್ತಿಯಿಂ ಪ್ರಹ್ಲಾದನಾಗಿ ನಿ ।
ಶ್ಚಲಹರಿಧ್ಯಾನದಿಂ ಧ್ರುವನಾಗಿ ಸತ್ವದಿಂ ।
ಬಲಿಯಾಗಿ ಶಾಂತತ್ವದಿಂ ವಿಭೀಷಣನಾಗಿ ವೈಷ್ಣವಾಭರಣನೆಂಬ ॥
ಕಲಿಯಿಂದೆ ಮಹಿಗೆ ರುಕ್ಮಾಂಗದಂ ತಾನಾಗಿ ।
ಸಲೆಕೀರ್ತಿಯಿಂ ಪುಂಡರೀಕನಾ ಗಿರುತಿಹಂ ।
ಸುಲಲಿತ ಚರಿತ ಭಾಗವತ ಶಿರೋಮಣಿ ಚಂದ್ರಹಾಸ ನುರ್ವೀತಳದೊಳು ॥ ॥೧೪॥
ರೂಪಿಂದೆ ಮದನನುಂ ನಾರಿಯರು ನುಮಿತಪ್ರ ।
ತಾಪದಿಂ ದಿನಪನಂ ಪರಮಹೀಪಾಲರುಂ ।
ವ್ಯಾಪಿಸಿದ ಕೀರ್ತಿಯಿಂ ಪೀಯೂಷಕಿರಣನುಂ ತಾರೆಗಳು ಮಭಿವರ್ಧಿಪ ॥
ಶ್ರೀಪತಿಯ ಭಕ್ತಿಯಿಂ ಗರುಡನುಂ ಸನಕಾದಿ ।
ತಾಪಸರು ಪೈಪೆ ಸೋಲ್ದಪರೆಂದೊಡಿನ್ನುಳಿದ ।
ಕಾಪುರುಷರೀ ಚಂದ್ರಹಾಸನಂ ಪೋಲ್ದಪರೆ ಪೇಳೆಂದು ಮುನಿ ನುಡಿದನು ॥ ॥೧೫॥
ಈತೆರದೊಳಿರೆ ಕುಳಿಂದಂ ಚಂದ್ರಹಾಸನಂ ।
ಪ್ರೀತಿಯಿಂದಂ ಕರೆದು ನುಡಿದನೆಲೆ ಮಗನೆ ವಿ ।
ಖ್ಯಾತವಾಗಿಹ ರಾಜಧಾನಿ ಕುಂತಳ ಮಿಲ್ಲಿಗಾರುಯೋಜನದೊಳಿಹುದು ॥
ಭೂತಳಪಿದಾ ನಗರ ದರಸಿನದು ನಮಗೊಡೆಯ ।
ನಾತನ ಶಿರಃ ಪ್ರಧಾನಂ ದುಷ್ಟಬುದ್ಧಿ ಸಂ ।
ಜಾತವಸ್ತುಗಳ ಸಿದ್ಧಾಯಮಂ ಕುಡುವೇಳ್ಪು ದರಸಂಗೆ ನಾವೆಂದನು ॥ ॥೧೬॥
ರಾಯಂಗೆ ವರ್ಷವರ್ಷಕೆ ನಾವು ಕುಡುವ ಸಿ ।
ದ್ಧಾಯಮಂ ದುಷ್ಟಬುದ್ಧಿಗೆ ಸಲಿಸಿ ಬರ್ಪ್ಪದನಿ ।
ಷ್ಟಾಯುತ ದ್ರವ್ಯಮಂ ನೃಪನ ರಾಣಿಗೆ ಪುರೋಹಿತನಾದ ಗಾಲವಂಗೆ ॥
ಪ್ರೀಯದಿಂ ದುಪಚರಿಸು ವರ್ಧನುಂ ತತ್ಕಾಲ ।
ಕೀಯುಜೀಕೆರೆ ಮಗನೆ ಧನವನೊದವಿಸಿ ಕಳು ಹ ।
ಸೂಯೆ ಗೀಡಾಗಬೇಡೆಂದು ನಿಜನಂದನಂಗಾ ಕುಳಿಂದಂ ಪೇಳ್ದನು ॥ ॥೧೭॥

ಪಿತನ ಮಾತಂ ಕೇಳ್ದು ಚಂದ್ರಹಾಸಂ ಮಹೀ |
ಪತಿಗೆ ಮಹಿಷಿಗೆ ಮಂತ್ರಿ ದುಷ್ಟಬುದ್ಧಿಗೆ ಪುರೋ |
ಹಿತ ಗಾಲವಂಗೆ ಸಲಿಸುವ ಧನವ ನದರ ಸಂಗಡಕೆ ತಾನಾಹವದೊಳು ||
ಪ್ರತಿಭೂಪರಂ ಜಯಿಸಿ ತಂದ ವಸ್ತುಗಳ ನಂ |
ಕಿತದಿಂದೆ ಕಟ್ಟಿ ಶಕಟೋಷ್ಟ್ರ ಕರಿ ವಾಜಿಗಳ |
ಶತಸಂಖ್ಯೆಯಿಂದೆ ಕಳುಹಿದ ನಾಪ್ತರಂ ಕೂಡಿಕೊಟ್ಟು ಕುಂತಳ ನಗರಿಗೆ || ||೧೮||
ಹಸ್ತಿ ಹಯ ರತ್ನ ವಸ್ತ್ರಾಭರಣ ಕರ್ಪೂರ |
ಕಸ್ತೂರಿ ಮಲಯಜ ಸುವರ್ಣ ರಜತಾದ್ಯಖಿಳ |
ವಸ್ತುಚಯಮಂ ಕೊಂಡು ಚಂದ್ರಹಾಸನ ಚರರ್ಬಂದು ಕುಂತಳ ನಗರಿಗೆ ||
ವಿಸ್ತಾರದಿಂದೆಸೆವ ನಗರೋಪಕಂಠದ ಸ |
ರಸ್ತೀರದೊಳ್ಮಿಂದು ಚಕ್ರಿಯಂ ಪೂಜಿಗೈ |
ದಸ್ತಮಯ ಸಮಯದೊಳ್ಪೊಕ್ಕರಾ ಪಟ್ಟಣವ ನತಿಶುಚಿರ್ಭೂತರಾಗಿ || ||೧೯||
ನೊಸಲೊಳೆಸೆ ವೂರ್ಧ್ವಪುಂಡ್ರದ ಸುಧೌತಾಂಬರದ |
ಮಿಸುಪ ತುಳಸಿಯ ದಂಡೆಗಳ ಕೊರಳ ನಿಚ್ಚಳದ |
ದಶನಪಜ್ತ್ತಿಯ ವಿಕಿಲ್ಬಿಷ ಗಾತ್ರದಚ್ಛ ಸಾತ್ವಿಕ ಭಾವದಿಂದೆ ಮೆರೆವ ||
ಶಶಿಹಾಸ ನನುಚರರ್ಬಂದು ಕಾಣ ಲ್ಕಿದೇಂ |
ಪೊಸತಕಟ ನಿಮಗೀಗಳೇಕೆ ಶುದ್ಧಿ ಸ್ನಾನ |
ಮುಸು ವಿಡಿದಿಹನೆ ಕುಳಿಂದಕನೆಂದು ಶಂಕೆಯಿಂ ಕೇಳ್ದನಾ ದುಷ್ಟಬುದ್ಧಿ || ||೨೦||
ಅಶುಭಕೋಟಿಯ ನೊರೆಸು ವೇಕಾದಶೀ ವ್ರತಕೆ |
ವಿಶದ ಸಲಿಲಸ್ನಾನ ಮಿಂದೆಮಗೆ ಸಮನಿಸಿತು |
ಕುಶಲದಿಂ ಬಾಳ್ವಂ ಕುಳಿಂದ ನಾತನ ಸೂನು ಚಂದ್ರಹಾಸಂಗೆ ನಾಡು ||
ವಶವರ್ತಿಯಾಗಿರ್ಪು ದವನಾಜ್ಞೆಯಿಂ ದುಭಯ |
ದಶಮಿಯೊಳ್ನಡೆವು ದುತ್ಸವ ಮಚ್ಯುತಂಗೆ ಕ |
ರ್ಕಶ ಮಿಲ್ಲದಖಿಳ ಜನಮುಂ ಬಿಡದೆ ಪಾಲಿಪಂ ಹರಿಭಕ್ತಿ ನಿರತನಾಗಿ || ||೨೧||
ಸುತ್ತಲುಂ ದಿಗ್ವಿಜಯಮಂ ಮಾಡಿ ರಿಪು ನೃಪರ |
ನೊತ್ತಿ ಭುಜಬಲದಿಂದೆ ಕಪ್ಪಮುಂ ಕೊಂಡು ಬಂ |
ದುತ್ತಮ ಸುವಸ್ತುಗಳನೆಂದು ವಿಶಾವರ್ಷಮಂ ಚಂದ್ರಹಾಸಂ ಕಳುಹಲು ||
ಪೊತ್ತು ತಂದಿಹು ದನೇಕ ದ್ರವ್ಯ ವರಮನೆಗೆ |
ಹತ್ತು ನಿನಗೊಂದ ರೆಣಿಕೆಯೊಳೆಂದು ಲೇಖನವ |
ನಿತ್ತೊಡೆ ಕುಳಿಂದಕನ ಸೇವಕ ರ್ಗಾ ದುಷ್ಟಬುದ್ಧಿ ಮುಗುಳಿಂತೆಂದನು || ||೨೨||
ಏನಿ ದೆತ್ತಣ ಕೌತುಕದ ನುಡಿ ಕುಳಿಂದಂಗೆ |
ಸೂನು ಜನಿಸಿರ್ದಪನೆ ಬಂಜೆಯಾಗಿಹ ಳವನ |
ಮಾನಿನಿ ವಿಚಿತ್ರಮೆನ ಲಾ ಚರರ್ಜೀಯ ಪುಸಿಯಲ್ಲವಂ ಬೇಂಟೆಗೈದೆ ||
ಕಾನನದ ಮಧ್ಯದೊ ಳನಾಥನಾಗಿಹ ಶಿಶು ನಿ |
ಧಾನಮಿರೆ ಕಂಡೆತ್ತಿಕೊಂಡು ಬಂದಾತ್ಮಜ ವಿ |
ಧಾನದಿಂದೋವಿದಂ ಪ್ರೀತಿ ಮಿಗೆ ಚಂದ್ರಹಾಸಾ ಭಿಧಾನದೊಳೆಂದರು || ||೨೩||

ಕೇಳಿ ವಿಸ್ಮಿತನಾದ ನಾ ದುಷ್ಟಬುದ್ಧಿ ನಾಂ |
ಪಾಳ ಡವಿಯೊಳ್ವಸುಳೆಯಂ ಕೊಂದು ಬಹುದೆಂದು |
ಹೇಳಿಮೊಡೆ ಚಂಡಾಲರಂ ದುಳುಹಿ ಬಂದ ರಹುದೆಂದು ನಿಶ್ಚೈಸಿ ಬಳಿಕ ||
ತಾಳಿದಂ ದ್ವೇಷಮಂ ಚಿತ್ತದೊಳ್ಪೊರಗೆ ಕರು |
ಣಾಳುಗಳ ತೆರದಿಂ ದವರ್ಗಳಂ ಮನ್ನಿಸಿ ನಿ |
ಜಾಲಯಕೆ ತೆಗೆಸಿದಂ ಚಂದ್ರಹಾಸಂ ಕಳುಹಿ ದಗಣಿತ ಸುವಸ್ತುಗಳನ: || ||೨೪||
ಇಂದುಹಾಸನ ದೂತ ರುಪವಾಸ ವಿರಬಾರ |
ದೆಂದು ಬಾಣಸಿಗರಂ ಕರೆಸಿ ಬಹುವಿಧ ಪಾಕ |
ದಿಂದೆ ಷಡ್ರಸಭೋಜ್ಯಮಂ ಮಾಡಿಸಿದೊಡೂಟ ಕವರೊಲ್ಲಿ ದೆನೆ ಕನಲ್ದು ||
ಎಂದಿನಂತಲ್ಲ ಗರ್ವಿಸಿದಂ ಕುಳಿಂದ ನವ |
ನಿಂದೆ ಸೊಕ್ಕಿದರವನ ಭೃತ್ಯ ರವರೆಲ್ಲರಂ |
ತಂದು ಕಾರಾಗಾರದೊಳ್ನಿಗಳಮಂ ಪೂಡಿಸುವೆನೆಂದ ನಾ ಸಚಿವನು || ||೨೫||
ಕಷ್ಟಮೇತಕೆ ಜೀಯ ಹರಿವಾಸರ ವ್ರತ |
ಭ್ರಷ್ಟರಾದಪೆವೆಂಬ ಭಯಕೆ ನಿಮ್ಮಾಲಯದ |
ಮೃಷ್ಟಾನ್ನ ಮಾವೊಲ್ಲೆ ದಿರ್ದೆ ವೈಸಲೆ ಗರ್ವದಿಂ ಜೀರೆ ಯಲ್ಲವೆಂದು ||
ದುಷ್ಟಬುದ್ಧಿಯ ಚಿತ್ತಮಂ ತಿಳುಪಿ ಮರುದಿನ ದೊ |
ಳಿಷ್ಟಭೋಜನದಿಂದೆ ಸನ್ಮಾನಮಂ ತಳೆದು |
ಹೃಷ್ಟಮಾನಸರಾಗಿ ಬೀಳ್ಕೊಂಡು ತಿರುಗಿದ ರ್ಚಂದ್ರಹಾಸನ ದೂತರು || ||೨೬||
ಮನ್ನಿಸಿ ಕುಳಿಂದಕನ ಚರರಂ ಕಳುಹಿ ಮಂತ್ರಿ |
ಭಿನ್ನಮಾಗದ ಪೊಲರಮನೆಗೆ ಬಂದಾಗ ತಾ |
ನನ್ನಿಸಿದ ಬಗೆಯನಾಲೋಚಿಸಿ ನೃಪಾಲನಂ ಬೀಳ್ಕೊಂಡು ಮದನ ನೆಂಬ ||
ತನ್ನ ತನಯನ ಮೇಲೆ ರಾಜಕಾರ್ಯದ ಭಾರ |
ಮನ್ನಿಯೋಜಿಸಿ ದುಷ್ಟಬುದ್ಧಿ ಪೊರಮಡುತಿರ್ದ |
ನನ್ನೆಗಂ ವಿಷಯಾಭಿಧಾನದಿಂದೆಸೆವ ನಿಜಸುತೆ ಭರದೊಳೈತಂದಳು || ||೨೭||
ತನು ಸೊಂಪಡರ್ದ ಸಂಪಿಡಿದು ಕಂಪೊಗೆಯೆ ಲೋ |
ಚನದ ನೋಟದ ಹೊಳಹು ಹೊಡಕರಿಸೆ ಚೆಲ್ವ ಕದ |
ಪಿನ ಕಾಂತಿ ಕಳಕಳಿಸೆ ನಸುಲಜ್ಜೆ ನಗೆಮೊಗದೊಳಂಕುರಿಸೆ ತನಿ ಸೊಬಗಿನ ||
ವನಜ ಕುಟ್ಮಲದಂತೆ ಕುಚಯುಗಂ ಪೊಣ್ಮೆ ಬಡ |
ತನದಿಂದೆ ನಡುವೆಸೆಯೆ ಗತಿ ಮಂದಮಾಗೆ ಜಾ |
ವನ ದೇಳ್ಗೆಯಿಂದೆಸೆವ ವಿಷಯೆ ನಿಜತಾತನ ಸಮೀಪ ಕೈತರುತಿರ್ದಳು || ||೨೮||
ಎಸೆಗುಗಂಗಳ ದಿಟ್ಟಿ ಮನ್ಮಥನ ಕರದಿಟ್ಟಿ |
ಮಿಸುಪ ಪುರ್ಬಿನ ಗಾಡಿ ದರ್ಪಕನ ಸಿಂಗಾಡಿ |
ಲಸಿತ ಮಂದಸ್ಮಿತಂ ಮುನಿಜನಕೆ ವಿಸ್ಮಿತಂ ಕುರುಳು ವಿಟನಿಕರ ದುರುಳು ||
ಅಸಿಯ [illegible] ಮಂಗಜೋತ್ಸವಕಾಯ |
ಮಿಸಿಪ [illegible] ಸ್ಮರನ [illegible] |
[illegible] ವಿಷಯೆ ಪಿತನೆಡೆಗೆ ನಡೆತಂದಳು ||೨೯||

ಕನ್ನೆವೆಣ್ಗಳ ಕೆಳದಿಯರ ಕೂಡೆ ಶೈಶವೋ |
ದ್ಭಿನ್ನ ಯೌವನೆಯಾದ ವಿಷಯೆ ಬರೆ ಕಂಡಿವ |
ಳ್ಗಿನ್ನು ವರನಾಗಬೇಕೆಂದು ಚಿಂತಿಸಿ ಮನದೊಳಾ ದುಷ್ಟಬುದ್ಧಿ ಬಳಿಕ ||
ತನ್ನ ಮಗಳಂ ತೆಗೆದು ತಕ್ಕೈಸಿ ವಾತ್ಸಲ್ಯ |
ದಿನ್ನಾಳೆ ಬಂದಪೆಂ ಪೋಗು ನಿಜಭವನಕೆನೆ |
ಸನ್ನುತ ವಸಂತದೊಳ್ಬಾಯ್ದೆರೆವ ಕೋಗಿಲೆಯ ಮರಿವೊ ಲವಳಿಂತೆಂದಳು || ||೩೦||

ತಾತ ನಂದನದೊಳಾಂ ನೀರ್ವೊಯ್ದು ಬೆಳೆಯಿಸಿದ |
ಚೂತಲತೆ ಪೂತುದಿನ್ನುದ್ಯಾಪನಂಗೈಸ |
ದೇತಕಿರ್ದಪೆ ರಾಜಕಾರ್ಯಮೇನೆಂದು ತಲೆವಾಗಿ ನಸು ಲಜ್ಜೆಯಿಂದೆ ||
ಮಾತನಾಡುವ ಮಗಳ ಭಾವಮಂ ಕಂಡು ಸಂ |
ಪ್ರೀತಿಯಿಂ ತಿಳುಪಿ ಮೈದಡವಿ ಮುದ್ದಿಸಿ ತನ್ನ |
ಜಾತ ಮದನಂಗಿವಳ ನೋಂಪಿಯಂ ಮಾಡಿಸೆಂದಾ ಮಂತ್ರಿ ನೇಮಿಸಿದನು ||೩೧||

ಮನೆಗೆ ಮಗಳಂ ಕಳುಹಿ ರಾಜಕಾರಿಯಕೆ ಮದ |
ನನನಿರಿಸಿ ತನ್ನ ಪರಿಜನಸಹಿತ ಪೊರಮಟ್ಟು |
ದಿನವೆರಡಕೈತಂದು ಮುನ್ನಿರ್ದ ಕಾಡೆಲ್ಲಮೆಸೆವ ನಾಡಾಗಿರಲ್ಕೆ ||
ಮನದೊಳ್ಕರುಬನಾಂತು ಮೆಚ್ಚಿದವನಾಗಿ ಲೇ |
ಸಿನೊಳಾ ಕುಳಿಂದಕ ನಿದಿರ್ವಂದು ಸತ್ಕರಿಸೆ |
ಘನವಿಭವದಿಂದೆ ರಾಜಿಪ ಚಂದನಾವತಿಗೆ ಬಂದನಾ ದುಷ್ಟಬುದ್ಧಿ || ||೩೨||

ರಿಪುಮಥನ ಕೇಳ್ಕುಳಿಂದಂ ಬಹಳ ವೈಭವದೊ |
ಳುಪಚರಿಸಿ ತನ್ನ ನಂದನ ಚಂದ್ರಹಾಸನಂ |
ವಿಪುಲಪರಿತೋಷದಿಂದೊಡೆಯಂಗೆ ಕಾಣಿಕೆಯನಿಡಿಸಿ ಕಾಣಿಸಿದ ಬಳಿಕ ||
ವಿಪಿನದೊಳ್ತನಗೀ ಕುಮಾರಕಂ ಮುಂಗೈದ |
ತಪದ ಫಲದಿಂ ತಾನೆ ದೊರೆಕೊಂಡ ನೀತನಂ |
ಕೃಪೆಯಿಂದೆ ನೀನೆ ಪಾಲಿಸವೇಳ್ಪುದೆಂದು ನಿಜಪತಿಗೆ ಕೈಪರ್ತಿಸಿದನು || ||೩೩||

ಗಾಡಿಸಿದ ನೃಪಲಕ್ಷಣದ ಚಂದ್ರಹಾಸನಂ |
ನೋಡಿ ವಿಸ್ಮಿತನಾಗಿ ತನ್ನ ಮನದೊಳ್ಪಿಂತೆ |
ಮಾಡಿಸಿದಕೃತ್ಯಮಂ ನೆನೆದು ವಂಚಿಸಿದರೇ ಚಂಡಾಲರೆಮ್ಮನೆಂದು ||
ಕೂಡೆ ಮುಮ್ಮಲಮರುಗಿ ಪುಸಿಗೆ ನಸುನಗುತೆ ಕೊಂ |
ಡಾಡಿ ಮನ್ನಿಸಿ ತನಗೆ ನಿನ್ನ ಸುತನಂ ಕಂಡು |
ಮೂಡಿತುತ್ಸವಮೆಂದನಾ ದುಷ್ಟಬುದ್ಧಿ ವಿನಯದೊಳಾ ಕುಳಿಂದನೊಡನೆ ||೩೪||

ವ್ಯಾಳದಂಗದ ನಯಮೊ ಗರ್ತಸಂಛಾದಿತ ತೃ |
ಣಾಳಿಗಳೊ ಮಕರದಿಕ್ಕಿಯ ಮಡುವಿನಂಬುಜವೊ |
ಬಾಳ ಧಾರೆಗೆ ಲೇಪಿಸಿದಮಧುವೊ ಕಮಲಾಂಬಕಿಯರ ಕೃತಕದ ಬೇಟವೊ ||
ಕಾಳಕೂಟಂಬೆರಸಿದಮೃತಾನ್ನಭೋಜನವೊ |
ಪೇಳಲರಿದೆನೆ ಸೊಗಸಿತಾ ದುಷ್ಟಬುದ್ಧಿ ಘಾ |
ತಾಳಿಕೆಯನೊಳವುದುಗಿ ಹರ್ಷಲಾಂಛನದಿಂದೆ ನಸುನಗುತೆ ನುಡಿದ ಮಾತು ||೩೫||

ಎತ್ತ ಬಲ್ಲರ್ಸುಜನರೆಲೆ ಪಾರ್ಥ ಕಪಟಿಗಳ |
ಚಿತ್ತದೊಳ್ಪುದುಗಿರ್ದ ಮಾಟಮಂ ವೀಳೆಯುವ |
ನಿತ್ತು ಮನ್ನಿಸಿ ಮಂತ್ರಿಪತಿ ಚಂದ್ರಹಾಸನಂ ಕರೆದು ಕುಳ್ಳಿರಿಸಿಕೊಂಡು ||
ಮತ್ತೆ ಮನದೊಳ್ಮುನ್ನ ಭೂಸುರ ತರ್ನಗೆಂದ |
ವೃತ್ತಾಂತಮಂ ನೆನೆದು ತನ್ನ ಸುತರಾಳ್ಕೆಗಾ |
ಯಿತ್ತು ಕಂಟಕಮಕಟ ಪಗೆಯಾದ ನಿವನೊರ್ವನೆಂದು ಚಿಂತಿಸುತಿರ್ದನು || ||೩೬||

ಬಂಜೆಯಾಗದು ವಿಪ್ರರಂ ದೆನ್ನೊಳೆಂದ ಸುಡಿ |
ರಂಜಿಸುವ ರಾಜ ಲಕ್ಷಣದೊಳೊಪ್ಪುವನಿವಂ |
ಭಂಜಿಸದೊ ಡೀಧರಣಿಗೀತ ನರಸಾದಪಂ ಬಳಿಕ ತನ್ನಾತ್ಮಜರ್ಗೆ ||
ಸಂಜನಿಸಲರಿದು ಭೂಪಾಲತ್ವ ಮಗ್ಗಳಿಕೆ |
ಗಂಜುವವನಲ್ಲ ಬಲವಂತನಹ ನೀತಂಗೆ |
ನಂಜನೂಡಿಸಿ ಕೊಲ್ಲುಪಾಯಮಂ ಮಾಳ್ಪೆನೆಂ ದೆಣಿಸಿದಂ ದುಷ್ಟಬುದ್ಧಿ || ||೩೭||

ರಾಕಾಶಶಾಂಕ ನಭ್ಯುದಯಮಂ ಕಿಡಿಸಿ ತ |
ನ್ನಾಕಾರಮಂ ತೋರಿಸುವೆನೆಂಬ ಕತ್ತಲೆವೊ |
ಲಾ ಕಮಲಲೋಚನನ ಭೃತ್ಯನಂ ಕೊಲಿಸಿ ತಾಂ ಬಾಳ್ವೆನೆಂ ಬುಜ್ಜುಗದೊಳು ||
ಆ ಕುಮತಿಯಹ ಮಂತ್ರಿ ಬಳಿಕೊಂದು ಲೇಖನವ |
ನೇಕಾಂತದೊಳ್ಬರೆದು ಮೇಣದಕೆ ಮುದ್ರೆಯುಂ |
ಜೋಕೆಯಿಂ ದಳವಡಿಸಿ ಶಶಿಹಾಸನಂ ನೋಡಿ ನಸುನಗುತ್ತಿಂತೆಂದನು || ||೩೮||

ಉರ್ವ ಮಂತ್ರದ ಕಜ್ಜಮಿದು ಚಂದ್ರಹಾಸ ನೀ |
ನೊರ್ವನೆ ಹಯಾರೂಢನಾಗಿ ನಾಲ್ವರ್ಸೇವ |
ಕರ್ವೆರೆಸಿ ರಾಜಧಾನಿಗೆ ಪೋಗಿ ತನ್ನ ಮಗ ಮದನಂಗೆ ಮುದ್ರೆಸಹಿತ ||
ಸರ್ವಜನ ಮರಿಯದಂತೀವು ದೀಪತ್ರಿಕೆಯ |
ನುರ್ವರೆಯೊಳಾ ವೆಸಗಿದತಿಶಯದ ಮಾಳ್ಕೆ ನಂ |
ನಿರ್ವರೊಳ್ಗುಪ್ತಮಾಗಿರಲೆಂದು ಕೊಟ್ಟನಾ ಮಂತ್ರಿ ತಲ್ಲೇಖನವನು || ||೩೯||

ಪ್ರೀತಿಯಿಂ ಪೇಳ್ದ ಸಂತಸ್ಥಮಂ ತನ್ನೊಳೀ |
ಮಾತು ನಿಶ್ಚಯಮೆಂದು ನಂಬಿ ಕೈಕೊಂಡು ಹ |
ರ್ಷಾತಿಶಯದಿಂದೆ ಮಂತ್ರಿಗೆ ಮಣಿದು ಬೀಳ್ಕೊಂಡು ವಂದಿಸಿ ಕುಳಿಂದನಡಿಗೆ ||
ಆತನೊಳ್ಪರಕೆವೆತ್ತೊಡನೆ ಕಳುಹಿಸಿಕೊಂಡು |
ಮಾತೆ ಮೇಧಾವಿನಿಸಿಗೆ ಬಂದು ನಿರ್ಗಮವ ನಾ |
ಖ್ಯಾತಿಸಿ ಪದಾಂಬುಜಕೆ ಪಣೆಯಿಟ್ಟ ನಾ ಚಂದ್ರಹಾಸ ನಭ್ಯಗ್ರದಿಂದೆ || ||೪೦||

ಆಸುದತಿ ಪಣೆವಿಡಿದು ನೆಗಪಿ ಸುಕುಮಾರಂಗೆ |
ಸೇಸೆದಳಿ ದಾರತಿಯನೆತ್ತಿ ತಿಲಕಮನಿಟ್ಟು |
ಭಾಸುರ ಸುಲಾಜ ದಧಿ ದೂರ್ವಾಕ್ಷತೆಗಳೊಡನೆ ತಳಿಗೆ ದಂಬುಲವನಿತ್ತು ||
ಲೇಸೊದವ ಲಧ್ವದೊಳ್ಕಿನ್ನವಯವಂಗಳಂ |
ವಾಸುದೇವಂ ಕಾಯು ಲನುಕೂಲೆಯಾಗಿಪ ವ |
ಭೂ ಸಮನ್ವಿತನಾಗಿ ರಾಜ್ಯಮಂ ಪಡೆಯೆಂದು ಪರಸಿ ಬೀಳ್ಕೊಟ್ಟಳಂದು || ||೪೧||

ಕ್ರಮದಿಂದೆ ಮಾತೆಯುಂ ಬೀಳ್ಕೊಂಡು ಪೊರಮಡುವ |
ಸಮಯದೊಳ್ಚಂದ್ರಹಾಸಂ ಕಂಡನಿದಿರೆ ಕುಂ |
ಕುಮ ಸುರಂಜಿತ ಹರಿದ್ರಾಂಗದಿಂ ಕಂಗೊಳಿಪ ನೂತನ ವಧೂವರರನು ||
ಸಮುಸದಾಕಾರದಿಂ ಬರುತಿರ್ದ ಭೂಸುರೋ |
ತ್ತಮ ಯುಗವ ನೆಳಗರುವೆರೆಸಿ ಬರ್ಪರ್ ಗೃಷ್ಟಿಯಂ |
ರಮಣೀಯ ಕುಸುಮ ಫಲಮಂ ಕೊಂಡು ತನಗೀಯ ಲೈತಹ ವನಾಧಿಪರನು ||೪೨||
ಸೂಡಿವಂ ಪರಿಪರಿಯೊಳೆಸೆವ ಕುಸುಮಂಗಳಿಂ |
ಮಾಡಿದ ಸುಮಾಳಿಯಂ ತಳಿಗೊರ್ವನೊರ್ವ ನೆಡೆ |
ಗೂಡಿ ಸೇರಿಸಿ ಕಟ್ಟಿದಚ್ಚ ಸಂಪಗೆಯ ಮಾಲೆಯ ನಿಕ್ಕಿದಂ ಕೊರಳ್ಗೆ ||
ನೀಡಿದಂ ಮತ್ತೊರ್ವ ನೊಪ್ಪುವ ಕರಾಂಬುಜಕೆ |
ದಾಡಿಮದ ಫಲವನಿವ ನೆಲ್ಲಮಂ ಕೈಕೊಂಡು |
ಗಾಡಿ ಮಿಗೆ ಮೆರೆವ ನವವರನಂತೆ ಪೊರಮಟ್ಟನಾ ಚಂದ್ರಹಾಸನಂದು|| ||೪೩||
ಹಯವರ ಸಮಾರೂಢನಾಗಿ ಸೇವಕ ಚತು |
ಷ್ಟಯದೊಡನೆ ಸೂಚಿತ ಶುಭೋದಯದ ಶಕುನಾವ |
ಳಿಯ ನಾಲಿಸುತೆ ಬಟ್ಟೆವಿಡಿದು ಕುಂತಪುರದ ಬಾಹ್ಯೋಪವನಕೆ ಬರಲು ||
ನಯಸರದ ಕೋಗಿಲೆಯ ಸಾಪರದ ನುಡಿಯೊಳತಿ |
ಶಯ ಫಲೋತ್ಕರದ ತರುಶಾಖೆಗಳ ಕೈಗಾಣಿ |
ಕೆಯೊಳಿದಿಗೊಳ್ವವೊಲಾವನಂ ಚಂದ್ರಹಾಸನ ಮುಂದೆ ಕಣ್ಗೆಸೆದುದು || ||೪೪||
ತಳಿರ್ಮರುಗಿ ವೆಳಮಾವ್ರಗಳ ನೆಳಲ್ಕವಿದ ನಿ |
ರ್ಮಲ ಪುಳಿನತಳದಿಂ ತೊಡರ್ದಡರ್ದಲರ್ವಳ್ಳಿ |
ಗಳ ಮಂಟಪಂಗಳಿಂ ವಿವಿಧ ಮಣಿಮಯ ಕೃತಕಗಿರಿ ಕಂದರಂಗಳಿಂದೆ ||
ತೊಳಪರನ್ನದ ಪಾಸರೆಗಳಿಂದೆ ರಂಜಿಸುವ |
ನಳಿನೋತ್ಪಲ ಪ್ರಕರ ಶೋಭಿತ ಸರೋವರಂ |
ಗಳ ರಮ್ಯ ಸೋಪಾನದಿಂದೆ ತದ್ರಾಜ ಕೇಳೀವನಂ ಕಣ್ಗೆಸೆದುದು || ||೪೫||
ಸರಸಿಯೊಳ್ನಲಿದಾಡು ವಂಚೆಗಳ ಕೊಂಚೆಗಳ |
ಬೆರೆಸಿ ರಮಿಸುವ ಕುಣಿವ ಕೋಕಿಗಳ ಕೇಕಿಗಳ |
ನೆರೆನೆರೆದು ಮೊರೆವ ಮರಿದುಂಬಿಗಳ ಡೊಂಬಿಗಳ ಚೀರ್ವ ಗಿಳಿಕೋಗಿಲೆಗಳ |
ತರುಲತೆಯ ತುರುಗಲ ರಸಾಲ ಪ್ರವಾಳ ಪ್ರ |
ಕರದ ಶೋಭೆಗಳ ಕುಸುಮಾಳಿಗಳ ಗಾಳಿಗಳ |
ಪರಿಮಳದ ಮನ ಕಿಂಪನೊಗೆಯಿಸುವ ಬಗೆಯಿಸುವ ರಾಜೋಪವನ ಮೆಸೆದುದು ||೪೬||
ಹೃದಯಮಾಗಿಹ ಶೈತ್ಯಸೌರ ಭ್ಯಮಾಂದ್ಯದಿಂ |
ಮುದ್ಯಾನ ಮಾರುತಂ ಬೀಸಿ ಮಾರ್ಗಶ್ರಮಂ |
ಸದ್ಯಃಪ್ರಶಮನಮಾಗಲ್ಕೆ ಹರ್ಷದೊಳಲ್ಲಿ ಕೃಷ್ಣನಂ ಪೂಜೆಗೈವ ||
ಉದ್ಯೋಗದಿಂದಿಳಿದು ತಣ್ಣೆಳಲ ತರುಮೂಲ |
ಕುದ್ಯತ್ತುರಂಗಮಂ ನೀರ್ಗುಡಿಸಿ ಕಟ್ಟಿ ನಿರ |
ವದ್ಯ ಗುಣನಿಧಿ ಚಂದ್ರಹಾಸ ನೆಳವುಲ್ಗಳಂ ತಿರಿತರಿಸಿ ಮುಂದಿಟ್ಟನು || ||೪೭||

ತೇಜಿಯಂ ಕಟ್ಟಿದೆಡೆಯೊಳ್ಸೇವಕರ ನಿರಿಪಿ |
ರಾಜವನದೊಳ್ಪೊಕ್ಕು ಶಶಿಹಾಸನಲ್ಲಿ ವಿ |
ಭ್ರಾಜಿಸುವ ನಿರ್ಮಲ ಸರಸ್ತೀರದೊಳ್ಮಿಂದು ಶುಚಿಯಾಗಿ ಸುಸ್ಥಳದೊಳು ||
ರಾಜೀವಮಾದಿಯಾ ದಲರ್ಗಳಂ ತಿರಿದು ಹರಿ |
ಪೂಜೆಯಂ ಮಾಡಿ ತಾಂ ತಂದ ಪಾಥೇಯಮಂ |
ಭೋಜನಂಗೈದು ವಿಶ್ರಮನಾಗಿ ತಳಿತ ಮಾಮರನ ನೆಳಲಂ ಸಾರ್ದನು || ||೪೮||

ತಿರಿದೆಳ ದಳಿರ್ಗಳಂ ಹಾಸಿ ಕುಳ್ಳಿರ್ದೊಯ್ಯ |
ನೊರಗಲ್ಕೆ ನಡುವಗಲ ಬಿಸಿಲಿಂದೆ ಮಾರ್ಗದೊ |
ಳ್ಕರೆ ಬಳಲ್ದಿಹ ಚಂದ್ರಹಾಸಂಗೆ ತಣ್ಣೆಲರ ಸೊಗಸಿಂದೆ ಕಣ್ಣೆವೆಗಳು ||
ಸೆರೆಗೊಂಡು ವಾಲಿಗಳ ನಾತ್ಮೀಯ ಕೃತ್ಯಮಂ |
ಮರೆದು ನಿದ್ರಾಲೋಲನಾಗಿ ಮಲಗಿದ ನವಂ |
ಮಿರುಗುವಹಿ ತಲ್ಪದೊಳ್ದೇವಪುರಸಿಲಯ ಲಕ್ಷ್ಮೀವರಂ ಪವಡಿಪವೊಲು || ||೪೯||

ಸಂಧಿ ೨೯ ಕ್ಕೆ ಪದ್ಯಗಳು ೧೬೧೭ ಕ್ಕೆ ಮಂಗಳಮಸ್ತು.

# ಮೂವತ್ತನೆಯ ಸಂಧಿ.

ಸೂಚನೆ|| ನಿದ್ರೆಗೈ ವಿಂದುಹಾಸನ ಕಂಚುಕದ ಕೊನೆಯೊ |
ಳಿರ್ದ ಪತ್ರವನೋದಿಕೊಂಡು ಚದುರಿಂ ವವಂ |
ತಿದ್ದಿ ತನಗಾತನಂ ಕಾಂತನಪ ದಾಯಮಂ ಮಾಡಿದಳ್ಮಂತ್ರಿ ತನುಜೆ ||

ಕುಂತೀಕುಮಾರ ಕೇಳ್ಚಂದ್ರಹಾಸಂ ಬನದೊ |
ಳಿಂತು ಸುಖ ನಿದ್ರೆಯಿಂ ದಿರುತಿರ್ದ ಸಮಯ ದೊ |
ಳ್ಕುಂತಳೇಂದ್ರಂಗೆ ಚಂಪಕಮಾಲಿನೀ ನಾಮದೊರ್ವ ಮಗಳುಂಟವಳ್ಗೆ ||
ಸಂತತಂ ಮಂತ್ರಿಸುತೆ ವಿಷಯೆ ಸಖಿಯಾಗಿರ್ದ |
ಳಂತವರ ದವರಿರ್ವರುಂ ಬಂದರಿಲ್ಲಿಗೆ ವ |
ಸಂತಕಾಲಂ ಪ್ರಾಪ್ತಮಾಗಿರೆ ಜಲಕ್ರೀಡೆ ಗಾಳಿಯರ ಗಡಣದಂದೆ || ||೧||

ಒಚ್ಚೇರೆಗಣ್ಣ ಕೋಮಲೆಯ ರೊಪ್ಪಿಡಿ ನಡುವಿ |
ನಚ್ಚಿಗದ ಬಾಲಕಿಯ ರೀಂಣದ ಪೊಳೆವಲ್ಲ |
ನಿಚ್ಚಳದ ಕದಪಿನ ನಿತಂಬಿನಿಯ ರೊಮ್ಮಾರು ವೇಣಿಯ ವಿಲಾಸಿನಿಯರು ||
ಒಚ್ಚತದ ಜೆಲ್ವಿ ನೆಳವೆಣ್ಗಳು ಳ್ಗೈಕೊಳ್ಳ |
ವಚ್ಚರಿಯ ಕಡುಗಕ್ಕಸದ ಬಟ್ಟ ಬಲ್ಮೊಲೆಯ |
ಪೊಚ್ಚಪೊಸ ಜೌವನದ ನೀರೆಯ ರ್ನಡೆತಂದ ರೊಗ್ಗಾಗಿ ಸಂಭ್ರಮದೊಳು ||೨||

ಕಲಕೀರವಾಣಿಯ ಕರ್ಣಾಹಿವೇಣಿಯ |
ರ್ಕಲಭಮದ ಯಾನೆಯ ರ್ಕಾಯಜ ನಿವಾನೆಯ |
ರ್ಕಲಧೌತ ಗಾತ್ರೆಯ ರ್ಕಂಜದಳನೇತ್ರೆಯ ರ್ಕಳೆವೆತ್ತ ಕಾಮಿನಿಯರು ||
ಕಲಶಕುಚ ಯುಗಳೆಯ ರ್ಕನಕಮಣಿ ನಿಗಳೆಯ |
ರ್ಕಳಕಳಿಪ ವದನೆಯ ರ್ಕುಲಿಶಾಭ ರದನೆಯ |
ರ್ಕಳಿಮುಳಿದ ರನ್ನೆಯ ರ್ಕಾಂತಿಸಂಪನ್ನೆಯ ರ್ನಂದನಕೆ ನಡೆತಂದರು || ||೩||

ತಳಿರಡಿಗೆ ತೊಂಡೆವಣ್ಣುಟಿಗೆ ತಾವರೆ ಮೊಗಕೆ |
ಬೆಳಗಾಯಿ ಮೊಲೆಗೆ ನೈದಿಲೆ ಕಣ್ಗೆ ಬಾಳೆ ತೊಡೆ |
ಗೆಳವಳ್ಳಿ ಮೈಗೆ ಸಂಪಗೆ ನಾಸಿಕಕ್ಕೆ ಮಲ್ಲಿಗೆ ನಗೆಗೆ ಮೊಲ್ಲೆ ಪಲ್ಗೆ ||
ಅಳಿ ಕುಂತಳಕೆ ಸನಿಲುಮ್ರಡಿಗಂಚೆ ನಡೆಗೆ ಕೋ |
ಗಿಲೆ ಗಿಳಿಗಳಿಂಚರಕೆ ಸೋಲ್ದವಯವಂಗಳೊ |
ಳ್ನೆಲಸಿದುವು ಪೆಣ್ಗಳ್ಗೆ ಸೋಲದವ ರಾರೆನಲ್ನಡೆತಂದ ರಂಗನೆಯರು || ||೪||
ಮಿಂಡೆದ್ದ ಹೆಣ್ಗಳುಪವನಕೆ ನಡೆತಂದು ಮುಂ |
ಕೊಂಡು ಬಹು ವಿಧದ ಚೇಷ್ಟೆಗಳಿಂದೆ ಘುಲ್ಲವಿಸಿ |
ಕಂಡಕಂ ಡವನಿಜಾತಂಗಳಂ ಚಿಗುರಿಸಿದ ರೊಡನೆ ಪೂದೋರಿಸಿದರು ||
ತಂಡತಂಡದೊಳಲ್ಲಿ ಪರಿಪರಿ ಯಲ ಗೊರ್ಯುದ್ದ |
ಜೆಂಡಾಗಿ ಬಂದು ನಿರ್ಮಲ ಸರೋವರವ ನು |
ಪ್ಪಂಡದೊ ಳ್ಪೊಕ್ಕು ರಂಬುಕ್ರೀಡೆ ಗಂಗಜನ ಸೊಕ್ಕಾನೆಗಳ ತೆರದೊಳು || ||೫||
ನಿರಿಗುರುಳ್ಗಳ ತುಂಬಿಗಳ ಪೊಳೆವ ಲೋಚನದ |
ಮುರಿವಿಾನ ಮೊಗ ದಲದಾವರೆಯ ತಿವಳಿಗಳ |
ಕಿರುದೆರೆಯ ಕಂಧರದ ಕಂಬುವಿನ ಘನಕುಚಂಗಳ ಕಂಜ ಮುಕುಳಂಗಳ ||
ಪೊರೆವಾರ ಪುಳಿನದ ತನುಚ್ಛವಿಯ ತಿಳಿನೀರ |
ಮೆರೆವ ಮಧ್ಯದ ಮೃಣಾಳದ ಬಗೆಯ ಭೇದಮಂ |
ಕುರುಪಿಡುವೊ ಡರಿವೆನ ಲ್ಸರಸಿಯೊಳ್ತರಳೆಯರ ಜಲಕೇಳಿ ಕಣ್ಗೆಸೆದುದು || ||೬||
ಅಲನೆಯ ತಾವರೆದೆರೆದ ಮೇಲುದಿಸೊಳಿಸೆವ |
ನೆಲೆಸೊಲಿಗಳಲುಗೆ ತಾವರೆದೆರೆದಕೈಗಳಿಂ |
ತುಡುಕಿದ ರ್ಚೆಲ್ವಕಂಕಣರವಂ ಮಿಗೆ ಚೆಲ್ವಕಂಕಣರವಂಗಳೊಡನೆ ||
ವಿಲಸಿತದ ಕಾಸಾರ ದಂಬುಗಳ ನೆಸೆವ ಜೇ |
ಕೊರ್ಳವಿಗಳ ಕವನ ಕಾಸಾರ ದಂಬುಗಳ ವೋ |
ಲ್ಗವಡಿಸಿ ಸರಸಕೇಳಿಗೆ ಪೊಕ್ಕರಡಿಗಡಿಗೆ ಸರಸ ಕೇಳಿಗೆ ಯಾಗಲು || ||೭||
ಹೊಳೆವಹುಬ್ಬುಗಳ ಭಾಸುರ ಚಾಪಲತೆಯು ಮಂ |
ಡಳಿಸಿದುನ್ನತ ಪಯೋಧರದ ಕಡೆಗಣ್ಣ ಚಂ |
ಚಲದ ಭೂಷಣದ ಘನರಸದ ಚಿತ್ರಾಂಗಿಯರ್ತವೆ ಹಸ್ತದೊ ಳ್ತೋಯದ ||
ಮಳೆಗರೆವ ದಚ್ಚರಿಯೆ ಪೇಳೆನೆ ಸುವಾರಿಯಂ |
ತುಳುಕಿದ ರ್ಬಿಂಕದಿಂ ದೊರ್ವರೊರ್ವರ ಮೇಲೆ |
ಸೊಲೆಗೆಲದ ಕುಂಕುಮದ ಕದ ಡರುಣ ಗಿರಿ ತಟದ ಕೆಂಬೊನಲ್ಗಳವೊಲಾಗೆ ||೮||
ಹರಿಯ ಲೋಚನ ಮಜಂ ಕುಳ್ಳಿರ್ದ ತಾಣಮಿಂ |
ದಿರೆಯ ನಿಳಯಂ ದಿವಾಕರನ ಕೆಳೆ ಮನ್ಮಥನ |
ಸರ ಳಾರಡಿಗಳಿಕ್ಕೆ ಪರಿಮಳದ ಬೀಡೆನಿಸಿಕೊಂಡು ಸಂಪೂರ್ಣತೆಯೊಳು ||
ಪರಿಶೋಭಿಸಿದುವಲ್ಲಿ ನೆರೆದಿಂಗಳಂ ಪೋಲ್ವ |
ತರುಣಿಯರ ಚೆಲ್ವ ನಗೆಮೊಗದ ಮುಂದೀಗ ತಾ |
ವರೆಯಾದುವೆಂಬಂತೆ ಪೆಣ್ಗಳಾಸ್ಯಕ್ಕೆ ಸೋಲ್ದುವಾ ಕೊಳದ ಕಮಲಂಗಳು ||೯||

ಮೇಲಕುಪ್ಪರಿಸಿ ತಲೆಕೆಳಗಾಗಿ ಬಿದ್ದೊಡಂ ।
ಲೋಲಲೋಚನಕೆ ಪಾಸಟಿಯಾಗದಿರೆ ಮೀನ್ಗ ।
ಳಾಳದೊಳ್ಮುಳುಗಿದುವು ಗತಿಗಳ ವಿಲಾಸಮಂ ಕಂಡು ಕಲಹಂಸಗಳು ॥
ಕಾಲಿಂದೆ ನಡೆಯಲೊಲ್ಲದೆ ನಭಕೆ ಪಾರಿದುವು ।
ಬಾಲೆಯರ ಕಣ್ಣ ಹೊಳಹಿಗೆ ಗಮನ ದುಜ್ಜುಗಕೆ ।
ಸೋಲದವ ರಾರೆಂಬ ತೆರನಾಗೆ ಸಲಿಲದೊಳ್ ಕ್ರೀಡಿಸಿದ ರಂಗನೆಯರು ॥ ॥೧೦॥
ಶಿಖರಿ ದಶನದ್ಯುತಿಯ ಬೆಳ್ನಗೆಯ ಸೂಸಲೆನೆ ।
ನಖರುಚಿಯ ತೆರಳಿಕೆಯ ಹೊರಳಿಯೆನೆ ಲೋಚನ ವಿ ।
ಲಿಖದ ಮುಮ್ಮೊನೆವೊಗರ ಧಾಳಿಯೆನೆ ಹಾರಮಂ ಪರಿದು ಬೀರ್ದರೆ ಪೇಳೆನೆ ॥
ಸಖಿಯರಂ ಕೂಡಿಕೊಂಡೊರ್ವರೊರ್ವರ್ಗೆ ಸ ।
ಮ್ಮುಖವಾಗಿ ವಿಷಯೆ ಚಂಪಕಮಾಲಿನಿಯರಾಗ ।
ಸುಖ ಜಲಕ್ರೀಡೆಯೊಳ್ಚೆಲ್ವ ತಿಳಿನೀರ ತುಂತುರ್ವನಿಗಳೆಸೆದಿರ್ದುವು ॥ ॥೧೧॥
ಮುದದಿಂದೆ ವಿಷಯೆ ಚಂಪಕಮಾಲಿನಿಯರೊಡನೆ ।
ಸುದತಿಯರ್ನಾನಾಪ್ರಕಾರದಿಂ ಕ್ರೀಡಿಸಿದ ।
ರುದಕದೊಳ್ಬಳಿಕ ತಮ್ಮಾನನ ಸುಧಾಂಶುಮಂಡಲದ ಬೆಳ್ದಿಂಗಳಿಂದೆ ॥
ಸದಮಲ ಸರೋವರದ ತೀರದೊಳ್ಬಳಸಿ ಕ ।
ಟ್ಟಿದ ಚಂದ್ರಕಾಂತ ಸೋಪಾನದೊಳೊಸರ್ವ ನೀ ।
ರೊದವಿತೆನೆ ಮೈಗಳ್ಗೆ ತಣ್ಣಸಂ ತೋರಲಾ ಕೊಳದಿಂದೆ ಪೊರಮಟ್ಟರು ॥ ॥೧೨॥
ಕೂಲವನಡರ್ದು ನನೆದಂಗದೊಳ್ಪತ್ತಿದ ದು ।
ಕೂಲದೊಳಿರಲ್ಕೆ ತಾಪಸರ ದೃಢಮತಿಗೆ ಪ್ರತಿ ।
ಕೂಲ ಕೃತಿಗಳೊ ಮೋಹನದ ರಸಮೊಳಾರ್ದ್ರತೆಯನಾಂತ ಚೆಲ್ವಿನ ಕಣೆಗಳೊ ॥
ಸಾಲಮಣಿಮಯದ ಸೋಪಾನದೊಳ್ನಿಲಿಸಿರ್ದ ।
ಸಾಲಭಂಜಿಕೆಗಳೊ ವಿಚಿತ್ರಮೆನೆ ರಂಜಿತ ರ ।
ಸಾಲ ಪಲ್ಲವ ಪಾಣಿಪಾದತಳ ವಬಲೆಯರ ರೂಪುಗಳ್ಕಣ್ಗೆಸೆದುವು ॥ ॥೧೩॥
ಆವಟಂದೆ ಮನ್ಮಥಂ ತ್ರಿಜಗಮಂ ಗೆಲ್ವೆಡೆಯೊ ।
ಳೊದವಿದ ಪಲವು ಕೈದುಗಳನಲ್ಲಿ ಜಾಡಿಸಿ ತೊ ।
ಳೆದು ತೀರದೊಳ್ನಿಲಿಸಿ ಮೇಲಣಿಂ ದೊರೆಗಳಂ ತುಡಿಸಿದನೊ ಪೇಳೆನಲ್ಕೆ ॥
ಉದಕದಿಂ ಪೊರಮಟ್ಟು ನಿಂದ ನೀರೆಯರ ಕಾ ।
ಯದ ಬಳಿಯೆ ನನೆದು ನಿಡಿದಾಗಿ ಮಿಡಿಪರಿಯಂ ತಿ ।
ಳಿದು ಜೋಲ್ವ ಕೇಶಪಾಶಂಗಳಾರಾಜಿಸಿದುವೇನೆಂಬೆನಚ್ಚರಿಯನು ॥ ॥೧೪॥
ತೊಳಗುವ ನಿತಂಬಗಿರಿಯಿಂದಾಗಸಕೆ ಪರ್ಬಿ ।
ಬೆಳೆದ ಪಲ್ಲಿಯ ಮೇಲೆ ನೆಲಸಿ ಪೆಣೆವಕ್ಕಿ ಗ ।
ಳ್ಪಿಡಿದು ಮದನ ಶಬರನ ಬಲೆಗೆ ಸಿಕ್ಕಿ ನಭಕುಬ್ಬಿಕೊಂಡೇಳ್ವ ತೆರವೆ ॥
ಸಲಿಲದೊಳ್ನೆನೆದ ದೇವಾಂಗದೊಳಡರ್ದ ನೆರಿ ।
ವೊಲಿಗಳಾರಾಜಿಸೆ ಮೃಗಾಕ್ಷಿಯರ ಚೆಲ್ವು ನಿ ।
ಚ್ಚಳದಿಂದೆ ಕಾಣಿಸಿತು ಕಾಸಾರ ತೀರದೊಳ್ತೀರದೊಳ್ಪಿಂದೆ ಮಿಸೆದು ॥ ॥೧೫॥

ಹಿಮದಿಂದೆ ತಣ್ಣಸಂ ಬಡೆದಿರ್ದ ಮಾಗಿಯಂ ।
ಕ್ರಮದಿಂದೆ ಜಾರಿಸಿ ವಸಂತರ್ತು ತಲೆದೋರ್ಪ ।
ಸಮಯದವೊ ಲೇಣಾಕ್ಷಿಯರ್ನನೆದ ಮೈಯೊಳಿಹ ವಸನಂಗಳಂ ಸಡಿಲ್ಚಿ ॥
ರಮಣೀಯ ಚಿತ್ರಾವಲಂಬನದ ಶೋಭೆಗಳ ।
ಸಮನಿಸಿದ ಚಂದ್ರಿಕೆಯ ಸೊಗಸು ವೆಳವಾದಳದ ।
ಸುಮನೋನುರಾಗದಿಂ ಪಲವು ಬಣ್ಣಂಗಳಂ ತೆಗೆದುಟ್ಟು ರಂಜಿಸಿದರು ॥ ॥೧೬॥
ತಡಿಗಡ ದ್ದೋರ್ಡನೆ ಮಡಿವರ್ಗಮಂ ತೆಗೆದುಟ್ಟು ।
ಸಿಡುಗುರುಳ್ಗೆಸೆವ ಧೂಪದ ಪೊಗೆಗಳಂ ಕೊಟ್ಟು ।
ತೊಡವೆಲ್ಲಮಂ ತೊಟ್ಟು ಪಣೆಗೆ ತಿಲಕಮನಿಟ್ಟು ತಿಗುರಿಂದೆ ಸೊಬಗುವಟ್ಟು ॥
ಅಡಿಗಲತಿಗೆಯ ನಕ್ಷಿಗಂಜನವ ನಲರ್ಗಳಂ ।
ಮುಡಿಗೆ ನುಣ್ಗದಪಿಂಗೆ ಮಕರಪತ್ರ ಮನಾಂತು ।
ಬಿಡದೆ ಮಧುಪಾನಮಂ ಮಾಡಿ ಕಪ್ಪುರ ವೀಳೆಯಂಗೊಂಡು ಸೊಗಯಿಸಿದರು ॥೧೭॥
ಬಳಿಕೊರ್ವ ರೊರ್ವರಂ ನೋಡುತ್ತೆ ಮೂಡುತ್ತೆ ।
ನಲವಿಂದೆ ನೃತ್ತಮಂ ಮಾಡುತ್ತೆ ಪಾಡುತ್ತೆ ।
ಬಳಸಿ ಸರಸೋಕ್ತಿಗಳ ನಾಡುತ್ತೆ ತೀಡುತ್ತೆ ಬೆಳ್ನಗೆಯ ಬೆಡಗುಗಳನು ॥
ಅಲರ್ಗಳಂ ತೆಗೆತೆಗೆದು ನೀಡುತ್ತೆ ಸೂಡುತ್ತೆ ।
ಲಲಿತಮಧು ಚಷಕಮಂ ಬೇಡುತ್ತೆ ಕಾಡುತ್ತೆ ।
ಕಲೆಗಳ ವಿಲಾಸಮಂ ಪೂಡುತ್ತೆ ಕೂಡುತ್ತೆ ಕಣ್ಗೆಸೆದ ರೆಳವೆಣ್ಗಳು ॥ ॥೧೮॥
ಆಳಿಯರೊಳಿಂತು ಚಂಪಕಮಾಲಿನಿಗೆ ಸರಸ ।
ಕೇಳಿ ವೆಗ್ಗಳಿಸಿರ್ದ ಸಮಯದೊ ಳಲ ಗೊರ್ಯ್ವ ।
ಬೇಳಂಬದಿಂದೆ ಕೆಲಸಿಡಿದು ಬಂಪಾ ವಿಷಯೆ ಚೂತದ್ರುಮದ ನೆಳಲೊಳು ॥
ತೋಳ ತಲೆಗಿಂಬಿನ ತಳಿರ್ವಸೆಯ ಮೇಲೆ ತಂ ।
ಗಾಳಿಗೊಡ್ಡಿದ ಮೆಯ್ಯ ಸೊಗಸಿಂದೆ ಮರೆದು ನಿ ।
ದ್ರಾಲೋಲನಾಗಿ ಮಲಗಿಹ ಚಂದ್ರಹಾಸನಂ ಕಂಡು ಸೈವೆರಗಾದಳು ॥ ॥೧೯॥
ಲೋಕತ್ರಯಂ ತನಗೆ ವಶವರ್ತಿಯಾದು ದಿ ।
ನ್ನೇಕೆ ಧಾವತಿ ಯೆಂದು ಸುಖದಿಂದೆ ಪವಡಿಸಿದ ।
ನೋ ಕಬ್ಬುವಿಲ್ಲನೆನೆ ಬೇಸರದೆ ಬಾಂದಳದೊ ಳಾವಗಂ ನಡೆವ ಬವಣಿ ॥
ಸಾಕೆಂದು ನಿದ್ರೈಸಿದನೊ ಸೋಮನೆನೆ ವನ ।
ಶ್ರೀ ಕಾಮಿನಿಯ ರತಿಶ್ರಮದೊ ಳೊರಗಿದನೊ ಕುಸು ।
ಮಾಕರ ನೆನಲ್ಕೆ ಮಲಗಿಹ ಚಂದ್ರಹಾಸನಂ ಕಂಡು ವಿಸ್ಮಿತೆಯಾದಳು ॥ ॥೨೦॥
ಒರ್ವರೊರ್ವರ ನಗಲ ರಶ್ವಿನೀದೇವತೆ ಗ ।
ಳುರ್ವ ನಳಕೂಬರ ಜಯಂತಾದಿ ಸುರತನುಜ ।
ರುರ್ವರೆಗದೇಕೆ ಬಹ ರನ ಶಶಿ ಗಳಾದೊಡಿಹ ಪುಷ್ಣಶೀತದ್ಯುತಿಗಳು ॥
ಗೀರ್ವಾಣ ಯಕ್ಷ ಕಿನ್ನರ ಸಿದ್ಧ ಗರುಡ ಗಂ ।
ಧರ್ವ ರೊಳಗಾವನೋ ಮನುಜನಲ್ಲಿಂ ದವನ ।
ಸರ್ವಾಂಗಮಂ ಬಿಡದೆ ನೋಡಿದ ಳ್ವಿಷಯೆ ವಿಷಯಾಸಕ್ತೆಯಾಗಿ ಬಳಿಕ ॥ ॥೨೧॥

ಬೆ ಚ್ಚಿರಳೆ ಗಂಗಳವ ನವಯುವದ ಚೆಲ್ವಿನೊ |
ಳ್ಬೆಚ್ಚ ವಂಗಜ ನಾಗ ಕಿವಿಪರೆಗೆ ತೆಗೆದು ತುಂ |
ಬೆ ಚ್ಚಲರ್ಗೋ ಲಂತರಂಗದೊ ಳ್ನಾಂಟಿದುವು ದಾಂಟಿದುವು ಗರಿಗಳೊಡನೆ ||
ಬೆಚ್ಚಿನಾ ದೆಸೆಯಿಂದೆ ಕಾತರಿಸಿ ಮುದುಡು ಗೊಂ |
ಬೆಚ್ಚರಿಂ ದೇಳ್ವರೋಮಾಂಚನ ದೊಳಾಸೆ ಮುಂ |
ಬೆಚ್ಚಿ ಬೆಮರುವ ಬಾಲೆ ಬೇಸರದೆ ನಿಂದು ನಿಟ್ಟಿಸುತಿರ್ದ ಳೀವೇಳ್ವಿನು || ||೨೨||
ಸುತ್ತ ನೋಡವಳೊಮ್ಮೆ ನೂಪುರ ವಲುಗದಂತೆ |
ಹತ್ತಿಸಾರುವ ಳೊಮ್ಮೆ ನೋಂಕ ಲೆಂ ತಹುದೆಂದು |
ಮತ್ತೆ ಮುರಿದಪ ಳೊಮ್ಮೆ ಹಜ್ಜೆ ಹಜ್ಜೆಯಮೇಲೆ ಸಲ್ವಳಮ್ಮದೆ ನಿಲ್ವಳು ||
ಚಿತ್ತದೊ ಳ್ನಿಶ್ಚೈಸಿ ನೆರೆಯ ಲೆಳಸುವ ಳೊಮ್ಮೆ |
ಹೊತ್ತಲ್ಲ ದನುಚಿತಕೆ ಬೆದರಿ ಹಿಂಗುವ ಳೊಮ್ಮೆ |
ತತ್ತಳದ ಜೇಟದೊ ಳ್ಬೆಂಡಾಗಿ ವಿಷಯೆ ನಿಂದಿರ್ದ ಳಾತನ ಪೊರೆಯೊಳು || ||೨೩||
ದಿವಿಜೇಂದ್ರತನಯ ಕೇ ಳೀ ತೆರದೊಳಾಗ ನವ |
ಯುವತಿ ನಿಂದೀಕ್ಷಿಸುತೆ ಕಂಡಳವ ನಂಗದೊ ಳೆ |
ಸೆವ ರುಚಿರ ಕಂಚುಕದ ತುದಿಸೆರಗಿನೊ ಳ್ಕಟ್ಟಿಕೊಂಡಿರ್ದ ಪತ್ರಿಕೆಯನು ||
ತವಕದಿಂ ಬಿಟ್ಟು ಮುದ್ರೆಯ ನೋಸರಿಸಿ ತೆಗೆದು |
ವಿವರದೊ ಳ್ತನ್ನ ತಂದೆಯ ಹೆಸರ ಬರೆಹ ಮಿರೆ |
ಲವಲವಿಕೆ ಮಿಗೆ ನೋಡಿ ಹರ್ಷ ಪುಳಕದೊ ಳಂದು ನಿಂ ದೋದಿ ಕೊಳುತಿರ್ದಳು ||೨೪||
ಶ್ರೀಮತ್ಪಚಿವ ಶಿರೋಮಣಿ ದುಷ್ಟಬುದ್ಧಿ ಸು |
ಪ್ರೇಮದಿಂ ತನ್ನ ಮಗ ಮದನಂಗೆ ಮಿಗೆ ಪರಸಿ |
ನೇಮಿಸಿದ ಕಾರ್ಯಮಿಾ ಚಂದ್ರಹಾಸಂ ಮಹಾಹಿತ ನೆಮಗೆ ಮೇಲೆ ನಮ್ಮ ||
ಸೀಮೆ ಗರಸಾದಪಂ ಸಂದೇಹಮಿ ಲ್ಲವಗೆ |
ಸಾಮಾನ್ಯದವನಲ್ಲ ನಮಗೆ ಮುಂದಕೆ ಸರ್ವ |
ಥಾಮಿತ್ರನಪ್ಪ ನೆಂದೀತನಂ ಕಳುಹಿದೆವು ನಿನ್ನ ಬಳಿಗಿದ ನರಿವುದು || ||೨೫||
ಪೊತ್ತುಗಳೆಯದೆ ಬಂದಬಳಿ ಕಿವನ ಕುಲಶೀಲ |
ವಿತ್ತವಿದ್ಯಾ ವಯೋ ವಿಕ್ರಮಂಗಳ ನೀಕ್ಷಿ |
ಸುತ್ತಿರದೆ ವಿಷವ ಮೋಹಿಸುವಂತೆ ಕುಡುವು ದೀತಂಗೆ ನೀ ನವರೊಳೆಮಗೆ ||
ಉತ್ತರೋತ್ತರ ಮಪ್ಪುದೆಂದು ಬರೆದಿಹ ಲಿಪಿಯು |
ನೆತ್ತಿ ವಾಚಿಸಿಕೊಂಡು ತರಳಾಕ್ಷಿ ತಾನವಕೆ |
ಮತ್ತೊಂ ದಭಿಪ್ರಾಯಮಂ ತಿಳಿದ ಳುಲ್ಲಂಘಿಸುವರುಂಟೆ ವಿಧಿಕೃತವನು || ||೨೬||
ಈತಂ ತಮಗೆ ಮಹಾಹಿತನೆಂದು ತಮ್ಮ ಧರೆ |
ಗೀತ ನರಸಹನೆಂದು ಕುಲಶೀಲ ವಿದ್ಯೆಗಳ |
ನೀತನೊ ಳರಸಬೇಡವೆಂದು ಮುಂದಕೆ ಸರ್ವಥಾಮಿತ್ರನಪ್ಪನೆಂದು ||
ಈತಂಗೆ ವಿಷಯೆ ಮೋಹಿಸುವಂತೆ ಕುಡುವುದೆಂ |
ದಾ ತಾತ ನಣ್ಣಂಗೆ ಬರೆಸಿ ಕಳುಹಿದ ಪತ್ರ |
ವೇ ತಪ್ಪಿದಿದು ವರ್ಣಪಲ್ಲಟದ ದೋಸವೆಂ ದಬಲೆ ಭಾವಿಸುತಿರ್ದಳು || ||೨೭||

ಕಡುಚೆಲ್ವನಾದ ವರನಂ ಕಂಡು ನಿಶ್ಚೈಸಿ |
ತಡೆಯದಿಂದೀತಂಗೆ ವಿಷಯಿ ಮೋಹಿಸುವಂತೆ |
ಕುಡುವುದೆಂದಲ್ಲಿಂದೆ ತನ್ನ ಪಿತನೀತನಂ ಕಳುಹಿದಂ ಸುತನ ಬಳಿಗೆ ||
ಒಡಗೂಡದಿರ ದೆನ್ನ ಮನದೆಣಿಕೆ ಪತ್ರಿಕೆ ಯೊ |
ಳಿಡಹಿ ಬರೆದಕ್ಕರದ ಬೀಳಿರ್ದೊ ಡದರಿಂದೆ |
ಕೆಡುವು ದಗ್ಗದ ಕಜ್ಜಮೆಂದಾ ತರುಣಿ ತಾನದಂ ತಿದ್ದ ಲನುಗೈದಳು || ||೨೮||
ತಪ್ಪಿರ್ದ ಲಿಪಿಯೊಳ್ವಕಾರಮಂ ತೊಡೆ ದಲ್ಲಿ |
ಗೊಪ್ಪುವ ಯಿಕಾರಮಂ ಕೆಲಬಲದ ನಾಮರ ದೊ |
ಳಿಪ್ಪ ನಿರ್ಯಾಸಮಂ ತೆಗೆದು ಕಿರುವೆರಲುಗು ರ್ಗೊನೆಯಿಂದೆ ತಿದ್ದಿ ಬರೆದು ||
ಅಪ್ಪಂತೆ ಮೊದಲಿರ್ದ ಮುದ್ರೆಯುಂ ಸಂಘಟಿಸಿ |
ಕುಪ್ಪಸದ ಸೆರಗಿನೊಳ್ಕಟ್ಟಿ ಪಳೆಯ ವೋಲಿರಿಸಿ |
ಸಪ್ಪಳಾಗದ ತೆರದೊಳೆದ್ದು ಮೆಲ್ಲನೆ ಮಂತ್ರಿಸುತೆ ತೊಲಗಿ ಬರುತಿರ್ದಳು || ||೨೯||
ದಿಟ್ಟೆ ಮುರಿಯದು ಕಾಲ್ಗ ಳಿತ್ತ ಬಾರವು ಮನಂ |
ನಟ್ಟು ಬೇರೂರಿದುದು ಕಾಮನಂಬಿನ ಗಾಯ |
ವಿಟ್ಟಣಿಸಿ ತಂಗಲತೆ ಕಾಹೇರಿ ತೊಡಲೊಳಗೆ ವಿರಹದುರಿ ತಲೆದೋರಿತು ||
ಬಟ್ಟೆವಿಡಿ ದೊಡನೊಡನೆ ತಿರುತಿರುಗಿ ನೋಡು ತಡಿ |
ಯಿಟ್ಟಳೀಜೆಗೆ ಬಳಿಕ ಬೆರಸಿದ ಳ್ಕೆಳದಿಯರ |
ತಟ್ಟಿನೊ ಳ್ಸಂಭ್ರಮದ ಸಂತಾಪ ಬೆಡೆಯಾಟ ದಂತರಂಗದ ಬಾಲಿಕೆ || ||೩೦||
ಆಳಿಯರ್ ಕಂಡರೀಕೆಯ ಮೊಗದ ಭಾವಮಂ |
ಕೇಳಿದ ರಿದೇನೆಲೆ ಮೃಗಾಕ್ಷಿ ತಳುವಿದೆ ಮನದ |
ಬೇಳಂಬವಾವು ದುಕ್ಕುವ ಹರ್ಷರಸದೊಡನೆ ಬೆರಸಿಹುದು ಬೆದರು ವೊನಲು ||
ಗಾಳಿ ಪರಿಮಳವ ನಡಗಿಪುದುಂಟೆ ತನು ಚಿತ್ತ |
ದಾಳಾಪಮಂ ವಾಜ ಲರಿದಪುದೆ ಸಾಕಿನ್ನು |
ಹೇಳದೊಡೆ ಮಾಣ ಲಂತಸ್ಥಮದು ತಾನೆ ಪ್ರಬ್ಬುಪುದೆಂದು ನಗುತಿರ್ದರು || ||೩೧||
ಕೆಳದಿಯರ ನುಡಿಗೆ ನಸುನಗುತೆ ನಿಜಭಾವಮಂ |
ಮೊಳೆಗಾಣಿಸದೆ ಪುಸಿಗೆ ಸರಸವಾಡುತೆ ಪೊತ್ತು |
ಗಳೆವ ಮಂತ್ರಿಜೆಸಹಿತ ತಿರುಗಿದ ಳ್ಬನದಿಂದೆ ಮನೆಗೆ ಚಂಪಕಮಾಲಿನಿ ||
ಪೊಳಲೊ ಳ್ವಿವಾಹೋತ್ಸವಂಗಳಾ ಸಮಯ ದೊ |
ಳ್ಸೊಳಿದ ವಗ್ಗದ ಗೀತ ನೃತ್ಯ ವಾದ್ಯಂಗಳಿಂ |
ಕಳಸ ಕನ್ನಡಿಗಳೆ ವಿಲಾಸದ ಪುರಂಧ್ರಿಯರ ಶೋಭನದ ಸುಸ್ವರಮೊಳು || ||೩೨||
ಪದುಳದಿಂ ದೈತಂದು ಬಾಲಿಕೆಯರಂ ಕಳುಹಿ |
ಸದನಮಂ ಪೊಕ್ಕ ಳವನೀಶ್ವರಾತ್ಮಜೆ ಬಳಿಕ |
ಮದುವೆಗಳ ಮಂಗಳೋತ್ಸವದ ಮಧುರಸ್ವನಂಗಳ ನಾಲಿಸುತೆ ಮನದೊಳು ||
ಇದು ಶುಭನಿಮಿತ್ತ ಮಿಂದೆನಗೆ ವೈವಾಹ ದ |
ಭ್ಯುದಯ ಮಾದಪ್ಪುದು ಕಾಂತನೊಳೆಂಬೆಣಿಕೆಯಿಂದೆ ||
ಮದನಶರದಿಂದೆ ಪೀಡಿತೆಯಾದ ಮಂತ್ರಿಸುತೆ ಮನೆಗೆ ಬರುತಿರ್ದಳಂದು || ||೩೩||

ಪುರುಹೂತಸಂಭೂತ ಕೇಳ್ಭವನದೊಳ್ವಿಷಯೆ |
ವಿರಹತಾಪದೊಳೊಂದು ಗಳಿಗೆಯುಂ ಪತ್ತು ಸಾ |
ವಿರಯುಗಕೆ ಸಮಮಾಗಿ ಭಾವಿಪಳ್ಕಿಂದಲ್ಲ ನಿಲ್ಲಳಾರಂ ನೋಡಳು ||
ಪರಿಚರಿಯ ದಬಲೆಯರ ನಗ್ಗಿಸುವ ಳಾಪ್ತಸಖಿ |
ಯರ ಮಾತನಾಲಿಸಳ್ಸಂಗರಕೆ ಮೈಗುಡ |
ಳ್ಸರೆವ ಪಂಜರದ ಗಿಳಿಯಂ ನುಡಿಸಳೊಡಿಸಳ್ಸಾಕುಮಿಗ ಪಕ್ಕಿಗಳನು || ||೩೪||
ಉಣ್ಣಳೊರಗಳ್ನುಡಿಯಳುಡಳಿಡಳ್ತೊಡಳುರಿಗೆ |
ತಣ್ಣಸವ ನೆರಸುವಳ್ಸುಕುಮಾರ ತನು ತನಗೆ |
ತಿಣ್ಣವೆಂ ದಲಸುವಳ್ಬಿಸುಸುಯ್ವಳೀನಿದೆಂ ದಂಡಲೆದು ಕೇಳ್ವವರೊಳು ||
ಕಣ್ಣಳವನೊದವಿಪಳ್ಶೈತ್ಯವಸ್ತುಗಳಿಂದೆ |
ಪಣ್ಣಿ ದುಪಚಾರಮಂ ಹೃದಯಮೊಳ್ನೀರ್ವೊಯ್ದು |
ಸುಣ್ಣ ಮರಳ್ವಂತಾದುದೆಂದು ಕಾತರಿಸುವಳಬಲೆ ಕಾಮತಾಪದಿಂದೆ || ||೩೫||
ಜಲಜಂತ್ರ ದೆಡೆಯೊಳ್ತಳಿರ್ವಸೆಯ ತಾಣದೊ |
ಳ್ಮಲಯಜದ ಮಾಡದೊಳ್ಶಶಿಕಾಂತ ವೇದಿಯೊ |
ಳ್ಸುಲಲಿತ ಲತಾಮಂಟಪ ದೊಳೆಸೆವ ತಂಗೊಳದ ತಡಿಯ ಪುಳಿನಸ್ಥಳದೊಳು ||
ಎಳೆವೆಲರ ತುಂಬಿಗಳ ಪಲ್ಲವದ ಕುಸುಮ ಸಂ|
ಕುಲದ ಹಂಸದ ಗಿಳಿಯ ಕೋಗಿಲೆಯ ಕರ್ಕಶಕೆ |
ನಿಲಲರಿಯ ದುಪ್ಪರಿಗೆ ಮದಿನೆಲೆಯ ಚಂದ್ರಶಾಲೆಗೆ ಬಂದಳಂಬುಜಾಕ್ಷಿ || ||೩೬||
ಅಲ್ಲಿ ನಿಜಸಖಿಯ ರಬಲೆಯ ಚಿತ್ತದಾಸರಂ |
ಮೆಲ್ಲಮೆಲ್ಲನೆ ತವಿಸಲೆಂ ದುಪಚರಿಸ ಲವರ |
ಸಲ್ಲಲಿತ ಮುಖ ವಾಣಿ ಲೋಚನ ಭ್ರೂಕುಂತಳಾಧರಂಗಳ ನೀಕ್ಷಿಸಿ ||
ತಲ್ಲಣಿಸಿ ತಿಂಗಳರಗಿಳಿ ಪೂಸರಲ್ಕಬ್ಬ |
ವಿಲ್ಲಾ ರಡಿಗಳೊಳದ್ದಿರ್ಗಳೆಂ ದೆಣಿಸಿ ಸು |
ಣ್ಗಲ್ಲದೊಳ್ಕೈಯಿಟ್ಟು ಬೆರಗಾಗಿ ಚಿಂತಿಸುವ ತೆರದೊಳವರಿರುತಿರ್ದಳು || ||೩೭||
ಪಾವಗಿ ಮುಳಿದರುಂಟೆ ಹರನ ಕೋಪದೊಳುರಿದು |
ಜೀವಿಸಿದರುಂಟೆ ಕಾಳ್ಕಿಚ್ಚಿನೊಳ್ಕಳಿಗೊಂಡು |
ಜೀವು ತಸುವಿಡಿದು ಬಾಳ್ದವರುಂಟೆ ಚಂದ್ರ ಮನ್ಮಥ ಪವನ ರಬಲೆಯರ್ಗೆ ||
ಹಾವಳಿಯ ನೊದವಿಸುವೆವೆಂದು ಬದುಕಿದರಲ್ಲ |
ದಾವ ಕರುಣಿಗಳವರ್ವಿರಹವೀಕೆಯ ಮನವ |
ನಾವರಿಸಲೇನಹುದೊ ಶಿವಶಿವಾ ತಾಳಲರಿದೆಂ ದೊರ್ವಸಖಿ ನುಡಿದಳು || ||೩೮||
ಬೆಳವಿಗೆಗೆ ಸುರರೊಂದು ಕಳೆಯನೀ ಕಳುಹಿದರೊ |
ಮುಳಿದಂದು ಶಿವನೇಕೆ ಮತ್ತೆ ಕರುಣಿಸಿದನೋ |
ಮೆಲುತ್ತಿ ಮೆಲುತೇಕೆ ಬಿಟ್ಟವೋ ಫಣಿಗಳೆಂದು ಶಶಿ ಮದನ ಮಂದಾನಿಲರನು ||
ಸಲೆ ಬೈದು ಕೋಗಿಲೆಯ ತುಂಬಿಗಳ ಗಿಳಿಯ ಕಳ |
ಕಳಕೆ ವಾಯಸಮಂ ಸರೋಜಮಂ ತನ್ನ ಕರ |
ತಳವಂ ಜರೆದು ನಿಂದಿಸಿದಳೊರ್ವಸಖಿ ಬಾಲೆಯಂ ನೋಡಿ ಬಿಸುಸುಯ್ಯುತೆ ||೩೯||

ಇವಳ ಮನದೆಣಿಕೆ ಕೈಗೂಡ ಲಾನೆಲ್ಲರುಂ।
ವಿವಿಧ ಕುಸುಮೋತ್ಕರ ಸುಗಂಧಾಕ್ಷತೆಗಳಿಂದೆ।
ನವಪಕ್ವಫಲ ಮೋದಕಾದಿ ನೈವೇದ್ಯದಿಂ ಧೂಪದೀಪಂಗಳಿಂದೆ॥
ಶಿವನ ವಲ್ಲಭೆಯ ನರ್ಚಿಸಿ ವರ್ಷವರ್ಷ ಕು।
ತ್ಸವದಿಂದೆ ನೋಂಪಿಯುಂ ಮಾಳ್ಪೆವೆಂದಾ ಸಕಲ।
ಭುವನಮಾತೆಯ ನುಮಾದೇವಿಯುಂ ಗೌರಿಯುಂ ಪ್ರಾರ್ಥಿಸಿದ ರಾ ಸಖಿಯರು ॥೮೦॥

ಪ್ರಾಸಾದದಗ್ರ ದೇಳನೆಯ ನೆಲೆಯೊ ಳ್ಚಂದ್ರ।
ಹಾಸನೈತಹ ಮಾರ್ಗಮಂ ನೋಡು ತುಪಚರಿಸು।
ವಾ ಸಖೀಜನದ ನುಡಿಗಳ ನಾಲಿಸುತೆ ವಿಷಯೆ ಚಿತ್ತದೊ ಳ್ತನ್ನ ಪಿತನ॥
ಶಾಸನವನಿಂದು ಮದನಂ ಪಾಲಿಪಂತೆ ನೀಂ।
ಸೂಸು ಕಾರುಣ್ಯವರ್ಷವನೆನ್ನ ಮೇಲಿಂದು।
ಮಾಸದತಿ ಭಕ್ತಿಯಿಂ ಬೇಡಿಕೊಳುತಿರ್ದ ಳಾನತೆಯಾಗಿ ಪಾರ್ವತಿಯನು॥ ॥೮೧॥

ವಿಜಯ ಕೇಳಿತ್ತ ಬನದೊ ಳ್ಚಂದ್ರಹಾಸ ನಂ।
ಬುಜಮಿತ್ರ ನಪರಾಹ್ಣ ಕೈದಲ್ಕೆ ನಿದ್ರೆಯಂ।
ತ್ಯಜಿಸಿ ಮೊಗದೊಳೆದು ಮುಕ್ಕುಳಿಸಿ ಕಪ್ಪುರ ವೀಳೆಯಂಗೊಂಡು ಬಳಿಕ ಬಿಗಿಸಿ॥
ನಿಜವಾಜಿಯಂ ಬಂ ದಡ ರ್ದನುಚರ ರ್ವೆರೆಸಿ।
ಋಜುವಾದ ಶಕುನಂಗಳಂ ಕೇಳುತೊಲಿದು ಪೌ।
ರಜನ ಮಿವನಾರೆಂದು ನೋಡಲ್ಕೆ ನಗರಮಂ ಪೊಕ್ಕು ನಡೆ ತರುತಿರ್ದನು ॥೮೨॥

ಆನಗರದೊ ಳ್ಕುಂತಳೇಶ್ವರಂ ನಿರ್ಮಲ।
ಜ್ಞಾನದಿಂ ಗಾಲವನ ಸೂಕ್ತಮಂ ಕೇಳುತೆ ಸ।
ದಾನಂದ ಯೋಗಮಂ ಕೈಕೊಂಡು ದುಷ್ಟಬುದ್ಧಿಗೆ ವಿಚಾರವ ನೊಪ್ಪಿಸಿ॥
ಧ್ಯಾನಪರನಾಗಿರ್ಪ ನದರಿಂದೆ ಪೊಳಲಂ ಪ್ರ।
ಧಾನಿ ಪಾಲಿಪನವಂ ಪೊರಮಟ್ಟಿರಲ್ಕೆ ತ।
ತ್ಸೂನು ಮದನಂ ಧುರಂಧರತೆ ವೆತ್ತಾ ಸಮಯ ಕೋಲಗದೊ ಳಿರುತಿರ್ದನು ॥೮೩॥

ಶ್ರೀಕಂಠನಂ ಕೆಣಕಿ ಮೈಗೆಟ್ಟ ಮದನನಂ।
ಲೋಕದೊಳ್ ಜ್ವರೆವಂತೆ ಶಂಕರ ಪ್ರಿಯನಾಗಿ।
ಸಾಕಾರನಿಂದೆಸೆವ ಮದನನಿವನೆಂಬಂತೆ ರಂಜಿಸುವ ಮಂತ್ರಿಸೂನು॥
ವ್ಯಾಕೀರ್ಣ ರತ್ನರೋಚಿಗಳ ಚಾವಡಿಯ ಚಾ।
ಮೀಕರದ ಸಿಂಹಾಸನದೊಳಿರ್ದ ನಿಕ್ಕೆಲದ।
ಕೋಕನದನೇತ್ರೆಯ ರ್ಚಿಮ್ಮಿಸುವ ಚಾರುಚಂಚಲ ಚಾಮರಂಗಳಿಂದೆ॥ ॥೮೪॥

ಉಚಿತದಿಂದೊಪ್ಪುವ ಮಹೀಸುರರ ಭೂಭುಜರ।
ಸಚಿವರ ನಿಯೋಗಿಗಳ ಗಣಕರ ಪುರೋಹಿತರ।
ವಚನ ಕೋವಿದರ ಕವಿ ಗಮಕಿಗಳ ವಂದಿ ಗಾಯಕ ನಟರ ನರ್ತಕಿಯರ॥
ರುಚಿರದಿಂ ಕೃಷ್ಣ ಚಾರಿತ್ರಮಂ ಸೊಗಸಾಗಿ।
ರಚಿಸುತಿಹ ಭಾವಕರ ಸಂಗೀತಗೋಷ್ಠಿಯಿಂ।
ಸಚಿವಸುತ ನೋಲಗಂ ರಮಣೀಯಮಾಗಿರ್ದು ದಿಂದ್ರನಾಸ್ಥಾನದಂತೆ॥ ॥೮೫॥

ಲೀಲೆ ಮಿಗೆ ನಗರದೊಳ್ನಡೆತಂದು ಮಂತ್ರಿಸುತ |
ನಾಲಯದ ಮುಂದೆ ವಾಜಿಯ ನಿಳಿದು ತದ್ದ್ವಾರ |
ಪಾಲಕರ್ಗಿಂದುಹಾಸಂ ಪೇಳ್ದೊಡವ ರಂತರಾಂತರದೊಳುಚ್ಚರಿಸಲು ||
ಏಳನೆಯ ಬಾಗಿಲ ವಿವೇಕನೆಂಬವ ನಿವಂ |
ಕೇಳಿ ತಾಂ ಪಿಡಿದ ಶ್ರದ್ಧಾಯಷ್ಟಿ ಸಹಿತ ಬಂ |
ದೋಲಗದೊಳಿರ್ದ ಮದನಂಗೆ ಬಿನ್ನೈಸ ಲ್ಪ್ರಾಕಾರದೊಳಿಂತೆಂದನು || ||೪೬||
ಅವಧರಿಸು ಜೀಯ ನಿಮ್ಮಯ್ಯಂಗೆ ಕ್ರೋಧನೆಂ |
ಬವ ನಾಪ್ತನಾಗಿ ಹಿಂಸಾಯಷ್ಟಿ ವಿಡಿದು ಸ |
ಲ್ಪವನಲಾ ಬಾಗಿಲ್ಗೆ ತನಗಾತನಂತೆ ನಿನ್ನೊಳ್ಸಲುಗೆಯುಂಟೆ ಬರಿದೆ ||
ತವ ಭೃತ್ಯನಾಗಿಹೆಂ ಸಾಕದಂತಿರ ಲಖಿಳ |
ಭುವನಕಧಿಪತಿಯಾದ ಮುರಹರನ ಭಕ್ತನ |
ಲ್ಲವೆ ಚಂದ್ರಹಾಸನಾತನ ಬರವನರಿಪಲೇತಕೆ ಸುಮ್ಮನಿಹೆ ಯೆಂದನು || ||೪೭||
ನೀತಿಸಮ್ಮತದಿಂ ವಿವೇಕನಿಂತೆನೆ ಕೇಳ್ದು |
ಶಾತಕುಂಭಾಲಂಕೃತಾಸನವನಿಳಿದು ಹ |
ರ್ಷಾತಿಶಯದಿಂದೆ ಮದನಂ ಚಂದ್ರಹಾಸನ ನಿದಿರ್ವಂದು ಕಂಡು ನಗುತೆ ||
ಪ್ರೀತಿಯಿಂದಪ್ಪಿ ಕೈವಿಡಿದೊಡನೆ ಸಭೆಗೆ ತಂ |
ದಾತನಂ ಸತ್ಕರಿಸಿ ಚಂದನಾವತಿಯ ತ |
ದ್ಭೂತಳಪ ಮೇಧಾವಿನಿಯ ಕುಳಿಂದನ ಕುಶಲದೇಳ್ಗೆಯಂ ಬೆಸಗೊಂಡನು || ||೪೮||
ವಿನಯದಿಂ ಮತ್ತೆ ಸಸುನಗೆವೆರೆಸಿ ನಿನ್ನ ದ |
ರ್ಶನಮಿಂ ದಪೂರ್ವಮಾದುದು ಬಂದಕಾರ್ಯಮಂ |
ತನಗೊರೆವುದೆಂದು ಮದನಂ ಚಂದ್ರಹಾಸನಂ ಕೇಳ್ದೊಡಾತಂಗೆ ನಿನ್ನ ||
ಜನಕನೆನ್ನಂ ನಿನ್ನ ಬಳಿಗತಿ ರಹಸ್ಯದಿಂ |
ದನುಮತಿಸಿ ಕಳುಹಲಾ ನೈತಂದೆನೆಂದು ಕುರು |
ಹಿನ ಮುದ್ರೆಸಹಿತ ನಿಜಕರದೊಳಿಹ ಪತ್ರಮಂ ಕೊಟ್ಟನಾತನ ಕಯ್ಯೊಳು || ||೪೯||
ಇದ್ದವರ ನಾಸಭೆಯೊಳಿರಿಸಿ ಶಶಿಹಾಸನಂ |
ಗದ್ದುಗೆಗೆ ನೆಲೆಗೊಳಿಸಿ ಮದನ ನಾಸ್ಥಾನದಿಂ |
ಎದ್ದಮಲನೆಂಬ ತನ್ನನುಜನಂ ಕೂಡಿಕೊಂ ಡೇಕಾಂತಭವನಕ್ಕೈದಿ ||
ಪೊದ್ದಿಸಿದ ಮುದ್ರೆಯಿಂ ತೆಗೆದು ಪತ್ರವನೋದಿ |
ತಿದ್ದಿದಕ್ಕರವ ನರಿಯದೆ ನಿಜದ ಬರೆಹ ಮೆಂ |
ದದ್ದನತಿಹರ್ಷಾರ್ಣವದೊಳಾಗ ಶತಯಾಗತನಯ ಕೇಳ್ಕೌತುಕವನು || ||೫೦||
ಲೇಸಾದುದಯ್ಯ ನಿಂಡೆನಗೆ ನೇಮಿಸಿ ಕಳುಹಿ |
ದೀಸುವೊಕ್ಕಣೆಗಳ್ಮಹಾಹಿತಂ ತನಗೀತ |
ನೀಸೀಮೆಗರಸಾದಪಂ ಸರ್ವಥಾಮಿತ್ರನಪ್ಪವಂ ನಿಶ್ಚಯಮಿದು ||
ಮೋಸವೆ ಕುಲಾಚಾರಗತಿಯ ನಾರೈವೊಡೆ ವಿ |
ಲಾಸದಿಂ ವಿಷಯೆ ಮೋಹಿಸುವಂತೆ ಕುಡುವೆ ನಿದ |
ಕೋಸರಿಸಲೇಕೆ ತಂಗಿಗೆ ತಕ್ಕ ವರನೀತನೆಂದು ಮದನಂ ತಿಳಿದನು || ||೫೧||

ಮುನ್ನ ತಂದೆಯು ನಿರೂಪದ ಕಾರ್ಯ ಮದರ ಪೇ |
ಳ್ವೆನ್ನ ಪುನ ವಿವನೊ ಳಕ್ಕರ್ವೆರಸುತಿದೆ ರೂಪ |
ಸನ್ನಿ ಭವೊಡನುಜೆ ಗೀತಂಗೆ ಪಾಸಟಿ ವಿಚಾರಿಸೆ ಕೃಷ್ಣಭಕ್ತನಿವನು ||
ಇನ್ನು ಸಂಶಯಮಿಲ್ಲ ವೀಚಂದ್ರಹಾಸಂಗೆ |
ಕನ್ನೆಯಿಲ್ಲಂದವಕ್ಷಿಯು ತಂಗಿಯಂ ಕೊಟ್ಟು |
ಮನ್ನಿಸುವೆನೆಂದು ನಿಶ್ಚೈಸಿ ಮದನಂ ಮತ್ತೆ ಬಂದನೋಲಗದ ಸಭೆಗೆ || ||೫೨||
ಗಣಿತಜ್ಞರಂ ಕರೆಸಿ ನೋಡಿಸಿದನಾಗ ಳಸು |
ಗುಣವಾದ ರಾಶಿಕೂಟವ ನಮಲ ಲಗ್ನಮಂ |
ಗುಣಿಸಿ ವಿಸ್ತರಿಸಿದ ರ್ಬಳಿಕ ಮದನಂ ಮಾಡಿಸಿದ ನೊಸಗೆಯಂ ಪೊಳಲೊಳು ||
ಅಣೆದು ವಭ್ರವ ನೆಸೆವ ಗುಡಿ ತೋರಣಂಗ ಳಿ |
ಟ್ಟಣಿಸಿದುವು ಬೇಕಾದ ಮಂಗಳ ಸುವಸ್ತು ಗ |
ಳ್ಮಣಿಮಯದ ವೇದಿಯಂ ವಿರಚಿಸಿದ ರೊಳ್ಪಿನಿಂ ವೈವಾಹ ಮಂಟಪವನು || ||೫೩||
ಬಳಿಕ ಮದನನ ಹೇಳಿಕೆಯೊಳಂದು ವಿದಿತ ಮಂ |
ಗಳ ವಿವಾಹೋಚಿತ ಕ್ರಿಯೆಗಳಂ ವಿರಚಿಸಿದ |
ರಿಳೆಯ ದಿವಿಜ ಪುರಂಧ್ರಿಯರ್ಮೈದೆ ಮಜ್ಜನದ ಮಂಡನದ ಮಾಳ್ಕೆಗಳನು ||
ಅಳವಡಿಸಿದ ರ್ಪಣೆಯೊಳೆಸೆವ ಬಾಸಿಗದ ಮದ |
ವಳಿಗನಾಗಿರ್ದಂ ಕುಳಿಂದಜಂ ದೇವಪುರ |
ನಿಳಯ ಲಕ್ಷ್ಮೀಕಾಂತನೊಲವಿಂದೆ ವಿಷಮಮೃತಮಹುದು ಪೊಸತೇನೆಸಲ್ಕೆ ||೫೪||

ಸಂಧಿ ೩೦ ಕ್ಕೆ ಪದ್ಯಗಳು ೧೬೭೧ ಕ್ಕೆ ಮಂಗಳಮಸ್ತು.

## ಮೂವತ್ತೊಂದನೆಯ ಸಂಧಿ.

ಸೂಚನೆ|| ಕೃತವಿವಾಹದೊಳ ಗುಪಪತಿಯ ಕೃತಕಂಗಳಿಂ |
ಸುತನೊಡನೆ ಮೃತನಾದ ಮಂತ್ರಿಯಂ ಧರಣಿ ಗಧಿ |
ಪತಿಯಾಗಿ ನೆಗಪಿದಂ ಚಂದ್ರಹಾಸಂ ಚಂಡಿಕಾದೇವಿಯಂ ಮೆಚ್ಚಿಸಿ ||

ವಾಸವಾತ್ಮಜ ಕೇಳಲಂಕಾರದಿಂ ಚಂದ್ರ |
ಹಾಸನಂ ಮದವಳಿಗನಂ ಮಾಡುತಿರ್ದ ರ್ಸು |
ವಾಸಿನಿಯ ರುತ್ಸವದೊಳಿಂತೆಂದು ಮದನ ನಂತಃಪುರದೊ ಳೆಚ್ಚರಿಸಲು ||
ಪ್ರಾಸಾದ ದಗ್ರದೊ ಳ್ತಪಿಸುತಿಹ ವಿಷಯಿಗೆ ವಿ |
ಲಾಸಿನಿಯ ರೈತಂದು ನುಡಿದ ರಂಬುಜವನಕೆ |
ನೇಸರುದಯಿಸುವ ಕಾಲದ ಮುಂದೆ ತಂಪಿಡಿದು ಬೀಸು ವೆಳೆಗಾಳಿಯಂತೆ || ||೧||
ಸೊಗಯಿಸುವ ಪಚ್ಚಗಪ್ಪುರದ ಪುಡಿಯಂ ಮೈಗೆ |
ತಿಗುರಿದೊಡೆ ಬಾವನ್ನ ದೊಳ್ಗೆಸರ ನೆಸೆವ ಕುಚ |
ಯುಗದೆಡೆಗೆ ಮೆತ್ತಿದೊಡೆ ಕಣ್ಣವೆಗೆ ಪನ್ನೀರ ನೊಡನೊಡನೆ ತೊಡೆದೊಡದಕೆ ||
ಮಿಗೆ ಪೆಚ್ಚಿ ತುರಿಯೆಂದು ಮತ್ತೆ ಸಿಡಿಮಿಡಿ ಗೊಂಡು |
ಮುಗುಳಂಬ ನುರುಬೆ ಗಾರದೆ ಪೊರಳುತಿಹ ಮಂತ್ರಿ |
ಮಗಳೆಡೆಗೆ ಪರಿತಂದು ನುಡಿದ ಳೊಸಗೆಯ ನಾಪ್ತಸಖಿಯೊ ರ್ವಳವಳಕೂಡೆ ||೨||

ಚಿಂತೆಯಂ ಬಿಡು ತರಳೆ ಕೈಸಾರ್ದುದೀಗ ನಿ |
ನ್ನಂತರಂಗದ ಬಯಕೆ ಶಶಿಹಾಸನೆಂಬವಂ |
ಕಂತು ಸಮನಾಗಿಹಂ ನೀನದೇಂ ಪುಣ್ಯಮಂ ಮಾಡಿದೆಯೊ ಮುನ್ನಿಳೆಯೊಳು ||
ಕುಂತಳೇಂದ್ರನ ಕುವರಿ ನಗುತೆ ಸರಸದೊಳಾಡಿ |
ದಂತಾಯ್ತು ತಂದೆ ಕಳುಹಿದ ಲೇಖನವ ನೋದಿ |
ಸಂತಸದೊಳಿಂದು ಮದನಂ ನಿನ್ನ ತಾತಂಗೆ ಕುಡುವನೆಂ ದವಳೊರೆವಳು || ||೩||

ರಜ್ಜುಬಂಧವ ನುಗಿದ ಮೃಗದಂತೆ ತಾಂ ನೆನೆದ |
ಕಜ್ಜಮೊಡಗೂಡಲ್ಕೆ ಮೊಗ ಮರಲ್ದುದು ಬಳಿಕ |
ಲಜ್ಜೆ ಮೊಳೆದೋರಿದುದು ತಲೆವಾಗಿ ನೆಲವ ನುಂಗುಟದಿಂದೆ ಬರೆಯುತಿರಲು ||
ಉಜ್ಜುಗವಿದೇ ನಬಲೆ ಸಾಕು ನಡೆ ಮಂಗಳ ಸು |
ಮಜ್ಜನದ ಮನೆಗೆಂದು ಕಮಲಾಯತಾಕ್ಷಿಯಂ |
ತಜ್ಜನನಿ ಕಳುಹಿದ ನಿತಂಬಿನಿಯ ರುಪ್ಪರಿಗೆ ದುದಿಯಿಂದಿಳುಹಿ ತಂದರು || ||೪||

ವರ ಶಾತಕುಂಭ ಕುಂಭಸ್ತನದ ಪಲ್ಲವಾ |
ಧರದ ಗುಣರಾಜಿ ರಾಜಿತದ ಕೋಮಲೆಗೆ ಸೌಂ |
ದರ ಕುಂಕುಮಾಂಗ ಮಾಂಗಲ್ಯ ದಬಲೆಯ ರುದಕಪೂರಿತ ಕನಕ ಕಲಶದ ||
ಸುರುಚಿವೆತ್ತರುಣತರುಣ ಪ್ರವಾಳದ ವಸ್ತ್ರ |
ಪರಿವೃತದ ಕಲ್ಪ ಕಲ್ಪವಿಧಾನವಾಗಿರದೆ |
ವಿರಚಿಸಿದರಾಗ ರಾಗದೊಳಮಲ ಶೋಭನಸ್ನಾನವಂ ಸೋತ್ಸವದೊಳು || ||೫||

ಮುಟ್ಟಿದೊಡೆ ಕಂದದಿರ ದವಳ ಸುಕುಮಾರ ತನು |
ದಿಟ್ಟಿಯುರದೆಂತೊ ನವಕುಂಕುಮವನೀಗ ನುಂ |
ಪಿಟ್ಟರಲ್ಲದೆ ಪೋದಮಧ್ಯದೊಳದೆಂತು ನಿಲಿಸಿದರೊ ದಿವ್ಯಾಂಬರವನು ||
ಬಟ್ಟ ಮೊಲೆಗಳ ಪೊರೆಗೆ ಬಾಗಿ ನಡೆವಳಿಂತು |
ಕಟ್ಟಿನರೊ ಹಾರಾನಳಿಯನೆಂದು ಕೌತುಕಂ |
ಬಟ್ಟು ನೋಳ್ಪವೊಲೆಸೆದ ಳಾ ವಿಷಯೆ ಬಳಿ ಕಲಂಕಾರಮಂಡಿತೆ ಯಾಗಲು |೬||

ಬಾವನ್ನಗಂಪಿ ನಂಗದ ಲಲನೆ ಗನುಲೇಪ |
ನಾವಳಿಗ ಳೇಕಿನ್ನು ಕನ್ಯಕಾತಿಲಕಕ್ಕೆ |
ಭಾವಿಸೆ ಲಲಾಮವೇತಕೆ ಪಣೆಗೆ ಸೊಂಪೊದವಿ ದಸಯುವಮೊ ಳಿಂಪುವಡೆದ ||
ಪೂವೆಸೆವ ಕೋಮಲೆಗದೇಕೆ ಕುಸುಮದ ಮಾಲೆ |
ಲಾವಣ್ಯಭೂಷಣದ ಪೆಣ್ಗಾಭರಣಮೇಕೆ |
ಕೋವಿದೆಯರೆಲ್ಲ ಸೈರಂಧ್ರಿಯರೆಸಲ್ಕೆ ವಿಷಯೆಗೆ ಸಿಂಗರಂ ಗೈದರು || ||೭||

ಅಸರದಿಗಾಘ್ರಗವಂ ತಂಜನೋಪಾಘ್ರಿತಂ |
ವಿಪ್ರೀಪರಿಷದಂತೆ ತಾರಕಾಲಂಕೃತಂ |
ಲಿಪಿಯಂತೆ ಬಿಂದುಶೋಭಾನ್ವಿತಂ ದ್ವಿಜನಂತೆ ಶ್ರುತಿಯುತಂ ದೈತ್ಯನಂತೆ ||
ಅಪಸ್ಮೃತಾ ನಿಮಿಷಲೀಲಾವಿಲಾಸಂ ನರಾ |
ಧಿಪನಂತೆ ಕುವಲಯಶ್ರೀಧರಂ ಘನನಂತೆ |
ಚಪಲಾಭಿರಾಮವಾಗಿರ್ದುದಾ ಶಶಿಮುಖಿಯ ನೇತ್ರಯುಗಮೇವೇಳ್ವೆನು || ||೮||

ಉಲ್ಲಾಸತಿಲಕಮುಂ ಸುತಮಾಲಪತ್ರಮುಂ ।
ಮೊಲ್ಲೆಯ ಮುಗುಳ್ಗಳುಂ ಚೂತಪ್ರವಾಳಮುಂ ।
ಮಲ್ಲಿಗೆಯಲರ್ಗಳುಂ ಸಂಪಗೆಯ ಮೊಗ್ಗೆಯುಂ ನಿಂಬದಳಮುಂ ತೊಳಗುವ ॥
ಸಲ್ಲಲಿತ ಸಾಲಕಾನನಮೊಳಿರ್ದಪುವು ಪೊಸ ।
ತಲ್ಲಂಬ ತೆರನಾದುದೆಂತು ಬಣ್ಣಿಸುವೆ ನೀ ।
ಚೆಲ್ಲೆಗಂಗಳ ಚೆಲ್ವಿಕೆಯೊಳೆಸೆವ ಬಾಲಕಿಯ ನಗೆನೊಗದ ಸೌಂದರವನು ॥ ॥೯॥
ಶ್ರವಣಭೂಷಣದಿಂದೆ ಹಸ್ತಾಭರಣದಿಂದೆ ।
ದಿವಿಜಪದ ಮೆಸೆವಂತೆ ಕುಂತಳಶ್ರೀಯ ವೈ ।
ಭವದಿಂದೆ ರಮಣೀಯ ಕಾಂಚೀಪ್ರದೇಶದಿಂ ಭೂಭಾಗ ಮೊಪ್ಪುವಂತೆ ॥
ತವೆ ಮೆರೆವ ಸುಗ್ರೀವ ತಾರಾವಲಂಬದಿಂ ।
ಪವಿಕಲಾಂಗದ ವಿರಾಜಿತದಿಂದೆ ಸನ್ನುತ ।
ಪ್ಲವಗಕುಲ ದುನ್ನತಿಯ ಬೆಳವಿಗೆಯ ಚೆಲ್ವಿಂದೆ ವಿಷಯೆ ಕಂಗೊಳಿಸಿರ್ದಳು ॥ ॥೧೦॥
ಲಾವಣ್ಯವಾರಿ ಪೂರಿತಮಾದ ನಾಭೀ ಸ ।
ರೋವರದ ತಿವಳಿ ಪೆರೆಗಳ ನಡುವೆ ರಂಜಿಸುವ ।
ಶೈವಾಲದಂತೆ ಜಘನಾದ್ರಿಯಂ ವೇಡೈಸಿ ದಮಲ ಕಾಂಚೀದಾಮದ ॥
ದಾವಶಿಖಿಯಿಂದೆ ನಭಕೇಳ್ವ ಕರ್ಬೊಗೆಯಂತೆ ।
ಪೀವರಸ್ತನದುರ್ಗ ಕಂಗಜ ನಡರ್ದಿಳಿವ ।
ರಾವಿನಂತಾ ಚಂದ್ರಮುಖಿಯ ತನುಮಧ್ಯದೊಳ್ಬಾಸೆ ಕಂಗೊಳಿಸಿರ್ದುದು ॥೧೧॥
ಬಿಡದೆ ಮುಕ್ತಾಹಾರದಿಂದೆ ಸಮರೂಪದಿಂ ।
ವೃಢತೆವೆ ತ್ತೂರ್ಧ್ವಮುಖಮಾಗಿ ಕರ್ಕಶವೃತ್ತ ।
ಮೊಡಗೂಡಿ ಕುಚಯುಗಂ ಮೆರೆದುದು ಕಠೋರತಪ ದಿಂದೆಸೆವ ಯೋಗಿಯಂತೆ ॥
ಬಡವಾಗಿ ಬಲ್ಲಿದರ ನಡುವೆ ನವೆದಿರ್ದು ಸೊಂ ।
ಪಡಗದೆ ವಿಜೃಂಭಿಸುವ ವೀರಕಂಠೀರವಕೆ ।
ಪಡಿಯಾಗಿ ಸತ್ಪುರುಷ ನಂದದೊಳ್ಕಾಣಿಸಿತು ಮಧ್ಯಲತೆ ಮಂತ್ರಿಸುತೆಯ ॥ ॥೧೨॥
ತೊಳಗಿ ಬೆಳಗುವ ಸದ್ಗುಣಾವಳಿಗ ಳೈಶ್ವರ್ಯ ।
ಲಲನೆಯಂ ಗೃಹಪತಿಯ ಮಂದಿರಕೆ ಸಂಘಟಿಸಿ ।
ಬೆಳವಿಗೆಯ ನತಿಶಯಂ ಮಾಳ್ಪಂತೆ ಸಿಂಗರಂಗೈದು ನೀಲಾಳಕೆಯರು ॥
ಬಳಿಕ ಪೊ ನ್ನಂವಣದ ಮೇಲೆ ವೈವಾಹ ಮಂ ।
ಗಳ ಮಹೋತ್ಸವಕೆ ವಿರಚಿಸಿದ ಮಂಟಪದೆಡೆಗೆ ।
ನಳಿನಪತ್ರಾಕ್ಷಿಯಂ ಶಂದರೂಸಗೆಯೊಳಂದು ವಿಭವದ ವಿಲಾಸದಿಂದೆ ॥ ॥೧೩॥
ಬಳಸಿದ ಸಮಸ್ತಜನ ಜಂಗುಳಿಯ ಕೈ ಸೊಡ ।
ಗರ್ಳ ಸಾಲಸಂದಣಿಯ ಪಾಡುವ ಪುರಂಧ್ರಿಯರ ।
ಕಳಸ ಕನ್ನಡಿವಿಡಿದ ಕನ್ನೆಯರ ನಾನಾಸುವಸ್ತುಗಳ ವಿಸ್ತರಣದ ॥
ತೊಳಗುವೊಸಗೆಯ ವಾದ್ಯಸಂಕುಲದ ಬಹುಫಲಾ ।
ವಳಿಗಳ ವಿಡಾಯದಿಂವೈತಂದು ದಂಡಿಗೆಯ ।
ನಿಳಿದ ನಾರತಿಗಳ ನಿವಾಳಿಯಿಂ ಚಂದ್ರಹಾಸಂ ಭದ್ರಮಂಟಪದೊಳು ॥ ॥೧೪॥

ವರ ತಾರಕಾಕ್ಷಿಯೆಂಬಾ ಪ್ರಧಾನನ ಪತ್ನಿ |
ಚರಣಮಂ ಪ್ರಕ್ಷಾಳಿಸಂಗೈಯೆ ಮದನ ನಾ |
ದರಿಸಿ ಮಧುಪರ್ಕಮಂ ಮಾಡಿ ಕನ್ಯಾವರಣದೊಳ್ಕುಲಪರಂಪರೆಯನು ||
ಒರೆಯೆನೆ ಲ್ಯಶಿಹಾಸನೆನಗೆ ಪಾಮನಗೋತ್ರ |
ಮರವಿಂದನಾಭಂ ಪಿತಂ ಹರಿ ಪಿತಾಮಹಂ |
ಮುರಹರಂ ಪ್ರಪಿತಾಮಹಂ ಕುಳಿಂದನು ಮವನ ಸತಿಯುಂ ಗುರುಗಳೆಂದನು ||೧೫||
ಅಲ್ಪಭಾಷಿತಮಲ್ಲದಿಹ ಚಂದ್ರಹಾಸನ ಸು |
ಜಲ್ಪಿತಂ ಸೊಗಸೆ ಮದನಂ ಮುದದೊಳಾಗ ಸಂ |
ಕಲ್ಪಿತ ಪ್ರತೀಕ್ಷಣೆಗೆ ಸುಮುಹೂರ್ತಮಂ ಕೇಳ್ದು ತೆರೆದೆಗೆಸಿ ಭೂ ದಿವಿಜರ ||
ನಲ್ಪರಕೆವೆತ್ತು ಜೀರಿಗೆ ಬೆಲ್ಲದೊಪ್ಪ ಮೆಸೆ |
ಯುಲ್ಪದವ ಮಟ್ಟಕ್ಕಿ ಸುತ್ತುನೂ ಲ್ಮೆರೆಯೆ ಫಣಿ |
ತಲ್ಪನಿದಿರೊಳ್ತಂದರ್ಪಿತವಾಗಲೆಂ ದವನ ಕೈಗೆ ಧಾರೆಯ ನೆರೆದನು || ||೧೬||
ಮೊರೆವ ಮರಿದುಂಬಿಗಳ ಮಾಲೆಯುಂ ತಾಳ್ದ ನವ |
ಪರಿಮಳದ ಮಂದಾರಮಾಲೆಯುಂ ವಿಷಯಿ ಸೌಂ |
ದರ ಶಿರೀಷದ ಮಾಲೆಯುಂ ಪೋಲ್ವ ಸಳಿತೋಳನೆತ್ತಿ ಕಂಧರದೊಳಿಡಲು ||
ಭರಿತ ಲಾವಣ್ಯಾಸಾಕಾರದಿಂ ಮಂಗಳಾ |
ಭರಣಂಗಳೆಸೆ ವಲಂಕಾರದಿಂ ಪಾರ್ವ ರು |
ಚ್ಚರಿ ಪನ್ನಿ ಹೋತ್ರಪ್ರಕಾರದಿಂ ವಧುವಂ ಕುಳಿಂದಜಂ ಕೈವಿಡಿದನು || ||೧೭||
ಮುಂಡೆ ವಿರಚಿಸಿದ ವೇದಿಯೊಳೆಸೆವ ಹಸೆಗೆ ನಡೆ |
ತಂದು ಪಾಣಿಗ್ರಹಣಮಂ ಗೈದು ಲಾಜಾಜ್ಯ |
ದಿಂದೆ ಹೋಮದೊಳಗ್ನಿಯಂ ಬೆಳಗೆ ವಿಪ್ರರಾಶೀರ್ವಾದಮಂ ಮಾಡಲು ||
ಬಂದು ತಿಲಕವನಿಟ್ಟು ಪತ್ರಫಲಮಂ ಕೊಟ್ಟು |
ಪೊಂದಳಿಗೆ ವಿಡಿಪಾರತಿಯ ನೆತ್ತಲ್ಯೆದೆಯ |
ರ್ಕಂದರ್ಪ ರತಿಗಳ ವಿವಾಹವೆಸೆ ಕಂಗೊಳಿಸಿತಾ ದಂಪತಿಗಳ ಮದುವೆ || ||೧೮||
ತತ್ಕಾಲದೊಳ್ಮದನನಾ ಚಂದ್ರಹಾಸನಂ |
ಸತ್ಕರಿಸಿ ಬಳುವಳಿಗೆ ಬಹಳ ಗೋ ಮಹಿಷಿ ಬಲ |
ವತ್ಕರಿ ತುರಂಗ ರಥ ಶಯ್ಯಾಸನಂಗಳಂ ವಳಿತ ವಾಹನ ಪದವನು ||
ಉತ್ಕೃಷ್ಟ ಪರಿಮಳ ದ್ರವ್ಯ ಸಂಕುಲಮಂ ಚ |
ಮತ್ಕಾರ ವಬಲೆಯರ ನಂಬರಾಭರಣ ವಿಲ |
ಸತ್ಕಂಠಮಾಲೆಗಳ ನಿತ್ತನೆಂದುಂ ಬಳಸಿ ತೀರದ ಸುವಸ್ತುಗಳನು || ||೧೯||
ಉರ್ವೀಶ್ವರನ ಪುರೋಹಿತ ಗಾಲವಂಗೆ ತನ |
ಗುರ್ವ ಬಾಂಧವ ಪುತ್ರ ಮಿತ್ರರ್ಗೆ ನೆರೆದ ಭೂ |
ಗೀರ್ವಾಣಕೆಲ್ಲರ್ಗೆ ಕವಿ ಗಮಕಿ ನಟ ವಿದೂಷಕ ವಂದಿಗಾಯಕರ್ಗೆ ||
ಸರ್ವಜನ ಕವರವರ ತರವರಿತು ಸತ್ಕರಿಸಿ |
ತರ್ವಾಯೊಳಗಣಿತ ದ್ರವ್ಯಮಂ ಪ್ರೋಕ್ಷ್ಯ ಜೀ |
ಸರ್ವನಂ ಕೊಟ್ಟ ನುತ್ಸವದಿಂದೆ ಯಾಚಕರ್ಗಾಗ ದುರ್ಮತಿಯ ಸೂನು || ||೨೦||

ತದನಂತರದೊ ಳನಿಬರೆಲ್ಲರಂ ಕಳುಹಿ ನಿಜ |
ಸದನದೆ ಸಮಗ್ರ ವೈಭವದೊಳಿರ ಲಂದಿ ರು |
ಳ್ಮದನಂ ಸ್ವಬಾಂಧವರ್ವೆರೆಸಿ ದಂಪತಿಗಳಂ ಸಹಭೋಜನಂ ಮಾಡಿಸಿ ||
ಇ ದನಂಗತಾತನಂ ಪೂಜಿಸಿದ ಫಲದೊಳಾ |
ದು ದನಂತ ಸೌಭಾಗ್ಯಮೆಂದು ಮುದದಿಂ ಪವಡಿ |
ಸಿದ ನನ್ನೆಗಂ ಪೂರ್ವಶೈಲಶಿಖರವ ಪೊಂಗಳಸದಂತೆ ರವಿ ಮೆರೆದನು || ||೨೧||
ಪಂಕರುಹಮಿತ್ರ ನುದಯದೊಳೆದ್ದು ಮದನಂ ಸ್ವ |
ಕಿಂಕರ ರ್ಗರಿಪ ಲವರಂದಿನ ಮಹೋತ್ಸವ ಕ |
ಲಂಕರಿಸಿದ ಧ್ವಜ ಪತಾಕೆಗಳ ರಚನೆಯಿಂ ದಮಲ ಮಣಿಮಂಟಪವನು ||
ಕಂಕಣದ ಘನರವದ ಮಿಂಚುಗಂಗಳ ಸತೀ |
ಸಂಕುಲದ ಮಾಳ್ಕೆಗಳ ಮಂಗಳ ಸ್ನಾನದಿಂ |
ಕುಂಕುಮ ವಿಲಿಪ್ತಾಂಗನಾಗಿ ನಿಜ ಸತಿಸಹಿತ ಚಂದ್ರಹಾಸಂ ಮೆರೆದನು || ||೨೨||
ಚಂಪಕಸ್ನೇಹ ಸಮ್ಮರ್ದನದ ಕುಂಕುಮದ |
ಕಂಪಿ ನನುಲೇಪನದ ನಿರ್ಮಲ ಜಲಸ್ನಾನ |
ದಿಂಪಿನ ಕಳೇವರದ ರಂಜಿಸುವ ನೊಸಲ ಮುತ್ತಿನ ಬಾಸಿಗದ ಚೆಲ್ವಿನ ||
ದಂಪತಿಗಳೊಪ್ಪಿದ ರ್ಪಾಡುವ ಪುರಂಧ್ರಿಯರ |
ಸಂಪಿದ ಸರದಿಂದೆ ಮಂಗಳ ಸುವಾದ್ಯ ರವ |
ದಿಂ ಪಾರ್ವ ರಡಿಗಡಿಗೊಡರ್ಚುವ ಶುಭ ಸ್ವಸ್ತಿವಾಚನದ ಘೋಷದಿಂದೆ || ||೨೩||
ಸುತ್ರಾಮತನಯ ಕೇ ಳುತ್ಸವದೊಳೀಪರಿ ದಿ |
ನತ್ರಯಂ ನಡೆಯಲ್ಕೆ ನಾಲ್ಕನೆಯ ದಿವಸ ದೊ |
ಳ್ಚಿತ್ರದಿಂ ವಿರಚಿಸಿ ಪೊಳಲ್ಪುಗಿಸಿ ನಾಗವಲ್ಲಿಯ ಸೊಡರ್ಗಳ ನೊದವಿಸಿ ||
ಕ್ಷತ್ರಿಯ ವಿವಾಹ ವೈಭವದೊಳಿದು ಪೊಸತೆನೆ ಧ |
ರಿತ್ರಿಯೊ ಳ್ಚಂದ್ರಹಾಸಂಗಾಯ್ತು ಮದುವೆ ಶತ |
ಪತ್ರನಾಭನ ಕಿಂಕರರ್ಗೆ ಮಾಡಿದ ಮಿಥ್ಯೆಯದು ತಾನೆ ಪಥ್ಯಮೆನಲು || ||೨೪||
ವಿಸ್ತರಿಸಿ ಮೃಷ್ಟಭೋಜನದ ನವಕುಸುಮ ಫಲ |
ವಸ್ತುಗಳ ಕರ್ಪೂರ ವೀಟಿಕೆಯ ಚಂದನದ |
ಕಸ್ತುರಿ ಜವಾದಿಗಳ ಪರಿಮಳದ ಕರ್ದಮದ ವಸ್ತ್ರಭೂಷಣ ವಿತ್ತದ ||
ಪ್ರಸ್ತುತದ ಸನ್ಮಾನದಿಂದೆ ಮನ್ನಿಸಿದಂ ಸ |
ಮಸ್ತ ಜನಮಂ ಮದನ ನಾಪ್ತಬಂಧುಗಳಂ ಪ್ರ |
ಶಸ್ತಪೂಜೆಗಳಿಂದೆ ಸತ್ಕರಿಸಿ ಕೊಟ್ಟನೆಲ್ಲ ರ್ತಣಿಯೆ ತಾಂ ತಣಿಯದೆ || ||೨೫||
ಬಂಡಾರ ದಖಿಳ ವಸ್ತುವನೊಂದು ತೃಣಮಾಗೆ |
ಕಂಡು ನೆಚ್ಚಿಸಿ ಚಂದ್ರಹಾಸನ ವಿವಾಹಮಂ |
ಕೊಂ ಡೆಸಗುತಿರ್ದ ನೊಲವಿಂ ಮದನನಿತ್ತ ಕುಂತಳಪುರದೊ ಳವನತ್ತಲು ||
ಅಂಡಲೆದು ಚಂದನಾವತಿಯೊ ಳ್ಕುಳಿಂದನಂ |
ದಂಡಿಸಿದ ನಾದುಷ್ಟಬುದ್ಧಿ ಜರೆ ದುರೆ ಬೈದು |
ಹಿಂಡಿ ಹಿಳಿ ದರ್ಥಮಂ ತೆಗೆದು ಸೆರೆಮನೆಗಿಕ್ಕಿ ನಿಗಳಮಂ ಕಾಲ್ಗೆ ಪೂಡಿ || ||೨೬||

ಹೆಕ್ಕಳಿಸಿ ರಾಜ್ಯಮಂ ಕೊಟ್ಟೊಡೆನ್ನಂ ಮರೆದು |
ಸೊಕ್ಕಿ ತನಗೊರ್ಮಗನಂ ಮಾಡಿಕೊಂಡವನ |
ಮಕ್ಕಳಾಟಿಕೆಯಿಂದೆ ದೇವತಾಲಯ ತಟಾಕಾರಾಮ ಕೊಡನೆಗಳನು ||
ಇಕ್ಕಿ ಕಿಡಿಸಿದನೆಂದವನ ವಳಿತಮಂ ತೆಗೆದು |
ಕಕ್ಕಸದ ಬಂಧನದೊಳಿರಿಸಿ ಕುಂತಳ ನಗರಿ |
ಗಕ್ಕರಿಂ ದೈತಂದ ನಾದುಷ್ಟಬುದ್ಧಿ ಪಾಪಕರ ನವಗಡಿಸಿ ನಡೆಸಿ || ||೨೭||
ಕೊಂದಪನೊ ವಿಷವನೂಡಿಸಿ ಚಂದ್ರಹಾಸನಂ |
ಮಂದಮತಿಯಾಗಿ ಮರೆದಿರ್ದಪನೊ ಮಗನೆಂಬ |
ಸಂದೇಹದಿಂ ಚಂದನಾವತಿಯೊಳಿರದೆ ಕುಂತಳಪುರಕೆ ದುಷ್ಟಬುದ್ಧಿ ||
ನಿಂದಲ್ಲಿ ನಿಲ್ಲದೈತರೆ ಪಥದೊಳಿದಿರಾಗಿ |
ಬಂದು ನುಡಿದುದು ಸರ್ಪಮೊಂದು ನಿನ್ನಾಲಯದೊ |
ಳಿಂದುವರೆ ಗೊಡವೆಯಂ ಕಾದಿರ್ದ್ದನದು ನಿನ್ನ ಸುತನಿಂದೆ ಪೋದುದೆಂದು || ||೨೮||
ಮಾನವರ ತೆರದೊಳಿಂತೆಂದೊರೆದು ಫಣಿ ಬಿಲಕೆ |
ತಾನಿಳಿಯೆ ಕೇಳ್ದು ವಿಸ್ಮಿತನಾಗಿ ಮಂತ್ರಿ ದು |
ಮ್ಮಾನದಿಂ ನಗರದ ಸಮೀಪಕ್ಕೈತರೆ ವಾದ್ಯಘೋಷಿತಂ ಕಿವಿಯೊಳಿಡಿಯೆ ||
ಏನಿದುತ್ಸವಮೂರೊಳೆನೆ ಕಂಡವರ್ನಿನ್ನ |
ಸೂನು ಮದನಂ ಚಂದ್ರಹಾಸಂಗೆ ವಿಷಯೆಗೆ ವಿ |
ಧಾನದಿಂ ಮದುವೆಯಂ ಮಾಡಿಸಿದ ನವರೊಸಗೆ ಪೊಳಲೊಳಾದಪುದೆಂದರು || ||೨೯||
ಕೂರ್ಗಸಿಯ ನಿಳುಹಿದಂತಾಯ್ತು ಕರ್ಣದೊಳಾಗ |
ಕಾರ್ದುವಕ್ಷಿಗಳರುಣತೆಯ ನುಗ್ರಕೋಪದಿಂ |
ಮೀರ್ದನೇ ತನ್ನ ನೇಮವನಕಟ ಮಗನೆಂದು ಪಲ್ಗಡಿಯುತೈತರಲ್ಕೆ ||
ಸಾರ್ದಸಂತೋಷದಿಂ ಬಂದು ಕಾಲ್ಗೆರಗಿದೊಡೆ |
ಚೀರ್ದು ಸುತನಂ ಬೈದು ಮಂತ್ರಿ ನಿಜಸದನಮಂ |
ಸೇರ್ದು ಪೊನ್ನಂದಣಮನಿಳಿ ದಾತ್ಮಜಾತನಂ ನೋಡಿ ಮುಳಿದಿಂತೆಂದನು || ||೩೦||
ಮದನನಂ ಮದುವಕ್ಕಳಂ ಮಹಾವೈಭವದ |
ಮದುವೆಯಂ ತ್ಯಾಗಭೋಗವ ನುಚಿತ ರಚಿತಮಂ |
ಮುದದಿಂದೆ ಬಣ್ಣಿಸುವ ಭಟ್ಟರಂ ಬಿತ್ತರಿಸಿ ಪರಸುವ ಮಹೀಸುರರನು ||
ಸುದತಿ ವಿಷಯೆಗೆ ತಕ್ಕವರ ನಿಂದುಹಾಸನೆಂ |
ದಿದಿರಾಗಿ ಬಂದಾರತಿಯನೆತ್ತಿ ನುಡಿವ ಶಶಿ |
ವದನೆಯರ ನವಗಡಿಸಿ ಮಂತ್ರಿ ಬೈದಂ ತನ್ನ ಮನೆಗಾಪ್ತರಾದವರನು || ||೩೧||
ರಂಜಿಸುವ ಪೊಸಮುತ್ತಿನೆಸೆವ ಬಾಸಿಗದ ನೊಸ |
ಲಿಂ ಜಡಿವ ಮಣಿ ಭೂಷಣಾವಳಿಯ ಕಾಂತಿಯಿಂ |
ಮಂಜುಳ ಹರಿದ್ರ ಕುಂಕುಮ ಚರ್ಚಿತಾಂಗದಿಂ ಚೆಲ್ವಿಂದೆ ಸಂಗಡಿಸಿದ ||
ಅಂಜಲಿಗಳಿಂ ಮೆರೆವ ದಂಪತಿಗಳಭಿನಮಿಸೆ |
ಮಂಜರಂ ಮರಿಗಿಳಿಗಳಂ ನಿರೀಕ್ಷಿಸುವಂತೆ |
ನಂಜಿಡಿದಮನ ದಮಾತ್ಯಂ ನೋಡಿ ತನ್ನ ಸುತನಂ ಬಯ್ಯುತಿಂತೆಂದನು || ||೩೨||

ಮೂಢ ನೀನೆಲವೊ ಮದನ ನಿನ್ನೆಡೆಗೆ ನಾಂ |
ಗೂಢದಿಂ ಬರೆಸಿ ಕಳುಹಿದೊ ಡುರವಕಜ್ಜಮಂ |
ರೂಢಿಯಂ ಮಾಡಿ ಕೆಡಿಸಿದೆ ಪಾಪಿ ಹೃದಯಶೂಲವ ನೆನಗೆ ಮೇದಿನಿಯೊಳು ||
ಗಾಢದಿಂ ಬಲಿದೆ ಸಾಮ್ರಾಜ್ಯ ಸಿಂಹಾಸನಾ |
ರೂಢನಾಗಿರಲೊಲ್ಲ ದಾರ್ಜಿಸಿದ ವಿತ್ತಮಂ |
ವೇಡೈಸಿ ದಖಿಳ ಜನಕಿತ್ತೆ ವನವಾಸವೇ ಗತಿ ನಿನಗೆ ಹೋಗೆಂದನು || ||೩೩||
ಪಿತನ ಮಾತಂ ಕೇಳ್ದು ಮದನ ನುರೆ ಬೆರಗಾಗಿ |
ಖತಿಯೇಕೆ ಜೀಯ ನಿಮ್ಮಡಿಗಳ ನಿರೂಪಮಂ |
ಪ್ರತಿಪಾಲಿಸಿದೆನಲ್ಲದಾ ನತಿಕ್ರಮಿಸಿ ಮಾಡಿದ ಕಜ್ಜಮೇನಿದರೊಳು ||
ಕ್ಷಿತಿಗೆ ಕೌತುಕವೆ ತಂದೆಯ ಮಾತಿಗಾಗಿ ರಘು |
ಪತಿ ವರ್ತಿಸನೆ ವಿಪಿನ ವಾಸದೊಳ್ಪತ್ರ ಸಂ |
ಮತಿ ವಿಡಿದು ವಿಷಯೆಗೆ ವಿವಾಹಮಂ ವಿರಚಿಸಿದೊಡಾ ಯ್ತೆನಗೆ ವನಮೆಂದನು ||೩೪||
ಗನ್ನ ಗತಕದ ಮಾತು ಸಾಕೆನ್ನ ಕಣ್ಣ ಮುಂ |
ದಿನ್ನಿರದೆ ಹೋಗೆಂದು ಮಂತ್ರಿ ಮಗನಂ ಬೈದು |
ಮುನ್ನ ತಾಂ ಬರೆಸಿ ಕಳುಹಿದ ಪತ್ರಮಂ ತರಿಸಿ ನೋಡಿಕೊಂ ಡದರೊಳಿರ್ದ ||
ಭಿನ್ನಿಸಿದ ಭಾವಾರ್ಥಮಂ ತಿಳಿದು ತಪ್ಪಿಲ್ಲ |
ವೆನ್ನ ತನಯನೊ ಳಿನ್ನು ಲೋಕದೊ ಳ್ವಿಧಿ ಲಿಖಿತ |
ಮ ನ್ನಿವಾರಿಪರುಂಟೆ ಶಿವಶಿವಾ ಪೊಸತೆಂದು ಬಿಸುಸುಯ್ದು ಬೆರಗಾದನು || ||೩೫||
ವಿಷವ ಮೋಹಿಸುವಂತೆ ಕೊಡುವುದೆನ ಲೀತಂಗೆ |
ವಿಷಯೆ ಮೋಹಿಸುವಂತೆ ಕೊಡುವುದೆಂ ಬೀಲೇಖ |
ವಿಷಯವಿದು ವಿಧಿಕೃತವೊ ತನ್ನ ಮೋಸವೊ ಬರೆದವನ ಮರೆಹೊ ಶಶಿಹಾಸನ ||
ನ್ಮೃಷೆಯೊ ಮದನನ ಮೇಲೆ ತಪ್ಪಿಲ್ಲ ಮೊದ ಲೆನಗೆ |
ಋಷಿಗ ಳಾಡಿದ ಮಾತು ಪುಸಿಯದೆಂ ದಾಮಂತ್ರಿ |
ವಿಷಮಬುದ್ಧಿ ಯೊಳೊಂ ದುಪಾಯಮಂ ಮನದೊಳಗೆ ನೆನೆದು ಚಿಂತಿಸುತಿರ್ದನು||೩೬||
ವಿಧುಹಾಸನಂ ಪಲ ವುಪಾಯದಿಂದೀಗ ನಾಂ |
ವಧಿಸದಿರ್ದೊಡೆ ತನ್ನ ಸಂತತಿಗೆ ಧರೆಯ ನಾ |
ಳ್ವಧಿಕಸಂಪದವಾಗ ದವರಿಂದೆ ಕುಲಘಾತಕಗೆ ಮದುವೆಯಾದ ವಿಷಯೆ ||
ವಿಧವೆಯಾಗಿರಲೆಂದು ಹೃದಯದೊ ಳ್ನಿಶ್ಚೈಸಿ |
ಮಧುರೋಕ್ತಿಯಿಂದೆ ಮದುವಕ್ಕಳಂ ಮನ್ನಿಸಿ ವಿ |
ವಿಧವೈಭವಂಗಳಂ ನಡಿಸಿ ಜಾಮಾತನಂ ಮಂತ್ರಿ ಕರೆದಿಂತೆಂದನು || ||೩೭||
ವೀರ ಬಾಕೈ ಚಂದ್ರಹಾಸಂ ನೀ ನಿನ್ನೆಗಂ |
ದೂರವಾಗಿರ್ದೆ ನಮಗಿ ನ್ನಳಿಯನಾದ ಬಳಿ |
ಕೂರ ಹೊರ ಬನದೊ ಳಿಹಚಂಡಿಕಾಲಯಕೆ ಮದುವೆಯ ನಾಲ್ಕನೆಯ ದಿನದೊಳು |
ನೀರಜ ಸಖಾಸ್ತಸಮಯ ದೊ ಳೊರ್ವನೇ ಪೋಗಿ |
ಗೌರಿಯಂ ಪೂಜಿಸಿ ಬಹುದು ನಮ್ಮ ವಂಶ ದಾ |
ಚಾರವಿದು ವರನಾದವಂಗೆ ನೀನಿಂದಿದಂ ಮಾಡೆಂದು ನೇಮಿಸಿದನು || ||೩೮||

ಲೇಸಾದುದೆಂದು ಮಾವನ ಮಾತಿಗೊಪ್ಪಿ ಶಶಿ ।
ಹಾಸಂ ಪ್ರಸೂನ ಗಂಧಾಕ್ಷತೆಗಳಂ ತರಿಸ ।
ಲಾ ಸಚಿವ ನತಿಗೂಢದಿಂದೆ ಚಂಡಾಲರಂ ಕರೆಸಿ ನೀ ವಂದಿನಂತೆ ॥
ಮೋಸದಿಂ ಬಿಟ್ಟು ಬಾರದೆ ಚಂಡಿಕಾಲಯಕೆ ।
ನೇಸ ರಂಬುಧಿಗಿಳಿಯ ಲರ್ಚನೆಗೆ ಬಹ ನೊರ್ವ ।
ನೋಸರಿಸ ದಡಗಿಕೊಂಡಿ ರ್ದಾತನಂ ಕೊಲ್ವುದೆಂದು ಬೆಸಸಿದ ನವರ್ಗೆ ॥ ॥೩೯॥
ವಿಜಯ ಕೇಳಾ ಸಮಯದೊ ಳ್ಕುಂತಳೇಶ್ವರಂ ।
ನಿಜಶರೀರಚ್ಛಾಯೆ ತಲೆಯಿಲ್ಲದಿರೆ ಕಂಡು ।
ದ್ವಿಜಶಿರೋಮಣಿ ಗಾಲವಂ ಗರುಪಲಾತನಿದು ಮೃತಿಗೆ ಕಾರಣಮೆನಲ್ಕೆ ॥
ರುಜೆಗೆ ಮೈಗೊಡಬಾರದೆಂದು ನಿರ್ಮೋಕಮಂ ।
ಭುಜಗಪತಿ ಬಿಡುವಂತೆ ಸಕಲ ಸೌಭಾಗ್ಯಮಂ ।
ತ್ಯಜಿಸಿ ನಿರುಪಮ ಯೋಗಸಿದ್ಧಿಯಂ ಪಡೆಯೆ ವನವಾಸ ಕುದ್ಯೋಗಿಸಿದನು ॥ ॥೪೦॥
ಗಾಲವನ ಪದಕೆರಗಿ ಕೈಮುಗಿದು ನಿಂದು ಭೂ ।
ಪಾಲಕಂ ತನಗಿನ್ನು ಸಾಕು ರಾಜ್ಯದ ಚಿಂತೆ ।
ಕಾಲಮಂ ಸಾಧಿಸುವೆ ನತುಲ ಯೋಗದೊ ಳೆನಗೆ ಸುತರಿಲ್ಲ ಧರೆಯ ನಾರ್ಗೆ ॥
ಬಾಲೆ ಚಂಪಕಮಾಲಿನಿಯ ನಾರ್ಗೆ ಕುಡುವೆಂ ವಿ ।
ಶಾಲಮತಿ ಬೆಸಸೆಂದು ಬೇಡಿಕೊಳೆ ಲಕ್ಷಣ ಸು ।
ಶೀಲನಹ ಚಂದ್ರಹಾಸಂಗೆ ಮೇದಿನಿಸಹಿತ ಮಗಳ ನಿತ್ತಪುದೆಂದನು ॥ ॥೪೧॥
ಎಂದೊಡರಸಂ ಗಾಲವನ ಬುದ್ಧಿಯಂ ಕೇಳ್ದು ।
ತಂದೆ ಮಾಡುವ ರಾಜಕಾರ್ಯಮಂ ನಿರ್ವಹಿಸು ।
ತಂಪು ಬಾಗಿಲೊಳಿರ್ದ ಮದನನಂ ಕರೆಸಿ ಕೈವಿಡಿದು ಮೆಲ್ಲನೆ ಕಿವಿಯೊಳು ॥
ಮುಂದೆ ನಮಗುರ್ವ ಕೆಲಸದ ಪೊರಿಗೆಯುಂಟು ನೀ ।
ನಿಂದುಹಾಸನ ನಿಲ್ಲಿಗೀಗ ಳೊಡಗೊಂಡು ಬಾ ।
ಸಂದೇಹಿಸದೆ ಪೋ ಗೆನಲ್ಕೆ ಭೂಪಾಲನಂ ಬೀಳ್ಕೊಂಡು ಪೊರಮಟ್ಟನು ॥ ॥೪೨॥
ಉತ್ತಮ ಹಯಾರೂಢನಾಗಿ ಮದನಂ ಜವ ದೊ ।
ಳಿತ್ತಣಿಂ ದೈದೆ ರವಿ ಪಶ್ಚಿಮಾಂಬುಧಿ ಗಿಳಿವ ।
ಪೊತ್ತು ಪೊಂ ದಳಿಗೆಯೊ ಳ್ಪುಷ್ಪ ಫಲ ತಾಂಬೂಲ ಗಂಧಾಕ್ಷತೆಗಳ ನಿರಿಸಿ ॥
ಎತ್ತಿಕೊಂ ಡತ್ತಣಿಂ ಬಹ ಚಂದ್ರಹಾಸನ ನಿ ।
ದಿತ್ತ ಪೋದಪೆ ಯೆಂದು ಬೆಸಗೊಳ ಲ್ಮಾವ ಪಿತಂ ।
ತತ್ತ ಸುವ್ರತಮೆನ ಲ್ಚಂಡಿಕಾಪೂಜೆಯಂ ಮಾಡಿ ಬಂದಪೆ ನೆಂದನು ॥ ॥೪೩॥
ತಟ್ಟನೆ ತುರಂಗಮವನಿಳಿ ದಿಳೆಗೆ ಮತ್ಪಿತನ ।
ಕಟ್ಟಳೆಯ ಚಂಡಿಕಾಪೂಜೆಗಾಂ ಪೋದವೆಂ ।
ನೆಟ್ಟನೆ ಮಹೀಶ್ವರಂ ಪಿರಿದು ಕಜ್ಜಕೆ ನಿನ್ನ ನೊಡಗೊಂಡು ಬಾ ಯೆನಲ್ಕೆ ॥
ಕಟ್ಟವಸರಕೆ ಬಂದೆನೆಂ ದರ್ಚನಾ ದ್ರವ್ಯ ।
ವಿಟ್ಟ ಪೊಂ ದಳಿಗೆಯಂ ತೆಗೆದುಕೊಂ ಡಶ್ವಮಂ ।
ಕೊಟ್ಟಾತನಂ ಕಳುಹಿ ಪೊರಮಟ್ಟ ನೇಕಾಕಿಯಾಗಿ ಮದನಂ ಪೊಳಲನು ॥ ॥೪೪॥

ತನ್ನ ಪಿತನಾಜ್ಞೆಯಂ ನಡೆಸುವ ಕುಲವ್ರತದ |
ಸನ್ನಿ ಶಶಿಹಾಸಂಗೆ ಭಂಗಘಾವಪುದೆಂದು |
ಮನ್ನಿಸಿ ನೆರೆದ ಸಕಲಸೇವಕರನೆಲ್ಲರಂ ಕಳುಹಿ ತಾನೊರ್ವನಾಗಿ ||
ಉನ್ನತ ದ್ರುಮಷಂಡ ಮಂಡಿತದ ಬನದೊ ಳ್ಪ್ರ |
ಸನ್ನೆಯಾಗಿಹ ಚಂಡಿಕಾಲಯಕೆ ಬರುತಿರ್ದ |
ಸನ್ನೆಗಂ ಕರತಳದ ಗಂಧಪುಷ್ಪದ ಪಾತ್ರೆ ಯೋಸರಿಸಿ ಬಿದ್ದುದಿಳೆಗೆ || ||೪೫||

ಚೀರುತೆ ಪೊಣರ್ದುವು ಬಿಡಾಲಗ ಳ್ಪಕ್ಷಿಗ |
ಳ್ಕಾರಿದುವು ರುಧಿರಮಂ ಕೂಗಿದುವು ಗೂಗೆ ಗ |
ಳ್ಸಾರುತಿಹ ದುರ್ನಿಮಿತ್ತಂಗಳಂ ಕಂಡವಂ ವ್ರತಭಂಗದುಪ್ಪುದೆಂದು ||
ಮಾರಿ ನಡೆಯುತೆ ಮನದೊ ಳಿದರಿಂದೆ ಭೀತಿ ಗ |
ಳ್ತೋರದಿರ ಪವನಿಯೊ ಳ್ಚಂದ್ರಹಾಸಂ ಗೆನುತೆ |
ಮೂರಂಬಕದೊ ಳಿಸೆವ ದೇವನರಸಿಯ ಭವನಕಾ ಮದನ ನೈತಂದನು || ||೪೬||

ಖಳ ರಂತರಂಗ ಪ್ರವೇಶದ ವಿವೇಕಮಂ |
ಬಳಸಿ ದರಿಷಡ್ವರ್ಗಮೊತ್ತರಿಸಿ ಮುರಿವಂತೆ |
ಪೊಲ ಬರಿಯ ದೊಳವುಗುವ ಮದನನಂ ಮಂತ್ರಿ ಕಳುಹಿದೊ ಡಲ್ಲಿ ಬಂದಡಗಿದ ||
ಕೊಲೆಗಡಿಗ ಚಂಡಾಲ ರುಗಿದ ಕೈದುಗಳಿಂದೆ |
ಕೆಲಬಲದೊಳಿರ್ದು ಪೊಯ್ದಿರಿದು ಕೆಡಹಿದೊಡೆ ಭೂ |
ತಳಕೆ ಬೀಳುತ್ತವಂ ಮಾಧವಸ್ಮರಣೆಯಿಂ ದಸು ದೊರೆದ ನಾಕ್ಷಣದೊಳು || ||೪೭||

ಅವಗಡಿಸಿ ಮದನನಂ ಘಾತುಕ ರ್ಚಂಡಿಕಾ |
ಭವನದೊ ಳ್ಕೊಂದು ನಿಲ್ಲದೆ ಪೋದರಿತ್ತ ಲು |
ತ್ಸವದಿಂದೆ ಚಂದ್ರಹಾಸಂ ಕುಂತಳೇಂದ್ರನಂ ಕಾಣಲಾ ನೃಪ ನವಂಗೆ ||
ಅವನಿಯಂ ಕೊಟ್ಟರಸು ಪಟ್ಟವಂ ಕಟ್ಟಿ ಗಾ |
ಲವನ ಮತದಿಂದೆ ಗಾಂಧರ್ವ ವೈವಾಹದಿಂ |
ಕುವರಿ ಚಂಪಕಮಾಲಿನಿಯನಿತ್ತು ಸತ್ಕರಿಸಿ ಬನಕೆ ತಾಂ ಪೊರಮಟ್ಟನು || ||೪೮||

ಬಾಧಿಸುವ ಸುಖದುಃಖ ದೊಡಲೆನಿಪ ಸಂಸಾರ |
ಸಾಧನವನೆಲ್ಲಮಂ ತೊರೆದು ಸಮ್ಯಜ್ಞಾನ |
ಬೋಧಿತದ ಯೋಗಮಂ ಕೈಕೊಂಡು ಸತಿಸಹಿತ ಗಾಲವ ನನುಜ್ಞೆಯಿಂದೆ ||
ಗೋಧೂಳಿ ಲಗ್ನದೊ ಳ್ಪೊರಮಟ್ಟನಾ ಕುಂತ |
ಳಾಧಿಪ ನರಣ್ಯವಾಸಕೆ ಬಳಿಕ ಚಂದ್ರಹಾ |
ಸಾಧೀನವಾ ಯ್ತವನ ಸಂಪದಂ ಪುರುಷಸ್ಯ ಭಾಗ್ಯಮೆಂಬುದಂ ನಿಜಮೆನೆ || ||೪೯||

ಪಟ್ಟದರಸಾಗಲ್ಕೆ ಚಂದ್ರಹಾಸಂ ಬಳಿಕ |
ಪಟ್ಟಣದ ಜನ ಮರಿಯಲೆಂದು ಸಿಂಗರಿಸಿ ತೋ |
ರ್ಪಟ್ಟ ಗಜ ಮಸ್ತಕದ ಮೇಲೆ ನೃಪಸುತೆ ಸಹಿತ ಪೊರಮಟ್ಟ ನುತ್ಸವದೊಳು ||
ದಟ್ಟೈಸಿದ ವಾದ್ಯರವ ಮೊದರಿ ತೀವಾರ್ತೆ ಕಿವಿ |
ವಟ್ಟಿದೊಡೆ ದುಷ್ಟಬುದ್ಧಿಗೆ ಮತ್ತೆ ಭೀತಿ ಹೊ |
ಮ್ಮಿಟ್ಟಿ ತೇನೆಂಜೆನಿಸು ಪೊಸತಲಾ ದೈವಕೃತ ಮೆಂದು ಸೈವೆರಗಾದನು || ||೫೦||

ಗಾಲವನ ಮತದೊಳೆನ್ನಂ ಕರೆಸದಿಂದು ಭೂ ।
ಪಾಲಂ ಕುಳಿಂದತನಯಂ ಗಿಳಿಯ ನೊಪ್ಪಿಸಿ ವ ।
ನಾಲಯಕೆ ತೆರಳಿದನೆ ಮದನ ಸಿದ್ದೀ ಗೈದನೆಂದು ಪಲ್ಮೊರೆದು ಮಗನ ॥
ಮೇಲೆ ಕೋಪಿಸುತಿರ್ದ ನನ್ನೆಗಂ ಭ್ರಮರಾರಿ ।
ಮಾಲಿನಿ ವೆರೆಸಿ ಮಾವನಂ ಕಾಣಲೆಂದು ಶುಂ ।
ಡಾಲಮಸ್ತಕದಿಂದ ಮಿಳಿತಂದು ಶಶಿಹಾಸ ನೆರಗಿದಂ ಸಚಿವನಡಿಗೆ ॥ ॥೫೧॥

ಕಳಿವರಿವ ಕೋಪದಿಂ ಮಂತ್ರಿ ವಂಶಾಚಾರ ।
ಮುಳಿಯಲಾಗದು ಚಂಡಿಕಾರ್ಚನೆಗೆ ನಡೆಯೆಂದು ।
ಕಳುಹಿದೊಡೆ ನೀಂ ಮಾಡಿ ದುಜ್ಜುಗಮಿದೇನೆಂದು ಕೇಳ್ದೊಡಾ ಶಶಿಹಾಸನು ॥
ಅಳವಡಿಸಿಕೊಂಡು ನಾಂ ಪೋಗುತಿರೆ ನಡುವೆ ಕುಂ ।
ತಳರಾಜ ನರಮನೆಗೆ ತನ ಗವಸರವ ನಿತ್ತು ।
ತಳರ್ದ ನೊರ್ವನೆ ನಿನ್ನ ಮಗ ನಂಬಿಕಾಪೂಜೆ ಗಿಂತಾಯ್ತು ಬಳಿಕೆಂದನು ॥ ॥೫೨॥

ಹಮ್ಮೈಸಿದಂ ದುಷ್ಟಬುದ್ಧಿ ನಯದೊಳ ಗಳಿಯ ।
ನ ಮ್ಮನೆಗೆ ಬೀಳ್ಕೊಟ್ಟ ನರಿದರಿದು ಪರಹಿಂಸೆ ।
ಘು ಮ್ಮಾಡಿ ಮಾನವಂ ಬಾಳ್ದಪನೆ ದೀಪಮಂ ಕೆಡಿಸುವ ಪತಂಗದಂತೆ ॥
ನಮ್ಮುಪಾಯವೆ ನಮಗಪಾಯಮಂ ತಂದು ದೆಂ ।
ದೊಮ್ಮೆ ನಿಜಸದನಮಂ ಪೊಕ್ಕಾರು ಮರಿಯದ ವೊ ।
ಲುಮ್ಮಳಿಸಿ ಶೋಕದಿಂ ಪೊರಮಟ್ಟನೇರಿಳಿದು ಕೋಂಟೆಯಂ ಕತ್ತಲೆಯೊಳು ॥ ॥೫೩॥

ಮಿಾಂಟುವಗ್ಗದ ಶೋಕದಿಂದಿರದೆ ಪೊರಮಟ್ಟು ।
ನಾಂಟುವೊತ್ತುವ ಮುಳ್ಳುಕಲ್ಗಳಂ ಬಗೆಗೊಳದೆ ।
ದೀಂಟಿಗುಳಿಗಳ ನರಿಯದೇಳುತ್ತೆ ಬೀಳುತ್ತೆ ತಲೆಗೆದರಿ ಬಾಯ್ಬಿಡುತ್ತೆ ॥
ಕೋಂಟೆಗಳ ನೇರಿಳಿದು ಪರಿಖೆಯ ಜಲಂಗಳಂ ।
ದಾಂಟಿ ಕತ್ತಲೆಯೊಳೊರ್ವನೆ ಮಂತ್ರಿ ಪೊಳಲ ಪೊರ ।
ದೋಂಟ ಪೆಡೆಯೊಳ್ನಿಲಸಿ ದಂಬಿಕಾಭವನಮಂ ಸಾರ್ದ ನದನೇವೇಳ್ವೆನು ॥ ॥೫೪॥

ಪರಿದ ಪೂಮಾಲೆಗಳ ಬಣ್ಣ ಗೂಳ್ಗಳ ಬಲಿಯ ।
ಮೊರದ ಪಳಗೊಳ್ಳಿಗಳ ಭಸ್ಮದೊಡೆ ದೋಡುಗಳ ।
ಮುರಿದ ಗೂಡಂಗಳ ಕಳಲ್ದ ಶಿಬಿಕೆಗಳ ಚಿತಿಯೊಳ್ಬೇವ ಕುಣಪಂಗಳ ॥
ತುರುಗಿ ದೆಲುವಿನ ಜಂಬುಕಾವಳಿಯ ಗೂಗೆಗಳ ।
ಬಿರುದನಿಯ ಭೂತ ವೇತಾಳ ಸಂಕುಲ ವಡಗಿ ।
ಸರಕೆಗಳ ಸುಡುಗಾಡೊಳಾ ಮಂತ್ರಿ ಚಂಡಿಕಾಲಯದೆಡೆಗೆ ನಡೆತಂದನು ॥ ॥೫೫॥

ತಂಡ ತಂಡದ ಭೂತ ವಿತತಿಗ ಳ್ತಲೆಗೆದರಿ ।
ಕೊಂಡು ಪೆರ್ಮರುಳಂತೆ ಬಹ ದುಷ್ಟಬುದ್ಧಿಯಂ ।
ಕಂಡು ತಾ ವತಿಪಾತಕಂಗಳಂ ಮಾಡಿದ ಪಿಶಾಚರಗ್ಗಳಿಯ ರೆಮ್ಮ ॥
ಹಿಂಡೊಳಿವನ ಪೊಲಾರ ಮಿಲ್ಲಾವ ಪಾಪ ದು ।
ದ್ದಂಡವೊ ಹಿರಣ್ಯಕಶಿಪುವಿ ನೆದೆಯನುರೆ ಬಗಿದ ।
ಚಂಡದೈವದ ಪೆಸರ ನುಸಿರುವನ ದೆಸೆಗೆಲ್ಲ ಪಳುಕನಿವ ನೆನುತಿರ್ದುವು ॥ ॥೫೬॥

ಪಾಕಶಾಸನ ತನಯ ಕೇಳ್ಬಳಿಕ ಮಂತ್ರಿ ಸುತ |
ಶೋಕದಿಂ ವಲ್ಲಿಹ ಮರುಳ್ಗಳಂ ಕಾಣ ದವಿ |
ವೇಕದಿಂ ಬೇವಕುಣಪದ ಚಿತಿಯೊಳುರಿವ ಕಾಷ್ಠಂಗಳಂ ತೆಗೆದುಕೊಂಡು ||
ಆ ಕಾಳಿಕಾಲಯಕೆ ಬಂದದರ ಬೆಳಕಿ ನೊ |
ಳ್ವ್ಯಾಕೀರ್ಣ ಕೇಶದ ನಿಮಿರ್ದ ಕೈಕಾಲುಗಳ |
ನೇಕಾಯುಧದ ಗಾಯದೊಡಲ ರುಧಿರದ ಪೊನಲ ಸುಕುಮಾರನಂ ಕಂಡನು ||೫೭||
ಉನ್ನಿಸಿದ ನಿಜಮನೋರಥ ಮುಡಿ ಮುರಿಗಿದಂತೆ |
ತನ್ನ ಕುಲತರು ಮುರಿದು ಬಿದ್ದಂತೆ ಸೌಭಾಗ್ಯ |
ದುನ್ನತ ಪ್ರಸಾದ ಮೊಗುರ್ಡಿಸಿ ಕೆಡೆದಂತೆ ಮುರಿದ ಮೀಸೆಗಳ ಮೊಗದ ||
ಬಿನ್ನಣದ ಬಿಟ್ಟಕಂಗಳ ಬಿಗಿದ ಪುರ್ಬುಗಳ |
ಕೆನ್ನೀರೊಳದ್ದ ಕೇಶದ ಶೋಣಿತಾಂಬರದ |
ಭಿನ್ನಮಾ ದವಯವದ ನಂದನಂ ಕಾತ್ಯಾಯನಿಯ ಮುಂದೆ ಮಡಿದಿರ್ದನು ||೫೮||
ಕಯ್ಯೊಳಿಹ ಕಾಷ್ಠಂಗಳಂ ಬಿಸುಟು ತನುಭವನ |
ಮೆಯ್ಯ ಗಾಯಂಗಳಂ ತಡಹಿ ತಕ್ಕೈಸಿ ಮಗು |
ಳೊಯ್ಯನೊಯ್ಯನೆ ಕುಳ್ಳಿರಿಸಿ ಮೊಗಕೆ ಮೊಗವಿಟ್ಟು ಚುಂಬಿಸಿ ಕುಮಾರ ನಿನ್ನ ||
ಅಯ್ಯನಾಂ ಬಂದೆನೇಳ್ತೆ ತಂದೆ ನಾಡ ನಾ |
ರಯ್ಯಬೇಡವೆ ಕಂದ ಕುಂತಳಾಧೀಶ ನೇ |
ಗೆಯ್ಯ ಹೇಳಿದನೆನಗೆ ವಿವರಿಸದೆ ಸುಮ್ಮನಿರ್ದಪೆ ಯೆಂ ದೊರಲ್ದನವನು || ||೫೯||
ಬಂದನಿದೆ ಶಶಿಹಾಸ ನನುಜೆಯಂ ಕಂಡು ವಿಪ್ರ |
ವೃಂದಮಂ ತಣಿಸು ಬಹುವಿಧದಿಂದೆ ನಾಂ ಬೈದ |
ನೆಂದು ಮುನಿದಿರಬೇಡ ವೈಷ್ಣವದ್ರೋಹದಿಂ ದೆನಗಿಂತುಟಾಗದಿಹುದೆ ||
ಕಂದ ನೀ ನಚ್ಯುತ ಪರಾಯಣಂ ಶಿವಪೂಜ |
ಕಂ ದೇವ ಗುರು ಧರಾಮರ ಸೇವಕಂ ಮೋಸ |
ದಿಂ ವಳಿವು ದುಚಿತವೆ ಮದನ ತನ್ನ ಮರಿಯಾನೆ ಹಾ ಯೆಂ ದೊರಲ್ದನಂದು ||೬೦||
ಮಿತ್ರಪ್ರಿಯಂ ರಾಜತೋಷಿತಂ ಮಂಗಳ ಚ |
ರಿತ್ರಂ ಬುಧಾಶ್ರಯಂ ಗುರುಭಾವಿ ಕವಿನುತ ವಿ |
ಚಿತ್ರಗುಣಿ ಮಂದರನಿಭಂ ಭೋಗಿ ಸಂತತಂ ಧ್ವಜ ವಜ್ರ ಶುಭಚರಣನು ||
ಪುತ್ರ ನಿನಗಪ್ಪುದು ನವಗ್ರಹಸ್ಥಿತಿಗ ಳ್ಪ |
ರಿತ್ರಾಣಮಂ ಮಾಡಿದವರಿಲ್ಲ ನಿನಗಾನೆ |
ಶತ್ರುವಾದೆಂ ಮಗನೆ ಹಾ ಯೆಂದು ಹಲುಬಿದಂ ಮಂತ್ರಿ ಶೋಕಾರ್ತನಾಗಿ ||೬೧||
ಕಂಬನಿಗ ಳರುಣಾಂಬುವಂ ತೊಳೆಯೆ ಮುಂಡಾಡಿ |
ಪಂಬಲಿಸಿ ಹಲುಬಿದಂ ಮರುಗಿ ತನ್ನಿಂ ದಳಿದ
ನೆಂಬಳ ಲ್ಮಿಗೆ ಮಂತ್ರಿ ಸೈರಿಸದೆ ಕೆಲಬಲದ ಕಂಬಂಗಳಂ ಪಾಯಲು ||
ಕುಂಬಳದ ಕಾಯಂತೆ ಚಿಪ್ಪಾಗಿ ನಿಜ ಮಸ್ತ |
ಕಂ ಬಿರಿದು ಬಿದ್ದ ಸುರ್ವಿಗೆ ಪೋದು ದಸು ಕಾಯ |
ದಿಂ ಬಳಿಕ ನಂದಿದ ಸೊಡರ್ಗಳೆನೆ ಮೃತರಾಗಿ ಸುತ ತಾತ ರಿರುತಿರ್ದರು || ||೬೨||

ಅರಿಯರಾರುಂ ಪುರದೊಳಿವರಿಲ್ಲಿ ಮಡಿದುದುಂ ।
ತುರುಗಿದ ತಮೋಂಧಮೊಯ್ಯನೆ ಜಾರಿ ತಳಿಕುಲದ ।
ಸೆರೆ ಬಿಟ್ಟು ದಂಬುಜದೊಳೊಡನೆ ತಲೆದೋರಿದಂ ತರಣಿ ಮೂಡಣ ದೆಸೆಯೊಳು ॥
ಪೊರಮಟ್ಟು ಚಂಡಿಕಾಲಯಕೆ ಪೊಸ ಪೂಗಳಂ ।
ತಿರಿತಂದು ಪೂಜಿಸುವೊಡೊಳವುಗುವ ತಾಪಸಂ ।
ಬೆರೆತು ಬಿದ್ದಿಹ ತಂದೆಮಕ್ಕಳಂ ಕಂಡು ಹಮ್ಮೈಸಿ ವಿಸ್ಮಿತನಾದನು ॥ ॥೬೩॥

ಪಟ್ಟಣದೊಳಿರುಳೊಸಗೆ ಪಸರಿಸಿತು ರಾಜ್ಯಮಂ ।
ಬಿಟ್ಟು ವನಕೈದಿದಂ ಕುಂತಳಾಧೀಶ್ವರಂ ।
ಪಟ್ಟವಾದುದು ಚಂದ್ರಹಾಸಂಗೆ ಸೂನುಸಹಿತೀ ದುಷ್ಟಬುದ್ಧಿಗಿಲ್ಲಿ ॥
ಕೆಟ್ಟೆಣಿಸಿ ದವರಾರೊ ಶಿವಶಿವಾದ್ಭುತ ಮೆನುತೆ ।
ನೆಟ್ಟನೆ ನೃಪಾಲಯಕೆ ತಾಪಸಂ ಬಂದು ಮೊರೆ ।
ಯಿಟ್ಟೊಡೆ ಕುಳಿಂದಜಂ ಕೇಳ್ದು ರಿದೆ ಪೊರಮಟ್ಟು ಕಾಲ್ನಡೆಯೊಳೈತಂದನು ॥ ॥೬೪॥

ಚಂಡಿಕಾಲಯ ಕಖಿಳ ಜನಸಹಿತ ನಡೆತಂದು ।
ದಿಂಡುಗೆಡೆದಿಹ ಮಾವ ಮೈದುನರ ಹಾನಿಯಂ ।
ಕಂಡು ಕಡುಶೋಕದಿಂದುರೆ ನೊಂದು ಚಂದ್ರಹಾಸಂ ದೇವಿಯಂ ನೋಡುತೆ ॥
ಖಂಡಿಸಿದೆಲಾ ತನ್ನ ಭಾಗ್ಯಮಂ ತಪ್ಪಾವು ।
ದಂಡಲೆದು ಪಡೆವೆ ನಿವರಸುಗಳಂ ಮೀರಿದೊಡೆ ।
ಪುಂಡರೀಕಾಂಬಕನ ಸಾಯುಜ್ಯ ಮೆನಗಾಗಲೆಂದು ನಿಶ್ಚಿತನಾದನು ॥ ॥೬೫॥

ರಭಸದಿಂ ದೈತಂದು ಗೋಳಿಡುವ ಬಂಧುಜನ ।
ಕಭಯಮಂ ಕೊಟ್ಟು ನಿಶ್ಚಲನಾಗಿ ಶಶಿಹಾಸ ।
ನಭವ ನರಸಿಯ ಮುಂದೆ ಚತುರಶ್ರದೊಳ್ಕುಂಡಮಂ ತೆಗೆಸಿ ಬಳಿಕದರೊಳು ॥
ಅಭಿಶೋಭಿಪ ವೊಲಗ್ನಿಯಂ ಪ್ರತಿಷ್ಠಿಸಿ ವಿಪ್ರ ।
ಸಭೆಸಹಿತ ಕುಳ್ಳಿರ್ದು ಬಲಿ ದೀಪ ಮುಂತಾದ ।
ವಿಭವಂಗಳಂಮಾಡಿ ಘೃತ ಪಾಯ ಸಾಜ್ಯ ತಿಲ ಹೋಮಂಗಳಂ ಜೇಳ್ದನು ॥ ॥೬೬॥

ಹೇಳಲೇನೈ ಪಾರ್ಥ ಚಂದ್ರಹಾಸಂ ಬಳಿಕ ।
ಬಾಳಿಂದೆ ನಿಜದೇಹ ಮಾಂಸಮಂ ಕೊಯ್ದೊಯ್ದು ।
ಜೇಳಿ ಪೂರ್ಣಾಹುತಿಗೆ ಶಿರವ ನರಿದಪೆನೆಂದು ಖಡ್ಗಮಂ ಗೋಣ್ಗೆ ಪೂಡಿ ॥
ಕಾಳಿ ನೀ ನಖಿಳ ಶಕ್ತಿಗಳ ರೂಪಂಗಳಂ ।
ತಾಳಿ ಸರ್ವಾತ್ಮಕನ ಕೂಡಿ ರಮಿಸುವೆ ಫಲಾ ।
ನ್ಯಾಳಿಕಾಯಿಗೆ ಸಮರ್ಪಿತ ಮಾಗಲೊಪ್ಪುಗೊಳ್ಳೆಂದರಿಯ ಲಸುವಾದನು ॥ ॥೬೭॥

ಜೆಚ್ಚಿದಂತೆಸೆವ ಪೀಠವ ನಿಳಿದು ರುದ್ರಾಣಿ ।
ಜೆಚ್ಚರದೊಳೈತಂದು ಕಯ್ಯ ಬಾಳಂ ಪಿಡಿದು ।
ಸಿಚ್ಚಟದ ಹರಿಭಕ್ತಿಗಾಂ ಪ್ರೀತಿಯಿಂ ತಳೆದೆ ನಾತ್ಮವಧೆ ಬೇಡ ನಿನಗೆ ॥
ಪೆಚ್ಚಿಪ ಕುಮಂತ್ರ ಪಾಪದೊಳಳಿದ ನೀಮಂತ್ರಿ ।
ಪೆಚ್ಚಿಸಿದ ನಸುವ ನಾತನ ಸುತಂ ನಿನಗಾಗಿ ।
ಮೆಚ್ಚಿಸಿವೆ ನೀಂ ಮಗನೆ ಬಯಕೆಯಂ ಪೇಳೆರಡು ವರವನಿತ್ತಪೆನೆಂದಳು ॥ ॥೬೮॥

ದೇವಿಯ ಪದಾಂಬುಜದೊಳೆರಗಿ ಕೈಮುಗಿದು ನಿಂ |
ದಾವಾವ ಜನ್ಮ ಜನ್ಮಾಂತರ ದೊಳೆನಗೆ ರಾ |
ಜೀವನಾಭನ ಭಕ್ತಿ ದೊರಕೊಳಲಿದೊಂದು ಮಡಿದಿಹ ಮಂತ್ರಿ ಮಂತ್ರಿಸುತರು ||
ಜೀವಿಸ ಲಿದೊಂ ದೀಗ ಳಿಂತೆರಡು ವರಮುಂ ಕೃ |
ಪಾವಲೋಕನದೊ ಳಿತ್ತಪ್ಪುದೆಂದು ಮತ್ತೆ ಚರ |
ಣಾವನತ ನಾಗಲ್ಕೆ ಪಿಡಿದೆತ್ತಿ ಕ್ಷತಮಡಗೆ ಮೈದಡವು ತಿಂತೆಂದಳು || ||೧೯||

ಜಗದೊಳಾ ರಚ್ಯುತ ಪ್ರೀತಿಯಂ ಮಾಡುವ |
ರ್ಮಗನೆ ತನಗಿಷ್ಟ ರವರಾ ಬಾಲ್ಯದಿಂದೆ ನೀ |
ನಗಧರ ಧ್ಯಾನಪರನಾಗಿರ್ಪೆ ನಿನ್ನ ಚರಿತವ ನೋದಿ ಕೇಳ್ವವರ್ಗೆ ||
ಮಿಗೆ ವರ್ಧಿಪುದು ಮುಕುಂದಾಭಿರತಿ ಮುಂದೆ ಕಲಿ |
ಯುಗದೊ ಳೆನ್ನಾಜ್ಞೆಯಿದು ಹರಿಭಕ್ತಿ ನಿನಗೆ ಬೆಳ |
ವಿಗೆಯಾಗ ದಿರ್ಪುದೆ ನಿನ್ನ ವಾಂಛಿತ ಕಿನ್ನು ಕಡೆಯುಂಟೆ ಹೇಳೆಂದಳು || ||೨೦||

ಎಂದು ಕಾರುಣ್ಯದಿಂ ತಾನೊಮ್ಮೆ ಕಣ್ಮುಚ್ಚಿ |
ನಿಂದು ಜಾನಿಸಲಾಗ ತಲೆದೋರಿ ತಾಕ್ಷಣದೊ |
ಳೊಂದು ವೈಷ್ಣವಶಕ್ತಿ ಬಳಸಿದಾಯುಧ ದಿಂ ದದಂ ಪರಸಿ ಕೊಟ್ಟು ಬಳಿಕ ||
ಇಂದುಹಾಸನ ಮಸ್ತಕದ ಮೇಲೆ ನಿಜಕರವ |
ನೊಂದಿಸಿ ತದೀಯ ಮಂತ್ರೋಪದೇಶಂ ಗೈದ |
ಳಂದು ಕರ್ಣದೊಳಾನತ ಪ್ರೀತೆ ಗಿರಿಜಾತೆ ವಿಖ್ಯಾತೆ ಲೋಕಮಾತೆ || ||೨೧||

ತಾಯೆ ಪಾರ್ವತಿ ಪರಮಕಲ್ಯಾಣಿ ಶಂಕರ |
ಪ್ರೀಯೆ ಸರ್ವೇಶ್ವರಿ ಜಗನ್ಮಾತೆ ಸನ್ನುತ |
ಚ್ಛಾಯೆ ಸಾವಿತ್ರಿ ಶಾರದೆ ಸಕಲ ಶಕ್ತಿರೂಪಿಣಿ ಕಾಳಿ ಕಾತ್ಯಾಯನಿ ||
ಶ್ರೀಯೆ ವೈಷ್ಣವಿ ವರದೆ ಚಂಡಿ ಚಾಮುಂಡಿ ನಿರ |
ಪಾಯೆ ನಿಗಮಾಗಮಾರ್ಚಿತೆ ಮಂತ್ರಮಯಿ ಮಹಾ |
ಮಾಯೆ ರಕ್ಷಿಪುದೆಂದು ಕೈಮುಗಿದು ಚಂದ್ರಹಾಸಂ ಬೇಡಿಕೊಳುತಿರ್ದನು || ||೨೨||

ಹರಿಯ ವಕ್ಷಸ್ಥಳವ ಸಜನ ವದನಾಬ್ಜಮುಂ |
ಗಿರಿಶನ ಕಳೇಬರಾರ್ಧವ ನಿಂಬುಗೊಂ ಡೆಸೆವ |
ಪರಮಕಲ್ಯಾಣಿ ಕಾಲತ್ರಯ ದುಪಾಸ್ತಿಗಧಿದೇವಿ ಗಾಯತ್ರಿ ವರದೆ ||
ಗರುಡವಾಹನೆ ಹಂಸಗಮನೆ ವೃಷಭಾರೂಢೆ |
ನಿರುಪಮ ಫಲಪ್ರದಾಯಿನಿ ಪುಣ್ಯಮಯಿ ಸಕಲ |
ದುರಿತಹರೆ ತನ್ನನುದ್ಧರಿಸೆಂದು ಚಂದ್ರಹಾಸಂ ಬೇಡಿಕೊಳುತಿರ್ದನು || ||೨೩||

ಮೊಳಗಿದುವು ದೇವದುಂದುಭಿಗಳಂ ತಾಗ ಪೂ |
ಮಳೆ ಕರೆದು ದಭ್ರದೊ ಳ್ಕೊಂಡಾಡಿ ತಮರ ತತಿ |
ಬಳಿಕ ಶಾಂಭವಿ ಮಾಯವಾದ ಳಸು ಪಸರಿಸಿತು ಮದನ ಮಂತ್ರಿಗಳೊಡಲೊಳು ||
ಬಲ ರೂಪ ಕಾಂತಿಗ ಳ್ಮುನ್ನಿ ನಂದದೊ ಳೆಸೆಯೆ |
ಮಲಗಿದವ ರೇಳ್ವಂತೆ ಕಣ್ದೆರೆದು ಕುಳ್ಳಿರ್ದ |
ರೊಲವಿಸಿಂ ಚಂದ್ರಹಾಸಂ ಮಾವನಡಿಗೆ ಮಣಿದಪ್ಪಿದಂ ಮೈದುನನನು || ||೨೪||

ಭೂವಲಯಕಿದು ಪೊಸತು ಮರಣಮಾದೊಡೆ ಮತ್ತೆ |
ಜೀವನುಂ ಬರಿಸಿದವರುಂಟೆ ನಿನ್ನ ವೊಲೆಂದು |
ಕೈವಾರಿಸುವ ನಿಖಿಳ ಪೌರಜನ ಪರಿಜನಕೆ ಚಂದ್ರಹಾಸಂ ಮುದದೊಳು ||
ಕಾವರಾ ಕೋರ್ಲ್ವರಾ ರಳಿವರಾ ರುಳಿವ ರಾ |
ರ್ಭಾವಿಪೊಡೆ ವಿಷ್ಣುಮಾಯಾಮಯ ಮಿದೆಂ ದರಿದು |
ನೀವೆಲ್ಲರುಂ ಕೃಷ್ಣಭಜನೆಗೈದಪುದೆಂದು ಸಾರಿದಂ ಬೇಡಿಕೊಳುತೆ || ||೭೫||
ಇಮ್ಮಡಿಸಿ ತುತ್ಸವಂ ಬಳಿ ಕನಿಬರೆಲ್ಲರುಂ |
ಸುಮ್ಮಾನದಿಂದೆ ನಗರ ಪ್ರವೇಶಂ ಗೈದ |
ರುಮ್ಮಳಿಸುತಿರ್ದಂ ಕುಳಿಂದಕಂ ಪಾರ್ಥ ಕೇಳಾ ಚಂಪನಾವತಿಯೊಳು ||
ಸನ್ಮತದೊಳಾತನಂ ಕರೆಸಿಕೊಂಡಾ ರಾಜ್ಯ |
ಮ ಮ್ಮಹಾವಿಭವದಿಂ ವರಿಸಿದಂ ಚಂದ್ರಹಾ |
ಸ ಮ್ಮುದಾನ್ವಿತನಾಗಿ ವಿಷಯೆ ಚಂಪಕಮಾಲಿನಿಯರ ಸಂಭೋಗದಿಂದೆ || ||೭೬||
ನಂದನಂ ಜನಿಸಿದಂ ಬಳಿಕ ವಿಷಯಾ ಗರ್ಭ |
ದಿಂದೆ ಮಕರಧ್ವಜಾಖ್ಯಂ ಕೂಡೆ ಸೌಭಾಗ್ಯ |
ದಿಂದೆ ಚಂಪಕಮಾಲಿನಿಯ ಬಸಿರೊ ಳುದಿಸಿದಂ ಪದ್ಮಾಕ್ಷನೆಂಬ ಸೂನು ||
ತಂದೆಗಿಮ್ಮಡಿ ಪರಾಕ್ರಮಿಗಳಾದ ರ್ಧರೆಯೊ |
ಳಿಂದುಹಾಸಂಗೆ ಸಮನಾದ ದೊರೆಯಿಲ್ಲಾದು |
ದಿಂದುವರೆಗಾತಂಗೆ ಮುನ್ನೂರು ಬರಿಸಮಿರ್ದಪನೀಗ ವೃದ್ಧನಾಗಿ || ||೭೭||
ಬುದ್ಧಿಪೂರ್ವಕ ಮಿಲ್ಲದಿಹ ಬಾಲಕಂಗೆ ಪರಿ |
ಶುದ್ಧ ಸಾಲಗ್ರಾಮಶಿಲೆಯ ಸಂಸರ್ಗದಿಂ |
ದುದ್ಧತದ ಸಾಮ್ರಾಜ್ಯಪದವಿ ಕೈಸಾರ್ದುದೆನ ಲಿನ್ನು ಬೇಕೆಂದು ಬಯಸಿ ||
ಶ್ರದ್ಧೆಯಿಂ ಪ್ರತಿದಿನದೊ ಳರ್ಚಿಸುವ ನರನಾವ |
ಸಿದ್ಧಿಯಂ ಪಡೆದಪನೊ ತನಗದರ ಪುಣ್ಯ ದಭಿ |
ವೃದ್ಧಿಯಂ ಬಣ್ಣಿಸುವೊ ಡರಿದೆಂದು ಫಲುಗುಣಂ ಗಾನಾರದಂ ಪೇಳ್ದನು || ||೭೮||
ಹರಿಯ ಸಾಲಗ್ರಾಮಶಿಲೆಯ ಮಹಿಮೆಗಳ ನಾ |
ದರದಿಂದೆ ವಿಸ್ತರಿಸಿ ಚಂದ್ರಹಾಸನ ಪೂರ್ವ |
ಚರಿತಮಂ ಪೇಳ್ದು ವಂದನೆಗೊಂಡು ದೇವಮುನಿ ಸರಿದ ನಂಬರಪಥದೊಳು ||
ವರಭಾಗವತ ಶಿರೋಮಣಿಯ ದರ್ಶನದಿಂದೆ |
ಪರಮವೈಷ್ಣವ ಸಂಗತಿಯ ನಾಲಿಸಿದೆನೆಂದು |
ಸುರನಗರದೆರೆಯ ಲಕ್ಷ್ಮೀಪತಿಯ ಮೈದುನಂ ಪರಿತೋಷಮಂ ತಾಳ್ದನು || ||೭೯||

ಸಂಧಿ ೩೧ ಕ್ಕೆ ಪದ್ಯಗಳು ೧೭೫೦ ಕ್ಕೆ ಮಂಗಳಮಸ್ತು.

---

# ಮುವ್ವತ್ತೆರಡನೆಯ ಸಂಧಿ.

ಸೂಚನೆ॥ ವರಚಂದ್ರಹಾಸನಂ ಪ್ರೀತಿಯಿಂದೊಡಗೊಂಡು ।
ಶರನಿಧಿಯ ಮಧ್ಯದೊಳ್ಬಕ ದಾಲ್ಭ್ಯನಂ ಕಂಡು ।
ಮುರಳಿ ಕೃಷ್ಣಾರ್ಜುನ ಸಿಂಧುದೇಶದ ಮೇಲೆ ಗಜನಗರಿಗೈತಂದರು ॥

ಕೇಳ್ದಿಲಾ ನರನಾಥ ಪಾರ್ಥಂಗೆ ನಾರದಂ ।
ಪೇಳ್ದವೃತ್ತಾಂತಮಂ ಬಳಿಕ ಸಂತೋಷಮಂ ।
ತಾಳ್ದು ಕುಂತೀಸುತಂ ಚಂದ್ರಹಾಸಪುರಾಭಿಮುಖವಾಗಿ ನಡೆಯುತಿರಲು ॥
ಆಳ್ದೇರಿ ತಮತಮಗೆ ಭೂಪಾಲರೈದೆ ಕೆಂ ।
ದೂಳ್ದೀವ ಲೋಕಮಂ ಕಿತ್ತೆತ್ತಿ ಕೊಂಡೊಯ್ದು ।
ದಾಳ್ದದಿನ್ನೇ ನಂಬುಧಿಯೊಳವನಿತಳ ಮೆಂಬ ತೆರನಾಗೆ ಪದಹತಿಯೊಳು ॥ ॥೧॥
ಬರುತಿರ್ದು ದರ್ಜುನನ ಸೈನಿಕಂ ಕುಂತಳನ ।
ಗರಿಗಾಗಿ ಜನಮೇಜಯಕ್ಷಿತಿಪ ಕೇಳಿತ್ತು ।
ನರನ ವಾಜಿಗಳೂರ ಪೊರವಳಯ ದುಪವನದ ನಡುವೆ ನಮ್ಮಿಚ್ಛೆಯಿಂದೆ ॥
ತಿರುಗುತಿರೆ ಕಂಡವ ಕೌತುಕಮಿದೆಂದು ಬಂ ।
ದೊರೆಯೆ ಪದ್ಮಾಕ್ಷ ಮಕರಧ್ವಜ ಪಿಡಿ ದವರ ।
ಶಿರದ ಪಟ್ಟದ ಲಿಪಿಯ ನೋದಿ ವಿಸ್ಮಿತರಾಗಿ ತಂದೆಗೊಪ್ಪಿಸಿ ನುಡಿದರು ॥ ॥೨॥
ಜೀಯ ಬಿನ್ನಪವ ನವಧರಿ ಸಿಳೆಯಮೇಲೆ ಕೌಂ ।
ತೇಯನ ಮಹಾಧ್ವರದ ವಾಜಿಗಳ್ತಿರುಗಿ ತರು ।
ವಾಯೊಳಿಲ್ಲಿಗೆ ಬಂದೊಡಾವು ಕಟ್ಟಿದೆವಿನ್ನು ಬಿಡಿಸಿಕೊಂಬತಿಬಲರನು ॥
ಸಾಯಕದ ಮೊನೆಯೊಳೈಸಲೆ ಕಾಣಬೇಕೆನ ।
ಲ್ಪ್ರೀಯದಿಂ ತನಯರಂ ತೆಗೆದಪ್ಪಿ ತಾ ನಭಿ ।
ಪ್ರಾಯಮಂ ತಿಳಿದು ಹರ್ಷಿತನಾಗಿ ಚಂದ್ರಹಾಸಂ ನಯದೊಳಿಂತೆಂದನು ॥ ॥೩॥
ಮಕ್ಕಳಿರ ಕೇಳಿ ತಾ ನಾಬಾಲ್ಯದಿಂದೆ ಬಿಡ ।
ದಕ್ಕರಿಂ ಚಿತ್ತದೊಳ್ಧ್ಯಾನಿಸುವ ದೇವನಿನಿ ।
ತಕ್ಕೆ ಮೈದೋರುವಂ ಪಾರ್ಥನ ಸಹಾಯ ಕೈತಂದು ನಮ ಗರಿವೆ ನಿವನು ॥
ಸಿಕ್ಕಿದೊಡೆ ಕೃಷ್ಣದರ್ಶನದ ಪುಣ್ಯವೆ ಸಾಕು ।
ಮಿಕ್ಕ ಸುಕೃತದ ಗಸಣಿ ಯೇಕಿನ್ನು ಧರ್ಮಾರ್ಥ ।
ರಕ್ಕೆ ತಿರುಗುವ ಕುದುರೆಗಳನಿಲ್ಲಿ ಕಟ್ಟಿದೊಡೆ ಪುರುಷಾರ್ಥಮೇನೆಂದನು ॥ ॥೪॥
ಧರಣಿಯೊಳ್ತ್ರ್ಯಕ್ಷ ಧರ್ಮದಾಕೃತಿ ಯುಧಿ ।
ಷ್ಠಿರಭೂಪ ನಾತನ ಹಯಂಗಳಂ ತಡೆದಪರೆ ।
ಸಿರಿದಾಯಸದೊಳವ ಪಾಲಿಸಿದರಿನ್ನೆಗಂ ದಶಮಾಸದಿಂದೆ ಮೇಲೆ ॥
ಅರೆದಿಂಗಳಾದುದಿನ್ನಿಹುದು ಪಕ್ಷತ್ರಯಂ ।
ಬರಿಸಕಲ್ಲಿಂದೆ ಮುಂದಿಲ್ಲಿ ಸಿಕ್ಕಿರ್ದೊಡ ।
ಧ್ವರ ಮುಳಿವುದರಿಂದೆ ನೀವೆ ರಕ್ಷಿಸಿ ಪಾಂಡವಂಗೆ ಕೊಟ್ಟಪುದೆಂದನು ॥ ॥೫॥

ತನ್ನ ಹೇಳಿಕೆಯೊ ಳಲ್ಲದೆ ಕೃಷ್ಣ ಫಲ್ಗುಣ |
ರ್ಗಿನ್ನು ಸಿಕ್ಕಿದ ಹರಿಗಳಂ ಬಿಡದೆ ಭೂಮಿ ಯೊ |
ಳ್ಸನ್ನದ್ಧರಾಗಿ ಪಾಲಿಸಿ ನೀವು ಯಜ್ಞಕಾಲಕೆ ಧರ್ಮಜಂಗೆ ಕುಡಲು ||
ಉನ್ನತದ ಸುಕೃತವಾದಪುದು ನಮಗೆಂದು ಸಂ |
ಪನ್ನ ಮತಿ ಚಂದ್ರಹಾಸಂ ನಿಜಕುಮಾರರಂ |
ಮನ್ನಿಸಿ ತುರಂಗರಕ್ಷೆಗೆ ಕಳುಹಿ ಬಲಸಹಿತ ಪೊಳಲ ಪೊರಗಿರುತಿರ್ದನು || ||೬||
ತುರಗಂಗಳಂ ಬಿಟ್ಟುದರ ಕೂಡೆ ಸೇನೆ ಸಹಿ |
ತಿರವೆ ಪದ್ಮಾಕ್ಷ ಮಕರಧ್ವಜ ಪೊರ್ದಿದ ಬಳಿ |
ಕರವಿಂದನಾಭ ದರ್ಶನಕೆ ಲೋಲುಪನಾಗಿ ಚಂದ್ರಹಾಸಂ ಮುದದೊಳು ||
ಪುರದ ಹೊರವಳಯದೊ ಳ್ಸೇನೆಯಂ ಕೂಡಿ ಕೊಂ |
ಡಿರುತಿರ್ದ ನನ್ನೆಗಂ ಮೇರೆದಪ್ಪಿದ ಮಹಾ |
ಶರಧಿಯಂ ತರ್ಜುನನ ಮೋಹರಂ ತಲೆದೋರಿ ತೆತ್ತಣಾಶ್ಚರ್ಯ ಮೆನಲು || ||೭||
ಸಮತಳಿಸಿ ಫಲುಗುಣನ ಸೇನೆ ಬಹುದಂ ಕಂಡು |
ಸಮರ ಕಭಿಮುಖನಾಗಿ ತನ್ನ ಮೋಹರ ಸಹಿತ |
ಸಮಚಂದ್ರಹಾಸ ನೈತರಲಾಗ ಮುರಹರಂ ಸಕಲ ಭೂಪಾಲಕರನು ||
ಕ್ರಮದಿಂದೆ ನಿಲಿಸಿ ಪಾರ್ಥಂಗೆ ಸಾರಥಿಯಾಗಿ |
ಕುಮಲಸು ಗದಾ ಶಂಖ ಚಕ್ರದ ಚತುರ್ಭುಜದ |
ಕಮನೀಯ ರೂಪಮಂ ಕೈಕೊಂಡು ಬಿಟ್ಟನಾತನ ಸಮ್ಮುಖಕೆ ರಥವನು || ||೮||
ನೋಡಿದೈ ಪಾರ್ಥ ವೈಷ್ಣವ ಶಿರೋಮಣಿಯ ನೆನೆ |
ಮೂಡಿ ಮುಳುಗುವ ಮಾಧವಧ್ಯಾನ ಚೇತನದ |
ಸೂಡಿದ ಮುಕುಂದಪದಾಬ್ಜ ತುಲಸೀಪೂತ ಮಸ್ತಕದ ಸತ್ವಗುಣದ ||
ಬೀಡೆನಿಪ ಕಲಿ ಚಂದ್ರಹಾಸನಂ ಕಂಡು ತಾಂ |
ಮಾಡಿ ದಗ್ಗದ ಪುಣ್ಯದಿಂ ಜನ್ಮ ಸಫಲ ವಾ |
ಯ್ತಾಡಲೇನೆಲೆದೇವ ತನ್ನ ಬಿನ್ನಪವ ನವಧರಿಸೆಂದ ನಿಂದ್ರಸೂನು || ||೯||
ಜ್ಞಾನವೃದ್ಧಂ ತಪೋವೃದ್ಧಂ ವಯೋವೃದ್ಧ |
ನೀ ನರೇಶ್ವರ ನೀತನೊ ಳ್ಕಾದಿ ಜಯಿಸುವ ವಿ |
ಧಾನವೆಂ ತೆನಗೆ ಬೆಸಸೆಂ ದರ್ಜುನಂ ಕೇಳ್ದೊ ಡಸುರಾರಿ ಕರುಣದಿಂದೆ ||
ಧ್ಯಾನಿಸುವ ನಾಬಾಲ್ಯದಿಂದೆನ್ನ ನೀತಂಗೆ |
ತಾ ನೊಲಿದೆನೆಂದು ನಿಜರೂಪಮಂ ತೋರ ಲಾ |
ಭೂನಾಥ ನಂಬುಜಾಕ್ಷನ ದಿವ್ಯ ಮೂರ್ತಿಯಂ ಕಂಡು ಪುಳಕಿತನಾದನು || ||೧೦||
ಕಂಬುಚಕ್ರಾಬ್ಜ ಕೌಮೋದಕಿಗಳಂ ಧರಿಸಿ |
ಪೊಂಬಟ್ಟೆಯಂ ತಾಳ್ದು ಕೌಸ್ತುಭದ ಶೋಭಾವ |
ಲಂಬದಿಂ ಸರ್ವಾಭರಣ ವಿಭೂಷಿತನಾಗಿ ದಿವ್ಯಮಾಲೆಗಳ ನಾಂತು ||
ತುಂಬಿ ದವಯವದ ಲಾವಣ್ಯ ಲಹರಿಗಳ ವಿಸ |
ಟಂಬರಿಪ ಕರುಣವೆರೆ ದೆಳನಗೆಯ ಸಿರಿಮೊಗದ |
ಶಂಬರಾರಿಯ ಪಿತಂ ಪಾರ್ಥನ ರಥಾಗ್ರದೊ ಳ್ಕಣ್ಗೆಸೆದನಾ ನೃಪತಿಯ || ||೧೧||

ಕಂಗಳ ನಿರೀಕ್ಷಣದ ಸೌಖ್ಯಮಂ ಸೂಸು ವುದ |
ಕಂಗಳ ಪೊಸ ಲ್ತಡೆಯೆ ಹರ್ಷದಿಂ ಪೇಳ್ವ ಪುಳ |
ಕಂಗಳ ನೆಗಳ್ಕೆಯುಂ ಭಯಭರಿತ ಭಕ್ತಿ ಬಾರಿಸೆ ರಥವನಿಳಿದು ಬಂದು ||
ಮಂಗಳ ಪವಿತ್ರ ಕೋಮಲಪಾದಪದ್ಮ ಯು |
ಗ್ಮಂಗಳ ಸಮಿಾಪದೊ ಳ್ಚಂದ್ರಹಾಸಂ ಪ್ರಣಾ |
ಮಂಗಳ ವಿಧಾನಮಂ ಮಾಡುತಿರೆ ಹರಿ ತೆಗೆದು ಬಿಗಿದಪ್ಪಿದಂ ಕೃಪೆಯೊಳು ||೧೨||

ಅಸುರಾರಿ ಬಳಿ ಕರ್ಜುನನ ವದನಮಂ ನೋಡಿ |
ನಸುನಗುತೆ ನುಡಿದನೇತಕೆ ಸುಮ್ಮನಿಪೆ ಧನ್ವಿ |
ಶಶಿಹಾಸ ನತಿಬಲಂ ಪರಿಣತಂ ಧ್ರುವಸನ್ನಿಭಂ ತನಗೆ ಭಕ್ತನಿವನು ||
ಒಸೆದು ನೀನಾಲಿಂಗಿಸೆನೆ ದೇವ ನಿಮ್ಮಡಿಗ |
ಳುಸಿರಿದು ವಲಾ ತನ್ನ ಮಾರ್ಗಗತಿ ಲೇ ಸನ್ಯ |
ರೆಸಗು ವಂಪದೊ ಳಾಚರಿಸೆ ಭಯಾವಹಮೆಂದು ಭೀಷ್ಮಸಂಗರದೊ ಳೆನಗೆ ||೧೩||

ಅದರಿಂದೆ ಕಾಳಗವೆ ತನಗೆ ಕರ್ತವ್ಯ ಮಿಾ |
ಪದದೊ ಳಾಲಿಂಗನ ಮುಚಿತಮಲ್ಲ ವೃದ್ಧ ಸಹ |
ಸದರಿಂದೆ ಬೇಕಾದೊ ಡೀತಂಗೆ ವಂದಿಸುವೆನೆನೆ ತನ್ನ ಕಿಂಕರರ್ಗೆ ||
ಮುದದೊ ಳೆರಗಿದೊಡೆ ಮೇ ಣವರ ನಪ್ಪಿದೊಡೆ ತ |
ಪ್ಪದು ಮಾನವರ್ಗೆ ಕಾಪಿಲಗೋಸಹಸ್ರ ದಾ |
ನದ ಪುಣ್ಯಮೆನ್ನ ಭಕ್ತರ ನಾದರಿಪು ದಧರ್ಮವೆ ಪಾರ್ಥ ಹೇಳೆಂದನು || ||೧೪||

ತನ್ನ ಶರಣರ ಜೀವನವೆ ತನಗೆ ಜೀವನಂ |
ತನ್ನ ಶರಣ ರ್ಜೀರೆ ತಿಳಿಯೆ ತಾಂ ಬೇರಲ್ಲ |
ತನ್ನ ಶರಣರ ಹೃದಯಕಮಲದೊಳ್ ಪ್ರತ್ಯಕ್ಷ ಮಾಗಿ ತಾನಿರುತಿರ್ಪೆನು ||
ನಿನ್ನ ತೆರದಿಂ ಮರುಳರಾರುಂಟು ಲೋಕದೊ |
ಳ್ನಿನ್ನ ತೆರದಿಂದೀತ ನೆನಗೆ ಬೇಕಾದವಂ |
ನಿನ್ನ ತೆರನೇನೆಂದು ಜರೆದು ಕೌಂತೇಯನಂ ಕೇಳ್ದ ನಸುರಾರಿ ನಗುತೆ || ||೧೫||

ಭೂಪಾಲ ಕೇ ಳ್ಬಳಿಕ ಫಲುಗುಣಂ ಕೃಷ್ಣನ ನಿ |
ರೂಪಮಂ ಕೈಕೊಂಡು ಹರ್ಷದಿಂದಾಗ ನಿ |
ಷ್ಪಾಪನಾಗಿಹ ಚಂದ್ರಹಾಸನಂ ಬಂದು ಗಾಢಾಲಿಂಗನಂ ಗೈಯಲು ||
ಆ ಪೊಡವಿಪತಿ ನುಡಿದ ನೆಲೆ ಪಾರ್ಥ ಕದನ ದಾ |
ಟಾಪಮಂ ನಿನ್ನೊಡನೆ ಮಾಡಿದೊಡೆ ನೃಪ ಮಖಂ |
ಲೋಪಮಹುದೆಂದು ಕಳುಹಿದೆ ನೆನ್ನ ತನುಜರಂ ತುರಗ ರಕ್ಷಾರ್ಥಮಾಗಿ || ||೧೬||

ಹಲವು ಮಾತುಗಳೇಕೆ ನಮಗೆ ನಿಮಗಾಶ್ರಯಂ |
ಜಲಜಾಕ್ಷನಾಗಿರ್ದ ಬಳಿ ಕಾಪಧರ್ಮ ಕೌ |
ಶಲಮಕಟ ಸಾಕಿನ್ನು ಪಾರ್ಥ ನಿನ್ನಶ್ವಂಗಳಂ ತರಿಸಿ ಕುಡುವೆನೆನುತೆ ||
ಬಲಸಹಿತ ಕುದುರೆಗಾವಲ್ಗೆ ಪೋಗಿಹ ಸುತರ |
ಬಳಿಗೆ ಚರರಂ ಕಳುಹಿ ಕರೆಸ ಲವ ರೈತಂದು |
ಫಲುಗುಣನ ವಾಜಿಗಳ ನೊಪ್ಪಿಸಿ ಮುರಾರಿಯುಂ ಕಂಡ ರತಿಭಕ್ತಿಯಿಂದೆ || ||೧೭||

ನರನೊಡನೆ ಸಖ್ಯಮಾದುದು ಬಳಿಕ ಬಂದ ನೃಪ |
ವರರೆಲ್ಲರಂ ಪ್ರಿಯದೊಳಾದರಿಸಿದಂ ಕೂಡೆ |
ಹರಿಯು ನತಿಭಕ್ತಿಯಿಂದೈದೆ ಕೊಂಡಾಡಿದಂ ನಿರುಪಮ ಸ್ತುತಿಗಳಿಂದೆ ||
ಪರಿಪರಿಯ ಗುಡಿ ತೋರಣಾವಳಿಯ ರಚನೆ ಮಿಗೆ |
ಪುರಕೆ ಬಿಜಯಂಗೈಸಿ ತಂದನುತ್ಸವದಿಂದೆ |
ಸಿರಿಯನುರೆ ವಿಸ್ತರಿಸಿ ಭೂ ಪುರಂದರನಂತೆ ಚಂದ್ರಹಾಸಂ ಮೆರೆದನು || ||೧೮||

ಇಂದುಹಾ ಸಾಶ್ರಯದೊಳಿ ರ್ದಖಿಳ ಪುರಜನಂ |
ಕಂದರ್ಪತಾತನಂ ಕಂಡು ಕೃತಕೃತ್ಯ ಮಾ |
ಯಿಂದಿರಾವಲ್ಲಭನ ಸಂದರ್ಶನಕೆ ದುಷ್ಟಬುದ್ಧಿ ನಿಜಸೂನು ಸಹಿತ ||
ಬಂದು ನಿರ್ಧೂತ ಕಿಲ್ಬಿಷನಾದ ನಾಗ ಳೈ |
ತಂದು ಗಾಲವ ನಸುರಮರ್ದನನ ಪಾದಾರ |
ವಿಂದನುಂ ವಿವಿ ಧಾಗನೋಕ್ತದಿಂ ಪೂಜಿಸಿದ ನತಿಭಕ್ತಿಭಾವದಿಂದೆ || ||೧೯||

ಪ್ರೀತಿಯಿಂ ಚಂದ್ರಹಾಸಂ ತನ್ನ ರಾಜ್ಯಮಂ |
ಪೀತಾಂಬರನ ಚರಣಸರಸಿರುಹ ಕರ್ಪಿಸಿದ |
ನಾತಂ ಧನಂಜಯನ ಸಮ್ಮತದೊ ಳೊಸೆದು ವಿಷಯಾಕುಮಾರಂಗೆ ಕೊಟ್ಟು ||
ಖ್ಯಾತಮಾ ದಖಿಳ ವಸ್ತುಗಳೊಡನೆ ಗಜಪುರಕೆ |
ದೂತರಂ ಕಳುಹಿ ಸತ್ಕೃತನಾಗಿ ಭೂಪತಿ |
ವ್ರಾತಸಹಿತಲ್ಲಿ ಮೂ ರಿರುಳಿರ್ದು ಪೊರಮಟ್ಟನೈದೆ ಕುದುರೆಗಳ ಕೂಡೆ || ||೨೦||

ಮುಪ್ಪಾದೆನೆಲೆ ಮಗನೆ ಕೃಷ್ಣ ದರ್ಶನದಿಂದೆ |
ತಪ್ಪದೆನಗಿನ್ನು ಮೋಕ್ಷದ ಲಾಭ ಮಸುರಾರಿ |
ಗೊಪ್ಪಿಸುವೆ ನೀತನುವ ನಿವ ರಧ್ವರಂ ಮುಗಿದ ಬಳಿಕ ವನಕಾಂ ಪೋಪೆನು ||
ಒಪ್ಪುದಿ ಲ್ಲದರಿಂದೆ ನಗರ ಕರಸಾಗಿ ಸುಖ |
ಮಿಪ್ಪುದೆಂದಿರಿಸಿ ನಿಜ ತನಯರಂ ಶರಧಿ ಗೆಣೆ |
ಯಪ್ಪ ವಾಹಿನಿಯೊಡನೆ ಪೊರಮಟ್ಟ ನಾ ಚಂದ್ರಹಾಸ ನರ್ಜುನನ ಕೂಡೆ ||೨೧||

ಪುತ್ರ ಸಂಪದ ಮಾಯುರಾರೋಗ್ಯ ಮರಿವು ಶತ |
ಪತ್ರನಾಭನ ಭಕ್ತಿ ಧೃಡವಾಗ ಲೀತನ ಚ |
ರಿತ್ರಮಂ ಕೇಳ್ವವರ್ಗೆಂದು ಹರಿ ವರವ ನಿತ್ತಾತನಂ ಕೂಡಿಕೊಂಡು ||
ಸುತ್ರಾಮಸುತನ ಕುದುರೆಗಳೊಡನೆ ತೆರಳ್ದಂ ಧ |
ರಿತ್ರಿಯೊ ಳ್ದೇಶದೇಶದೊಳಿರ್ದ ಭುಜಬಲ್ಪ |
ಕ್ಷತ್ರಿಯೋತ್ತಮ ರಂಜಿ ತುರಗಂಗಳಂ ತಡೆಯ ದಭಿನಮಿಸಿ ಬಿಡುತಿರ್ದರು ||೨೨||

ರಾಯ ಕೇ ಳಾಶ್ಚರ್ಯಮಂ ಬಳಿಕ ವಾಜಿಗ |
ಳ್ವಾಯುವೇಗದೊಳೈದಿ ಬಡಗಣ ಪಯೋನಿಧಿಯ |
ತೋಯಮಂ ಪೊಕ್ಕು ನಡೆದುವು ಕೂಡೆ ಸಾಗರದ ವಾರಿಯೊಳ್ಕಾಲಿಡುವೊಡೆ ||
ಡಾಯಮಂ ಕಾಣದೆ ಧನಂಜಯಾದಿಗ ಳಿದಕು |
ಪಾಯಮಿನ್ನೇನೆಂದು ಬೆಸಗೊಂಡೊ ಡಂಬುಜದ |
ಳಾಯತಾಕ್ಷಂ ಪೇಳ್ದನಿಂತೆಂದು ನೆರೆದಿರ್ದ ಸಕಲಭೂಪಾಲಕರ್ಗೆ || ||೨೩||

ಶುಭ್ರವಾಹನ ಮಯೂರಧ್ವಜ ಪ್ರದ್ಯುಮ್ನ ।
ಬಭ್ರುವಾಹನ ಹಂಸಕೇತುನೃಪ ರಿವರ್ಸೈವ ।
ರಭ್ರವಾಹನನಂತೆ ಸರ್ವತ್ರಗಮನದ ವರೂಥದ ಮಹಾವೀರರು ॥
ವಿಭ್ರಾಜಿಸುವ ಸಮುದ್ರದಮೇಲೆ ನಡೆವ ಸುಗ ।
ತಿಭ್ರಷ್ಟರಲ್ಲೆಂದು ರುಕ್ಮಿಣೀಮುಖಪಂಕ ।
ಜ ಭ್ರಮರನಾ ಪಂಚರಥಿಕರಂ ಕೂಡಿಕೊಂ ಡಂಬುನಿಧಿಯಂ ಪೊಕ್ಕನು ॥ ॥೨೪॥
ಸಾಗರದ ನಡುವೆ ಕುರ್ವಕೆ ವರಹಯಂಗ ಳತಿ ।
ವೇಗದಿಂದೈದ ಲದರೊಡನೆ ಪಾರ್ಥಾದಿ ಗ ।
ಳ್ಪೋಗಿ ಬಕದಾಲ್ಭ್ಯಋಷಿಯಂ ಕಂಡರಲ್ಲಿ ಕಣ್ಣೆವೆಗಳಂ ಮುಚ್ಚಿಕೊಂಡು ॥
ಯೋಗದಿಂದಿರುತಿರ್ದ ನಧ್ರುವದ ಕಾಯಮಂ ।
ಸಾಗಿಸಲದೇಕೆಂದು ಕೊಳತೊಣಗಿ ಛಿದ್ರಂಗ ।
ಳಾವ ಸೆಲದಿಗ ಳಿಕ್ಕಿ ಪಾಲದೆಲೆಯಂ ತನ್ನ ತಲೆಸರೆಗೆ ಕಯ್ಯೊಳಾಂತು ॥ ॥೨೫॥
ಸ್ಯಂದನಂಗಳ ನಿಳಿದು ವಿನಯದಿಂ ದೆಚ್ಚರಿಸಿ ।
ವಂದಿಸಿದೊ ಡರ್ಜುನಾದಿಗಳ ನಾ ಮುನಿವರಂ ।
ಕಂದೆರೆದು ಕಂಡು ಪುರುಷೋತ್ತಮಂ ಕ್ಷಣಿಕ ರಿವ ರೈವರಂ ಕೂಡಿಕೊಂಡು ॥
ಬಂದ ನೀಮುಂಡಲದೊ ಳಿರವಿಲ್ಲ ತನಗಿನ್ನು ।
ಮುಂದೆ ಸುಖವಾಗ ದಲ್ಪಾಯುಷ ಳೀಗೈವೆ ।
ನೆಂದು ಬಕದಾಲ್ಭ್ಯಋಷಿ ನುಡಿಯೆ ವಿಸ್ಮಿತನಾಗಿ ಫಲುಗುಣಂ ಬೆಸಗೊಂಡನು ॥೨೬॥
ಮೊಳಕಾಲ್ಗಳಿಡೆಯೊಳುದ್ಭವಿಸಿರ್ದ ಕಿಂಶುಕಂ ।
ಗಳ ಮೇಲೆ ಗೂಡಿಕ್ಕಿ ಬಾಳ್ದಪುವು ಪಕ್ಷಿಗಳ ।
ಬಳಗಂಗ ಳೊರಸಿಕೊಂಬುವು ತೀಟೆಗಳ ನಂಗದೊ ಳ್ಬಂದು ಮೃಗತತಿಗಳು ॥
ಬಳೆದಿಹವು ಸುತ್ತಲುಂ ಪುತ್ತುಗ ಳ್ನಿಮ್ಮ ತೋ ।
ಳ್ಗಳ ಬಳಿಯೊಳಾಡುವುವು ಸರ್ಪಂಗಳಿರಲೊಂದು ।
ನಿಳಯಮಂ ಮಾಡದೇತಕೆ ಕಯ್ಯೊಳಿಪತ್ರವೆಂದು ಪಾರ್ಥಂ ಕೇಳ್ದನು ॥ ॥೨೭॥
ಮುನಿ ಕಿರೀಟಿಯ ನುಡಿಗೆ ನಸುನಗುತೆ ದುಃಖ ಭಾ ।
ಜನವಲಾ ಸ್ತ್ರೀಪರಿಗ್ರಹಮದಂ ಪೋಷಿಸುವ ।
ಮನುಜ ನೆಣಿಸುವನೆ ಕೃತ್ಯಾಕೃತ್ಯಮಂ ಬಳಿಕ ಮೋಕ್ಷ ಮೆತ್ತಣದವಂಗೆ ॥
ಕನಸಿನ ಸುಖಕ್ಕೆಳಸಿ ಬಿದ್ದಪ ನಧೋಗತಿಗೆ ।
ಜನನ ಮರಣಂಗಳ ಬಳಲ್ಕೆ ಬೆಂಬಿಡದಿಹುದು ।
ವನಿತೆಯರ ತೊಡಕಿಂದೆ ಕೆಡುತಿಹುದು ಲೋಕಮದ ನೇವಣ್ಣಿಸುವೆನೆಂದನು ॥ ॥೨೮॥
ಮಡದಿ ಮಗ ಮೊಂಮಂದಿರಂ ಸಾಗಿಸುವೆನೆಂತೊ ।
ಪೊಡವಿ ಬೆಳಸಾಳ್ಕೆ ಸಿರಿ ಕೀಲಾರವ ನೆಗಳಿಸಿ ।
ದೊಡವೆಗಳ ಸಾರ್ವೆನೆಂತೊ ವೇದಾದಿ ಶಾಸ್ತ್ರಂಗಳಂ ಪಠನದಿಂದೆ ॥
ಕಡೆಗಾಣಿಸುವೆನೆಂತೊ ತಾನೆಂದು ಬಾಳುವೆಗೆ ।
ಬಿಡದೆ ಚಿಂತಿಸಿ ತಾಪಕೊಳಗಾಗಿ ಧರ್ಮದೊ ।
ಳ್ನಡೆಯ ದಾಶಾಪಾಶದಿಂದೆ ಸಂಸಾರದೊಳ್ಕೆಡುತಿಹುದು ಜಗವೆಂದನು ॥ ॥೨೯॥

ಅಂತಾಗಿ ದಾರಸಂಗ್ರಹ ಪರ್ಣಶಾಲೆಗಳ |
ನಿಂತೊಲ್ಲ ದಚಿರಕಾಲದೊಳಳಿವ ಕಾಯಮಿದ |
ಕೆಂತಿರ್ದೊಡೇನೆಂದು ತಲೆಗೆ ತರಗೆಲೆವಿಡಿದು ತಾಂ ಪೊತ್ತುಗಳೆವೆನೆನಲು ||
ಕುಂತೀಸುತಂ ಮತ್ತೆ ಕೇಳ್ದನಲ್ಪಾಯುಷ್ಯ |
ಮಂ ತಳೆವುದೀಮಹಾತ್ಮರಿಗೇಕೆ ಶಿವಶಿವಾ |
ಪಿಂ ತೇಸುದಿನಮಾದು ದೆಂದಿನಿಂದೀಪತ್ರಮಿಹುದು ಮಸ್ತಕದೊಳೆಂದು || ||೩೦||
ಅತ್ಯಲ್ಪರಾಗಿ ಮಾರ್ಕಂಡೇಯ ರೋಮಶ |
ಪ್ರತ್ಯೇಕ ರಳಿಧರಿವ ರೆನಿಬರೆಂದರಿಯೆ ನಾಂ |
ಸತ್ಯಲೋಕವನಾಳ್ದರಿಪ್ಪತ್ತು ಕಮಲ ಸಂಭವ ರಿನಿತರೊಳ್ಮಡಿದರು ||
ಕೃತ್ಯಾದಿ ಸೃಷ್ಟಿಗಳ್ಪಾರಿಮಯ ಮಹದಾದಿ |
ಸತ್ಯದ ಚತುರ್ವದನ ರವಸಾನವಾಯ್ತಿಂ ತ |
ನಿತ್ಯಮಾಗಿಹವು ಪದವಿಗಳೆಂದು ತಾನಿಲ್ಲಿ ಬಯಲೊ ಳಿದ್ದಪೆನೆಂದನು || ||೩೧||
ಬಾರಿಬಾರಿಗೆ ಜಲಪ್ರಳಯಂಗ ಳಾಗಲ್ಕೆ |
ಭೂರಿಶಾಖೆಗಳಿಂದೆ ತಳಿ ತೆಸೆವುದೊಂದು ವಟ |
ಭೂರುಹ ವವರ ದೊಂ ದೆಲೆಯಮೇಲೆ ತನ್ನ ಮೃದುಪದ ಕಮಲ ದುಂಗುಟವನು ||
ಚಾರುತರ ಕರತಾಮರಸದಿಂದೆ ಪಿಡಿದು ವದ |
ನಾರವಿಂದದೊ ಳಿಟ್ಟು ನಗು ತಳುತೆ ಲೀಲೆಯಿಂ |
ದೋರಂತೆ ಮಲಗಿಕೊಂಡಿಹ ನೊರ್ವ ಬಾಲಕಂ ತಾ ನಾತನಂ ಕಂಡೆನು || ||೩೨||
ಅಂದು ಸಲಿಲದೊಳಾಳ್ದ ತನಗಾಲದೆಲೆಯ ಮೇ |
ಲೊಂ ದೊಂದು ಬಾರಿ ಬಾಲಕನಾಗಿ ಮೈದೋರಿ |
ನಿಂದು ಮಾತಾಡಿಸದೆ ನೋಡದೆ ವಿಚಾರಿಸದೆ ದೂರದೂರದೊಳಿರ್ಪನು ||
ಇಂದು ನಿಮ್ಮೈವರಂ ಕೂಡಿಕೊಂಡಿಲ್ಲ ಗೈ |
ತಂದು ಕರುಣಿಸಿದ ನೀ ಹರಿ ಕೃಷ್ಣರೂಪದಿಂ |
ಸಂದು ದಿನ್ನೀತನೆ ಸದಾಶ್ರಯಂ ಮರೆವುಗುಪೊ ಡೆನಗೆಂದು ಮುನಿ ನುಡಿದನು ||೩೩||
ಬಕದಾಲ್ಭ್ಯಮುನಿ ಬಳಿಕ ಕೃಷ್ಣನಂ ನೋಡಿ ಬಾ |
ಲಕನಾದ ರೂಪಮಂ ವಟಪತ್ರಶಯನ ದೊ |
ಳ್ಸಕಲ ಜಗ ಮಳಿವಂದು ತನಗೆ ಕಾಣಿಸಿದೆಯಲ್ಲದೆ ರಮಾರಮಣನಾಗಿ ||
ಪ್ರಕಟಿತದ ಧರ್ಮ ಸಂತತಿಗಳಂ ಪಾಲಿಸುವ |
ಸುಕುಮಾರ ಮೂರ್ತಿಯಂ ಕೃಪೆಯಿಂದೆ ನಿನ್ನ ಸೇ |
ವಕ ಜನಕೆ ತೋರುವಂ ತೆನಗೆ ತೋರಿದುದಿಲ್ಲ ತಾ ನಿನ್ನು ಬಿಡೆನೆಂದನು || ||೩೪||
ಜನಪ ಕೇ ಳಿಂತೆಂದು ಹರ್ಷದಿಂ ಬಕದಾಲ್ಭ್ಯ |
ಮುನಿ ಬಂದು ಕೃಷ್ಣನಂ ತಕ್ಕೈಸಿ ಮತ್ತೆ ಪಾ |
ರ್ಥನ ಕೂಡೆ ಪೇಳ್ದಂ ಸದಾವಾಸ ಕೀಹರಿಯ ದೇಹಮಿದು ಗೇಹಮೆನಗೆ ||
ಅನುಕೂಲೆಯಾದ ಸತಿ ಮುಕ್ತಿಯಲ್ಲದೆ ಬೇರೆ |
ಮನೆಯಿಲ್ಲ ಮಡದಿಯಿಲ್ಲದಕಾಗಿ ತಾನೀಸು |
ದಿನಮಿಲ್ಲಿ ತಲೆಗೆ ತರಗೆಲೆವಿಡಿದು ಕೊಂಡಿರ್ಪೆ ನೆನ ಲರ್ಜುನಂ ನುಡಿದನು ||೩೫||

ಇಪ್ಪತ್ತು ಕಮಲಜರ ಬಾಳ್ಕೆಯಂ ಕಂಡ ನಿಮ ।
ಗೊಪ್ಪದೆ ಗುರುತ್ವಂ ಮಹಾಪುರುಷ ರೀಸುದಿನ ।
ವಿಪ್ಪ ದಚ್ಚರಿಯಲಾ ಶಿವಶಿವಾ ನೀವೆ ನಮ್ಮೆಲ್ಲರ್ಗೆ ಪೂಜ್ಯರೆಂದು ॥
ತಪ್ಪನೀಕ್ಷಿಸಲಾಗ ದರಸನ ಮಖಂ ಸಫಲ ।
ಮುಪ್ಪದಿನ್ನೆಂದು ಸರ ನಭಿವಂದಿಸಲ್ಕೆ ನಮು ।
ಗಪ್ಪಿಸದಿ ರೊಂದು ಗರ್ವದ ಭಾವಮಂ ಕೃಷ್ಣ ನಿರಲೆಂದು ಮುನಿ ನುಡಿದನು ॥೩೬॥

ಸರ್ವವೇದದಮೂಲ ನೀಕೃಷ್ಣ ನಾವಂಗೆ ।
ಗರ್ವಮಿ ನ್ನೆಲೆಪಾರ್ಥ ಕೇ ಳಾದೊಡೀ ಕಡಲ ।
ಕುರ್ವದೊಳಗಾನಿರುತಿರ ಲ್ಮಹಾಕಲ್ಪದೊ ಳ್ಪದ್ಮಾಭಿಧಾನದಿಂದೆ ॥
ಉರ್ವನಾ ಲ್ವತ್ತನೆಯ ವಾರುಷಿಕನಾಗಿಹ ಚ ।
ತುರ್ವದನ ನಿಲ್ಲಿಗೆ ಮರಾಳವಾಹನದೊ ಳ ।
ಕ್ಕರ್ವೆರೆಸಿ ಬಂದೆನ್ನ ಮುಂದೆ ನಿಂದಾಗ ಳಧ್ಯಕ್ಷತೆಯೊ ಳಿಂತೆಂದನು ॥ ॥೩೭॥

ಎಲೆ ವಿಪ್ರ ನೀನಾ ರದೇತಕೀ ಪರ್ಣಮಂ ।
ತಲೆಗೆ ಪಿಡಿದಿಹೆ ಘೋರ ತಪಮೇಕದಂ ಬಯಕೆ ।
ಸಲೆ ಮೆಚ್ಚಿ ಬಂದೆನಾಂ ಕಮಲಜ ನುಸಿರ್ಮೊ ಡಿತ್ತಪೆ ನೀಗ ವರವನೆನಲು ॥
ತೊಲಗತ್ತ ಸಾರ್ನಿನ್ನ ತೆರದ ನಾಲ್ಮೊಗದರಂ ।
ಪಲಬರಂ ಕಂ ಡರಿವೆ ನೆನಗೀವುದಂ ಮತ್ತೆ ।
ಕೆಲಬರ್ಗೆ ಕೊಟ್ಟು ಕಳೆ ಪೋಗೆಂದು ನಾನೆಂದೆ ನಾ ಪದ್ಮಸಂಭವನೊಳು ॥ ॥೩೮॥

ಆನೆಂ ದುದಂ ಕೇಳ್ದು ಗರ್ವದಿಂದಾ ಪದ್ಮ ।
ಸೂನು ತೋರಿಸು ತನ್ನ ತೆರದ ನಾಲ್ಮೊಗದರಂ ।
ನೀನೆಂದು ವೇಳ್ವನ್ನೆಗಂ ಬಂದುದೊಂದು ಸುಳಿಗಾಳಿ ಧರೆ ನಡಗುವಂತೆ ॥
ನಾನಾದ್ರುಮಂಗಳಂ ಕಿತ್ತೆತ್ತಿ ಮಿಗೆ ವಿಾರ್ಮ ।
ಬಾನೆಡೆಗೆ ನಮ್ಮಿರ್ವರಂ ಕೊಂ ಡಡರ್ಮ ದದ ।
ನೇನೆಂಬೆ ನದ್ಭುತವನೆಲೆಪಾರ್ಥ ತೊಳಲಿಸಿ ತಜಾಂಡ ಶತಕೋಟಿಗಳನು ॥ ॥೩೯॥

ತೀವಿ ದೌದುಂಬರದ್ರುಮದ ಫಲದಂತೆ ರಾ ।
ಜೀವನಾಭನ ಮೆಯ್ಯೊ ಳಿಡಿದಿಹ ವಜಾಂಡಂಗ ।
ಳಾ ವಾಯುವಶದಿಂದೆ ತೊಳಲಿದೆವು ಪೊಕ್ಕೆ ಪೊಂದದೊ ಳಷ್ಟಮುಖವಿರಿಂಚಿ ॥
ಜೀವಜಾಲದ ಸೃಷ್ಟಿಗೊಡೆಯನಾಗಿರ್ದ ನವ ।
ನಾವಿರ್ವರುಂ ಬರಲ್ಕಂಡು ವಿಸ್ಮಿತನಾಗಿ ।
ನೀವ ದಾರೆತ್ತಣಿಂ ದೈದಿದಿರಿ ನಿಮ್ಮ ಪೆಸರೇನೆಂದು ಬೆಸಗೊಂಡನು ॥ ॥೪೦॥

ಚತುರಾಸ್ಯನಾಂ ಸತ್ಯಲೋಕದಿಂ ಬಂದೆ ನೀ ।
ಪ್ರತಿಶಿಷ್ಯನೆನಗೆ ಬಕದಾಲ್ಭ್ಯನೆಂಬವನೆಂದು
ಶತಪತ್ರಜಂ ಪೇಳ್ದೊ ಡಪಹಾಸಮಂ ಮಾಡು ತಷ್ಟವದನದ ವಿರಿಂಚಿ ॥
ಅತಿಗರ್ವಭಾವದಿಂ ನೀನಜಂ ಶಿಷ್ಯನಿವ ।
ನತುಳರೈ ಗುರುಶಿಷ್ಯರಿರ್ವರುಂ ನಿಮ್ಮ ಸ ।
ತ್ಕೃತಿಗೆ ಶೌಚದ ಸಲಿಲದೂಳಿಗದ ವಟುಗಳಿಹ ರೆಮ್ಮೊ ಳ್ಕೆಲಬರೆಂದನು ॥ ॥೪೧॥

ಇನಿತುಗರ್ವದೊಳಷ್ಟವದನದ ವಿರಿಂಚಿ ನುಡಿ |
ದನಿತರೊಳ್ಪೊರೆಯೊಳಿಹ ನಾವು ನಹ ತಾತನಂ |
ಘನ ರಭಸದಿಂದೆ ಸುಳಿಗಾಳಿ ಕೊಂಡೊಯ್ದುದಾಗಸ ಕತಿ ಕಠೋರದಿಂದೆ ||
ಅನಿಲವಶದೊಳ್ಪೋಗಿ ಮೂವರುಂ ಮತ್ತೊಂದು |
ವನಜಭವ ಲೋಕಮಂ ಕಂಡೆವಲ್ಲಿಯು ಪುಣ್ಯ |
ಜನರೆಮ್ಮನೆತ್ತಣವಿಕಾರಿಗಳೀವೆಂದು ನಗುತೆ ಕೊಂಡಾಡಿಸಿದರು || ||೪೨||

ಅಲ್ಲಿ ಷೋಡಶಮುಖದ ಬೊಮ್ಮನಂ ಕಂಡವನ |
ನೆಲ್ಲಡಿಗೆ ನಮಿಸೆ ಗರ್ವದೊಳವಂ ನುಡಿಸದಿರೆ |
ತಲ್ಲಣಿಸಿ ನಾವಂಜಲವನ ಪೊರೆಯುವ ರೆಮ್ಮನಾರೆಂದು ಬೆಸಗೊಳಲ್ಕೆ ||
ಬಲ್ಲೊಡಷ್ಟಾನನ ಚತುರ್ವದನ ಬಕವಾಲ್ಭ್ಯ |
ರಿಲ್ಲಿಗರಿಯದೆ ಬಂದೆವೆಂದು ನಾವುಸಿರಲ್ಕೆ |
ಮಲ್ಲಿಗೆಯಲರ್ಗೆದರಿದಂ ತಟ್ಟಹಾಸದಿ ನಗುತಿರ್ದನಾ ವಿರಿಂಚಿ || ||೪೩||

ಈ ವಿರಿಂಚಿಗಳನೀಕ್ಷಿಸಿ ತನ್ನ ಮಹಿಮೆಯ ನ |
ದೇವಣ್ಣಿಸುವೆನೆಂದು ಕೆಲದವರೊಳಾಡುವ ಕ |
ಲಾವಕ್ತ್ರನಂ ಮತ್ತೆ ಸುಳಿಗಾಳಿ ಕೊಂಡಡರ್ದುದು ನಭಸ್ಥಳಕೆ ಬಳಿಕ ||
ಮೂವತ್ತೆರಡು ಮೊಗದ ಕಮಲಜನ ಲೋಕಮಂ |
ನಾವು ತಲೆಕೆಳಗಾಗಿ ನಾಲ್ವರುಂ ಪುಗಲೆಮ್ಮ |
ನಾ ವಿಧಾತ್ರಂ ಕಂಡು ಕರುಣದಿಂ ಕೇಳ್ದೊಡಾವಿಸಿತೆಲ್ಲಮಂ ಪೇಳ್ದೆವು || ||೪೪||

ಏತಕ್ಕೆ ತಂದಿರಿಲ್ಲಿಗೆ ರವಿಯ ಮುಂದೆ ಖ |
ದ್ಯೋತಂಗಳೆಸೆದಪುವೆ ತನಗೆ ಸರಿಯಾರೆಂಬ |
ಮಾತು ಮುಗಿಯದ ಮುನ್ನ ಕೊಂಡೆದ್ದುದಾವರ್ತಮಾರುತಂ ನಾವು ಬಳಿಕ ||
ಆತನಂ ಕೂಡಿಕೊಂಡರುವತ್ತುನಾಲ್ಕು ಮುಖ |
ದಾತನಂ ಕಂಡೆವಾತನ ಗರ್ವದಿಂದೆ ಮುಂ |
ದೀತೆರದೊಳೆಮ್ಮಡಿಸಿ ದಾಸ್ಯದ ವಿರಿಂಚಿಗಳ ಲೋಕಂಗಳಂ ಕಂಡೆವು || ||೪೫||

ತೊಳಲಿದೆವು ಪಾರ್ಥ ಕೇಳಿಂತು ನಾವೆಲ್ಲರುಂ |
ಬಳಿಕ ಸಾವಿರ ಮೊಗದೊಳೆಸೆವ ಪರಮೇಷ್ಠಿಯಂ |
ಬಳಸಿದ ಸಮಸ್ತ ಸುರಮುನಿಗಳ ಪೊಗಳ್ವ ಸನಕಾದಿಗಳ ಗಡಣದೊಡನೆ ||
ನಳಿನಸಖ ಶತಕೋಟಿತೇಜದಿಂ ತೊಳತೊಳಗಿ |
ಬೆಳಗುತಿರಲಾವಿನಿಬರುಂ ಪೋಗಿ ಕಾಣಲ್ಕೆ |
ಬಳಲಿದಿರಿದೇಕೆ ಬಂದಿರಿ ನಿಮ್ಮ ಕರುಣದಿಂದಿಹೆನೆಂದು ನೈತಿಟ್ಟನು || ||೪೬||

ನಿಮ್ಮ ದೆಸೆಯಿಂದೈಸಲೇ ತನಗೆ ಸಂತತಂ |
ಸುಮ್ಮಾನಮಹುದೆಂದು ಮಿಗೆ ಸುಪ್ರಸನ್ನತೆಯೊ |
ಳೆಮ್ಮನೆಲ್ಲರ ನಾದರಿಸಿ ನಿಗರ್ವಿಕೆಯಿಂ ಸಹಸ್ರವದನಂ ಕಳುಹಲು ||
ಹೆಮ್ಮೆಗಳ ನುಳಿದು ವಿಸ್ಮಿತರಾದ ರವರನ್ನೆ |
ಗಂ ಮೊದಲದೆಂತಿರ್ದರಂತೆ ಕನಸೆನೆ ತೋರ್ಪ |
ತಮ್ಮ ಲೋಕಂಗಳಿಗೆ ಬಂದಿರ್ದರಾನೆಂದಿನವೊಲಿರ್ದೆ ನೀಕಡಲೊಳು || ||೪೭||

ಅದರಿಂದೆ ಕೋವಿದರ್ಗರ್ವಮಂ ಮಾಡಲಾ ।
ಗದು ಪಾರ್ಥ ತಾನಂದು ಸಂಧಿಸಿದ ಸಾಸಿರಮೊ ।
ಗದ ಪುರುಷ ನೀತನಲ್ಲವೆ ಕೃಷ್ಣರೂಪದಿಂ ಕಾಣಿಸುವ ನೀಜಗದೊಳು ॥
ಉದಧಿಮಧ್ಯದೊಳಿನ್ನೆಗಂ ಭಜಿಸುತಿರ್ದೊಡಾ ।
ದುದು ಸಫಲಮೆಂದು ಬಕದಾಲ್ಭ್ಯಮುನಿ ನುಡಿಯಲ್ಕೆ ।
ಮುದದಿಂದೆ ಕೇಳ್ದು ವಿಸ್ಮಿತರಾಗಿ ಸಂಭಾವಿಸಿದರರ್ಜುನಾದಿನೃಪರು ॥ ॥೪೮॥
ಶ್ರೀಕಮಲಲೋಚನಂ ಬಕದಾಲ್ಭ್ಯನಂ ಬಳಿಕ ।
ಭೂಕಾಂತನಧ್ವರಕೆ ನೀವು ಬಿಜಯಂಗೈಯು ।
ಬೇಕೆಂದೊಡಂಬಡಿಸಿ ವಾಜಿಸಹಿತಂಬುಧಿಯ ತಡಿಗೆ ಬಂದಾ ಋಷಿಯನು ॥
ಲೋಕಮರಿಯಲ್ಕೆ ಶಿಬಿಕಾರೋಹಣಂಗೈಸ ।
ಲಾ ಕುದುರೆಗ ಳ್ತಿರುಗಿ ಸಿಂಧುದೇಶಕೆ ಬರಲ ।
ನೇಕ ಪೃಥ್ವೀಪಾಲರೊಡನೆ ಕೃಷ್ಣಾರ್ಜುನರ್ನಡೆತಂದರುತ್ಸವದೊಳು ॥ ॥೪೯॥
ಪೃಥಿವೀಂದ್ರ ಕೇಳ್ ಸಿಂಧುದೇಶದೊಳಿಸೆವ ಜಯ ।
ದ್ರಥನ ಪಟ್ಟಣಕೆ ನಡೆತಂದರರ್ಜುನದೈತ್ಯ ।
ಮಥನರೀವಾರ್ತೆಯಂ ಕೇಳ್ದನತಿಬಾಲನಾಗಿಹ ದುಶ್ಶಳೆಯ ತನುಜನು ॥
ವ್ಯಥಿಸಿ ವೈಮರೆದ ನೋಲಗದ ಮಂತ್ರಿಗಳಿಣಿಕೆ ।
ಶಿಥಿಲಮಾದುದು ಪುರಂ ತಲ್ಲಣಿಸುತಿರ್ದುದೀ ।
ಕಥನಮಂ ಧೃತರಾಷ್ಟ್ರಸುತೆ ಗರುವಲಿದಿರಾಗಿ ಪೊರಮಟ್ಟಳುರೆ ಬೆದರ್ದು ॥೫೦॥
ಎಲ್ಲಿ ಬಹನರ್ಜುನನ ರಥದ ಮೇಲಸುರಹರ ।
ನಲ್ಲಿಗೈತಂದು ಚೀರಿದಳಿಲಿ ಜಗನ್ನಾಥ ।
ಮಲ್ಲಮರ್ದನ ಮಾನಿನಿಯ ಮೊರೆಯ ಲಾಲಿಸಂದೀ ಸವ್ಯಸಾಚಿ ತನ್ನ ॥
ವಲ್ಲಭನ ಪಗೆಯೆಂದು ಕೊಂದನಿಹುದೊಂದು ಶಿಶು ।
ತಲ್ಲಣಿಸುತಿದೆ ಕಾಯಬೇಕೆನೆ ಧನಂಜಯಂ ।
ನಿಲ್ಲದೆ ವರೂಥದಿಂದಿಳಿದು ಬಂದಾಕೆ ಗಭಿನಮಿಸಿ ಬಳಿಕಿಂತೆಂದನು ॥ ॥೫೧॥
ತಾಯೆ ಪಗೆಗೊಂಡು ನಾ ನಿನಗಂದು ಮಾಡಿದ ।
ನ್ಯಾಯಮಂ ಸೈರಿಪುದು ನಿನ್ನ ತನುಜಾತನಂ ।
ನೋಯಿಸುವನಲ್ಲ ರಾಜ್ಯವನಗಣಿತಾಶ್ವ ಮದಕರಿಗಳಂ ಕೊಟ್ಟು ನಿನಗೆ ॥
ರಾಯನ ಮಹಾಧ್ವರಕೆ ಕೂಡಿಕೊಂಡೊಯ್ವೆನೆನ ।
ಲಾಯತಾಂಬಕೆ ಮತ್ತೆ ಶೋಕವಿಮ್ಮಡಿಸೆ ನಾ ।
ರಾಯಣನ ಪದಕಮಲದೊಳ್ಪೊರಳಿ ಕಡಲಿಡುವ ಕಂಬನಿಯೊಳಿಂತೆಂದಳು ॥ ॥೫೨॥
ಪ್ರಾಣಿಗಳ ಹೃದಯದೊಳ್ಜೀವ ನೀ ನಿರ್ಪುದಂ ।
ಮಾಣಿಸುವೆ ನತರ ದುಃಖಾಕುಲವನೆಂಬುದಂ ।
ಕಾಣಿಸಿದೆ ದ್ರೌಪದಿಯ ಮಾನಮಂ ಕಾಯ್ದಂದು ಶೋಕಾಗ್ನಿ ಸುಡುವುದೆಂದು ॥
ಮೇಣಿದಂ ಬಿನ್ನೈಸಲೇಕಿನ್ನು ಸಲೆ ಸುಖ ।
ಶ್ರೇಣಿಯಂ ನೆನೆದ ಮಾತ್ರದೊಳೀವೆ ನಿನ್ನ ಕ ।
ಲ್ಯಾಣ ಮೂರ್ತಿಯ ದರ್ಶನದೊಳಾಂ ಕೃತಾರ್ಥೆಯಲ್ಲವೆ ಸಲಹಬೇಕೆಂದಳು ॥೫೩॥

ದೇವ ತನ ಗೊಡಹುಟ್ಟಿದವಳೆಂದು ಸರ ಸೆನ್ನ |
ನಾವತೆರದಿಂ ಕರೆವ ನಧ್ವರಕೆ ಬರ ಲಪ್ಪು |
ದೇ ವಿಭವೆ ಹಯಹಸ್ತಿಗಳನಿತೊ ಡಾಳ್ವ ರಾ ರ್ಪತಿಪುತ್ರರಿಲ್ಲ ತನಗೆ ||
ಕಾವು ದತಿಬಾಲನಾಗಿಹ ಶಿಶುವನೆಂದು ನಾ |
ನಾ ವಿಧದ ಶೋಕದಿ ನಳಲ್ವ ದುಶ್ಶಳೆಯುಂ ಕೃ |
ಪಾವನಧಿ ಪಿಡಿದೆತ್ತಿ ಸಂತವಿಸಿ ನಗರಮಂ ಪೊಕ್ಕಂ ಕಿರೀಟಿಸಹಿತ || ||೫೪||
ಬಳಿಕ ದುಶ್ಶಳೆ ಕಾಣಿಸಿದೊ ಡಾಕುಮಾರಂಗೆ |
ನಳಿನಾಕ್ಷನಭಯಮಂ ಕೊಟ್ಟು ಸಂತೈಸಿ ಕರ |
ತಳದಿಂದೆ ವ್ಮೈದಡವಿದಂ ಕೂಡೆ ಕಂಡುದು ಸಮಸ್ತಜನ ಮಘರಿಪುವನು ||
ಪೊಳಲೊ ಳ್ನೆಗಳ್ದು ದುತ್ಸವದ ಗುಡಿತೋರಣಂ |
ಮೊಳಗಿದುವು ವಿವಿಧವಾದ್ಯಧ್ವನಿಗಳಾಗ ಮಂ |
ಗಳ ನೃತ್ತಗೀತಂಗ ಳೆಸಗಿದುವು ಹರಿಪಾರ್ಥ ರಲ್ಲಿ ಸತ್ಕೃತರಾದರು || ||೫೫||
ಮರುಗಿ ಕಂಬನಿದುಂಬಿ ಮಾಡಿದ ವಿಘಾತಿಯಂ |
ಮರೆದು ಸುತನಂ ಕೂಡಿಕೊಂಡು ನೃಪ ನಧ್ವರಕೆ |
ಪೊರಮಟ್ಟು ಬಂದು ಕಾಂಬುದು ಕುಂತಿದೇವಿ ಪಾಂಚಾಲ ತನುಜೆಯರನೆಂದು ||
ನೆರೆ ನರಂ ಸಂತೈಸೆ ಬಳಿಕ ದುಶ್ಶಳೆ ಶೌರಿ |
ಗೆರಗಿ ಭಕ್ತರ ಬೆಳವಿಗೆಗಳನೊಸೆ ದಾವಾವ |
ತೆರದಿಂದೆ ಮಾಡುವಂತೆನ್ನ ನುದ್ಧರಿಸೆಂದು ನಿರ್ಗಮನ ಕನುವಾದಳು || ||೫೬||
ಅಲ್ಲಸು ಸುವಸ್ತು ಸಹಿತಾಕೆಯಂ ಕೂಡಿಕೊಂ |
ಡೆಲ್ಲಾ ಮಹೀಶ್ವರರ್ವೆರೆಸಿ ಗಜಪುರಕಾಗಿ |
ನಿಲ್ಲದೈತಂದು ಯೋಜನ ಮಾತ್ರದೊಳ್ನಿಂದು ವತ್ಸರಂ ತುಂಬಿತೆಂದು ||
ಉಲ್ಲಾಸದಿಂ ಕಿರೀಟಿಗೆ ನಿರೂಪಿಸಿ ತಾನೆ |
ಸಲ್ಲಲಿತ ಹರಿಗಳಂ ಪಿಡಿದು ಕಟ್ಟಿದ ನಿಳಾ |
ವಲ್ಲಭರ ಮುಂದೆ ಕಾರುಣ್ಯದಿಂ ದೇವನಗರೀಶ ಲಕ್ಷ್ಮೀಕಾಂತನು || ||೫೭||

ಸಂಧಿ ೩೨ ಕ್ಕೆ ಪದ್ಯಗಳು ೧೮೦೭ ಕ್ಕೆ ಮಂಗಳಮಸ್ತು.

## ಮುವ್ವತ್ಮೂರನೆಯ ಸಂಧಿ.

ಸೂಚನೆ|| ಧರಣಿಪಾಗ್ರಣಿ ಯುಧಿಷ್ಠಿರ ಮಹೀವಲ್ಲಭಂ |
ತುರಗಮೇಧಾಧ್ವರವನೆಸೈದೆ ವಿಸ್ತರಿಸಿದಂ |
ಭರತ ನಳ ನಹುಷಾದಿ ಪೃಥ್ವೀಶರೀತಂಗೆ ಪಾಸಟಿಯೆ ಪೇಳೆನಲ್ಕೆ ||

ಜನಮೇಜಯಕ್ಷಿತಿಪ ಕೇ ಳ್ಬಳಿಕ ದೈತ್ಯ ಭಂ |
ಜನ ನಖಿಳ ಭೂಪಾಲರಂ ನಾಗಪುರಕೆ ಯೋ |
ಜನ ದಳತೆಯೊ ಳ್ನಿಲಿಸಿ ಬೇರೆಬೇ ರವ ರವರ ಪಡೆಗಳಂ ಪಜ್ಜೆಗೊಳಿಸಿ ||
ತನತನಗೆ ಗಂಧಮಾಲ್ಯಾಂಬರಾಭರಣ ನೂ |
ತನ ವಿಭವದಿಂದೆ ಬಹುದೆಂದು ನೇಮಿಸಿ ಧರ್ಮ |
ತನಯನಂ ಕಾಣಬೇಕೆಂಬ ಲವಲವಿಕೆಯಿಂ ಮುಂದೆ ಬಿಜಯಂಗೈದನು || ||೧||

ಸುರನದಿಯ ತಡಿಯ ಪುಣ್ಯಕ್ಷೇತ್ರದೊಳ್ಸುವಿ।
ಸ್ತರದ ಮಣಿಮಂಡಪದೊಳಖಿಳ ಮುನಿಗಣದೊಡನೆ।
ಬರಿಸದಿಂದೊಡಲ ದಂಡಿಸಿ ನೆಲದನೇಲೆ ಕುಳ್ಳಿರ್ದ ಯಮನಿಯಮದಿಂದೆ॥
ಪರಮದೀಕ್ಷಾ ವಿಧಿಯನನುಕರಿಸಿ ಸಾಧ್ವಿಯರ।
ನೆರವಿಯೊಳೆಸೆವ ಪತ್ನಿವೆರಸಿ ತೊಳಗುವ ಯುಧಿ।
ಷ್ಠಿರಭೂಪನಂ ಕಂಡನಸುರಾರಿ ವಂದಿಸಿತು ತತ್ಸಭೆ ಮುರಾಂತಕಂಗೆ॥ ||೨||
ಯದುಕುಲಾಗ್ರಣಿ ಬಳಿಕ ಭೀಮನಂ ಬಿಗಿಯಪ್ಪಿ।
ವಿದುರ ಧೃತರಾಷ್ಟ್ರ ಮಾದ್ರೇಯರಂ ತಕ್ಕೈಸಿ।
ಮುದದಿಂದೆ ದೇವಕಿ ಯಶೋದೆಯ ಗರ್ಭವಂದನಂಗೈದು ಪೃಥೆಗೆ ನಮಿಸಿ॥
ಪದುಳವಿಟ್ಟೈವೆ ಗಾಂಧಾರಿಯಂ ಬಂದು ದ್ರೌ।
ಪದಿ ಸುಭದ್ರೆಯ ರಂಘ್ರಿಗೆರಗಿದೊಡೆ ಮಣಿದೆತ್ತಿ।
ತದನಂತರದೊಳಖಿಳ ಮುನಿಗಳ್ಗೆ ವಂದಿಸಿ ನಗುತೆ ನೃಪತಿಗಿಂತೆಂದನು॥ ||೩||
ಅರಸ ನಿನ್ನಧ್ವರದ ವಾಜಿ ಭೂವಲಯಮಂ।
ತಿರುಗಿ ಬಂದುದು ವರ್ಷಮಾತ್ರದೊಳ್ಮೇದಿನಿಯ।
ನರಪತಿಗಳೆಲ್ಲರುಂ ನಡೆತಂದರೊಡನೆ ಪಾರ್ಥಪ್ರತಾಪದ ಹರಹಿಗೆ॥
ಧರಣಿ ಸಾಲದು ನೆರಪಿದೊಡವೆ ಗಮರಾಚಲಂ।
ಸರಿಯಲ್ಲ ಬಕದಾಲ್ಭ್ಯಕಾದಿ ಮುನಿನಿಕರಮಿದೆ।
ದೊರೆಯದಿಹ ಸಂಭಾರಮಿಲ್ಲ ನಡೆಸಿನ್ನು ಯಜ್ಞವನೆಂದು ಹರಿ ನುಡಿದನು॥ ||೪||
ಆಮುರಾಂತಕನ ಮಾತಂ ಕೇಳ್ದು ಹರಿಸದಿಂ।
ಭೂಮಿಪತಿ ನುಡಿದನೆಲೆ ದೇವ ತವಕಾರುಣ್ಯ।
ಜೀಮೂತಮಿರೆ ಬೆಳೆಯದಿರ್ಪುದೆ ಪಾರ್ಥಪ್ರತಾಪದ ಪೊಲಂ ತಿಳಿಯಲು॥
ರೋಮರೋಮದೊಳಿಡಿ ದಜಾಂಡಕೋಟಿಗಳಿಹ ಮ।
ಹಾಮಹಿಮೆ ತಾನೆತ್ತ ನರನ ಸಂಗಡ ತಿರುಗು।
ವೀ ಮನುಜತನವೆತ್ತ ಭಕ್ತರಂ ಪಾಲಿಪುದೆ ನಿನ್ನ ಬಾಳುವೆಯೆಂದನು॥ ||೫||
ದೇವ ಸಾಕಿನ್ನದರ ಮಾತೆಮ್ಮ ಪಂಚಕದ।
ಜೀವನಂ ನಿಮ್ಮ ದೈಸಲೆ ಬಾಹ್ಯವೇತಕೆ ಧ।
ರಾವಲಯ ದರಸುಗಳನೆಂತು ಜಯಿಸಿದಿರೆಂಬ ವಿವರಮಂ ಪೇಳ್ವುದೆಂದು॥
ಭೂವಲ್ಲಭಂ ಕೇಳ್ದೊಡಿಂದಿರಾಪತಿ ಹಸ್ತಿ।
ನಾವತಿಯನಗರಮಂ ಪೊರಮಟ್ಟು ಮಗುಳಲ್ಲಿ।
ಗಾವಾಜಿಗಳ್ಬಂದು ಪುಗುಸಿನಂ ನಡೆದವೃತ್ತಾಂತಮಂ ವಿವರಿಸಿದನು॥ ||೬||
ವಾಜಿಸಹಿ ತರ್ಜುನಂ ಪೊರಮಟ್ಟನಂದು ವಿ।
ಭ್ರಾಜಿಸುವ ಚೈತ್ರದೊಳ್ಮೂಡೆ ಮಾಹಿಷ್ಮತಿಗೆ।
ರಾಜನಹ ನೀಲಧ್ವಜಂ ತುರಗಮಂ ತಡೆದ ನಗ್ನಿಯ ಸಹಾಯದಿಂದೆ॥
ಈ ಜಿಷ್ಣು ಸಂಗರದೊಳಾತನಂ ಜಯಿಸ ಲಾ।
ವ್ಯಾಜದಿಂ ಬಂದುದು ಸರಿದ್ವರೆಯ ಶಾಪಂ ಮ।
ಹಾಜವದೊಳಲ್ಲಿಂದೆ ಪೋಗಿ ತಿರುಗಿತು ಹಯಂ ಬಳಿಕ ವಿಂಧ್ಯಾಚಲದೊಳು॥ ||೭||

ಆ ನಗದ ವೆಣ್ಗಳಿಂ ಪಣ್ಗಳಿಂ ದೊಜ್ಜರದ |
ಪಾನೀಯದಿಂಪಿನಿಂ ತಂಪಿನಿಂ ಕುಸುಮ ಗಂ |
ಧಾನಿಲನ ಕಂಪಿಂದೆ ಪೆಂಪಿಂದೆ ಸಲವೇರಿ ಚಂಡಿಯು ವಿಶಾಪದಿಂದೆ ||
ಸೇನೆ ವಿಸ್ಮಯದೊಡನೆ ಹಯದೊದನೆ ಮುಂದೆ ಸು |
ಮ್ಮಾನದಿಂ ನಡೆಯಲ್ಕೆ ಸಂಗರ ದೊ |
ಳೀನರಂ ಜಯಿಸಿಡಂ ಛಲದಿಂದೆ ಬಲನಿಂದೆ ಹಂಸಧ್ವಜನ ಸುತರಸು || ||೮||
ಜನಪ ಕೇಳಾ ಘರ್ಮಕಾಲದೊ ಳ್ತುಹಿನಗಿರಿ |
ತನುಜೆಯು ತಪೋವನದ ವಿಘ್ನಂಗಳಂ ಕಳೆದು |
ವನಿತಾಮಯದ ರಾಜ್ಯದೊಳ್ಪ್ರಮೀಲೆಯು ನೊಡಂಬಡಿಸಿ ಗಜಪುರಕೆ ಕಳುಹಿ ||
ದನುಜೇಂದ್ರಭೀಷಣನ ನಾಕ್ರಮಿಸಿ ಬಭ್ರುವಾ |
ಹನನ ಪಟ್ಟಣಕೆ ನಿಜಹಯದೊಡನೆ ಬಂದ ನ |
ರ್ಜುನ ಸಬ್ದಖುತುವಿನೊಳ್ಮೇಘರವಮಂ ಮಿಗುವವಾದ್ಯ ನಿರ್ಘೋಷದಿಂದೆ || ||೯||
ಮಣಿಪುರಕೆ ಬಂದುದಾಸಮಯದೊಳ್ಕದುರೆ ಫಲು |
ಗುಣನಲ್ಲಿ ಮಡಿದನಾತ್ಮಜನಿಂದೆ ಬಳಿಕದಂ |
ಫಣಿರಾಜತನುಜೆ ಪರಿಹರಿಸಿದಳ್ಮುಂದೆ ನಡೆಯ ಲ್ತಾಮ್ರಕೇತು ತಡೆದು ||
ರಣದೊಳಿಮ್ಮೆಲ್ಲರಂ ಗೆಲ್ದೊಡಾತನ ಪಿತಂ |
ಗುಣನಿಧಿ ಮಯೂರಧ್ವಜಂ ತನ್ನ ಯಜ್ಞಮಂ |
ಗಣಿಸ ದೆಮಗೊಪ್ಪಿಸಿ ತುರಂಗಸಹಿ ತೈತಂದಸರಸ ಕೇಳ್ಕೌತುಕವನು || ||೧೦||
ಆಮಯೂರಧ್ವಜಂ ಹರಿಸಹಿತ ನಡೆಯೆ ನಿ |
ಸ್ಸೀಮಸಹ ವೀರವರ್ಮಂ ತಡೆಯೆ ಬಿಡಿಸಲು |
ದ್ದಾಮವಾಜಿಗಳೈದಿ ಚಂದ್ರಹಾಸನಪುರಕೆ ಕಣ್ಗೆ ಗೋಚರಿಸದಿರಲು ||
ಪ್ರೇಮದಿಂ ನಾರದಮುನೀಶ್ವರಂ ಬಂದು ಸು |
ತ್ರಾಮಸುತನೊಳ್ನುಡಿ ವಿಸ್ತರದೆ ವೈಷ್ಣವ ಶಿ |
ರೋಮಣಿಯ ಕಥೆವೇಳೆ ಕೇಳ್ದು ತತ್ಪುರಕೈದಿ ಸಲಿದೈದುದಿನಮಿರ್ದನು || ||೧೧||
ಶೈಶಿರದ ಕಾಲದೊ ಳ್ಕಲಿಚಂದ್ರಹಾಸನಂ |
ಸೈಸಿರಿಯೊಳೊಡಗೊಂಡು ಬಕದಾಲ್ಭ್ಯನಂ ಕಂಡು |
ಕೈಸಾರ್ದ ಹರಿಸದಿಂ ಸಿಂಧುದೇಶಪ ಮೇಲೆ ಮುಖಸಮಯ ಕಿಲ್ಲಿಗಾಗಿ ||
ಜೈಸಿ ಬಂದೆವು ನಿನ್ನನುಜ್ಞೆಯೊಳ್ಗಡ ಕಳುಹಿ |
ದೈಸು ವೀರರ್ಕಳುಂ ಸುಖದೊಳೈತಂದ ರೊ |
ತ್ತೈಸಿ ದಗಣಿತ ವಸ್ತುಸಹಿ ತಖಿಳ ನೃಪರೊಡನೆ ಬಹಳ ವಿಭವದೊಳೆಂದನು ||೧೨||
ಭೂಮಂಡಲದೊಳಿಂತು ಮುಖಹಯಂ ತಿರುಗಿದ ಮ |
ಹಾಮಹೀಶ್ವರರೊಡನೆ ಬಂದ ವೃತ್ತಾಂತಮಂ |
ದಾಮೋದರಂ ಪೇಳ್ದು ರಾಯನಂ ಬೀಳ್ಕೊಂಡು ತನ್ನ ಮಂದಿರಕೆ ಬಳಿಕ ||
ಭೀಮನಂ ಕೈವಿಡಿದುಕೊಂಡು ನಡೆತರೆ ಸತ್ಯ |
ಭಾಮಾದಿ ರಾಣಿವಾಸಂಗ ಳಿದಿರಾಗಿ ಸು |
ಪ್ರೇಮದಿಂ ದಾರತಿಗಳಂ ಕೊಂಡು ಬಂದು ನಗು ತಾತ್ಮಪತಿಯಂ ಕಂಡರು || ||೧೩||

ಮಡದಿಯರ ಮಧ್ಯದೊಳ್ಸತ್ಯಭಾಮಾದೇವಿ |
ನುಡಿದಳೆಲೆದೇವ ನಮಗಿಹಳು ಸೋದರಿ ಕುಜ್ಜ |
ಪೊಡವಿಯೊಳ್ಫಲುಗುಣಂ ತುರಗರಕ್ಷೆಗೆ ಪೋದಕತದಿಂ ಪ್ರಮೀಲೆ ನಿಮಗೆ ||
ಒಡಹುಟ್ಟಿದವಳಾದಳಿನ್ನೇನೆನಲ್ಕವಳ |
ಮುಡಿಯ ಮಾತಂ ಕೇಳ್ದು ಮೊಳೆವ ನಸುನಗೆಯು ಜಿ |
ಣ್ಪಿಡಿಯೆ ಕಮಲಾಂಬಕಂ ಪವಮಾನ ನಂದನನ ಮೊಗನೋಡು ತಿಂತೆಂದನು ||೧೪||
ಸಂತತಿಗೆ ಸಂತತಿಗಳಾದುವಿನ್ನೇನದರ |
ಚಿಂತೆ ಬಾಲ್ಯವ ನಮಗೆ ಭೀಮ ನೋಡೀಗ ನ |
ಮ್ಮಂತರವ ನರಿಯದಿವಳಿಂದ ಕಟಕಿಯ ಮಾತನೆಂದು ಮುರಹರ ನೊರೆದೊಡೆ ||
ಅಂತಹುದು ಪುಸಿಯಲ್ಲ ತರಳತನದೊಳ್ಪುರುಷ |
ರಿಂತಾದೊಡಂ ನಡೆನರೀ ಧರ್ಮಜನ ಪುರದೊ |
ಳಿಂತುಮಾರ್ಗಿಗಳಾಗದಿರಬಹುದೆ ಹೇಳೆಂದಳಾಸತ್ಯಭಾಮೆ ನಗುತೆ || ||೧೫||
ಪ್ರಾಣೇಶ್ವರಿಯ ನುಡಿಗೆ ನಸುನಗುತೆ ಮತ್ತುಳಿದ |
ರಾಣಿಯರ ಸರಸೋಕ್ತಿಗಳನಾಲಿಸುತೆ ಚಕ್ರ |
ಪಾಣಿ ಮಾರುತಿಸಹಿತ ಭವನದೊಳ್ಕುಳ್ಳಿರ್ದು ಸುಖದೊಳಿರಲಾ ಪದದೊಳು ||
ಕ್ಷೋಣೀಂದ್ರ ಕೊಡಗೂಡಿ ಫಲುಗುಣಂ ಭೂವರನ |
ಕಾಣಿಕೆಗೆ ನಗರದ ಸಮೀಪಕ್ಕೈತಂದ ನಾ |
ವಾಣಿಯಂ ದಾರುಕಂ ಬಂದು ಬಿನ್ನೈಸಲ್ಕೆ ಪೊರಮಟ್ಟ ನರಮನೆಯನು || ||೧೬||
ಬಂದ ನಧ್ವರಶಾಲೆಗಸುರಾರಿ ಹುತ್ತೆ ಯಮ |
ನಂದನಂ ಗಿಲ್ಲಿಹುದು ನೀ ನಖಿಳ ಭೂಪಾಲ |
ವೃಂದಮಂ ಬಕದಾಲ್ಭ್ಯಮುನಿಪನಂ ನಾವಿವಿಗೊಂಡು ಬಹೆವೆಂ ದುಸಿರ್ದ ||
ಮುಂದೆ ಧೃತರಾಷ್ಟ್ರ ವಿದುರಾದಿ ವೃದ್ಧರ್ಮಹೀ |
ವೃಂದಾರಕ ವ್ರತತಿಸಹಿತ ಪೊರಮಟ್ಟು ನಡೆ |
ತಂದ ನುತ್ಸವದಿಂದೆ ಬರಲೈದೆ ಸಕಲ ಜನಮೆಂದು ನೇಮಿಸಿ ಮುದದೊಳು || ||೧೭||
ಅಸುರಹರನಾಜ್ಞೆಯಿಂದಾಗ ಪಟ್ಟಣದೊಳಗೆ |
ಪೊಸತಾಯ್ತು ಗುಡಿತೋರಣದ ರಚನೆ ಬೀದಿಗಳೊ |
ಳೆಸೆದುವು ಸುಮಂಗಳದ್ರವ್ಯಂಗಳೊಪ್ಪಿದುವು ಪನ್ನೀರ ಚಳೆಯಂಗಳು ||
ಮುಸುಕಿದುವು ಧೂಪವಾಸನೆಗಳಿಡಿದುದು ವಿವಿಧ |
ಕುಸುಮ ಗಂಧೋತ್ಕರಂ ಘನಸಾರ ಕುಂಕುಮದ |
ಕೆಸರುಗಳ ಪರಿಮಳಂ ತೀಡಿದುದು ಕಪ್ಪುರದ ಸೊಡರ್ಗಂಪು ರಂಜಿಸಿದುದು || ||೧೮||
ಪೊರಮಟ್ಟು ದಖಿಳ ಪುರಜನ ಮೈದೆ ಸಿಂಗರದ |
ಮೆರಹುಗಳ ಮೌಳಿಯಿಂ ಮೇಳವದ ರಚನೆಗಳ |
ತರತರದ ವಿದ್ಯಾವಿನೋದದಿಂ ನಟನರ್ತಕೀಜನದ ಗೀತದಿಂದೆ ||
ತುರುಗಿದ ಮೃದಂಗಾದಿ ವಾದ್ಯಧ್ವನಿಗಳಿಂದೆ |
ಮಿರುಗುವ ವಿಲಾಸಿನಿಯರೋಳಿಯಿಂ ಮಾರ್ಗ ದೊ |
ಳ್ತೆರಪಿಲ್ಲೆನಲ್ಕೆ ವೈಭವದಿಂದೆ ಪಾರ್ಥನ ನಿದಿರ್ಗೊಂಬ ಸಂಭ್ರಮದೊಳು || ||೧೯||

ದಂತಿಗಳ ಮೇಲೆ ದೇವಕಿ ಯಶೋದಾದೇವಿ |
ಕುಂತಿಯ ಪೊರಮಟ್ಟರದರ ಬಳಿವಿಡಿದು ಸೀ |
ಮಂತಿನೀಗಣಸಹಿತ ರುಕ್ಮಿಣಿಯು ದಂಡಿಗೆ ತೆರಳ್ದು ದತಿವಿಭವದಿಂದೆ ||
ತಿಂತಿಣಿಸಿ ಗಗನದೊ ಳ್ತುಂಬಿಗ ಳ್ಝಾರ ಮುಗಿ |
ಲಂತೆ ನವ ಪಾರಿಜಾತದ ಕುಸುಮಪರಿಮಳಕೆ |
ಸಂತತಂ ಮುಸುಕ ಲಂದಣದೊ ಳೈದಿದ ಳಾಳಿಯ ರ್ಪರೆಸಿ ಸತ್ಯಭಾಮೆ || ||೨೦||
ಜಾಂಬವತಿ ಮೊದಲಾದ ಪಂಕರುಹ ಪತ್ರಾಯ |
ತಾಂಬಕನ ರಾಣಿಯು ರ್ಪರಿಪರಿಯೊಳೆಸೆವ ದಿ |
ವ್ಯಾಂಬರ ಸುಗಂಧ ಮಾಲ್ಯಾಭರಣ ಮುಕ್ತಾವಳಿಗಳ ಸಿಂಗರವನಾಂತು ||
ತಾಂಬೂಲರಾಗ ರಸದೊಳ್ಪಡಿದ ಲಲಿತ ವ |
ದನಾಂಬುಜದ ಕಾಂತಿಗಳ ಕಳೆವೆತ್ತು ತಮುತಮಗೆ |
ಜಾಂಬೂನದಾಲಂಕೃತಾಂದೋಳಿ ಕಾರೋಹಣಂಗೈದು ಪೊರಮಟ್ಟರು || ||೨೧||
ಇಟ್ಟಣಿಸಿ ತಮರೇಂದ್ರ ತನಯುಸ ನಿದಿರ್ಗೊಂಬ |
ಬಟ್ಟೆಯೊ ಳ್ನಾರೀಸಮೂಹ ಪೊರಸೊರಸಿ ನೊ |
ಳ್ತೊಟ್ಟ ವೈಮುಡಿಗೆಗಳ ಮಸೆದ ಪೊಂಬುಡಿಯಂತೆ ಕುಂಕುಮ ರಜಂಗ ಳುಗಲು |
ಕಟ್ಟಿರ್ದ ಹಾರಾದಿಗ ಳ್ಪರಿ ಮದಿರ್ಪ ಪೋ |
ಲ್ದಿಟ್ಟ ಗೊನೆಗಳ ಕಾಂತಿ ಸೂಸುತಿರೆ ತನುರುಚಿ ಯೊ |
ಳುಟ್ಟ ವಸನದ್ಯುತಿ ವಿರಾಜಿಸುತ್ತಿರೆ ಹಾವಭಾವದ ವಿಲಾಸದಿಂದೆ || ||೨೨||
ಬಂದುದು ಮಹಾಜನಂ ಬಹಳ ವೈಭವದಿಂದೆ |
ನಿಂದುದು ಚತುರ್ಬಲಂ ಕೆಲಕೆಲದೊ ಳೊಡ್ಡಾಗಿ |
ಸಂದಿಸಿದ ರಿವರವ ರ್ಬಳಿಕಶ್ವಯುಗಸಹಿತ ನಡೆದುಬಹ ಫಲುಗುಣಂಗೆ ||
ಚಂದನದ ಮುತ್ತಿನಕ್ಷತೆಯು ಕುಂಕುಮ ಮಿಶ್ರ |
ದಿಂದೆ ದಧಿ ಲಾಜ ದೂರ್ವಾಂಕುರ ಗಳಿಂ ದೆಸೆವ |
ಪೊಂದಳಿಗೆವಿಡಿ ದಾರತಿಯನೆತ್ತಿ ಮುತ್ತುಗಳ ಸೇಸೆ ದಳೆದ ರ್ಸತಿಯರು || ||೨೩||
ವಿಜಯ ಹರಿಸುತ ಯೌವನಾಶ್ವ ಸಾತ್ಯಕಿ ವೃಷ |
ಧ್ವಜ ಸಾಂಬ ಕೃತವರ್ಮ ಹೈಡಿಂಬಿ ಸಾಲ್ವಾನ |
ರಜ ಸುವೇ ಗಾನಿರುದ್ಧಾದಿಗ ಳ್ಧೃತರಾಷ್ಟ್ರಭೂಪನಂ ಕಂಡು ಬಳಿಕ ||
ಅಜವಾಹನಧ್ವಜ ಮಯೂರಧ್ವಜಾರುಣ |
ಧ್ವಜ ಚಂದ್ರಹಾಸ ನೀಲಧ್ವಜ ಧನಂಜಯಾ |
ತ್ಮಜ ವೀರವರ್ಮ ಪ್ರಮುಖರಾದ ರಾಯರಂ ಕಾಣಿಸಿದ ರುಚಿತದಿಂದೆ || ||೨೪||
ವಂದನೀಯರ್ಗೆ ವಂದಿಸಿ ವಂದಿಸುವ ಜನದ |
ವಂದನೆಗಳಂ ಕೊಂಡು ಸಮುಬಂಧುಗಳ ನಪ್ಪಿ |
ಸಂದರ್ಶನೋತ್ಸವದೊ ಳನ್ಯೋನ್ಯ ಸಂಭಾಷಣೆಗಳಿಂದೆ ಮುದಿತರಾಗಿ ||
ವಂದಿಸಿವರೆಲ್ಲರುಂ ಬಕದಾಲ್ಭ್ಯಮುನಿಗೆ ಬಳಿ |
ಕಂದಣಂಗಳ ನಿಳಿದು ಮುರಹರನ ನೇಮದಿಂ |
ಬಂದ ರಧ್ವರಶಾಲೆ ಗರಸನಂ ಕಾಣಲ್ಕೆ ಗೋಧೂಳಿ ಲಗ್ನಮಾಗೆ || ||೨೫||

ತರತರದ ಛತ್ರ ಚಮರಂಗಳ ವಿಡಾಯಿಗಳ |
ಪರಿಪರಿಯ ಸಿಂದ ಸೀಗುರಿ ಪತಾಕಾವಳಿಯ |
ಮೊರೆಮೊರೆವ ವಿವಿಧ ವಾದ್ಯಧ್ವನಿಯ ವಂದಿ ಮಾಗಧರ ಜಯಜಯ ನಿನದ ||
ಸರಸತರ ಸಂಗೀತನರ್ತನದ ಮೇಳವದ |
ನೆರೆನೆರೆದ ಚತುರಂಗ ದೊಡ್ಡುಗಳ ಸಂದಣಿಯ |
ದೊರೆದೊರೆಗಳೈತಂದ ರುತ್ಸವದೊಳರಸನಂ ಕಾಣಲಚ್ಯುತನ ಕೂಡೆ || ||೨೬||
ಮುಂದೆ ಕುದುರೆಗಳದರ ಬಳಿಯೊಳ್ಸಮಸ್ತ ಯದು |
ವೃಂದದೊಡಗೂಡಿ ತಾ ನೆಡಬಲದೊಳಸುರೇಂದ್ರ |
ನಂದನ ವೃಷಧ್ವಜ ರ್ಪಿಂತೆ ಹಂಸಧ್ವಜ ಮಯೂರಧ್ವಜಾದಿ ನೃಪರು ||
ಸಂದಣಿಸಿ ಗೋಧೂಳಿಲಗ್ನದೊಳ್ಭೂಪನಂ |
ಸಂಧಿಸುವ ಮಾಳ್ಕೆಯಿಂ ಕಪ್ಪುರದ ತೈಲಂಗ |
ಳಿಂ ದುರಿವ ಬೊಂಬಾಳ ಶತಕೋಟಿಗಳ್ಪಿಡಿಯ ಲಸುರಹರನೈತಂದನು || ||೨೭||
ಕರ್ಣದೊಳ್ಕೇಳಬಹುದಲ್ಲ ದಕ್ಷಿಯೊಳನಿಮಿ |
ಷರ್ನೋಡಲಳವಹುದೆ ತುರಗ ಮೇಧಂಗಳ ನ |
ಹರ್ನಿಶಾವಲ್ಲಭರ ಕುಲದ ಭೂಪಾಲಕ ರ್ಮಾಡಿದ ರ್ಫಲಬರವರ ||
ನಿರ್ಣಯವೆ ಹರಿಯೊಡನೆ ಸಿರಿಸಹಿತ ಧರೆಗೆ ಪಯ |
ದರ್ಣವಂ ಬಂದಪುದೊ ಶಿವಶಿವಾ ಪೊಸತಿದಂ |
ವರ್ಣಿಸುವ ಕವಿಯಾವನೆನೆ ವಾಜಿಗಳ ಕೂಡೆ ನಡೆತಂದ ರವನೀಶರು || ||೨೮||
ಯಾಜಮಾನ್ಯದೊಳಿಸೆವ ಭೂಪಾಲನಂ ಕಂಡು |
ವಾಜಿಗಳನೊಪ್ಪಿಸಿ ಪದಾಂಬುಜಕೆ ಪೊಡಮಟ್ಟೊ |
ಡಾ ಜಿಷ್ಣುವಂ ತೆಗೆದು ತಕ್ಕೈಸಿ ಕರ್ಣಜ ಪ್ರದ್ಯುಮ್ನಕಾದಿಗಳನು ||
ತೇಜದಿಂ ದವನೀಶ್ವರಂ ಮನ್ನಿಸಿದ ಬಳಿಕ |
ರಾಜೀವಲೋಚನಂ ಕಾಣಿಸಿದ ನರಸಂಗೆ |
ರಾಜಮೌಳಿಗಳಾದ ಹಂಸಧ್ವಜ ಪ್ರಮುಖ ದೇಶಾಧಿವಲ್ಲಭರನು || ||೨೯||
ಈತಂ ಕಣಾ ರಾಜಹಂಸ ಹಂಸಧ್ವಜಂ |
ಖ್ಯಾತನೀತಂ ವೀರ ವೀರವರ್ಮಾವನಿಪ |
ನೀತಂ ನೃಪಾಲರತ್ನಾಭರಣ ಮಧ್ಯನಾಯಕ ನೀಲ ನೀಲಕೇತು ||
ಈತಂ ವಿರೋಧಿಬಲದವಶಿಖಿ ಶಿಖಿಧ್ವಜಂ |
ಭೂತಳಸ್ಥಿತ ಚಂದ್ರ ಚಂದ್ರಹಾಸ ಕ್ಷ್ಮೇಂದ್ರ |
ನೀತನೀತಂ ದಿವಿಜಪತಿಯ ಸುತ ಸುತ ಬಭ್ರುವಾಹನಂ ನೋಡೆಂದನು || ||೩೦||
ಏರಿಸಿ ನುಡಿವುದಿಲ್ಲ ತನಗೆ ಸಮನೆನಿಸುವ |
ಮೀರಿದ ಪರಾಕ್ರಮಿಗಳಿವರ ಸುಪಚರಿಸೆಂದು |
ಬೇರೆಬೇರಾನೃಪರ ನವರವರ ಸುತ ಸಹೋದರ ಮುಖ್ಯ ಮಂತ್ರಿಗಳನು ||
ಮಾರೊಡ್ಡಿ ದಮರಾದ್ರಿಯಂತೆ ರಾಶಿಗಳಾಗೆ |
ಹೇರಿ ತಂದೊಡವೆಯಂ ವಿವಿಧ ರತ್ನಂಗಳಂ |
ತೋರಿಸಿ ಸುವಸ್ತುಗಳ ನೊಪ್ಪಿಸಿದ ನರಸಂಗೆ ದಾನವಧ್ವಂಸಿ ನಗುತೆ || ||೩೧||

ಬಳಿಕಾ ಸಮಸ್ತ ಭೂಪಾಲ ರಸುರಾರಿಯಂ।
ಬಳಸಿ ನಿಂಡೆಲೆ ದೇವ ನಿನ್ನ ದರ್ಶನಮಾಯ್ತು।
ನಳಿನಭವ ವಿಂಶತಿಯೊಳಿರ್ದ ಬಕದಾಲ್ಭ್ಯಮುನಿಯಂ ಕಂಡೆವಚ್ಚರಿಯೊಳು॥
ಇಳೆಯು ದೇಶದ ವೈಭವಂಗಳಂ ಹರಿಯೊಡನೆ।
ತೊಳಲಿ ನೋಡಿದೆ ವಧ್ವರಕೆ ಬಂದೆವೀ ಪುಣ್ಯ।
ನಿಳಯನಹ ಧರ್ಮಜನ ನೀಕ್ಷಿಸಿದೆ ವಿನಿತರಿಂ ಕೃತಕೃತ್ಯರಾವೆಂದರು॥ ॥೩೨॥
ಎನಲವರ ನುಡಿಗಳ್ಗೆ ನಸುನಗುತೆ ಮುರಹರಂ।
ವಿನಯದಿಂದರಸಂಗೆ ನೇಮಿಸಿದೊಡಾ ಸಕಲ।
ಜನಪತಿಗಳಂ ಧರಾವಲ್ಲಭಂ ಸತ್ಕರಿಸಿ ವಿವಿಧೋಪಚಾರದಿಂದೆ॥
ಮನವೊಲಿದು ಬಕದಾಲ್ಭ್ಯನಂ ಪೂಜೆಗೈ ದಖಿಳ।
ಮುನಿಗಳಂ ಕೂಡಿಕೊಂ ಡಧ್ವರೋಪಕ್ರಮಕೆ।
ವಿನುತ ಸಂಕಲ್ಪಮಂ ಮಾಡೆ ರಚಿಸಿದ ರಿಷ್ಟಕಾಚಯನಮಂ ಕ್ರಮದೊಳು॥ ॥೩೩॥
ಕ್ಷೇತ್ರಮಂ ನೆಲೆಗೈದು ವೃಷಭಂಗಳಂ ಪೂಡಿ।
ನೇತ್ರಮಂ ಪಿಡಿಯೆ ನೃಪನೋಷಧಿಗಳಂ ಕಮಲ।
ನೇತ್ರೆ ತಾಳ್ದಿರೆ ಕುಂತಿ ದೇವಕಿ ಯಶೋದೆಯ ಕೃಷ್ಣಾದಿ ಪೃಥ್ವೀಶರು॥
ಧಾತ್ರೀಸುರ ರ್ನಾರಿಯ ರ್ನೆರೆಸಿ ಕನಕಮಯ।
ಪಾತ್ರೆಯೊ ಳ್ಕರ್ಪೂರ ಚಂದನ ಜಲವನೊಡನೆ।
ಸೂತ್ರವಿಧಿಗಳ ಮಂತ್ರಪಾಠದಿಂ ತಳಿಯೆ ಶೋಧಿಸಿದ ರುಕ್ತಸ್ಥಳವನು॥ ॥೩೪॥
ಶ್ರುತಿಮಂತ್ರವಿಧಿಗಳಿಂ ವ್ಯಾಸ ಬಕದಾಲ್ಭ್ಯರನು।
ಮತದಿಂದೆ ಬುಧರಿಟ್ಟಿಗೆಗಳ ನಳವಡಿಸಿ ದ।
ಕ್ಷಿತಿಯೊ ಳ್ಸುಪರ್ಣಾಕೃತಿಯ ವೇದಿಯಂ ಚತುರ್ವ್ಯೂಹದೊ ಳ್ನಿಲಿಸಿ ನಾಲ್ಕು॥
ಶತವನುದರಾಸನಂಗಳ್ಗೆ ತೆಂಕಣಗರಿಯ।
ಚಿತಿಗೆ ನೂರರಮೇಲೆ ನಾಲ್ವತ್ತುನಾಲ್ಕನಾ।
ಪ್ರತಿಯೊಳುತ್ತರಪಕ್ಷ ಕನಿತುಮಂ ಪುಚ್ಛಕೆಪ್ಪತ್ತೊಂದ ನೊಂದಿಸಿದರು॥ ॥೩೫॥
ಮೊದಲೊಂದ ನಿಟ್ಟಿಗೆಯ ನಿಮ್ಮಡಿಸ ಲೆರಡನೆಯ।
ವದ ನಿಮ್ಮಡಿಸಲುರೆ ವಿರಾಜಿಸಿತು ಮೂರನೆಯ।
ವದ ನಿಮ್ಮಡಿಸಲಾಯ್ತು ನಾಲ್ಕನೆಯದದ ನಿಮ್ಮಡಿಸಲೆಸೆದು ದೈದನೆಯದು॥
ಪುದಿದಿಂತು ಮೆರೆದುದು ಸುಪರ್ಣಪಂಚಕದ ಯಾ
ಗದ ವೇದಿಗಳ್ಮಹಾಮಂಟಪವನೈದೆ ರಚಿ।
ಸಿದ ರೆಂಟುಬಾಗಿಲ್ಗಳಿಂ ಕೂಡಿ ತೋರಣ ಪತಾಕೆಗಳ ವಿಸ್ತರದೊಳು॥ ॥೩೬॥
ಇಷ್ಟಕಾಚಯನದಿಂ ರಾಜಿಸಿತು ಬಳಸಿ ಪರಿ।
ಶಿಷ್ಟದಿಂದೊಪ್ಪಿದುವು ಪಲವು ವೇದಿಗಳೆಸೆದು।
ವಷ್ಟಕುಂಡದ ರಚನೆ ಪಾಲಾಶಮೇಳು ಖಾದಿರವಾರು ಬಿಲ್ವವೈದು॥
ದೃಷ್ಟವಾದುನ್ನತ ಶ್ಲೇಷ್ಮಾತಕಂ ಮೂರ।
ಧಿಷ್ಠಿತದ ಯೂಪಮಿಂ ತೇಕವಿಂಶತಿಗಳು।
ತ್ಕೃಷ್ಟ ತ್ರಿವೃತ್ಸೂತ್ರ ಭೂಷಿತ ಚಷಾಲದಿಂ ಮೆರೆದುವಾ ಮಂಟಪದೊಳು॥ ॥೩೭॥

ವಿಹಿತ ಸಂಸ್ಥಾಪಿತ ಮಖಾವಳಿಗಳಿಂದೆ ಶತ |
ಜುಹುಗಳಿಂ ವೈಕಂಕತದ ಷಷ್ಟಿಸ್ರುಕ್ಸ್ರುವ ನಿ |
ವಹದಿಂದೆ ಗೋಚರ್ಮ ಲೋಹಿತ ದುಲೂಖಲದ ಸೋಮವಲ್ಲಿಯ ಮುಸಲದ ||
ವಿಹರಿಸುವ ದರ್ಭಾಸ್ತರಣದ ಚಮಸಾದಿಗಳ |
ಬಹುಸಾಧನಂಗಳಿಂ ಭೂರಿಸಂಭಾರ ಸಂ |
ಗ್ರಹದಿಂದೆ ಬೇಕಾದ ವಸ್ತುಸಂಜಾತದಿಂ ಮಖಶಾಲೆ ಕಣ್ಗೆಸೆದುದು || ||೩೮||

ವರಿಸಿ ಬಕದಾಲ್ಭ್ಯನಂ ಬ್ರಹ್ಮತ್ವಕಿರಿಸಿದ |
ರ್ವರಮುನಿಪ ನಾವ್ಯಾಸ ನಾಚಾರ್ಯನಾದ ನ |
ಧ್ವರಿಯು ಮೊದಲಾದ ಋತ್ವಿಜರಾಗೆ ವಾಮದೇವ ವಶಿಷ್ಠ ಗೌತ ಮಾತ್ರಿ ||
ವರಪರಾಶರ ಭರದ್ವಾಜ ಕೌಂಡಿನ್ಯ ಭಾ |
ಗುರಿ ಜಾಮದಗ್ನ್ಯ ಗಾಲವ ಜಾತಕರ್ಣ ಸೌ |
ಭರಿ ಸುಮಂತು ಕಹೋಳ ರೈಭ್ಯ ರೋಮಶ ಮುಖ್ಯಮುನಿಗಳಾ ಕ್ರತುವರದೊಳು||೩೯||

ರಕ್ಷೋಘ್ನಮಂತ್ರದಿಂ ದೆಂಟುಬಾಗಿಲ್ಗಳಂ |
ರಕ್ಷಿಸುವರಾಗೆ ವಿಶ್ವಾಮಿತ್ರ ಭೃಗು ವಾಯು |
ಭಕ್ಷಕ ಪುಲಸ್ತ್ಯರ್ಮುಚುಕುಂದ ಧೌಮ್ಯೋಪಮನ್ಯುಕ ಕಪಿಲನೇತ್ರರು ||
ಅಕ್ಷಯ ತಪೋಧನದ ವರಮುನಿಗಳೆಲ್ಲರುಂ |
ಲಕ್ಷಿತದ ಪೂಜೆಗಳ ನನುಕರಿಸ ಲನಿಬರ ಸ |
ಮಕ್ಷದೊಳ್ಧರ್ಮಜಂ ಮೃಗಶೃಂಗಧರನಾಗಿ ಯಾಜಮಾನ್ಯದೊಳೆಸೆದನು || ||೪೦||

ವ್ಯಾಸಮುನಿ ಬಳಿಕಲ್ಲಿ ನುಡಿದ ನವನೀಶಂಗೆ |
ಭಾಸುರ ಸಭಾವಲಯದೊಳ್ಮೆರೆವ ದಿವ್ಯ ಸಿಂ |
ಹಾಸನಾರೂಢರಾಗಿಹ ಮುಕುಂದಾದಿಭೂಪಾಲರ್ಗೆ ವಿನಯದಿಂದೆ ||
ಈಸಮಯದೊಳ್ಚತುಷ್ಷಷ್ಟಿ ದಂಪತಿಗಳ್ವಿ |
ಲಾಸದಿಂ ದಮಲ ಕಲಶಂಗಳಂ ತುಂಬಿ ಗಂ |
ಗಾಸರಿತ್ತೋಯಮಂ ಕೊಂಡು ಬರವೇಳ್ಪು ದವಸನ ಮಖನಿಮಿತ್ತಕಾಗಿ || ||೪೧||

ಜನಪ ಕೇಳ್ವ್ಯಾಸಮುನಿ ವಾಕ್ಯಮಂ ಕೇಳ್ದು ಬಳಿ |
ಕನಸೂಯೆ ಸಹಿ ತತ್ರಿ ಮೇಣರುಂಧತಿ ಸಹಿತ |
ಮುನಿವಸಿಷ್ಠಂ ಶೌರಿ ತಾನೆ ರುಕ್ಮಿಣಿ ಸಹಿತ ಪಾರ್ಥಂ ಸುಭದ್ರೆ ಸಹಿತ ||
ದನುಜಾರಿ ಸೂನು ಮಾಯಾವತಿ ಸಹಿತ ಮುದದೊ |
ಳನಿರುದ್ಧ ನುಷೆ ಸಹಿತ ಮಾರುತಿ ಹಿಡಿಂಬಿ ಸಹಿ |
ತನಸುತನ ಕುವರಂ ಪ್ರಭದ್ರೆಸಹಿ ತಮಲ ಕಲಶಂಗಳಂ ಪೊತ್ತೆಸೆದರು || ||೪೨||

ಲಲನೆ ಲೀಲಾವತಿ ಸಹಿತ ಮಯೂರಧ್ವಜಂ |
ಲಲಿತ ಸುನಂದೆ ಬಳಿವಿಡಿಯೆ ನೀಲಧ್ವಜಂ |
ಲಲಿತ ಪ್ರಭಾವತಿವೆರಸಿ ಯೌವನಾಶ್ವ ನನುಸಾಲ್ವಂ ಧನಿಯ್ಳಿಗೂಡಿ |
ಉಳಿದ ಹಂಸಧ್ವಜ ಕಿರೀಟಿಸುತ ಶಶಿಹಾಸ |
ಕಲಿವೀರವರ್ಮಂ ತಾಮ್ರಧ್ವಜಾ ದ್ಯವನಿಪ |
ರ್ಕಾಲೆ ತಮ್ಮ ತಮ್ಮ ಕಾಂತೆಯರೊಡನೆ ಸಲಿಲ ಕಲಶಂಗಳಂ ತಾಳ್ದಿಸೆದರು || ||೪೩||

ಜೊರೆದೊರೆಗಳೆಲ್ಲರುಂ ತಮ್ಮ ತಮ್ಮರಸಿಯು |
ನೆರಸಿ ಗಂಗಾತಟಕೆ ಮುಸುಕಿದ ಸುಪಲ್ಲವೋ |
ತ್ಕರದ ಪೊಂಗಲಸಂಗಳಂ ಕೊಂಡು ನಡೆಯಲವರವರ ನೈಗಾವಲ್ಗಳ ||
ಪರಿವಾರದಿಂದೆ ಪಾರ್ವರ ಮಂತ್ರಘೋಷದಿಂ |
ನೆರೆದಿಹ ಮಹಾಜನದ ಸಂದಣಿಗಳಿಂ ಪಾಠ |
ಕರ ನೃತ್ತ ವಾದ್ಯ ಗೀತಂಗಳ ವಿಲಾಸದಿಂದುತ್ಸವಂ ಚೆಲ್ವಾದುದು || ||೪೪||
ಆನೆಗಳ ಮೇಲೆ ಕುವರಿಯರಿರ್ದು ಮುತ್ತುಗಳ |
ಸೋನೆಗಳ ನಡಿಗಡಿಗೆ ಸೂಸುತಿರ ಮನ್ಮಥನ |
ಸೇನೆಗಳ ತೆರದಿಂದೆ ನೃಪಸತಿಯ ರೂಳಿಗದ ತರಳೆಯರ್ಕಂಗೊಳಿಸಲು ||
ನಾನಾವಿಧದೆ ಳೆಸೆವ ಶೃಂಗಾರ ವಿಭವದಿಂ |
ಭೂನುತಾಶ್ಚರ್ಯಮಾಗಿರ ಜಲಾಗಮಕೆ ಹರಿ |
ತಾನೆ ಬರೆ ಮೊಳಗಿದುವು ದೇವ ದುಂದುಂಭಿ ಕರೆದುದಲರ ಮಳೆ ಗಗನದಿಂದೆ || ||೪೫||
ದೇವದೇವರ ದೇವನೆಂಬುದಂ ಮಾನುಷ್ಯ |
ಭಾವದಿಂ ಲಕ್ಷ್ಮೀವಿಲಾಸನೆಂದೆಂಬುದಂ |
ಗೋವಳಯ ರೂಡನಾಟದಿಂದೆ ಸೀಗಾಡಿದಂತೀಗ ಪದ ನಖ ದೊಳೊಗೆದು ||
ಪಾವನ ವೆನಿಸುವ ಗಂಗಾಜಲ ನೆತ್ತುವ ಮ |
ಹಾವಿಭವಿ ನೆಸೆವ ಲೀಲೆಗೆ ಕೈಮುಗಿದು ಕುಂತಿ |
ದೇವಕಿಯ ರಚ್ಯುತನ ವಸನಮಂ ಪಿಡಿದು ರುಕ್ಮಿಣಿಯ ಸೆರಗಂ ಬಿಗಿದರು || ||೪೬||
ನೋಡಿದಂ ನಾರದಮುನೀಂದ್ರ ನೀಕೌತುಕವ |
ನಾಡಿದಂ ಸತ್ಯಭಾಮೆಯ ಮನೆಗೆ ಬಂದು ನೀಂ |
ಮಾಡು ವುಜ್ಜುಗಮಿದೇನೆಲೆ ದೇವಿ ಮಂದಿರದೊಳಧ್ವರಾರಂಭಕೀಗ ||
ಆಡಂಬರದೊಳಂಬುಕಲಶಂಗಳಂ ಪಿಡಿಯೆ |
ಕೂಡಿದ ಚತುಷ್ಷಷ್ಟಿ ದಂಪತಿಗಳೊಗ್ಗಿನೊ |
ಳ್ಗಾಡಿ ಮಿಗೆ ರುಕ್ಮಿಣಿ ವಿರಾಜಿಸುವ ಳೇವೇಳ್ವೆ ನವಳ ಭಾಗ್ಯವನೆಂದನು || ||೪೭||
ಛತ್ರ ಚಾಮರ ಧೂಪ ಗಂಧ ಕುಸುಮಾವಳಿಯ |
ಚಿತ್ರವೈಭವದಿಂದೆ ದಂಪತಿಗಳಾಗಿ ಬಹು |
ಪುತ್ರಪೌತ್ರರ್ವೆರಸಿ ಕೈವಾರಿಸುವ ಸಕಲಜನದ ಸನ್ಮಾನದಿಂದೆ ||
ಅತ್ರಿ ಮೊದಲಾದ ಋಷಿಗಳ ಮುಂದೆ ನೆರೆದಿಹ ಧ |
ರಿತ್ರಿಯ ಸಮಸ್ತ ರಾಜೋತ್ತಮರ ನಡುವೆ ಶತ |
ಪತ್ರನೇತ್ರನ ಬಳಿಯ ರಂಜಿಸುವ ರುಕ್ಮಿಣಿಯ ಭಾಗ್ಯಮುದನೇಪೊಗಳ್ವೆನು || ||೪೮||
ಉರ್ವಮೋಹದ ರಾಣಿ ಕೃಷ್ಣಂಗೆ ನಾನೆಂದು |
ಗರ್ವಿಸುವೆ ಬರಿದೆ ರುಕ್ಮಿಣಿಯಂತೆ ಶೌರಿ ಸಹಿ |
ತುರ್ವಿಪನ ಯಜ್ಞದೊಳ್ದಂಪತಿಗಳಾಗಿರ್ದವರ್ಗೆ ದುರ್ಲಭಮಿದೆನಲು ||
ಗೀರ್ವಾಣನದಿಯ ಸಲಿಲಾಗಮಕೆ ಪೊರಮಟ್ಟು |
ಸರ್ವಸಂಭ್ರಮದಿಂದೆ ಪತಿಸಹೆ ಮನೆಯೊಳಿಹ |
ನಿರ್ವಾಹ ಮೇನೆಂದು ನಾರದಂ ಕೇಳ್ದೊಡಾದೇವಿ ನಗುತಿಂತೆಂದಳು || ||೪೯||

ಮುನಿಪ ನೀನರಿಯದವನಂತೀಗ ಬಂದೆನ್ನ ।
ಮನವನಾರೈದು ಕೇಳ್ದಪೆ ದನುಜರಿಪು ತನ್ನ ।
ಮನೆಯೊಳಿರ್ದಪನೆಂದು ಸತ್ಯಭಾಮಾದೇವಿ ಕೃಷ್ಣನಂ ತೋರಿಸಲ್ಕೆ ॥
ಜನಪತಿಯ ಮುಂದೆ ರುಕ್ಮಿಣಿ ಸಹಿತ ತೊಳಗುತಿಹ ।
ವನಜಾಕ್ಷನಂ ಕಂಡೆನಲ್ಲಿ ಮೇಣಿಲ್ಲಿ ಮೋ ।
ಹನರೂಪನಾಗಿ ಕಂಗೊಳಿಸುತಿರ್ದಪನೆಂದು ನಾರದಂ ಬೆರಗಾದನು ॥ ॥೫೦॥

ನಾಂ ಬಂದಬಗೆಯ ನರಿದಿಲ್ಲಿ ನೀನಿಹೆ ಸಾಕ ।
ದೇಂ ಬಯಲ್ಗೀ ಮನುಜಲೀಲೆ ನಿನಗೆಂದು ಪೀ ।
ತಾಂಬರಂ ಗಭಿನಮಿಸಿ ಬೀಳ್ಕೊಂಡು ನಾರದಂ ಪೊರಮಟ್ಟು ವಹಿಲದಿಂದೆ ॥
ಜಾಂಬವತಿಯಾಲಯಕೆ ನಡೆತಂದು ತಾಯೆ ಕಮ ।
ಲಾಂಬಕಂ ನೃಪನ ಮಖಕರಸಿಯು ರ್ವೆರೆಸಿ ಗಂ ।
ಗಾಂಬುವಂ ತಹನಲ್ಲಿ ಸಂಭ್ರಮದೊಳೇಕೆ ಪೋಗದೆ ಮನೆಯೊಳಿಹೆ ಯೆಂದನು ॥೫೧॥

ಎಂದೊಡೆ ಮುನೀಂದ್ರ ನಾವೆಲ್ಲರುಂ ನಿಮಿಷ ಮರ ।
ವಿಂದದಳನೇತ್ರನ ನಗಲ್ದು ಜೀವಿಸಲರಿಯೆ ।
ವಿಂದೆಮ್ಮ ಮನೆಯೊಳಿರ್ದಪನಾತ ನೊಳ್ಪಿದನೊಳೆನಗೆ ಮತ್ಸರಮಿದೇಕೆ ।
ತಂದೆ ನಿನ್ನಾಟಮಂ ಬಲ್ಲೆನೆನೆ ಜಾಂಬವತಿ ।
ಯಂ ದೇವಋಷಿ ಪರಸಿ ಬೀಳ್ಕೊಂಡು ರಾಣಿಯರ ।
ಮಂದಿರದೊಳೆಲ್ಲಿಯುಂ ಕೃಷ್ಣನಿಹನೆಂದರಿದು ಮಖಶಾಲೆಗೈತಂದನು ॥ ॥೫೨॥

ಅಲ್ಲಿಂದೆ ನಾರದಂ ಮತ್ತೆ ಬಂದಿಲ್ಲಿ ಭೂ ।
ವಲ್ಲಭನ ಮುಂದೆ ರುಕ್ಮಿಣಿಸಹಿತ ಕಟ್ಟಿರ್ದ ।
ಪಲ್ಲವದ ಪೊಂಗಳಸಮುಂ ತಾಳ್ದು ಋತ್ವಿಜರ ಮುನಿಗಣದ ನೃಪನಿಕರದ ॥
ಎಲ್ಲಾ ಜನಂಗಳ ಪೊಗಳ್ಕೆಯುಂ ಕೈಕೊಂಬ ।
ಸಲ್ಲಾಪದಿಂದೆಸೆಯುತಿರೆ ಕಂಡು ಬೆರಗಾಗಿ ।
ನಿಲ್ಲದೆ ನಿಗಮಸೂಕ್ತದಿಂ ನುತಿಸಿದಂ ದೇವಪುರದ ಲಕ್ಷ್ಮೀಪತಿಯನು ॥ ॥೫೩॥

ಸಂಧಿ ೩೩ ಕ್ಕೆ ಪದ್ಯಗಳು ೧೮೬೦ ಕ್ಕೆ ಮಂಗಳಮಸ್ತು.

## ಮುವ್ವತ್ನಾಲ್ಕನೆಯ ಸಂಧಿ.

ಸೂಚನೆ॥ ಬಿಂಗೆ ಮೂಜಗಂ ತಣಿಯೆ ಹಯಮೇಧ ಯಜ್ಞಮಂ ।
ಮುಗಿಸಿ ಧರ್ಮಾತ್ಮಜಂ ಕೃಷ್ಣಾದಿ ಸಕಲ ನೃಪ ।
ತಿಗಳ ನವರವರ ನಗರಂಗಳ್ಗೆ ಕಳುಹಿ ಸುಖದಿಂದೆ ರಾಜ್ಯಂಗೈದನು ॥

ಅರಸ ಕೇಳರುವತ್ತುನಾಲ್ಕು ದಂಪತಿಗಳ ।
ಧ್ವರದ ಋತ್ವಿಕ್ಕುಗಳ್ವೆರಸಿ ವೇದವ್ಯಾಸ ।
ಪರಮಋಷಿ ಗಂಗೆಯೊಳ್ಜಲದೇವತೆಯ ನರ್ಚಿಸಿದ ಮಂತ್ರಿತೋದಕವನು ॥
ವರಪುಷ್ಪಪಲ್ಲವದ ಪೊಂಗಳಸಮಂ ತುಂಬಿ ।
ಕರದೊಳನಸೂಯೆಗೀಯಲ್ಕವಳರುಂಧತಿಯ ।
ಶಿರಕೆ ಪೊರಸಿದೊಡಾಕೆ ರುಕ್ಮಿಣಿಯ ಸಿರಿಮುಡಿಯೊಳಿರಿಸಿ ನಗುತಿಂತೆಂದಳು ॥ ॥೧॥

ದೇವಿ ಸಿರಿಮುಡಿ ಗಲರ್ಪೊರೆಯುಹುದು ನಿನಗೆ ನೀ ।
ರ್ತೀವಿರ್ದಂ ಪೊಂಗಳಸವಿದು ತಿಣ್ಣ ಮಾಗದೆಂ ।
ದಾ ವಶಿಷ್ಠನ ರಮಣಿ ರುಕ್ಮಿಣಿಗೆ ವಿನಯದಿಂ ನುಡಿದೊಡೆ ಸುಭದ್ರೆ ಕೇಳ್ದು ॥
ಗೋವರ್ಧನವನಾಂತ ವಿಶ್ವಕುಕ್ಷಿಯು ನೆದೆಯೊ ।
ಳಾವಗಂ ಧರಿಸಿಕೊಂಡಿರ್ದ ಮಾನಿನಿಗೆ ಬಿ ।
ಣ್ಣಾವುದು ಪತಿವ್ರತಾಧರ್ಮ ಮಿದಕಳುಕಲೇತಕೆ ತಾಯೆ ನೀನೆಂದಳು ॥ ॥೨॥

ನಸುನಗು ತರುಂಧತಿಗೆ ಬಳಿಕ ರುಕ್ಮಿಣಿ ನುಡಿದ ।
ಳುಸಿರ ಲಂಜುವೆ ನೀ ಸುಭದ್ರೆಯು ವಿಶೇಷ ಗುಣ ।
ದೆಸಕಮಂ ನಮ್ಮಂತೆ ಬಿಡದೆ ರಮಣನ ನೆದೆಯೊಳಾವಗಂ ಧರಿಸಳೊಮ್ಮೆ ॥
ಒಸೆದೊಡೆ ವಿಚಾರಿಸುವಳಲ್ಲದೊಡೆ ವಲ್ಲಭನ ।
ಗಸಣಿಯಂ ಪಾರ ಳ್ಪತಿವ್ರತಾಧರ್ಮ ದೊ ।
ಳ್ಪೊಸತೆಂದು ಸರಸಮಂ ಮಾಡುತ್ತಿದೆಯದೊಡನೆ ಪೊಂಗಳಸಮಂ ತಾಳ್ದಳು ॥೩॥

ಅರವತ್ತುನಾಲ್ಕು ದಂಪತಿಗಳೊಪ್ಪುವ ಗಂಗೆ ।
ದೊರೆಯಿಂದೆ ಬಳಿಕ ಮಖಮಂಟಪಕೆ ನೀರ್ದುಂಬಿ ।
ಮೆರೆವ ಪೊಂಗಳಸಂಗಳಂ ಕೊಂಡು ಬಂದರುತ್ಸವದಿಂದೆ ಮುನಿಗಳೊಡನೆ ॥
ಕರೆದು ವನಿಬರ ಮೇಲೆ ಮುತ್ತುಗಳ ಸೇಸೆ ಗ ।
ಳ್ಕರೆ ಮೊಳಗಿದುವು ಸಕಲ ವಾದ್ಯಂಗ ಳಭ್ರದೊ ।
ಳ್ತುರುಗಿ ತನಿಮಿಷನಿತತಿ ಕೌತುಕಕೆ ನೆರೆದುದು ಮಹಾಜನಂ ಮೇದಿನಿಯೊಳು ॥೪॥

ಆ ಪುಣ್ಯ ಸಲಿಲದೊ ಳ್ಸೇಚನಂಗೈ ದೆಸೆವ ।
ಯೂಪದೊಳ್ಕಟ್ಟಿ ಪೂಜಿಸಿದ ರಮಲಾಶ್ವಮಂ ।
ಭೂಪನುಂ ದ್ರೌಪದಿಯು ಮಭಿಷಿಕ್ತರಾದ ರ್ಸುಮಂತ್ರಿತ ಜಲಂಗಳಿಂದೆ ॥
ವ್ಯಾಪಿಸಿದ ವಿಧಿ ವಿಧಾನಂಗಳಿಂ ದಾವ್ರದುಂ ।
ಲೋಪಮಿಲ್ಲದೆ ನಡೆಯತೊಡಗಿತು ಮಹಾಧ್ವರಂ ।
ತಾಪಸಪ್ರತತಿ ಸಂದಿಗ್ಧಂಗಳಂ ತಿಳಿಪು ಸಮ್ಮತದೊ ಳಹುದೆನಲ್ಕೆ ॥ ॥೫॥

ಬಂದಮುನಿಗಳ ಪಾದಮಂ ತೊಳೆದು ಸತ್ಕಾರ ।
ದಿಂದೆ ಪೂಜಿಸಿ ನಿವಾಸಸ್ಥಾನಮಂ ಕೊಟ್ಟು ।
ವಂದಿಸುವ ನಚ್ಯುತಂ ತಾನೆ ಕುಳ್ಳಿರ್ಪೊಡಾಸನವ ನೀವಂ ಸಾತ್ಯಕಿ ॥
ಚಂದನ ಸುಕರ್ಪೂರ ಕುಸುಮ ತಾಂಬೂಲಂ ಗ ।
ಳಿಂ ದಲಂಕರಿಸುವಂ ಪ್ರದ್ಯುಮ್ನ ನಪರವರ ।
ಮಂದಿರಕೆ ಬೇಕಾದ ವಸ್ತುಗಳ ನೊದವಿಸುವ ನಡಿಗಡಿಗೆ ಸಹದೇವನು ॥ ॥೬॥

ಸಕಲ ಜನಜಾಲಮಂ ತಾರತಮ್ಯವ ನರಿತು ।
ನಕುಲ ನಾದರಿಸುವಂ ಪಗಲಿರು ಳ್ಪರಿಮಳೋ ।
ದಕವ ನಳವಡಿಸುವಂ ಕರ್ಣಸುತ ರೆಲ್ಲರಾಧ್ಯೆಕೆ ಹೈಡಿಂಬಿಗಾಯ್ತು ॥
ತಕಟಸಂದೋಹದಿಂ ಪೂಡಿಸುವ ಸಂಭಾರ ।
ನಿಕರ ಕಧಿಪತಿಯಾದ ನನಿರುದ್ಧ ನನ್ನ ವಾ ।
ಟಿಕೆಗಳೊ ಳ್ಪಾಕಮಂ ಮಾಡಿಸುವ [illegible] ಕೃತವರ್ಮಕಂ ತಾಳ್ದನು ॥ ॥೭॥

ಯೋಜನತ್ರಯದ ಚಪ್ಪರಡೊಳಿಡೆವಿಡದೆ ನಾ |
ನಾಜನಕೆ ಬೇಕಾದ ಷಡ್ರಸದ ಶಾಲ್ಯನ್ನ |
ಭೋಜನವನೈದೆ ಮಾಡಿಸುತಿಹುದು ಸಾಂಬಾದಿ ಯಾದವರ್ಗಾಯ್ತು ಬಳಿಕ ||
ಶ್ರೀಜನಾರ್ದನನ ಸಾನ್ನಿಧ್ಯವಾಗಿರೆ ಧರ್ಮ |
ರಾಜನ ಮಹಾಧ್ವರಂ ಸಾಂಗವಾಗದೆ ಮೇಣ್ಸ |
ರೋಜನಾಭಂ ತಾನೆ ಯಜ್ಞಸ್ವರೂಪನಲ್ಲವೆ ಭೂಪ ಹೇಳೆಂದನು || ||೮||
ಸುರೆ ಯೆಮೊಂದಲ್ಲದೆ ಪಯೋಧಿಗಳ ಸಾರ ಸಾ |
ಕರುಸಣಂ ಗೈದರೆನೆ ಸುರಸಂಗ ಳಿಸೆಯೆ ಕುಲ |
ಗಿರಿಗಳಂ ನಗುದಂತೆ ಮಿರುಪ ಶಾಲ್ಯೋದನದ ರಾಶಿಗ ಳ್ಕಂಗೊಳಿಸಲು ||
ಪರಿಪರಿಯ ಭಕ್ಷ್ಯ ಪಾಯಸ ವಿವಿಧಶಾಕಾದಿ |
ಪರಿಕರಮದೆಂತೊದಗಿದುವೊ ಕೃಷ್ಣಸುರಭಿ ತಾಂ |
ಪೊರೆಯೊಳಿರ ಲರಿವಾವುದೆಂಬಿನಂ ತಣಿದುಂಡ ರಾಮಖದೊಳಖಿಳಜನರು || ||೯||
ಊಟದ ಸುಗಂಧಾನುಲೇಪನದ ಕಪ್ಪುರದ |
ವೀಟಕಾವಳಿಯ ಮಾಲ್ಯಾಂಬರ ವಿಭೂಷಣದ |
ಮಾಟು ಸಿಂಗರದಿಂಪುವಡೆಯೆ ಮಿಗೆ ಬಯಸಿಬಯಸಿದ ಸುವಸ್ತುಗಳನಿತ್ತು ||
ಪಾಟಿಸುವ ಭೀಮಫಲ್ಗುಣರ ಸನ್ಮಾನದ ಸ |
ಘಾಟಿಕೆಯ ನೃಪಕುಲದ ಪುಣ್ಯಮುನಿಗಳ ಯಜ್ಞ |
ನಾಟದತಿ ಕೌತುಕದ ಮಾಳ್ಕೆಯಂ ಕಂಡು ನಲಿವಾಡಿತು ಜನಂ ಮುದದೊಳು ||೧೦||
ಹೇಮ ವಸ್ತ್ರಾಭರಣ ಮುಕ್ತಾಫಲಂಗಳಂ |
ಸಾಮಜ ತುರಂಗ ರಥ ರತ್ನಜಾಲಂಗಳಂ |
ಗೋಮಹಿಷಿ ದಾಸದಾಸೀ ನಿಕರಮುಂ ಮೃಗಾಜಿನ ಕಂಬಳಾದಿಗಳನು ||
ಚಾಮರಧ್ವಜ ನಾತಪತ್ರಯಾನಂಗಳಂ |
ಭೂಮಿಗಳ ನಗುರುಚಂದನ ಮುಖ್ಯವಸ್ತುವಂ |
ಭೀಮಫಲ್ಗುಣ ರಖಿಳಯಾಚಕಾವಳಿ ತಣಿಯೆ ಕುಡುತಿರ್ದರಾದರದೊಳು || ||೧೧||
ಯಾಗದೀಕ್ಷೆಯ ನೃಪಂ ಮಂತ್ರವಾರಿ ಸ್ನಾತ |
ನಾಗಿ ಬಳಿಕನುಪಮ ಸುಪರ್ಣಚಯನದ ಪೊರೆಗೆ |
ಪೋಗಿ ಹಯಮಂ ತರಿಸಿ ಯಗ್ನಿಃಪಶುರಭೂ ದೆನುತ್ತಿರ್ಪುದಾದಿಯಾಗಿ ||
ಸಾಗುವ ಶ್ರುತಿವಾಕ್ಯಮಂ ಪಠಿಸುತೆಲೆ ಘೋಟ |
ಪೋಗು ನೀನಶ್ವಲೋಕದೊಳಮರಪದವುಪ್ಪ
ದೀಗ ನಿನಗೆಂದೆಂದು ಮಳಿವಿಲ್ಲದುತ್ತಮ ಸ್ವರ್ಗಮಂ ಪಡೆಯೆಂದನು || ||೧೨||
ನೃಪನ ಮಾತಂ ಕೇಳ್ದು ವಾಜಿ ತಲೆಗೊಡಹಿ ಮುರ |
ರಿಪುವ ನೀಕ್ಷಿಸು ವಭಿಪ್ರಾಯಮಂ ಮೋದದಿಂ |
ವಿಪುಲಮತಿ ಸಕುಲಂಗೆ ಸೂಚಿಸಿದೊಡಾತನದರಿಂಗಿತದನರಿದು ಬಳಿಕ ||
ತಪನಸುತ ನಂದನಂ ಗೆಂದನವಧರಿಸು ಹಯ |
ಮುಪರಿಲೋಕದೊಳಶ್ವಪದವಿಯಂ ತಾನೊಲ್ಲೆ |
ನುಪಮೆಗೈದದ ಕೃಷ್ಣಸಾಯುಜ್ಯಮಂ ಪಡೆವೆ ನೆಂದೆಂಬು ದೆನ್ನೊಳೆಂದು || ||೧೩||

ಫಣಿಶಯನ ಸಾನ್ನಿಧ್ಯಮಿಂತಿಲ್ಲ ದೀಶ್ವರಾ |
ರ್ಪಣಮಲ್ಲ ದನ್ಯಯಜ್ಞಂಗಳೊ ಳ್ಮಡಿದ ಪಶು |
ಗಣಕೆ ಮೇಣಾ ಕರ್ತೃಗಳ್ಗತಿಶಯ ಸ್ವರ್ಗಭೋಗಮಾದಪುದು ನಿನ್ನ ||
ಪ್ರಣುತ ಸತ್ಕ್ರತುಫಲಂ ಶ್ರೀಕಾಂತನಾದ ಕಾ |
ರಣದಿಂದೆ ಕೃಷ್ಣನ ಶರೀರಮಂ ಪುಗುವೆ ನೀ |
ಕ್ಷಣಮೋಳಿದನೆಲ್ಲರುಂ ನೋಡಲೆಸುತಿವೆ ತುರಗಮೆಂದು ನಕುಲಂ ನುಡಿದನು || ||೧೪||

ತುರಗದಂತರ್ಭಾವಮಂ ತಿಳಿದು ನಕುಲ ನಿಂ |
ತರಸಂಗೆ ಬಿನ್ನಪಂಗೈದುದಂ ಕೇಳ್ದಖಿಳ |
ಧರಣೀಶ್ವರ ರ್ಮುನಿಗ ಳಂಗನಾಸಿಕುರುಂಬ ಮಾಶ್ಚರ್ಯಮಂ ನೋಡಲು ||
ನೆರೆದುದು ಸುಮಂತ್ರಿತದ ಯೂಪದೊ ಳ್ಕಟ್ಟುತ |
ಧ್ವರಹಯನ ನಭಿಮಂತ್ರಿಸಿದ ರಜ್ಜುತನ ಮುಂದೆ |
ಪರಮ ಋಷಿಗಳ್ಬಳಿಕ ಭೀಮನಂ ಕರೆದು ಮುದದಿಂ ಧೌಮ್ಯನಿಂತೆಂದನು || ||೧೫||

ಈಕ್ಷಿಪುದು ಸಕಲಜನಮೆಲೆ ವೃಕೋದರ ನಾಂ ಪ |
ರೀಕ್ಷೆಯಂ ತೋರಿಸುವೆ ನೀತುರಂಗಮದೊಳೊಂ |
ದೀಕ್ಷಣಂ ಖಡ್ಗಮಂ ಕೊಂಡು ನಿಶ್ಚಲನಾಗಿ ನಿಲ್ವುದೆಂದಾ ಧೌಮ್ಯನು ||
ಪ್ರೋಕ್ಷಿಸಿ ಕರಾಗ್ರದಿಂ ಪಿಡಿದು ಹಯ ದೆಡಗಿವಿಯ |
ನಾಕ್ಷೋಭದಿಂ ಸೀಳಿದೊಡೆ ನೆತ್ತರಿಲ್ಲದೆ ಮ |
ಹಾಕ್ಷೀರಧಾರೆ ಪೊರಮಟ್ಟದು ಸಮಸ್ತಲೋಕಂ ಕಂಡು ಬೆರಗಾಗಲು || ||೧೬||

ಮತ್ತೆ ಧೌಮ್ಯಂ ಭೀಮಸೇನನಂ ಕರೆದು ಪುರು |
ಷೋತ್ತಮಂ ಪ್ರೀತನಪ್ಪ ವೊಲಿನ್ನು ಬಾಳಿಂದೆ |
ಕತ್ತರಿಸು ಕುದುರೆಯ ತಲೆಯನೆಂದು ನೇಮಿಸಿದೊ ಡನಿಲಸುತನಾ ಕ್ಷಣದೊಳು ||
ಒತ್ತಿಡಿದ ವಾದ್ಯಘೋಷದೊ ಳಮಲ ಬರ್ಹಗಳ |
ಬಿತ್ತರದ ಪರಿಪೂತವಾಜಿಶಿರಮಂ ಛೇದಿ |
ಸುತ್ತಿರಲ ದಿಳೆಗೆ ಬೀಳದೆ ನಭಸ್ಥಳ ಕಡರ್ದದಗಿ ತಿನಮಂಡಲದೊಳು || ||೧೭||

ಪರಿಶುದ್ಧಮಾಗಿರ್ಪು ದೀತುರಗಮೆಂ ದೊರೆದು |
ಹರಿ ಹೊಯ್ದನದ ರುರಸ್ಥಳದೊ ಳುರ್ವಿಗೆ ಬಿದ್ದು |
ದಿರದೆ ಪೊರಮಟ್ಟು ಜೀವಾತ್ಮ ನತಿತೇಜದಿಂ ದಚ್ಯುತಾಸ್ಯದೊ ಳಡಗಲು ||
ಪರಮುನಿಗ ಳಮಲ ಧರ್ಮಮಿದೆಂದರಲೆ ಯುಧಿ |
ಷ್ಠಿರ ಪೂರ್ವಯುಗ ದಧ್ವರಂಗಳೊ ಳ್ಕಾಣೆ ವೀ |
ಪರಿ ಪವಿತ್ರದ ಪಶುವನಿದು ನಿನಗೆ ದೊರಕೊಂಡು ಕ್ರತು ಸಫಲಮಾದುದೆಂದು ||೧೮||

ಏವೇಳ್ವೆ ನಾಶ್ಚರ್ಯಮಂ ಬಳಿಕ ವಾಜಿಯ ಕ |
ಳೇವರಂ ಕರ್ಪೂರಮಾದು ದತಿಶುಭ್ರದಿಂ |
ಭಾವಿಸಿ ಮಹಾಮುನಿಗಳಿದು ಕೃಷ್ಣಮಹಿಮೆ ಯೆಂದಾಗ ವಿಸ್ಮಿತರಾಗಲು ||
ಭೂವರಂ ಹರಿಸಹಿತ ಪತ್ನಿಯಂ ಕೂಡಿ ಕೊಂ |
ಡಾವೇಷ್ಟಿಸಿದ ಸಕಲ ಬಾಂಧವರ ಗಡಣದಿಂ |
ಪಾವಕನ ಮುಂದೆ ಕುಳ್ಳಿರ್ದನಾದರದೆ ಹೋಮಂಗಳಂ ಮಾಡಿಸಲ್ಕೆ || ||೧೯||

ಧಾರಿಣಿಗೆ ಕುಪ್ಪಳಿಸಿ ದಾತುರಗದೊಡಲ ಕ |
ರ್ಪೂರಮಂ ಸ್ರುವದಿಂದೆ ಸಂಗ್ರಹಿಸಿ ಶಾಸ್ತ್ರ ಪ್ರ |
ಕಾರದಿಂದಾಗ ವೇದವ್ಯಾಸಮುನಿಪ ನಮರೇಂದ್ರನಂ ಕರೆದು ಬರಸಿ |
ಈರಾಜಕುಲತಿಲಕ ನಧ್ವರದೊಳೀವ ಘನ |
ಸಾರಾಹುತಿಯನಿದಂ ಸ್ವೀಕರಿಸು ಮುಂದೆ ನಿನ |
ಗಾರುಂ ಕುಡುವರಿಲ್ಲ ಕಲಿಯುಗದೊಳೀ ತೆರದೊಳೆನೆ ಶಕ್ರನಿಂತೆಂದನು ‖ ‖೨೦‖

ಸರ್ಪನಕ್ಷತ್ರಸಂಯುತದ ಗುರುವಾರ ಮಾ |
ಗಿರ್ಪುದಿಂದೆಲೆ ಮುನೀಶ್ವರ ಮಹೀಪಾಲಂ ಸ |
ಮರ್ಪಿಸುವ ಘನಸಾರವಾಹುತಿಯ ನಗ್ನಿಮುಖದಿಂದೆ ನೀನೆಸಗಿತ್ತೊಡೆ ‖
ದರ್ಪದಿಂ ತೃಪ್ತನಾದಪೆನೆಂದು ಸುರಪ ನೆ |
ಲ್ಲರ್ಪೊಗಳೆ ಪ್ರತ್ಯಕ್ಷ ವಾಗಿ ಬಂದಿರಲಾಗ |
ಕರ್ಪೂರಮಂ ಸ್ರುವದೊ ಳನಲನೊಳ್ಪೇಳಿದಂ ವ್ಯಾಸಮುನಿ ಮಂತ್ರದಿಂದೆ ‖ ‖೨೧‖

ಪ್ರತ್ಯಕ್ಷ ವಾದ ಶಕ್ರಾದಿ ದೇವತೆಗಳ್ಗೆ |
ಶ್ರುತ್ಯುಕ್ತ ಮಂತ್ರವಿಧಿಗಳ ವಿಧಾನಂಗ ಳಿಂ |
ದತ್ಯಧಿಕ ಘನಸಾರವಾಹುತಿಗಳಂ ಯಥಾಕ್ರಮದಿಂದೆ ಹುತವಹನೊಳು ‖
ಸತ್ಯಸಂಪನ್ನ ವೇದವ್ಯಾಸ ನೀಯಲ್ಕೆ |
ಸುತ್ಯಾಗದಿಂ ಸವನಸಮಯದೊ ಳ್ವಿರಚಿಸುವ |
ಕೃತ್ಯಂಗಳಿಂದೆ ನಡೆದುದು ಮಖಂ ತ್ರಿಜಗದ ಚರಾಚರಂ ಮಿಗೆ ತಣಿಯಲು ‖ ‖೨೨‖

ಸಾಕ್ಷಾ ತ್ತುಯಜ್ಞಸ್ವರೂಪ ನಚ್ಯುತನೆ ತಾಂ |
ಸಾಕ್ಷಿಯಾಗಿರ್ದು ಮಾಡಿಸುವವಂ ಶ್ರೌತ ವಿ |
ದ್ಯಾಕ್ಷಮನೆನಿಪ್ಪ ಧೌಮ್ಯನೆ ಕರ್ಮಕರ್ತೃ ವಿಂಶತಿ ಕಮಲಸಂಭವರನು ‖
ಈಕ್ಷಿಸಿದ ಬಕದಾಲ್ಭ್ಯನೇ ಬ್ರಹ್ಮನಾಚಾರ್ಯ |
ನೇ ಕ್ಷಿತಿಸುರಾಗ್ರ್ಯ ವೇದವ್ಯಾಸ ನಧ್ವರಕೆ |
ದೀಕ್ಷಿತನೆ ಯಮಜಂ ಮಹಾಮುನಿಗಳೇ ಋತ್ವಿಜ ರ್ಪೊಸತಿದೆನಿಸದಿಹುದೆ ‖ ‖೨೩‖

ಆಹುತಿಗಳಂ ಕೊಂಡು ಮಿಗೆ ತೇಜದಿಂದೊಪ್ಪು |
ವಾ ಹುತವಹ ಜ್ವಾಲೆಗಳ ಪುಣ್ಯದರ್ಶನ ದೊ |
ಳಾಹೋಮಧೂಮ ಸಂಸ್ಪರ್ಶನದೊಳಾ ಕರ್ಮಕೃತ ಸೋಮಪಾನದಿಂದೆ ‖
ಆಹೋತೃದುರುಮಂತ್ರ ಘೋಷಣಶ್ರವಣದಿಂ |
ದಾ ಹವಿರ್ಗಂಧ ದಾಘ್ರಾಣದಿಂದಾ ಮಖದೊ |
ಳಾ ಹಿಮಕರಾನ್ವಯ ಲಲಾಮನೆಸೆದಂ ಪೂತನಾಗಿ ಸಂತೋಷದಿಂದೆ ‖ ‖೨೪‖

ಯಾಗದಿಂ ತಣಿದು ಪಾವನಮಾದುದಿಳೆ ಹವಿ |
ರ್ಭಾಗದಿಂ ತುಷ್ಟಿವಡೆದುದು ದೇವತಾವಳಿ ಸ |
ರಾಗದಿಂ ದಸುರಾರಿ ಸಂತುಷ್ಟನಾಗಿ ತೆಗೆದಪ್ಪಿ ಭೂಪಾಲಕಂಗೆ ‖
ಈಗ ನಿನ್ನಧ್ವರಂ ಸಾಂಗದಿಂ ಸಂಪೂರ್ಣ |
ವಾಗಿ ಮುಗಿದುದು ಮಾಳ್ಪು ದವಭೃಥ ಸ್ನಾನಮಂ |
ಭಾಗೀರಥಿಯೊಳೆಂದು ನೇಮಿಸಿದ ನಖಿಳ ಮುನಿಜನಪ್ರೈದೆ ಕೊಂಡಾಡಲು ‖ ‖೨೫‖

ವಿಪ್ರವಧೆ ಮೊದಲಾದ ಬಹು ಪಾಪಸಂಚಿತಂ ।
ಕ್ಷಿಪ್ರದಿಂ ಪೋಗಿ ಪರಿಶುದ್ಧಮುಹುದೆಂಬ ವೇ ।
ದ ಪ್ರಮಾಣದ ವಾಜಿಮೇಧಾವಭೃಥಮಂ ಮುನೀಶ್ವರ ಮಾರ್ಡಿಸಲ್ಕೆ ॥
ಸುಪ್ರಸನ್ನತೆಯಿಂದೆ ಸಾನ್ನಿಧ್ಯಮಾಗಿ ಬಿಡ ।
ದಪ್ರಮೇಯಂ ತಾನಿರಲ್ಕೆ ನೃಪನೌಳಿ ಪರ ।
ಮಪ್ರೀತನಾಗಿ ತೊಳಗಿದ ನಧ್ವರಂ ಮುಗಿಯೆ ರಾಜಮುನಿಗಣದ ನಡುವೆ ॥ ॥೨೬॥
ರಮಣಿಯೊಡನರಸ ನಭಿಷಿಕ್ತನಾದಂ ಯಥಾ ।
ಕ್ರಮದಿಂದೆ ಸೋಮಪಾನಂಗೈದರೆಲ್ಲರುಂ ।
ವಿಮಲ ಸೋಮಂಗಳ ಪುರೋಡಾಶ ಶೇಷನುಂ ಪ್ರಾಶಿಸಿದ ರುತ್ವಿಜದೊಳು ॥
ತನುತಮಗೆ ವಂದಿಗಳ್ಕೊಂಡಾಡೆ ಗಾಯಕೋ ।
ತ್ತಮರೊಲಿದು ಪಾಡಿ ನರ್ತನದ ಮೇಳವದ ಸಂ ।
ಭ್ರಮದಿಂದೆ ವೀಣಾದಿ ವಾದಿತ್ರಘೋಷಮಂ ಮಾಡೆ ನೃಪವರನೆಸೆದನು ॥ ॥೨೭॥
ವಿನುತ ರತ್ನಾದ್ರಿ ಶಿಖರಸ್ಥ ಮಾಗಿರುತಿರ್ಪ ।
ಕನಕವೃಷಮಂ ಕೊಟ್ಟನವನಿಪಂ ಬಕದಾಲ್ಭ್ಯ ।
ಮುನಿಗೆ ಬಳಿಕೊಂದೊಂದು ರಥವನೊಂದೊಂ ದಿಭವ ನೀರ್ಹೈದು ವಾಜಿಗಳನು ॥
ಅನುಚರ ಚತುಷ್ಪುರುಷ ನೊಂದು ಬಳ್ಳದ ಮುತ್ತ ।
ನನುಪಮ ಸುವರ್ಣಶತಭಾರಮಂ ನೂರು ಕಾಂ ।
ಚನ ವಿಭೂಷಿತ ಸುರಭಿಗಳ ನಿತ್ತು ಮನ್ನಿಸಿದ ನಖಿಳ ಋತ್ವಿಕ್ಕುಗಳನು ॥ ॥೨೮॥
ಇಂತಖಿಳ ಋತ್ವಿಕ್ಕುಗಳ್ಗಿತ್ತು ಮನ್ನಿಸಿದ ।
ಸಂತಾದರಿಸಿದ ನೆಲ್ಲಾ ದ್ವಾರಪಾಲಕರ ।
ನಂತರಿಸ ದುಳಿದ ಮುನಿನಿಕರ ಕಿಚ್ಛಾದಾನವಂ ಕೊಟ್ಟನುಚಿತದಿಂದೆ ॥
ತಿಂತಿಣಿಸಿ ನೆರೆದಿಹ ಸಮಸ್ತ ಭೂನಿರ್ಜರರ ।
ಸಂತತಿಗಳಂ ತಣಿಸಿದಂ ಮಹಾಧನದಿಂ ದ ।
ನಂತರದೊಳರಸ ನುಪಚರಿಸಿದಂ ಚಂದ್ರಹಾಸಾದಿ ಪೃಥ್ವೀಶ್ವರರನು ॥ ॥೨೯॥
ಘೋಟಕ ಸಹಸ್ರಮಂ ಶತಶತ ಗಜಂಗಳಂ ।
ಕೋಟಿ ಪರಿಮಿತ ಸುವರ್ಣಂಗಳಂ ಮಣಿಮಯ ಕಿ ।
ರೀಟಾದಿ ಭೂಷಣಾವಳಿಗಳಂ ಕೊಟ್ಟಖಿಳ ಭೂಪಾಲರಂ ಮನ್ನಿಸಿ ॥
ಪಾಟಿ ಮಿಗೆ ರುಕ್ಮಿಣೀದೇವಿ ಮೊದಲಾಗಿಹ ವ ।
ಧೂಟಿಯರ ವರ್ಗಮಂ ನೃಪತಿ ಸತ್ಕರಿಸಿದಂ ।
ಮಿಾಟೆನಿಪ ವಿವಿಧ ರತ್ನಾಭರಣ ರಾಜಿಗಳ ನಿತ್ತಲಂಕಾರದಿಂದೆ ॥ ॥೩೦॥
ನಯದೊಳರಸಂ ಬಳಿಕ ಭೂಪಾಲ ಮುನಿವರ ನಿ ।
ಚಯದಿಂದೆ ಸಕಲ ಜನಜಾಲದಿಂದೆಸೆವ ಮಣಿ ।
ಮಯ ಸಭಾಮಧ್ಯದೊಳ್ದಿವ್ಯ ಸಿಂಹಾಸನದ ಮೇಲೆ ಮುರಹರನ ನಿರಿಸಿ ॥
ಪ್ರಿಯದಿಂ ದಲಂಕಾರ ಪೂಜೆಗಳೊಳುಪಚರಿಸಿ ।
ಹಯಮೇಧಫಲವ ನಚ್ಯುತನ ಕರದೊಳೀಯಲ್ಕೆ ।
ಜಯಜಯೆಂದುದು ಲೋಕ ವರಳಮಳೆಕರೆದು ಮೊಳಗಿದುವು ಸುರದುಂದುಭಿಗಳು ॥೩೧॥

ಬಳಸಿದ ಮಹೀಪಾಲರೊಡಹುಟ್ಟಿದ ಬಂಧು ।
ಬಳಗಂಗಳಖಿಳ ಮುನಿಮುಖ್ಯ ರುಪಚಿತರಾಗೆ ।
ನಳಿನಾಂಬಕನ ಕರದೊಳಧ್ವರದ ಸುಕೃತಮಂ ಕೊಟ್ಟಿತ ನ್ನಮಲಮುಖಕೆ ॥
ಕಳಸವಿಡೆ ಮೂಜಗಂ ಮಿಗೆ ತಣಿದು ಕೊಂಡಾಡ ।
ಲುಳಿದ ಯೂಪಂಗಳೊ ಳ್ಕಟ್ಟಿರ್ದ ಪಶುಗಳಂ ।
ಕಳೆದೆಲ್ಲಮಂ ಬಿಡಿಸಿ ತೊಳಗಿ ಬೆಳಗಿದ ನಿಂದ್ರತೇಜದಿಂ ಮನುಜೇಂದ್ರನು ॥೩೨॥
ವಾಜಿಮೇಧಕ್ರತು ಸಮಾಪ್ತಮಾದುದು ಬಳಿಕ ।
ರಾಜಮುನಿವರ್ಗಮಂ ಪ್ರಾರ್ಥಿಸಿ ವೃಕೋದರಂ ।
ರಾಜಿಸುವ ಕನಕಮಯ ಮಂಡಪದೊ ಳರುಣಕಂಬಳದ ಪಸೆಗಳ ಮಿಸುನಿಯ ॥
ಭಾಜನದ ಕೆಲಬಲದ ರತ್ನದೀಪದ ಪೊನ್ನ ।
ಹೂಜೆಗಳ ಪನ್ನೀರ ಪರಿವಿಡಿಯೊಳೆಡೆಯಾಗೆ ।
ಭೋಜನಕೆ ಬೇಕಾದ ಭಕ್ಷ್ಯಭೋಜ್ಯಾದಿಗಳ ನೊದವಿಸಿದ ನಾದರದೊಳು ॥ ॥೩೩॥
ನಾನಾವಿಧದ ರಸದೊಳೆಸೆವ ಪರಿಕರ ದನ್ನ ।
ಪಾನಾದಿ ಭಕ್ಷ್ಯಭೋಜ್ಯಾವಳಿಗಳಿಂದೆ ಪವ ।
ಮಾನಾತ್ಮಜಂ ಮಹೀಸುರ ತತಿಯನಾದರಿಸಿ ಭೋಜನಾನಂತರದೊಳು ॥
ಭೂನುತ ಸುಗಂಧಕರ್ದಮದಿಂದೆ ವಿವಿಧ ಪ್ರ ।
ಸೂನಾವಳಿಗಳಿಂದೆ ವೀಟಿಕಾ ವಿಭವದಿಂ ।
ದಾನಾತಿಶಯದಿಂದೆ ಸತ್ಕರಿಸಿ ತಣಿಸಿದಂ ಪ್ರತಿದಿನಂ ಪ್ರೀತಿಯಿಂದೆ ॥ ॥೩೪॥
ಬಹಳ ಸನ್ಮಾನಮಂ ತಳೆದಖಿಳ ಭೂಸುರ ನಿ ।
ವಹಮೈದೆ ಕೊಂಡಾಡಿ ತಂಬುಜದಳಾಂಬಕನ ।
ಮಹಿಮೆಯಂ ಧರ್ಮಜನ ಚರಿತಮಂ ಭೀಮನ ವಿಶೇಷಗುಣಮಂ ಪಾರ್ಥನ ॥
ವಿಹಿತವಿಭವಂಗಳಂ ನಕುಲನ ವಿವೇಕಮಂ ।
ಸಹದೇವನುಚಿತಮಂ ಧೌಮ್ಯನ ವಿಚಾರಮಂ ।
ಮಹಿಯ ಮನ್ನೆಯರ ಸನ್ಮೃತ್ರಿಯಂ ಮುನಿವರಾಧಿಕ್ಯಮಂ ತತ್ಕ್ರತುವನು ॥ ॥೩೫॥
ಬಕದಾಲ್ಭ್ಯ ಮೊದಲಾದ ಋಷಿಗಳಂ ಕೃಷ್ಣಾದಿ ।
ಸಕಲ ಭೂಪಾಲರಂ ಕೂಡಿಕೊಂ ಡವನೀಶ ।
ಮಕುಟ ನಧ್ವರ ಸಭಾಸ್ಥಾನದೊಳ್ ನಾನಾಸುಕಥೆಗಳಂ ಕೇಳುತಿರ್ದು ॥
ವಿಕಸಿತಹೃದಯನಾಗಿ ಮುದದಿಂದೆ ಭೂಮೀಪ ।
ನಿಕರಕುಳಿ ದರ್ಥಂಗಳೆಲ್ಲಮಂ ಚೆಲ್ಲಿ ಸಮ ।
ಧಿಕ ವೈಭವಂಗಳಿಂ ನಗರಪ್ರವೇಶಮಂ ಮಾಡಿದಂ ಸಂಭ್ರಮದೊಳು ॥ ॥೩೬॥
ಮೃಷ್ಟಭೋಜನದಿಂದೆ ಭೂರಿದಕ್ಷಿಣೆಗಳಿಂ ।
ದಿಷ್ಟದಾನದೊಳಾದ ವಸ್ತುಸಂದೋಹದಿಂ ।
ತುಷ್ಟಿವಡೆ ದಖಿಳಭೂಸುರತತಿ ನರೇಂದ್ರನಂ ಹರಸಿ ಬೀಳ್ಕೊಂಡ ಬಳಿಕ ॥
ದೃಷ್ಟಿಗಾಶ್ಚರ್ಯಮಾಗಿಹ ಯಜ್ಞಮಂ ಪೊಗಳು ।
ತಷ್ಟದಿಗ್ವಲಯ ದಾಶ್ರಮ ಜನಪದಂಗಳ್ಗೆ ।
ಹೃಷ್ಟತೆಯೊಳೈದಿದುದು ತನತನಗೆ ಪೊತ್ತ ಬಹುಧನದ ಭಾರಂಗಳಿಂದೆ ॥ ॥೩೭॥

ರೋಮಶ ವಶಿಷ್ಠ ಬಕದಾಲ್ಭ್ಯ ವೇದವ್ಯಾಸ ।
ವಾಮದೇವಾದಿ ಮುನಿಮುಖ್ಯ ರವನೀಶನಂ ।
ಪ್ರೇಮದಿಂ ಪರಸಿ ಮಾನಿತರಾಗಿ ಬೀಳ್ಕೊಂಡು ತಳರ್ದರಾಶ್ರಮಕೆ ಬಳಿಕ ॥
ಭೂಮಿಪತಿಗಳನೆಲ್ಲರಂ ಸಕಲ ಯಾದವ ।
ಸ್ತೋಮ ಸಹಿತಂಬುಜದಳಾಕ್ಷನಂ ಸತ್ಕರಿಸಿ ।
ಭೀಮಪಾರ್ಥರ ನೊಡನೊಡನೆ ಕಳುಹಿದಂ ನೃಪ ನವರವರ ನಗರಿಗೆ ॥ ॥೩೮॥
ಸಂಭಾವಿಸಿದ ನಧ್ವರದೊಳೆಲ್ಲರಂ ಬಳಿಕ ।
ಸಂಭೋಗ ಮರ್ಜುನಂಗಾಪ್ರಮೀಳೆಯು ಕೂಡೆ ।
ಸಂಭವಿಸುವಂತೆ ನೇಮಿಸಿದ ನಿಭನಗರದೊ ಳ್ಕುಂತಿಸಹಿ ತನುಜರೊಡನೆ ॥
ತೊಂಭತ್ತುನರಿಸಪರಿಯಂತರದೊಳೈದೆ ಸುಖ ।
ದಿಂ ಭೂವಲಯದ ಸಾಮ್ರಾಜ್ಯಮಂ ಮಾಡುತಿ ।
ರ್ದಂ ಭಾರತಾಗ್ರಣಿ ಯುಧಿಷ್ಠಿರಂ ದೇವಪುರ ಲಕ್ಷ್ಮೀಶನಾಜ್ಞೆಯಿಂದೆ ॥ ॥೩೯॥
ಈಚತುರ್ದಶ ಭುವನದೊಳ್ಪಾಂಡವ ಸ್ಥಾಪ ।
ನಾಚಾರ್ಯ ನೆನಿಸಿಕೊಂಬುದೆ ಪೆರ್ಮೆ ಯೆಂದು ಮನು ।
ಜೋಚಿತದ ಲೀಲೆಯಂ ತಳೆದ ಯಾದವ ಸಾರ್ವ ಭೌಮಂ ನಿಜಾನತರ್ಗೆ ॥
ಭೂಚಕ್ರದೊ ಳ್ಪಸರಿಸುವ ಕೀರ್ತಿಲತೆ ಮೂಡ ।
ಲಾ ಚಂದ್ರಮಾಗಿರ್ಪ ತೆರದಿಂದೆ ಕವಿಮತಿಗೆ ।
ಗೋಚರಿಸೆ ಕೃತಿಗೆ ನಾಯಕನಾದ ನಮರಪುರದೊಡೆಯ ಲಕ್ಷ್ಮೀಕಾಂತನು ॥ ॥೪೦॥
ಈಪರಿಯೊಳಾಶ್ವಮೇಧಿಕದ ವೃತ್ತಾಂತಮಂ ।
ತಾಪಸೋತ್ತಮನಾದ ಜೈಮಿನಿ ಮುನೀಶ್ವರಂ ।
ಭೂಪಾಲತಿಲಕ ಜನಮೇಜಯಂಗೊರೆದ ಸಂಗತಿಗಳಂ ಸಕಲ ಜನಕೆ ॥
ವ್ಯಾಪಿಸಿದ ಸುಪ್ರೌಢಿ ಮೆರೆಯೆ ಕನ್ನಡದ ಭಾ ।
ಷಾಪದ್ಧತಿಯೊ ಳಣ್ಣಮಾಂಕನ ಕುಮಾರ ಲ ।
ಕ್ಷ್ಮೀಪತಿಯ ಮುಖದಿಂದೆ ರಚಿಸಿದಂ ಕೃತಿಯಾಗೆ ಸುರಪುರ ಶ್ರೀಕಾಂತನು ॥ ॥೪೧॥
ಆಶ್ವಮೇಧಿಕ ಪರ್ವದಮಲ ಸತ್ಕಥೆ ಯೌವ ।
ನಾಶ್ವಾದಿನೃಪರ ಚರಿತಂಗೇಳ್ದಮಾನವ ।
ಗೈಶ್ವರ್ಯದಾರೋಗ್ಯ ದಾಯುಷ್ಯ ದಭಿವೃದ್ಧಿ ಕಲಿನಾಶನಂ ಧರೆಯೊಳು ॥
ಆಶ್ವೇತಕೀರ್ತಿ ಸುತಲಾಭ ಶತ್ರುಕ್ಷಯಂ ।
ಶಾಶ್ವತ ಸ್ವರ್ಗಭೋಗಂಗಳಾದಪುವು ಸ ।
ರ್ವೇಶ್ವರನ ಭಕ್ತಿ ದೊರೆಕೊಂಡಪುದು ದೇವಪುರಲಕ್ಷ್ಮೀಶ ನಾಜ್ಞೆಯಿಂದೆ ॥ ॥೪೨॥
ಉಪವನ ತಟಾಕ ಪ್ರತಿಷ್ಠೆ ದೇವಾಲಯ ।
ಪ್ರಪೆಗಳ ಸಕಲದಾನ ಧರ್ಮೋಪಕಾರ ವೇ ।
ದ ಪುರಾಣ ಶಾಸ್ತ್ರಶ್ರವಣದ ಪುಣ್ಯಕ್ಷೇತ್ರವಾಸ ತೀರ್ಥಸ್ನಾನದ ॥
ಜಪ ಹೋಮ ಸುವ್ರತ ಸಮಾಧಿ ಯೋಗಧ್ಯಾನ ।
ತಪಸುಗಳ ಹರಿಹರಾರ್ಚನೆಯ ಸುಕೃತಂಗ ಳಾ ।
ದಪುವು ಜೈಮಿನಿಭಾರತದೊಳೊಂದುವರ್ಣಮಂ ಪ್ರೀತಿಯಿಂ ಕೇಳ್ವವರ್ಗೆ ॥ ॥೪೩॥

ತೊಳಗುವ ಸುವರ್ಣಭೂಷಣದಿಂದೆ ಸೇರಿಸಿದ |
ಲಲಿತ ಮುಕ್ತಾಭರಣದಿಂದೆ ಪರಿರಂಜಿಸುವ |
ಪಲವಲಂಕಾರಂಗಳಿಡಿದ ಜೆಲ್ವಿನ ದೇವಪುರದ ಲಕ್ಷ್ಮೀಕಾಂತನ ||
ವಿಲಸಿತ ಕೃತಿಲಲನೆ ಮೃದುಪದ ವಿಲಾಸದಿಂ |
ಸಲೆ ಸೊಗಸ ಲಡಿಗಡಿಗೆ ನಡೆಯಲ್ಕೆ ಚಿತ್ತಂ ಗ |
ಳೊಲಿದೆರಗದಿರ್ದಪುವೆ ಧರೆಯೊಳಗೆ ರಸಿಕರಾಗಿರ್ದ ಭಾವಕ ನಿಕರದ || ||೬೪||

ಲೋಕದೊ ಳಖಿಳ ಪುಣ್ಯಕರ್ಮದಿಂ ಧರ್ಮದಿಂ |
ದೇಕಾಗ್ರಮಾಗಿರ್ದ ಯೋಗದಿಂ ಯಾಗದಿಂ |
ಭೂ ಕನಕ ಮಣಿ ಧೇನುದಾನದಿಂ ಧ್ಯಾನದಿಂ ಪಡೆವ ಸದ್ಗತಿಯನೀವ ||
ಈಕಥೆಯ ನೊಲವಿಂದೆ ಕೇಳ್ದರ್ಗೆ ಪೇಳ್ದರ್ಗೆ |
ಶೋಕ ಭಯ ದುಃಖ ಸಂತಾಪಮಂ ಪಾಪಮಂ |
ನೂಕಿ ನಿರ್ಮಲತರ ಸುಬುದ್ಧಿಯಂ ಋದ್ಧಿಯಂ ಹರಿ ಕೊಡುತಿಹಂ ಕೃಪೆಯೊಳು ||೬೫||

ಪುಣ್ಯಮಿದು ಕೃಷ್ಣಚರಿತಾಮೃತಂ ಸುಕವೀಂದ್ರ |
ಗಣ್ಯಮಿದು ಶೃಂಗಾರ ಕುಸುಮತರು ತುರುಗಿ ದಾ |
ರಣ್ಯಮಿದು ನವರಸ ಪ್ರೌಢಿಲಾಲಿತ್ಯ ನಾನಾ ವಿಚಿತ್ರಾರ್ಥಂಗಳ ||
ಗಣ್ಯಮಿದು ಶಾರದೆಯ ಸನ್ಮೋಹನಾಂಗ ಲಾ |
ವಣ್ಯಮಿದು ಭಾವಕರ ಕಿವಿದೊಡವಿ ಗೊದವಿದ ಹಿ |
ರಣ್ಯಮಿದು ಭೂತಳದೊಳೆನೆ ವಿರಾಜಿಪುದು ಲಕ್ಷ್ಮೀಪತಿಯ ಕಾವ್ಯರಚನೆ || ||೬೬||

ಸಂಧಿ ೬೪ ಕ್ಕೆ ಪದ್ಯಗಳು ೧೯೦೭ ಕ್ಕೆ ಮಂಗಳಮಸ್ತು.

# ಜೈಮಿನಿ ಭಾರತವು



